ಪ್ರತಿಭಾವಂತ ಸಂಸದೀಯ ಪಟುಗಳ ಬದುಕು ಬರಹ ಮಾಲಿಕೆ

# ಕೆ. ಸಿ. ರೆಡ್ಡಿ

## (ಕ್ಯಾಸಂಬಳ್ಳಿ ಚೆಂಗಲರಾಯ ರೆಡ್ಡಿ)



ಪ್ರಕಟಣೆ:

ಸಂಶೋಧನಾ ಮತ್ತು ಉಲ್ಲೇಖನಾ ಶಾಖೆ,
ಕರ್ನಾಟಕ ವಿಧಾನಸಭೆ ಸಚಿವಾಲಯ,
ವಿಧಾನಸೌಧ ಬೆಂಗಳೂರು - 560 001.

ಪ್ರತಿಭಾವಂತ ಸಂಸದೀಯ ಪಟುಗಳ ಬದುಕು ಬರಹ ಮಾಲಿಕೆ

# ಕೆ. ಸಿ. ರೆಡ್ಡಿ

(ಕ್ಯಾಸಂಬಳ್ಳಿ ಚೆಂಗಲರಾಯರೆಡ್ಡಿ)

**Eminent Parliamentarian Series**

# K.C. REDDY

**(KYASAMBALLI CHENGALARAYA REDDY)**



ಮೊದಲ ಮುದ್ರಣ

ಡಿಸೆಂಬರ್, 2000 1,500 ಪ್ರತಿಗಳು

ಮುಖಪುಟ ವಿನ್ಯಾಸ :

ಸರ್ಕಾರಿ ಮುದ್ರಣಾಲಯ ಬೆಂಗಳೂರು -1

ಪ್ರಕಟಣೆ :

ಸಂಶೋಧನಾ ಮತ್ತು ಉಲ್ಲೇಖನಾ ಶಾಖೆ.
ಕರ್ನಾಟಕ ವಿಧಾನಸಭೆ ಸಚಿವಾಲಯ
ವಿಧಾನಸೌಧ, ಬೆಂಗಳೂರು - 560 001.

# ಮುನ್ನುಡಿ

ರಾಜ್ಯದ ಹಿರಿಯ ಸಂಸದೀಯ ಪಟುಗಳ ಬದುಕು ಬರಹ ಮಾಲಿಕೆಯಡಿಯಲ್ಲಿ ಈ ಹಿಂದೆ ಶ್ರೀ ಕೆ. ಹನುಮಂತಯ್ಯ, ಶ್ರೀ ಎಸ್. ನಿಜಲಿಂಗಪ್ಪ, ಶ್ರೀ ಶಾಂತವೇರಿ ಗೋಪಾಲಗೌಡ, ಶ್ರೀ ವೈಕುಂಠ ಬಾಳಿಗಾ, ಶ್ರೀ ಜಿ.ವಿ. ಹಳ್ಳಿಕೇರಿ ಮತ್ತು ಶ್ರೀಮತಿ ಕೆ.ಎಸ್. ನಾಗರತ್ನಮ್ಮ ಅವರುಗಳ ಬಗ್ಗೆ ಹೊರತರಲಾಗಿರುವ ಪುಸ್ತಕಗಳಲ್ಲಿ ಶ್ರೀಯುತರುಗಳು ವಿಧಾನ ಸಭೆಯ ಕಲಾಪಗಳಲ್ಲಿ ಭಾಗವಹಿಸಿ ಪ್ರತಿವಾದಿಸಿರುವ ವಿಚಾರಗಳನ್ನು ಮತ್ತು ಸಭಾಧ್ಯಕ್ಷರಾಗಿ ನೀಡಿದ ಕೆಲವು ತೀರ್ಪುಗಳನ್ನು ಇದರಲ್ಲಿ ಸೇರಿಸಲಾಗಿದೆ. ಜೊತೆಗೆ ಅವರ ಜೀವನ ಪರಿಚಯದ ಭಾಗವೂ ಇದೆ.

ರಾಜ್ಯದ ಶಾಸಕಾಂಗದಲ್ಲಿ ದೀರ್ಘಕಾಲ ಸದಸ್ಯರಾಗಿ ರಾಜ್ಯದ ಮುಖ್ಯಮಂತ್ರಿಗಳಾಗಿ ಕೇಂದ್ರ ಸಚಿವರಾಗಿ ಮಧ್ಯಪ್ರದೇಶದ ರಾಜ್ಯಪಾಲರಾಗಿ ಸೇವೆ ಸಲ್ಲಿಸಿದ್ದ ಶ್ರೀ ಕೆ.ಸಿ. ರೆಡ್ಡಿಯವರನ್ನು ಕುರಿತ ಈ ಪುಸ್ತಕವನ್ನು ರಚಿಸಿಕೊಟ್ಟಿರುವ ಬೆಂಗಳೂರಿನ ಡಾ: ಸಂಧ್ಯಾರೆಡ್ಡಿ ಅವರಿಗೆ ಧನ್ಯವಾದಗಳನ್ನು ಅರ್ಪಿಸುತ್ತೇನೆ.

ಈ ಪುಸ್ತಕದ ಮುಖ್ಯಪುಟವನ್ನು ರೂಪಿಸಿ, ಮುದ್ರಿಸಿಕೊಟ್ಟ ಸರ್ಕಾರಿ ಮುದ್ರಣಾಲಯದ ನಿರ್ದೇಶಕರಿಗೂ ಹಾಗೂ ಗ್ರಂಥಾಲಯದ ಉಪ ಸಮಿತಿಯ ಅಧ್ಯಕ್ಷರು ಮತ್ತು ಸದಸ್ಯರಿಗೂ ಧನ್ಯವಾದಗಳನ್ನು ಅರ್ಪಿಸುತ್ತೇವೆ.

ಪ್ರತಿಭಾವಂತ ಸಂಸದೀಯ ಪಟುಗಳ ಬಗೆಗಿನ ಈ ಪುಸ್ತಕಗಳು ಮಾನ್ಯ ಸದಸ್ಯರುಗಳಿಗೆ ಮತ್ತು ಸಂಶೋಧಕರುಗಳಿಗೆ ಹಾಗೂ ಸಾಮಾನ್ಯ ಓದುಗರಿಗೆ ಸಂಸದೀಯ ವಿಷಯಗಳಲ್ಲಿ ಅಪಾರ ಜ್ಞಾನ ನೀಡುತ್ತವೆಂದು ಭಾವಿಸುತ್ತೇವೆ.

ಡೇವಿಡ್ ಸಿಮೆಯೋನ್
ಸಭಾಪತಿ
ವಿಧಾನ ಪರಿಷತ್ತು

ಎಂ.ವಿ.ವೆಂಕಟಪ್ಪ
ಸಭಾಧ್ಯಕ್ಷರು
ವಿಧಾನ ಸಭೆ

ಬೆಂಗಳೂರು
ಡಿಸೆಂಬರ್, 2000

# ಕೆ. ಸಿ. ರೆಡ್ಡಿ

## (ಕ್ಯಾಸಂಬಳ್ಳಿ ಚೆಂಗಲರಾಯ ರೆಡ್ಡಿ)

### ಪೀಠಿಕೆ

ಸ್ವಾತಂತ್ರ್ಯ ಸಂಗ್ರಾಮ ಹಾಗೂ ಮೈಸೂರು ಸಂಸ್ಥಾನದಲ್ಲಿ ಜವಾಬ್ದಾರಿ ಸರ್ಕಾರದ ಸ್ಥಾಪನೆಗಾಗಿ ನಡೆದ ಚಟುವಟಿಕೆಗಳೆರಡರಲ್ಲೂ ಮುಂಚೂಣಿಯ ಪಾತ್ರ ವಹಿಸಿದ ಕ್ಯಾಸಂಬಳ್ಳಿ ಚೆಂಗಲರಾಯರೆಡ್ಡಿಯವರು ಮೈಸೂರು ರಾಜ್ಯದ ಪ್ರಥಮ ಮುಖ್ಯ ಮಂತ್ರಿ ಎಂಬ ವಿಶಿಷ್ಟ ಪ್ರಸಿದ್ಧಿ ಗಳಿಸಿದವರು. ಮುಖ್ಯಮಂತ್ರಿಯಾಗಿ ಅವರು ಕಾರ್ಯನಿರ್ವಹಿಸಿದ ಕಾಲಮಾನ ಅತ್ಯಂತ ವಿಶಿಷ್ಟ. ಆಗಿನ ಎಲ್ಲ ಸಂಗತಿಗಳೂ ಸಂಕ್ರಮಣಾವಸ್ಥೆಯಲ್ಲಿದ್ದವು. ಅದು ಮೈಸೂರು ಸಂಸ್ಥಾನವು ರಾಜರ ಆಳ್ವಿಕೆಯಿಂದ ಹೊಸ ಪ್ರಜಾಸತ್ತಾತ್ಮಕ ವ್ಯವಸ್ಥೆಗೆ ಸಂಕ್ರಮಣಗೊಳ್ಳುತ್ತಿದ್ದ ಕಾಲ. ರಾಜ್ಯಗಳು ಕೇಂದ್ರದೊಂದಿಗೆ ತಮ್ಮ ಸಂಬಂಧವನ್ನು ನಿಶ್ಚಿತಪಡಿಸಿಕೊಳ್ಳಬೇಕಾಗಿದ್ದ ಕಾಲ. ಜನರು, ಜನಪ್ರತಿನಿಧಿಗಳು ಪ್ರಜಾತಂತ್ರದ ರೀತಿ ನೀತಿಗಳನ್ನು ಮೈಗೂಡಿಸಿಕೊಳ್ಳಬೇಕಾಗಿದ್ದಂತಹ ಕಾಲ. ಇಂತಹ ಕಾಲಘಟ್ಟದಲ್ಲಿ ಮುಖ್ಯಮಂತ್ರಿ, ಸ್ಥಾನಕ್ಕೆ ಬಂದ ರೆಡ್ಡಿಯವರು ಮತ್ತು ಅವರ ಮಂತ್ರಿಮಂಡಲ ಎದುರಿಸಬೇಕಾಗಿದ್ದ ಸಮಸ್ಯೆಗಳು ಬಿಕ್ಕಟ್ಟುಗಳ ಒಂದು ಸ್ಪಷ್ಟ ಚಿತ್ರ ವಿಧಾನಸಭಾ ಕಲಾಪಗಳಲ್ಲಿ ಪ್ರತಿಬಿಂಬಿಸಿದೆ. ಹಿಂದಿನ ದಶಕಗಳಲ್ಲಿ ಯಾವ ಆಡಳಿತಕ್ಕೂ ಎದುರಾಗದಂತಹ ವ್ಯಾಪಕವಾದ, ಜಟಿಲವಾದ ಹಾಗೂ ಮೂಲಭೂತವಾದ ಸಮಸ್ಯೆಗಳನ್ನು ರೆಡ್ಡಿಯವರ ಸರ್ಕಾರ ಎದುರಿಸಬೇಕಾಗಿತ್ತು. ಕಾಲಾನುಕಾಲಕ್ಕೆ ಹುಟ್ಟಿಕೊಳ್ಳುತ್ತಿದ್ದ ರಾಜಕೀಯ ಸಂವಿಧಾನಿಕ, ಆರ್ಥಿಕ ಹಾಗೂ ಆಡಳಿತಾತ್ಮಕ ಸಮಸ್ಯೆಯನ್ನು ಎದುರಿಸಬೇಕಾಗಿತ್ತು. ಮೈಸೂರು ಸರ್ಕಾರ ಇಷ್ಟು ವರ್ಷ ತನ್ನದೇ ಆದ ಒಂದು ವ್ಯವಸ್ಥೆಯನ್ನು ಅನುಸರಿಸಿಕೊಂಡು ಬಂದಿತ್ತು. ಆದರೆ ಭಾರತದ ಒಕ್ಕೂಟದೊಂದಿಗೆ ಸೇರಿಕೊಂಡ ನಂತರ ಅದು ತನ್ನ ವ್ಯವಸ್ಥೆಯಲ್ಲಿ ಬದಲಾವಣೆಗಳನ್ನು ಮಾಡುವುದು ಅನಿವಾರ್ಯವಾಯಿತು. ಹಳೆಯ ವ್ಯವಸ್ಥೆಗೆ ಒಗ್ಗಿಹೋದ ಜನರು, ಜನ ಪ್ರತಿನಿಧಿಗಳು ಹಳೆಯ ಗುಂಗಿನಿಂದ ಹೊರಬರುವಂತೆ ಮಾಡಲು ರೆಡ್ಡಿಯವರು ಸಾಕಷ್ಟು ಪ್ರಯಾಸ ಪಡಬೇಕಾಯಿತು. ಅವರು ಸಮಯ ಬಂದಾಗಲೆಲ್ಲ, ಕೇಂದ್ರದೊಂದಿಗೆ ರಾಜ್ಯಗಳು ಹೇಗೆ ಭಾಗವಹಿಸಬೇಕು ಎಂಬುದನ್ನು ತಿಳಿಹೇಳುವ ಕೆಲಸವನ್ನು ಮಾಡಬೇಕಾಯಿತು. ರಾಜ್ಯದ ಸಂಬಂಧವಾಗಿ ನಾವು ಮಾಡುವ ಯಾವುದೇ ಚಿಂತನೆ ಆಲೋಚನೆಗಳು ಇಡೀ ಭಾರತದ ಐಕ್ಯತೆ ಮತ್ತು ಭದ್ರತೆಯನ್ನು ಗಮನದಲ್ಲಿಟ್ಟುಕೊಂಡಿರಬೇಕು ಎಂಬುದು ರೆಡ್ಡಿಯವರ ಸ್ಪಷ್ಟ ನಿಲುವಾಗಿತ್ತು ಕೇಂದ್ರ ಮತ್ತು ರಾಜ್ಯಗಳ ಸಹಕಾರ, ಸಾಮರಸ್ಯದ ಅಗತ್ಯ ಕುರಿತು ಅವರು ಪ್ರಸ್ತಾವಿಸಿದ ವಿಚಾರಗಳು ಅತ್ಯಂತ ಮನನೀಯವಾಗಿದೆ. ಮೈಸೂರು ರಾಜ್ಯದ ಇತಿಹಾಸ, ಘನತೆ ಹಾಗೂ ಈ ರಾಜ್ಯದ ಸಾಧನೆ ಮತ್ತು ವಿಶಿಷ್ಟತೆಗಳ ಸ್ಪಷ್ಟ ಅರಿವನ್ನು ಹೊಂದಿದ್ದ ರೆಡ್ಡಿಯವರು, ಇದರ ಹಿತವನ್ನು ಬಲಿ ಕೊಡುವ ಕೆಲಸವನ್ನು ಎಂದೂ ಮಾಡಲಿಲ್ಲ. ಕೇಂದ್ರದ ಒತ್ತುವರಿಯಿಂದ ಮೈಸೂರು ರಾಜ್ಯದ ಅಥವಾ ಇತರ ರಾಜ್ಯಗಳ ಹಿತಾಸಕ್ತಿಗೆ ಧಕ್ಕೆಯಾಗುವಂತಹ ಸಂದರ್ಭದಲ್ಲಿ ಕೇಂದ್ರದ ರೀತಿ ನೀತಿಗಳನ್ನು ಸ್ಪಷ್ಟವಾಗಿ ವಿರೋಧಿಸಿದರು.

ಮುಖ್ಯಮಂತ್ರಿಯಾಗಿ ರೆಡ್ಡಿಯವರು ಐದು ವರ್ಷಗಳನ್ನು ಪೂರ್ಣಗೊಳಿಸಿದರು. 1952ರಲ್ಲಿ ಸಾರ್ವತ್ರಿಕ ಚುನಾವಣೆಗಳು ನಡೆದಾಗ ಪದವಿ ತ್ಯಾಗ ಮಾಡಿದರು. ಮುಂದೇನು ಎಂದು ಯೋಚಿಸುವುದಕ್ಕೂ ಮೊದಲೇ ಕೇಂದ್ರದ ಸಚಿವ ಪದವಿ ಅವರಿಗೆ ಸಿಕ್ಕಿತು. ಸ್ವತಃ ನೆಹರೂ ಅವರೇ ಆಸಕ್ತಿವಹಿಸಿ ರೆಡ್ಡಿಯವರನ್ನು ಕೇಂದ್ರಕ್ಕೆ ಕರೆಸಿಕೊಂಡರು. ಅಷ್ಟೇ ಅಲ್ಲ ಉತ್ಪಾದನಾ ಸಚಿವರು ಎಂಬ ಹೊಸ ಖಾತೆಯನ್ನು ಕಲ್ಪಿಸಿಕೊಟ್ಟರು. ಭಾರತಕ್ಕೂ ಕೂಡ ಅದು ಸಂಕ್ರಮಣಾವಸ್ಥೆಯ ಕಾಲ. ಈ ಸ್ಥಿತಿಯ ಬಿಕ್ಕಟ್ಟು ಆತಂಕಗಳನ್ನು ರೆಡ್ಡಿಯವರು ಎದುರಿಸಬೇಕಾಯಿತು. ಯಾವುದೇ ಸ್ಥಿತ್ಯಂತರ ಕಾಲದಲ್ಲಿ ಬಹಳ ಅಗತ್ಯವಾದ ಜವಾಬ್ದಾರಿ, ಸೂಕ್ಷ್ಮತೆ, ಎಚ್ಚರಗಳನ್ನು ಅವರು ಕಾಯ್ದುಕೊಳ್ಳಬೇಕಾಗಿತ್ತು. ಇಂದಿನಂತೆ ಪಕ್ಷಗಳ ಬಲಾಬಲದ ಸಮಸ್ಯೆ ಅಂದು ಇರಲಿಲ್ಲ. ಆದರೆ ಬಿಕ್ಕಟ್ಟಿನ ಹಣಕಾಸು ಪರಿಸ್ಥಿತಿ ಹಾಗೂ ಕೈಗಾರಿಕಾ ತಾಂತ್ರಿಕತೆಗೆ ಸಂಬಂಧಿಸಿದಂತೆ ಏನೊಂದೂ ತಿಳುವಳಿಕೆಯಿಲ್ಲದ ಪರಿಸ್ಥಿತಿಯಲ್ಲಿ ಪ್ರತಿಯೊಂದನ್ನೂ ಆರಂಭದಿಂದಲೇ ಹೊಸದಾಗಿ ಹುಟ್ಟುಹಾಕಿ ಬೆಳೆಸಬೇಕಾದ ಗುರುತರವಾದ ಜವಾಬ್ದಾರಿ ಆಗಿನ ಕೇಂದ್ರ ಸರ್ಕಾರದ ಮುಂದಿತ್ತು. ಅಗಾಧವಾದ ಯೋಜನೆಗಳನ್ನು ರೂಪಿಸಿ ಅವುಗಳನ್ನು ಗುರಿಮುಟ್ಟಿಸಬೇಕಾದ ಹೊಣೆಯನ್ನು ದೇಶ ನಾಯಕರು ಹೊರಬೇಕಾಗುತ್ತು. ಅಭಿವೃದ್ಧಿಯ ಕನಸು ಕಾಣುತ್ತಿದ್ದ ಭಾರತದ ಶೈಶವಾಸ್ಥೆಯ ಅಡಚಣೆ, ತೊಂದರೆ, ಸಮಸ್ಯೆಗಳನ್ನು ನಿವಾರಿಸಿಕೊಳ್ಳುತ್ತ ಮುಂದಡಿ ಇಡ ಬೇಕಾಗಿತ್ತು.

ರಾಜ್ಯದ ಹಾಗೂ ದೇಶದ ಅಭಿವೃದ್ಧಿಯ ಕನಸುಗಳ ಸಾಕಾರಕ್ಕಾಗಿ ಶ್ರದ್ಧೆ ಉತ್ಸಾಹಗಳಿಂದ ಕಾರ್ಯನಿರ್ವಹಿಸಿದ ಕ್ಯಾಸಂಬಳ್ಳಿ ಚೆಂಗಲರಾಯರೆಡ್ಡಿಯವರ ಆಲೋಚನೆ, ಚಿಂತನೆ, ಕಾಳಜಿಗಳ ಒಂದು ಸ್ಪಷ್ಟ ಚಿತ್ರವನ್ನು ಅವರು ಭಾಗವಹಿಸಿದ ಪ್ರಜಾಪ್ರತಿನಿಧಿ ಸಭೆ, ವಿಧಾನ ಸಭೆ ಹಾಗೂ ಲೋಕಸಭೆಯ ಕಲಾಪಗಳಿಂದ ಕಂಡುಕೊಳ್ಳಬಹುದು. ಸಂಸದೀಯ ನಡವಳಿಗಳ ಬಗ್ಗೆ ರೆಡ್ಡಿಯವರು ಹೊಂದಿದ್ದ ಖಚಿತ ಜ್ಞಾನ, ತಿಳುವಳಿಕೆ, ಅವರ ವಾಗ್ಮಿತೆ, ತಿಳಿಯಾದ ಹಾಸ್ಯಪ್ರಜ್ಞೆಗಳಿಗೂ ಈ ನಡೆವಳಿಗಳು ಸಾಕ್ಷಿಯಾಗಿವೆ.

ಕಾಲದ ಪರಿಮಿತಿಯಲ್ಲಿ ಸಾಧ್ಯವಾದಷ್ಟೂ ಸೂಕ್ತ ಮಾಹಿತಿಯನ್ನು ಸಂಗ್ರಹಿಸುವ ಒಂದು ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ. ನಮ್ಮಿಂದ ಸರಿದು ಹೋದ ಕಾಲಕ್ಕೆ ಸೇರಿದ ವ್ಯಕ್ತಿಗಳ ಜೀವನ ಚರಿತ್ರೆಯ ರಚನೆ ಸುಲಭವಾದ ಕೆಲಸವೇನಲ್ಲ. ಅವರನ್ನು ಕಂಡವರು, ಅವರೊಂದಿಗೆ ಕೆಲಸ ಮಾಡಿದವರು ಹೇಳಿದ ಅಭಿಪ್ರಾಯಗಳ ಆಧಾರದ ಮೇಲೆ ಅವರ ವ್ಯಕ್ತಿತ್ವವನ್ನು ಕಲ್ಪಿಸಿಕೊಳ್ಳಬೇಕಾಗುತ್ತದೆ. ಸರಿ ತಪ್ಪುಗಳ ನಿರ್ಣಯಕ್ಕೆ ಇಲ್ಲಿ ಅವಕಾಶವಿರುವುದಿಲ್ಲ. ಆದರೂ ದೊರೆತ ಮಾಹಿತಿಗಳ ಆಧಾರಗಳ ಮೇಲೆ ಹೇಳುವುದಾದರೆ ಕೆ.ಸಿ. ರೆಡ್ಡಿಯವರು ನಿಸ್ಸಂದೇಹವಾಗಿ ಒಬ್ಬ ಉದ್ದಾಮ ರಾಜಕೀಯ ಹಾಗೂ ಸಂಸದೀಯಪಟು. ಅಂದಿನ ಎಷ್ಟೋ ಕಾಂಗ್ರೆಸ್ ನಾಯಕರಂತೆ ಅವರು ಶುದ್ಧ ಹೃದಯದ ಒಬ್ಬ ಸರಳ ಜೀವಿಯಾಗಿದ್ದರು. ಅಧಿಕಾರಕ್ಕಾಗಿ ಅವರು ತಾವು ನಂಬಿದ ಮೌಲ್ಯಗಳನ್ನು ಬಿಟ್ಟುಕೊಡಲಿಲ್ಲ. ಆದರೆ ಕಾಲಕ್ಕೆ ತಕ್ಕ ಹಾಗೆ ಆಲೋಚನಾ ವಿಧಾನದಲ್ಲಿ ಮಾರ್ಪಾಟು ಮಾಡಿಕೊಳ್ಳಬೇಕಾದ ಅನಿವಾರ್ಯತೆಯನ್ನು ಅವರು ಅರಿತಿದ್ದರು.ಇಲ್ಲಿನ ಕಲಾಪ, ನಡವಳಿಗಳನ್ನು ಆಯ್ಕೆ ಮಾಡುವಾಗ ಕರ್ನಾಟಕ ಆಡಳಿತ ಆರ್ಥಿಕ ಮತ್ತು ಸಾಮಾಜಿಕ ಇತಿಹಾಸದ ದೃಷ್ಟಿಯಿಂದ ಮುಖ್ಯವೆನಿಸುವ ಹಾಗೂ ಇಂದಿಗೂ ಪ್ರಸ್ತುತವೆನಿಸುವ ಅಂಶಗಳ ಒಂದು ಚಿತ್ರ ಸಿಗಬೇಕು ಎಂಬ ದೃಷ್ಟಿಯಿಂದ ಕರ್ನಾಟಕ ಏಕೀಕರಣ, ಶಿಕ್ಷಣ ಮಾಧ್ಯಮವಾಗಿ

ಕನ್ನಡ, ರಾಜ್ಯದ ವಿದ್ಯುಚ್ಛಕ್ತಿ ಸ್ಥಿತಿಗಳು, ವೈದ್ಯಕೀಯ, ಶಿಕ್ಷಣ ವ್ಯವಸ್ಥೆ ಆಹಾರ ಸಮಸ್ಯೆ ಮುಂತಾದವುಗಳಿಗೆ ಸಂಬಂಧಿಸಿದ ಕಲಾಪಗಳನ್ನು ವಿಶೇಷವಾಗಿ ಆಯ್ಕೆ ಮಾಡಿಕೊಂಡಿದ್ದೇನೆ. ಮೈಸೂರು ರಾಜ್ಯದ ಬೆಳವಣಿಗೆಗೆ ಮಹತ್ತರ ಕೊಡುಗೆ ಸಲ್ಲಿಸಿದ ವ್ಯಕ್ತಿಗಳ ಪರಿಚಯ ನೀಡುತ್ತವೆ ಎಂಬ ಹಿನ್ನೆಲೆಯಲ್ಲಿ ಮ್ಯಾಥನ್, ಸಿ.ಆರ್. ರೆಡ್ಡಿ, ಡಿ.ಎಸ್. ಮಲ್ಲಪ್ಪ ಹಾಗೂ ಸರ್ದಾರ್ ಪಟೇಲ್ ಅವರುಗಳ ನಿಧನ ಸಂದರ್ಭದ ಸಂತಾಪ ಸೂಚಕ ನಡೆವಳಿಗಳನ್ನು ಆಯ್ಕೆ ಮಾಡಿದ್ದೇನೆ.

ಇಲ್ಲಿನ ಕಲಾಪಗಳ ಭಾಷೆಯ ಬಗ್ಗೆ ಒಂದೆರಡು ಮಾತು ಕೇಳಬೇಕು. ಸದನದಲ್ಲಿ ಇಂಗ್ಲಿಷ ಕನ್ನಡಗಳೆರಡು ಸಮಸಮವಾಗಿ ಬಳಕೆಯಾಗುವುದೇ ಆಗಿನ ರೂಢಿಯಾಗಿದ್ದಂತೆ ತೋರುತ್ತದೆ. ಅವುಗಳನ್ನು ದಾಖಲಿ ಪಡಿಸುವ ಸಂದರ್ಭದಲ್ಲಿ ಇಂಗ್ಲಿಷಿನ ಕಲಾಪಗಳನ್ನು ಕನ್ನಡಕ್ಕೆ ಭಾಷಾಂತರಿಸುವ ಕೆಲಸವನ್ನು ಅಂದಿನ ಭಾಷಾಂತರಕಾರರು ಮಾಡಿದ್ದಾರೆ. ಇಂಗ್ಲಿಷ್‌ನಲ್ಲೇ ಉಳಿದಂತಹ ಕೆಲವೊಂದು ಕಲಾಪಗಳನ್ನು ನಾನು ಇಲ್ಲಿ ಭಾಷಾಂತರಿಸಿದ್ದೇನೆ. ಹೀಗಾಗಿ ಕನ್ನಡದ ಶೈಲಿಯಲ್ಲಿ ವ್ಯತ್ಯಾಸ ಇರುವುದನ್ನು ಗಮನಿಸಬಹುದಾಗಿದೆ.

ಇಂತಹ ಒಂದು ಧೀಮಂತ ಚೇತನದ ಬಗ್ಗೆ ಬರೆಯುವ ಅವಕಾಶ ಒದಗಿಸಿದ್ದಕ್ಕಾಗಿ ಕರ್ನಾಟಕ ವಿಧಾನಮಂಡಲದ ಗ್ರಂಥಾಲಯ ಉಪಸಮಿತಿಗೆ ನನ್ನ ಅನಂತ ಕೃತಜ್ಞತೆಗಳು. ವಿಧಾನಸೌಧ ಗ್ರಂಥಾಲಯದ ಬಳಕೆಯಲ್ಲಿ ಸಂಪೂರ್ಣ ಸಹಕಾರ ನೀಡಿದ ಕಾರ್ಯದರ್ಶಿಯವರಿಗೂ ಹಾಗೂ ಅವರ ಸಿಬ್ಬಂದಿಗೂ ನನ್ನ ನಮನಗಳು. ವಿಧಾನಸೌಧ ಪತ್ರಾಗಾರ ಇಲಾಖೆಯ ಅಧಿಕಾರಿಗಳು ಮತ್ತು ಸಿಬ್ಬಂದಿ ವರ್ಗದವರ ಸಹಕಾರವನ್ನೂ ಇಲ್ಲಿ ಕೃತಜ್ಞತೆಯಿಂದ ನೆನೆಯುತ್ತೇನೆ.

ಕೆ. ಸಿ. ರೆಡ್ಡಿಯವರ ಜೀವನ ಚರಿತ್ರೆಗಾಗಿ ವಿಷಯ ಸಂಗ್ರಹಣೆಯಲ್ಲಿ ತೊಡಗಿದ್ದ ನನಗೆ ತಮ್ಮ ನೆನಪಿನ ಬುತ್ತಿ ಬಿಚ್ಚಿ ಅಪೂರ್ವವಾದ ಮಾಹಿತಿಗಳನ್ನು ನೀಡಿದ ಹಾಗೂ ತಮ್ಮ ಬಳಿಯಿದ್ದ ಪತ್ರ ವ್ಯವಹಾರಗಳು, ಕಡತಗಳು ಹಾಗೂ ಮತ್ತಿತರ ದಾಖಲೆಗಳನ್ನು ಒದಗಿಸಿದ ಎಲ್ಲ ಮಹನೀಯರಿಗೂ ನನ್ನ ಅನಂತ ಕೃತಜ್ಞತೆಗಳು ಹಾಗೂ ವಂದನೆಗಳು.

ಡಾ|| ಕೆ.ಆರ್. ಸಂಧ್ಯಾರೆಡ್ಡಿ

ಬೆಂಗಳೂರು.

## ವಿಧಾನ ಮಂಡಲದ ಗ್ರಂಥಾಲಯ ಉಪ ಸಮಿತಿ

### (1998-1999)

ಶ್ರೀಯುತರುಗಳಾದ

| | | |
|---|---|---|
| 1. | ಬಿ.ಬಿ. ಶಿವಪ್ಪ<br>ವಿಧಾನಸಭಾ ಸದಸ್ಯರು | ಅಧ್ಯಕ್ಷರು |
| 2. | ಶ್ರೀರಂಗದೇವರಾಯಲು<br>ವಿಧಾನಸಭಾ ಸದಸ್ಯರು | ಸದಸ್ಯರು |
| 3. | ವಸಂತ ಕಮಲಾಕರ ಅಸ್ನೋಟಿಕರ<br>ವಿಧಾನಸಭಾ ಸದಸ್ಯರು | ಸದಸ್ಯರು |
| 4. | ಶಶಿಲ್ .ಜಿ. ನಮೋಶಿ<br>ವಿಧಾನ ಪರಿಷತ್ ಸದಸ್ಯರು | ಸದಸ್ಯರು |
| 5. | ಡಾ॥ ಮಹಾದೇವ ಬಣಕಾರ<br>ವಿಧಾನ ಪರಿಷತ್ ಸದಸ್ಯರು | ಸದಸ್ಯರು |
| 6. | ಕೆ.ಸಿ. ಪುಟ್ಟಸಿದ್ಧಶೆಟ್ಟಿ<br>ವಿಧಾನ ಪರಿಷತ್ ಸದಸ್ಯರು | ಸದಸ್ಯರು |

### (1999-2000)

ಶ್ರೀಯುತರುಗಳಾದ

| | | |
|---|---|---|
| 1. | ಬಿ.ಬಿ. ಶಿವಪ್ಪ<br>ವಿಧಾನಸಭಾ ಸದಸ್ಯರು | ಅಧ್ಯಕ್ಷರು |
| 2. | ಕಾಕಾಸಾಹೇಬ .ಪಾಂ. ಪಾಟೀಲ<br>ವಿಧಾನಸಭಾ ಸದಸ್ಯರು | ಸದಸ್ಯರು |
| 3. | ಸಿರಾಜ್ ಶೇಖ್<br>ವಿಧಾನಸಭಾ ಸದಸ್ಯರು | ಸದಸ್ಯರು |
| 4. | ಪಿ.ಎಂ. ರಂಗನಾಥ್<br>ವಿಧಾನಸಭಾ ಸದಸ್ಯರು | ಸದಸ್ಯರು |
| 5. | ಎನ್. ಸಂಪಂಗಿ<br>ವಿಧಾನಸಭಾ ಸದಸ್ಯರು | ಸದಸ್ಯರು |
| 6. | ಡಾ॥ ವಿ.ಎಸ್. ಆಚಾರ್ಯ<br>ವಿಧಾನ ಪರಿಷತ್ ಸದಸ್ಯರು | ಸದಸ್ಯರು |
| 7. | ಎಚ್.ಎಲ್. ನಾಗೇಗೌಡ<br>ವಿಧಾನ ಪರಿಷತ್ ಸದಸ್ಯರು | ಸದಸ್ಯರು |
| 8. | ಜಿ. ಮಧುಸೂದನ<br>ವಿಧಾನ ಪರಿಷತ್ ಸದಸ್ಯರು | ಸದಸ್ಯರು |

# ಪರಿವಿಡಿ

## ಭಾಗ-ಒಂದು



## ಭಾಗ-ಎರಡು

## ರಾಜ್ಯದ ಶಾಸಕಾಂಗಗಳಲ್ಲಿ ಮಾಡಿದ ಭಾಷಣಗಳು

ಪ್ರಜಾಪ್ರತಿನಿಧಿ ಸಭೆಯ ನಡೆವಳಿಕೆಗಳು

## ಭಾಗ-ಮೂರು

## ರಾಜ್ಯಾಂಗ ರಚನಾ ಸಭೆಯ ಕಲಾಪ



## ಭಾಗ-ನಾಲ್ಕು

## ವಿಧಾನಸಭಾ ಕಲಾಪಗಳು

## ಭಾಗ-ಐದು

## ಲೋಕಸಭೆಯ ನಡೆವಳಿಗಳು



ಅನುಬಂಧಗಳು:

# ಕ್ಯಾಸಂಬಳ್ಳಿ ಚೆಂಗಲರಾಯರೆಡ್ಡಿ

ಕರ್ನಾಟಕದ ರಾಜಕೀಯ ಚರಿತ್ರೆಯಲ್ಲಿ ಉತ್ತಮ ಶ್ರೇಣಿಗೆ ಸೇರುವ ನಾಯಕರ ಪಟ್ಟಿಯಲ್ಲಿ ಮುಖ್ಯವಾಗಿ ಉಲ್ಲೇಖಿಸಬೇಕಾದ ಹೆಸರು ಕ್ಯಾಸಂಬಳ್ಳಿ ಚೆಂಗಲರಾಯ ರೆಡ್ಡಿ. ರೆಡ್ಡಿಯವರು ಅಪ್ರತಿಮ ಸ್ವಾತಂತ್ರ್ಯ ಹೋರಾಟಗಾರರು. ಅಂದಿನ ಮೈಸೂರು ರಾಜ್ಯದ ಮೊದಲ ಮುಖ್ಯ ಮಂತ್ರಿಯಾಗಿ, ಕೇಂದ್ರ ಸಚಿವರಾಗಿ, ಮಧ್ಯ ಪ್ರದೇಶದ ರಾಜ್ಯಪಾಲರಾಗಿ ಸುದೀರ್ಘ ಕಾಲ ಅಧಿಕಾರ ರಾಜಕೀಯದಲ್ಲಿ ದುಡಿದ ರೆಡ್ಡಿಯವರ ರಾಜಕೀಯ ಬದುಕು, ಭಾರತವು ಸ್ವಾತಂತ್ರ್ಯ ಗಳಿಸುವುದಕ್ಕೂ ಸುಮಾರು 10-15 ವರ್ಷಗಳಷ್ಟು ಮೊದಲಿನಿಂದಲೇ ಆರಂಭವಾಗುತ್ತದೆ. ಮೈಸೂರು ಸಂಸ್ಥಾನದಲ್ಲಿ ಅಧಿಕೃತ ಕಾಂಗ್ರೆಸ್ಸಿನ ಸ್ಥಾಪನೆ ಹಾಗೂ ಅದರ ಕಾರ್ಯಚಟುವಟಿಕೆ, ಹೋರಾಟಗಳಲ್ಲಿ ರೆಡ್ಡಿಯವರ ಹೆಸರು ಅವಿಭಾಜ್ಯವಾಗಿ ಬೆರೆತುಹೋಗಿದೆ. ಕಾಂಗ್ರೆಸ್ಸಿನ ವೇದಿಕೆಯಲ್ಲಿ ನಿಂತು, ಮೈಸೂರು ಸಂಸ್ಥಾನವನ್ನು ಅರಸರ ಆಳ್ವಿಕೆಯಿಂದ ಬಿಡುಗಡೆ ಮಾಡಿ ಪ್ರಜಾರಾಜ್ಯ ಸ್ಥಾಪನೆಗಾಗಿ ಶ್ರೀ ಕೆ.ಸಿ. ರೆಡ್ಡಿ ಮೊದಲಾದ ಅಂದಿನ ನಾಯಕರು ಮಾಡಿದ ಹೋರಾಟದ ಚಳುವಳಿಗಳ ಕಥೆ ರೋಮಾಂಚನಕಾರಿಯಾಗಿದೆ. ಬ್ರಿಟಿಷರ ಕೈಯಿಂದ ಭಾರತವನ್ನು ಮುಕ್ತವಾಗಿಸಲು ಅಂದಿನ ರಾಷ್ಟ್ರನಾಯಕರು ಪಟ್ಟ ಕಷ್ಟನಷ್ಟ ಹಾಗೂ ಮಾಡಿದ ಸಾಧನೆಗಳಿಗೆ ಮೈಸೂರಿನ ನಾಯಕರ ಸಾಧನೆಗಳು ಸಮವಾಗಿವೆ.

ಚೆಂಗಲರಾಯರೆಡ್ಡಿಯವರ ಹೆಸರಿನೊಂದಿಗೆ ಅಂಟಿಕೊಂಡಿರುವ ಕ್ಯಾಸಂಬಳ್ಳಿ, ಕೋಲಾರ ಜಿಲ್ಲೆಯ ಕೆ ಜಿ ಎಫ್ ನಿಂದ ಸುಮಾರು 6 ಕಿ.ಮೀ. ದೂರದಲ್ಲಿದೆ. ಚೆಂಗಲರಾಯರೆಡ್ಡಿಯವರಿಂದಾಗಿ ಈ ಹಳ್ಳಿಯ ಹೆಸರು ನಾಡಿನಾದ್ಯಂತ ಮನೆ ಮಾತಾಯಿತು. ಕೋಲಾರ ಜಿಲ್ಲೆಯಲ್ಲಿ ಕಾಂಗ್ರೆಸ್ ಚಳುವಳಿಗಳು ಹೆಚ್ಚಾಗಿ ನಡೆಯುವುದಕ್ಕೆ ಕಾರಣರಾದವರು, ಪ್ರೇರಣೆಯಾದವರು ಕೆ.ಸಿ. ರೆಡ್ಡಿ. ಮೈಸೂರು ಸಂಸ್ಥಾನದ ಇತರೆಲ್ಲ ಪ್ರದೇಶಗಳಿಗಿಂತ ಕೋಲಾರದ ಚಿನ್ನದ ಗಣಿ ಪ್ರದೇಶದಲ್ಲಿ ಹೋರಾಟ ನಡೆಯುವುದು ಬಹಳ ಕಷ್ಟವಿತ್ತು. ಕ್ಯಾಸಂಬಳ್ಳಿ, ಕೆ ಜಿ ಎಫ್‌ಗೆ ಅತಿ ಸನಿಹದಲ್ಲಿದ್ದರೂ ಅದನ್ನು ತಲುಪುವುದು ಸುಲಭವಾಗಿರಲಿಲ್ಲ. ಚಿನ್ನದಗಣಿ ರಕ್ಷಿತ ಪ್ರದೇಶವಾದ್ದರಿಂದ ಕ್ಯಾಸಂಬಳ್ಳಿಗೆ ಬರಬೇಕೆಂದರೆ ಬೇತಮಂಗಲದ ಕಡೆಯಿಂದ ಸುತ್ತುಹಾಕಿಕೊಂಡು ಬರಬೇಕಿತ್ತು. ಸರ್ಕಾರದ ಮುಖ್ಯ ಆದಾಯ ಮೂಲವಾಗಿದ್ದ ಚಿನ್ನದಗಣಿ ಪ್ರದೇಶವನ್ನು ಕಾಂಗ್ರೆಸ್ಸಿನವರ ಪ್ರಭಾವದಿಂದ ಕಾಪಾಡಿಕೊಳ್ಳುವುದಕ್ಕೆ ಸಂಸ್ಥಾನದ ಸರ್ಕಾರ ಶತಪ್ರಯತ್ನ ಮಾಡುತ್ತಿತ್ತು. ಇಂತಹ ಪ್ರದೇಶದ ಒಡಲಿನಿಂದಲೇ ಸತ್ಯಾಗ್ರಹ ಚಳುವಳಿಯನ್ನು ಎಲ್ಲೆಡೆ ಹಬ್ಬಿಸುವಲ್ಲಿ ರೆಡ್ಡಿಯವರಂತಹ ನಾಯಕರು ಯಶಸ್ವಿಯಾಗಿದ್ದು ಗಮನಾರ್ಹ. ಕೋಲಾರ ಜಿಲ್ಲೆಯಲ್ಲಿ ಚಳುವಳಿಯ ಕಾರ್ಯಕ್ರಮವನ್ನು ರೆಡ್ಡಿಯವರು ವ್ಯವಸ್ಥಿತವಾಗಿ ನಡೆಸಿಕೊಂಡು ಬಂದರು. ಅವರು ಜಿಲ್ಲೆಯಾದ್ಯಂತ ಪ್ರವಾಸ ಮಾಡಿ ಭಾಷಣಗಳನ್ನು ಮಾಡಿ ಜನರನ್ನು ಹುರಿದುಂಬಿಸಿದರು, ಸತ್ಯಾಗ್ರಹದ ಬಗ್ಗೆ, ಜನರ ಜವಾಬ್ದಾರಿಯ ಬಗ್ಗೆ ಸರಿಯಾದ ತಿಳುವಳಿಕೆ ಮೂಡಿಸಲು ರೆಡ್ಡಿಯವರ ಭಾಷಣಗಳು ಸಹಕಾರಿಯಾದವು. ಚಳುವಳಿಗೆ ಬೇಕಾದ ಧನಶಕ್ತಿ, ಜನಶಕ್ತಿಗಳನ್ನು ಸಂಗ್ರಹಿಸಿದರು. ಈ ಎಲ್ಲ ಕಾರಣಗಳಿಂದ ಜಿಲ್ಲೆಯ ಜನಗಳು ಚೆಂಗಲರಾಯರೆಡ್ಡಿಯವರನ್ನು "ಮನ ಚೆಂಗಲರಾಯರೆಡ್ಡಿ" (ನಮ್ಮ ಚೆಂಗಲರಾಯರೆಡ್ಡಿ) ಎಂದು ಹೆಮ್ಮೆಯಿಂದ ಹೇಳಿಕೊಳ್ಳುವಂತಾಯಿತು.

ರೆಡ್ಡಿಯವರದು ಶ್ರೀಮಂತ ಮನೆತನ. ಕ್ಯಾಸಂಬಳ್ಳಿ ಹಾಗೂ ಸುತ್ತಮುತ್ತಲಿನ ಹಳ್ಳಿಗಳಲ್ಲಿ ಅವರಿಗೆ ಅಪಾರವಾದ ಜಮೀನಿತ್ತು. ರೆಡ್ಡಿಯವರ ತಾತ ಬಸಿರೆಡ್ಡಿಯವರು ಈ ಕುಟುಂಬಕ್ಕೆ ಸಾವಿರಾರು ಎಕರೆ ಭೂಮಿ ಸಂಪಾದಿಸಿಕೊಟ್ಟರು. ಕೆ.ಸಿ. ರೆಡ್ಡಿಯವರ ತಂದೆ ವೆಂಕಟರೆಡ್ಡಿ, ತಾಯಿ ಗಂಗೋಜಮ್ಮ. ಈ ದಂಪತಿಗಳಿಗೆ ಎರಡು ಗಂಡು ಒಂದು ಹೆಣ್ಣು ಹೀಗೆ ಮೂವರು ಮಕ್ಕಳು. ಚೆಂಗಲರಾಯರೆಡ್ಡಿಯವರು ರಾಜಪೇಟೆಯ ತಮ್ಮ ತಾಯಿಯ ತವರು ಮನೆಯಲ್ಲಿ 1902ನೇ ಇಸವಿ ಮೇ ತಿಂಗಳ 4ನೇ ತಾರೀಖಿನಂದು ಜನಿಸಿದರು. ರೆಡ್ಡಿಯವರಿಗೆ ಹದಿನಾರು ವರ್ಷವಾಗಿದ್ದಾಗ ಅವರ ತಂದೆ ತೀರಿಕೊಂಡರು. ಆಗ ರೆಡ್ಡಿಯವರ ಅಣ್ಣ ವೆಂಕಟರಾಮರೆಡ್ಡಿಯವರು ಇಡೀ ಕುಟುಂಬದ ಹೊಣೆ ಹೊತ್ತರು.

ರೆಡ್ಡಿಯವರ ಆರಂಭಿಕ ಶಿಕ್ಷಣ ಕೆ ಜಿ ಎಫ್ ನಲ್ಲಿಯೇ ನಡೆಯಿತು. ಕೋಲಾರದ ಚಿನ್ನದ ಗಣಿಗಳನ್ನು ನಡೆಸುತ್ತಿದ್ದ ಜಾನ್ ಟೈಲರ್ ಕಂಪನಿಯಿಂದಾಗಿ ಕೆಜಿಎಫ್‌ನಲ್ಲಿ ಹೆಚ್ಚು ಮಂದಿ ಬ್ರಿಟಿಷ್ ಉದ್ಯೋಗಿಗಳಿದ್ದರು. ಇವರಿಗಾಗಿ ಉತ್ತಮ ಇಂಗ್ಲಿಷ್ ಶಾಲೆಗಳೂ ಇದ್ದವು. ಇಲ್ಲಿ ಪ್ರಾರಂಭಿಕ ವಿದ್ಯಾಭ್ಯಾಸ ಪೂರೈಸಿದ ನಂತರ ರೆಡ್ಡಿಯವರು ಬೆಂಗಳೂರಿಗೆ ಬಂದು ಲಂಡನ್ ಮಿಶನ್ ಬಾಯ್ಸ್ ಸ್ಕೂಲ್ ಸೇರಿದರು. ರೆಡ್ಡಿಯವರು ಪ್ರತಿಭಾನ್ವಿತ ವಿದ್ಯಾರ್ಥಿಯಾಗಿದ್ದರು. ಪ್ರಚಲಿತ ವಿದ್ಯಮಾನಗಳ ಬಗ್ಗೆ ಅವರಿಗೆ ಬಹಳ ಆಸಕ್ತಿ ಇತ್ತು. ಅಂತರಶಾಲಾ ಚರ್ಚಾಕೂಟಗಳಲ್ಲಿ, ಸಾಹಿತ್ಯಿಕ ಸ್ಪರ್ಧೆಗಳಲ್ಲಿ ಅವರು ಪಾಲುಗೊಳ್ಳುತ್ತಿದ್ದರು. ಮೆಟ್ರಿಕ್ಯುಲೇಶನ್ ಪರೀಕ್ಷೆಯಲ್ಲಿ ಹಳೆಯ ಮೈಸೂರು ರಾಜ್ಯಕ್ಕೇ ಮೊದಲಿಗರಾಗಿ ತೇರ್ಗಡೆಯಾದರು. ಶಾಲೆಯ ಗೌರವ ಫಲಕದ ಮೇಲೆ ಹೆಚ್ಚು ಅಂಕ ಪಡೆದವರ ಪಟ್ಟಿಯಲ್ಲಿ ರೆಡ್ಡಿಯವರ ಹೆಸರು ರಾರಾಜಿಸಿತು.ರೆಡ್ಡಿಯವರು ಸಂಸ್ಕೃತವನ್ನು ಅಭ್ಯಾಸ ಮಾಡಿದರು. ಈ ಭಾಷೆಯನ್ನು ಗಾಢ ಶ್ರದ್ಧೆಯಿಂದ ಅಭ್ಯಾಸ ಮಾಡಿದ ಅವರು ಸಂಸ್ಕೃತ ಪದಗಳನ್ನು ತಪ್ಪಾಗಿ ಉಚ್ಚರಿಸುವುದು ಮಹಾಪಾಪ ಮಾಡಿದಂತೆ ಎಂದು ಹೇಳುತ್ತಿದ್ದರಂತೆ.

ಕಾಲೇಜು ಶಿಕ್ಷಣಕ್ಕಾಗಿ ಮದ್ರಾಸಿಗೆ ಹೋದ ರೆಡ್ಡಿಯವರು ಪಚ್ಚೆಯಪ್ಪ ಕಾಲೇಜು ಸೇರಿ 1924ರಲ್ಲಿ ಬಿ.ಎ. ಪದವಿ ಗಳಿಸಿದರು. ರಾಜಾರಾಮಸ್ವಾಮಿ ಮೊದಲಿಯಾರ್ ಪಾರಿತೋಷಕವನ್ನು ಪಡೆದ ಪ್ರತಿಭಾವಂತ ವಿದ್ಯಾರ್ಥಿ ಎಂಬ ಕೀರ್ತಿಗಳಿಸಿದರು. ರೆಡ್ಡಿಯವರು ಗಾಂಧೀಜಿಯವರನ್ನು ಮೊತ್ತಮೊದಲು ನೋಡಿದ್ದು ಮದ್ರಾಸಿನಲ್ಲಿಯೇ. 1921ರಲ್ಲಿ ಮದ್ರಾಸ್ ಸಮುದ್ರತೀರದಲ್ಲಿ ಗಾಂಧೀಜಿಯವರ ಭಾಷಣ ಏರ್ಪಟ್ಟಾಗ ಅದನ್ನು ಕೇಳಲು ಹೋದ ಸಾವಿರಾರು ಜನರಲ್ಲಿ ರೆಡ್ಡಿಯವರೂ ಒಬ್ಬರು. ಅಸಹಕಾರ ಚಳುವಳಿಯ ಅಂಗವಾಗಿ ವಿದ್ಯಾರ್ಥಿಗಳು ಸ್ಕೂಲು ಕಾಲೇಜುಗಳನ್ನು ತ್ಯಜಿಸಬೇಕು, ವಕೀಲರು ವಕಾಲತ್ತು ನಡೆಸುವುದನ್ನು ಬಿಡಬೇಕು. ಪರದೇಶದ ವಸ್ತ್ರಗಳನ್ನು ಬಹಿಷ್ಕರಿಸಿ ಖಾದಿ ಬಳಸಬೇಕು. ಇದು ಗಾಂಧೀಜಿಯವರು ಅಂದು ಮಾಡಿದ ಭಾಷಣದ ತಿರುಳು. ಆಗಿನ್ನೂ ಇಂಟರ್ ಓದುತ್ತಿದ್ದ ರೆಡ್ಡಿಯವರ ಮೇಲೆ ಗಾಂಧೀಜಿ ಬೀರಿದ ಪ್ರಭಾವ ಅಪಾರ. ಅಂದಿನಿಂದಲೇ ಖಾದಿ ತೊಡುವ, ಕಾಲೇಜು ವ್ಯಾಸಂಗವನ್ನು ಬಿಟ್ಟು ಸ್ವಾತಂತ್ರ್ಯ ಚಳುವಳಿಯಲ್ಲಿ ತೊಡಗುವ ನಿರ್ಧಾರವನ್ನು ಅವರು ಮಾಡಿದರು. ಆದರೆ ಈ ನಿರ್ಧಾರ ಹೆಚ್ಚು ಕಾಲ ಉಳಿಯಲಿಲ್ಲ. ಯಾಕೆಂದರೆ ರೆಡ್ಡಿಯವರು ಆಗ, ಅನಿಬೆಸೆಂಟರು ಸ್ಥಾಪಿಸಿದ್ದ ವೈ ಎಂ ಐ ಎ ಯಲ್ಲಿ ವಸತಿ ಹೂಡಿದ್ದರು. ಹೀಗಾಗಿ ಅವರ ಮೇಲೆ ಅನಿಬೆಸೆಂಟ್‌ರ ಪ್ರಭಾವವೂ

ಸಾಕಷ್ಟಿತ್ತು. ಈ ಮೊದಲೊಮ್ಮೆ ಪತ್ರಿಕೋದ್ಯಮಿಯಾಗುವ ಆಸೆ ಹೊತ್ತು ಅವರು ತಮ್ಮ ಆಸೆಯನ್ನು ಅನಿಬೆಸೆಂಟರಲ್ಲಿ ನಿವೇದಿಸಿಕೊಂಡಾಗ ನೀನು ಪತ್ರಿಕೋದ್ಯಮದಲ್ಲಿ ಯಶಸ್ಸು ಪಡೆಯಬೇಕಾದರೆ ವಿದ್ಯಾಭ್ಯಾಸವನ್ನು ಮೊದಲು ಮುಗಿಸುವುದು ಅಗತ್ಯ ಎಂದು ಅನಿಬೆಸೆಂಟರು ಹಿತವಚನ ನೀಡಿದ್ದರು. ಈ ಮಾತನ್ನು ರೆಡ್ಡಿಯವರು ಮರೆಯುವಂತಿರಲಿಲ್ಲ. ಹೀಗಾಗಿ 1921ರಲ್ಲಿ ನಿಲ್ಲಿಸಿದ್ದ ವ್ಯಾಸಂಗವನ್ನು 1922ರಲ್ಲಿ ಪುನಃ ಮುಂದುವರೆಸಿದರು. ಕಾನೂನು ಪದವಿ ಪಡೆದು, ಮದ್ರಾಸಿನಲ್ಲೆಲ್ಲ ಅತ್ಯಂತ ಪ್ರಸಿದ್ಧರಾಗಿದ್ದ ಜಸ್ಟಿಸ್ ಸೋಮಯ್ಯನವರಲ್ಲಿ ಕೆಲವು ಕಾಲ ಶಿಷ್ಯವೃತ್ತಿ ಮಾಡಿ ಅನುಭವ ಪಡೆದ ನಂತರ ಸ್ವಂತ ಊರಿಗೆ ಹಿಂದಿರುಗಿದರು.

1927ರಲ್ಲಿ ಬಾಗೇಪಲ್ಲಿಯ ಕೌಸಲ್ಯಮ್ಮನವರ ಜೊತೆ ಅವರ ಮದುವೆಯಾಯಿತು. ಕೌಸಲ್ಯಮ್ಮನವರು ಅರಳೇಪೇಟೆಯಲ್ಲಿದ್ದ ಕಾಂಗ್ರೆಸ್ ಆಫೀಸು ಕಟ್ಟಡದ ಒಡೆಯರಾಗಿದ್ದ ರಾಮರೆಡ್ಡಿಯವರ ಸಾಕು ಮಗಳು. -ರಾಮರೆಡ್ಡಿಯವರು ಅತ್ಯಂತ ಕಡಿಮೆ ಬಾಡಿಗೆಗೆ ಆ ಕಟ್ಟಡವನ್ನು ಕಾಂಗ್ರೆಸ್ಸಿಗೆ ಕೊಟ್ಟಿದ್ದರು ಮದುವೆಯಾದ ಕೆಲವೇ ತಿಂಗಳುಗಳಲ್ಲಿ ಕೌಸಲ್ಯಮ್ಮನವರು ಟೈಫಾಯಿಡ್‌ನಿಂದ ತೀರಿಕೊಂಡರು. ಅನಂತರ ರೆಡ್ಡಿಯವರು ಏಳು ವರ್ಷಗಳ ಕಾಲ ಮರುಮದುವೆಯ ಯೋಚನೆ ಮಾಡಲಿಲ್ಲ. ಮನೆ, ಜಮೀನು ಅಭಿವೃದ್ಧಿಯ ಕಡೆ ಗಮನಹರಿಸಿ ಏನೇನೋ ಯೋಜನೆಗಳನ್ನು ಹಾಕಿದರು. ಸಾಲ ಸೋಲಗಳನ್ನು ಮಾಡಿಕೊಂಡರು. ಆದರೆ ಯಾವ ವ್ಯವಹಾರವೂ ಕೈಗೆ ಹತ್ತಲಿಲ್ಲ. ಕೋಲಾರದಲ್ಲಿ ನೆಲೆಸಿ ವಕೀಲ ವೃತ್ತಿ ನಡೆಸಲು ನಿರ್ಧರಿಸಿದರು. ವ್ಯವಹಾರದಲ್ಲಿ ನಷ್ಟ ಹಾಗೂ ಹೆಂಡತಿಯನ್ನು ಕಳೆದುಕೊಂಡಿದ್ದು ಅವರಲ್ಲಿ ಒಂದು ರೀತಿಯ ವಿರಕ್ತಭಾವ ಮೂಡಿಸಿದ್ದವು. ಕ್ಯಾಸಂಬಳ್ಳಿಯನ್ನು ಬಿಟ್ಟು ಹೋಗುವ ನಿರ್ದಾರಕ್ಕೆ ಇವು ಬಹುಮುಖ್ಯ ಕಾರಣವಾದವು. ಕೋಲಾರದಲ್ಲಿ ಮನೆ ಮಾಡಿ ವಕೀಲ ವೃತ್ತಿ ಆರಂಭಿಸಬೇಕೆಂದಿದ್ದರು.

ಆದರೆ 1927ರಲ್ಲಿ ಮತ್ತೊಮ್ಮೆ ಗಾಂಧೀಜಿಯವರ ದರ್ಶನದ ನಂತರ ಅವರ ಬದುಕಿನ ದಿಕ್ಕೇ ಬದಲಾಯಿತು. ಖಾಯಿಲೆಯಿಂದ ತುಂಬಾ ನಿತ್ರಾಣರಾಗಿದ್ದ ಗಾಂಧೀಜಿಯವರು ವಿಶ್ರಾಂತಿಗಾಗಿ ಕೆಲವು ಕಾಲ ನಂದಿಬೆಟ್ಟದಲ್ಲಿ ತಂಗಿದ್ದರು. ಗಾಂಧೀಜಿಯರರಿಂದ ಸಲಹೆ ಪಡೆದು ಆದರಂತೆ ಮುನ್ನಡೆಯುವುದಕ್ಕಾಗಿ ಅನೇಕ ಮಂದಿ ಗಾಂಧೀಜಿಯವರನ್ನು ಭೇಟಿ ಮಾಡುತ್ತಿದ್ದರು. ಗಾಂಧಿಯವರ ಸಲಹೆಯಿಂದ ಪ್ರೇರಿತರಾದ ರೆಡ್ಡಿಯವರು ವಕೀಲ ವೃತ್ತಿ ಬಿಟ್ಟು ಸಾರ್ವಜನಿಕ ಸೇವೆಯಲ್ಲಿ ತೊಡಗಲು ನಿರ್ಧರಿಸಿದರು. ಈ ತೀರ್ಮಾನದ ನಂತರ ಅವರು ಬೌರಿಂಗ್ ಪೇಟೆ ತಾಲ್ಲೂಕಿನಿಂದ ಮೈಸೂರು ಪ್ರಜಾಪ್ರತಿನಿಧಿ ಸಭೆಗೆ ಆಯ್ಕೆಯಾದರು. ಇದು ಅವರ ಪ್ರಥಮ ರಾಜಕೀಯ ಪ್ರವೇಶ.ಆಗಿನ್ನೂ ಅವರಿಗೆ 26 ವರ್ಷ. ಪ್ರಥಮ ಅಧಿವೇಶನದಲ್ಲಿಯೇ ಅವರು ಒಳ್ಳೆಯ ವಾಗ್ಮಿ ಎಂದು ಪರಿಗಣಿಸಲ್ಪಟ್ಟರು. ಅವರನ್ನು ಪ್ರಜಾಪ್ರತಿನಿಧಿ ಸಭೆಯಿಂದ ಶಾಸನ ಸಭೆಗೆ ಚುನಾಯಿಸಲಾಯಿತು. ಈ ಸಭೆಗಳಲ್ಲಿ ಅವರು ಪ್ರಜೆಗಳ ಪರವಾಗಿ, ಮುಖ್ಯವಾಗಿ ಹಳ್ಳಿಗಾಡಿನ ರೈತ ಸೋದರರಿಗೆ ಸಂಬಂಧಪಟ್ಟ ವಿಷಯಗಳಲ್ಲಿ ನಿರ್ಭಯವಾಗಿ ವಾದಿಸುತ್ತಿದ್ದರು. ಸಂಸ್ಥಾನದ ಅನೇಕ ಕಡೆ ಸಭೆಗಳಿಗೆ ಹೋಗಿ ಪ್ರಜೆಗಳಿಗಿರುವ ಸಂಕಷ್ಟಗಳನ್ನು ವಿಚಾರಿಸಿ ಅವರಿಗೆ ಸಲ್ಲಬೇಕಾದ ಹಕ್ಕುಗಳ ವಿಷಯವಾಗಿ ಪ್ರಭಾವಶಾಲಿಯಾದ ಭಾಷಣಗಳನ್ನು ಮಾಡುತ್ತಿದ್ದರು. ಸಂಸ್ಥಾನದ ಆಡಳಿತದಲ್ಲಿ ಜನರು ಹೆಚ್ಚು ಹೆಚ್ಚಾಗಿ ಭಾಗವಹಿಸಮಂತಾಗಬೇಕು ಎಂಬ ಉದ್ದೇಶದಿಂದ ಮೈಸೂರು ಸಂಸ್ಥಾನ 1881ರಿಂದಲೇ ಪ್ರಜಾಪ್ರತಿನಿಧಿ ವ್ಯವಸ್ಥೆಯನ್ನು ಜಾರಿಗೆ ತಂದಿದ್ದರೂ ಜನರ

ಅಭಿಪ್ರಾಯದ ಪ್ರಕಾರ ಆಡಳಿತವನ್ನು ನಿಯಂತ್ರಿಸುವ ಅಥವಾ ರೂಪಿಸುವ ಯಾವ ಅಧಿಕಾರವೂ ಪ್ರತಿನಿಧಿಗಳಿಗಿರಲಿಲ್ಲ. ಇಂತಹ ಸಂದರ್ಭದಲ್ಲಿ ಪ್ರಜಾಪ್ರತಿನಿಧಿ ಸಭೆಗೆ ಆಯ್ಕೆಯಾಗಿ ಬಂದ ರೆಡ್ಡಿಯವರು ಪ್ರಜೆಗಳಿಗೆ ಸಲ್ಲಬೇಕಾದ ಹಕ್ಕುಗಳನ್ನು ದೊರಕಿಸಿ ಕೊಡುವುದಕ್ಕಾಗಿ ಕಂಕಣಬದ್ಧರಾಗಿದ್ದರು. ಇದೇ ಆಧಾರದ ಮೇಲೆ ಅವರು 1933ರಲ್ಲಿ ಡಿಸ್ಟ್ರಿಕ್ಟ್ ಬೋರ್ಡ್ ಅಧ್ಯಕ್ಷತೆಗಾಗಿ ನಡೆದ ಚುನಾವಣೆಗೂ ಸ್ಪರ್ಧಿಸಿ, ತಮ್ಮ 31ನೇ ವಯಸ್ಸಿನಲ್ಲಿ ಕೋಲಾರದ ಡಿಸ್ಟ್ರಿಕ್ಟ್ ಬೋರ್ಡ್ ಅಧ್ಯಕ್ಷರಾದರು. ಆಗಿನ ದಿನಗಳಲ್ಲಿ ಜಿಲ್ಲಾ ಮಂಡಳಿಯ ಅಧ್ಯಕ್ಷರಿಗೆ ಜಿಲ್ಲೆಯ ಅಧಿಕಾರೇತರ ಮುಖ್ಯಸ್ಥರೆಂದು ಮಾನ್ಯತೆ ಇತ್ತು. ಅವರಿಗೆ ಸರ್ಕಾರದಿಂದಲೂ ಸಾರ್ವಜನಿಕರಿಂದಲೂ ಬಹಳ ಗೌರವ ಮರ್ಯಾದೆ ದೊರೆಯುತ್ತಿತ್ತು. ರಸ್ತೆ, ಸೇತುವೆ ಮೊದಲಾದ ಗ್ರಾಮೀಣ ಸಂಪರ್ಕ ವ್ಯವಸ್ಥೆಗಳ ಕೆಲಸ; ಶಾಲೆ, ಆಸ್ಪತ್ರೆಗಳನ್ನು ಕಟ್ಟಿಸುವ ಕೆಲಸ ಮುಂತಾದುವೆಲ್ಲವೂ ಜಿಲ್ಲಾ ಮಂಡಳಿಯ ಜವಾಬ್ದಾರಿಗಳಾಗಿದ್ದವು. ಕೋಲಾರ ಜಿಲ್ಲಾ ಬೋರ್ಡ್ ಅಧ್ಯಕ್ಷರಾಗಿ ಜಿಲ್ಲೆಯ ಉನ್ನತಿಗಾಗಿ ಅವರು ನಡೆಸಿದ ಕಾರ್ಯಗಳು, ಶಾಸನ ಸಭೆಗಳಲ್ಲಿ ಹೋರಾಡಿ ಜನರಿಗೆ ದೊರಕಿಸಿಕೊಟ್ಟ ಸೌಲಭ್ಯಗಳು ಕೋಲಾರ ಜಿಲ್ಲೆಯಲ್ಲಿ ಇವರ ಜನಪ್ರಿಯತೆಯನ್ನು ಹೆಚ್ಚಿಸಿದವು.

ರೆಡ್ಡಿಯವರ ಆಸಕ್ತಿ ರಾಜಕೀಯ ವಿಷಯಗಳಿಗೆ ಮಾತ್ರವೇ ಸೀಮಿತವಾಗಿರಲಿಲ್ಲ. ಕಾಂಗ್ರೆಸ್ಸಿನ ರಚನಾತ್ಮಕ ಕಾರ್ಯಕ್ರಮಗಳಿಗೂ ಅವರು ಸಮಾನ ಗಮನ ಕೊಟ್ಟರು. ಜಿಲ್ಲಾ ಬೋರ್ಡ್ ಅಧ್ಯಕ್ಷರಾಗಿದ್ದಾಗ ಹೊಸೂರಿನಲ್ಲಿ ಖಾದಿ ಕೇಂದ್ರ ಸ್ಥಾಪನೆಗೆ ಕಾರಣಕರ್ತರಾದರು. ಹರಿಜನೋದ್ಧಾರ ನಿಧಿಗಾಗಿ ಗಾಂಧೀಜಿಯವರು 1934ರಲ್ಲಿ ಮೈಸೂರು ರಾಜ್ಯಕ್ಕೆ ಭೇಟಿ ನೀಡಿದಾಗ ಕೋಲಾರ ಜಿಲ್ಲಾ ಬೋರ್ಡ್ ಅಧ್ಯಕ್ಷರಾಗಿದ್ದ ರೆಡ್ಡಿಯವರು ಕೋಲಾರ ಜಿಲ್ಲೆಯಲ್ಲಿಯೂ ಅವರ ಪ್ರವಾಸವನ್ನು ಏರ್ಪಡಿಸಿ ನಿಧಿ ಸಂಗ್ರಹಿಸಿಕೊಟ್ಟರು. 1937ರಲ್ಲಿ ಬೌರಿಂಗ್ ಪೇಟೆಯಲ್ಲಿ ಹರಿಜನ ವಿದ್ಯಾರ್ಥಿನಿಲಯ ಸ್ಥಾಪಿಸಿದರು.

ರೆಡ್ಡಿಯವರು ಕೋಲಾರ ಜಿಲ್ಲಾ ಮಂಡಳಿ ಅಧ್ಯಕ್ಷರಾಗಿದ್ದ ಸಮಯದಲ್ಲಿ ಶ್ರೀ ಹೆಚ್.ಆರ್. ಗುರುವಾರೆಡ್ಡಿಯವರು ಬೆಂಗಳೂರು ಜಿಲ್ಲಾ ಮಂಡಳಿ ಅಧ್ಯಕ್ಷರಾಗಿದ್ದರು. ಗುರುವಾರೆಡ್ಡಿಯವರು ಸ್ವಾತಂತ್ರ್ಯ ಪೂರ್ವದ ಮೈಸೂರು ಸಂಸ್ಥಾನದ ರಾಜಕೀಯ ಸಾಮಾಜಿಕ ಬದುಕಿನಲ್ಲಿ ಅತ್ಯಂತ ಗಣ್ಯ ವ್ಯಕ್ತಿಗಳಾಗಿದ್ದರು. ಅವರು ಪ್ರಜಾಪ್ರತಿನಿಧಿ ಸಭೆಯ ಸದಸ್ಯರೂ ಆಗಿದ್ದರು. ಹೀಗಾಗಿ ಕೆ.ಸಿ. ರೆಡ್ಡಿಯವರು ಅವರ ಸಂಪರ್ಕಕ್ಕೆ ಬಂದದ್ದು ಸಹಜವೇ ಆಗಿದೆ. ಕೆ.ಸಿ. ರೆಡ್ಡಿಯವರ ಗಾಂಭೀರ್ಯ, ಸಂಭಾವಿತ ನಡವಳಿಕೆ, ಕಾರ್ಯಚಟುವಟಿಕೆ, ವ್ಯಕ್ತಿತ್ವ ಗುರವಾರೆಡ್ಡಿಯವರ ಮೇಲೆ ಬಹಳ ಪ್ರಭಾವ ಬೀರಿದವು. ಗುರುವಾರೆಡ್ಡಿಯವರು ಕೆ.ಸಿ. ರೆಡ್ಡಿಯವರನ್ನು ಅಳಿಯನನ್ನಾಗಿ ಮಾಡಿಕೊಳ್ಳಬೇಕೆಂಬ ವಿಚಾರ ಪ್ರಸ್ತಾಪಿಸಿದಾಗ ಕೆ.ಸಿ. ರೆಡ್ಡಿಯವರು ನಿರಾಕರಿಸಿದರು. ಅಷ್ಟೇ ಅಲ್ಲ ಒಂದು ಸುದೀರ್ಘ ಪತ್ರವನ್ನು ಬರೆದು ಆ ಪತ್ರದಲ್ಲಿ ತಮ್ಮ ಹಣಕಾಸಿನ ಪರಿಸ್ಥಿತಿ, ಮನೆಯ ಹಿನ್ನೆಲೆ ಇತ್ಯಾದಿಗಳನ್ನು ಸ್ಪಷ್ಟವಾಗಿ ವಿವರಿಸಿದ್ದರು. ಆದರೆ ಗುರುವಾರೆಡ್ಡಿಯವರು ಅಷ್ಟಕ್ಕೆ ಸುಮ್ಮನಾಗಲಿಲ್ಲ. ನಿಮಗೆ ಸಂಸಾರದ ಯಾವ ಭಾರವೂ ಇರುವುದಿಲ್ಲ, ನಿಮ್ಮ ಕಾರ್ಯಚಟುವಟಿಕೆಗಳನ್ನು ಎಂದಿನಂತೆ ನಡೆಸಿಕೊಂಡು ಹೋಗಬಹುದು ಎಂದು ಹೇಳಿ ರೆಡ್ಡಿಯವರನ್ನು ಮದುವೆಗೆ ಒಪ್ಪಿಸಿದರು. 1934ರ ಆಗಸ್ಟ್‌ನಲ್ಲಿ ಗುರುವಾರೆಡ್ಡಿಯವರ ಹಿರಿಯ ಪುತ್ರಿ ಸರೋಜಮ್ಮನವರೊಂದಿಗೆ ರೆಡ್ಡಿಯವರ ವಿವಾಹವಾಯಿತು.

## ಪ್ರಜಾಪಕ್ಷ ಮತ್ತು ಪ್ರಜಾಸಂಯುಕ್ತ ಪಕ್ಷ:

ಮೈಸೂರು ಸಂಸ್ಥಾನದಲ್ಲಿ 1917ರಲ್ಲಿ 'ಪ್ರಜಾಮಿತ್ರ ಮಂಡಳಿ' ಎಂಬ ಒಂದು ಸಂಘಟನೆ ಸ್ಥಾಪಿತವಾಗಿತ್ತು. ಎಲ್ಲರಿಗೂ ಸಮಾನ ಅವಕಾಶವಿರಬೇಕು, ಎಲ್ಲರಿಗೂ ನ್ಯಾಯ ಸಿಗಬೇಕು, ಯಾರಿಗೂ ಅನ್ಯಾಯವಾಗಬಾರದು ಎಂಬ ಗುರಿಯನ್ನು ಹೊಂದಿದ್ದ ಈ ಸಂಘಟನೆಯ ಸ್ಥಾಪನೆ ಹಾಗೂ ಹೋರಾಟದ ಮುಂಚೂಣಿಯಲ್ಲಿದ್ದ ಪ್ರಮುಖರಲ್ಲಿ ಕೆ. ಸಿ. ರೆಡ್ಡಿಯರರ ಮಾವ ಗುರುವಾರೆಡ್ಡಿಯರರೂ ಇದ್ದರು. ಕಾಂಗ್ರೆಸ್ಸಿನಲ್ಲಿ ಬ್ರಾಹ್ಮಣರ ಪ್ರಾಬಲ್ಯವಿದೆ ಎಂಬ ಕಾರಣದಿಂದ ಈ ಗುಂಪಿನವರು ಕಾಂಗ್ರೆಸ್ಸಿನಿಂದ ದೂರವಿದ್ದರು. ಈ ಪಕ್ಷದ ಬೇಡಿಕೆಗಳನ್ನು ಮನ್ನಿಸಿದ ಮೈಸೂರು ಸರ್ಕಾರವು, ಸರ್ಕಾರದ ನೌಕರಿಗಳಲ್ಲಿ ಬ್ರಾಹ್ಮಣೇತರರಿಗೆ ಹೆಚ್ಚಿನ ನೌಕರಿಯ ಅವಕಾಶ ನೀಡುವುದು ಹಾಗೂ ಹಿಂದುಳಿದ ವರ್ಗದವರಿಗೆ ಪ್ರಾತಿನಿಧ್ಯ ನೀಡುವುದು ಮೊದಲಾದ ನೀತಿಗಳನ್ನು ಅಳವಡಿಸಿಕೊಂಡಿತು. ಈ ಸಂಘಟನೆಯ ಮೂಲ ಉದ್ದೇಶ ಒಳ್ಳೆಯದೇ ಇದ್ದರೂ ಅದು ಹಿಂದುಳಿದ ಕೋಮುಗಳ ಪರವಾಗಿ ಹೋರಾಡುವ ಭರದಲ್ಲಿ ಬ್ರಾಹ್ಮಣರನ್ನು ಸ್ಪಷ್ಟವಾಗಿ ವಿರೋಧಿಸುತ್ತಾ ಕೋಮುವಾದಿ ಪಕ್ಷ, ಬ್ರಾಹ್ಮಣರ ವಿರೋಧಿ ಪಕ್ಷ ಎಂಬ ಹಣೆಪಟ್ಟಿ ಗಳಿಸಿತು. ಆದರೆ ಪಾಶ್ಚಾತ್ಯ ಶಿಕ್ಷಣ, ಗಾಂಧೀ ಚಳುವಳಿಯ ಪ್ರಭಾವ ಹಾಗೂ ನೆರೆಹೊರೆಯ ಪ್ರಾಂತಗಳಲ್ಲಾದ ಬದಲಾವಣೆಗಳ ಪರಿಣಾಮವಾಗಿ ಪ್ರಜಾಮಿತ್ರ ಮಂಡಳಿಯಲ್ಲಿದ್ದ ಕೆಲವರು ಪ್ರಸ್ತುತ ವಿದ್ಯಮಾನಗಳ ಬಗ್ಗೆ ತಮ್ಮ ದೃಷ್ಟಿಕೋನವನ್ನು ಬದಲಾಯಿಸಿಕೊಳ್ಳುವುದು ಅಗತ್ಯ ಎಂಬ ಅಭಿಪ್ರಾಯ ತಳೆದರು. ಮೊದಮೊದಲು ಯಾವ ಪಕ್ಷವನ್ನೂ ಸೇರದೆ ರಚನಾತ್ಮಕ ಕಾರ್ಯಗಳಲ್ಲಷ್ಟೆ ತಮ್ಮನ್ನು ತೊಡಗಿಸಿಕೊಂಡಿದ್ದ ಕೆ.ಸಿ. ರೆಡ್ಡಿಯವರಿಗೂ ಕೂಡ ಪ್ರಜಾಮಿತ್ರ ಮಂಡಳಿಯ ಬ್ರಾಹ್ಮಣ ವಿರೋಧಿ ನಿಲುವು ಒಪ್ಪಿಗೆಯಾಗಿರಲಿಲ್ಲ. ಈ ಹಿನ್ನೆಲೆಯಲ್ಲಿ 1930ರಲ್ಲಿ ಪ್ರಜಾಪಕ್ಷ ಎಂಬ ಒಂದು ಹೊಸ ಪಕ್ಷದ ಉದಯವಾಯಿತು. ಡಿವಿಜಿ ಯವರಂತಹ ಚಿಂತನಶೀಲರ ಮಾರ್ಗದರ್ಶನದಲ್ಲಿ ರೂಪುಗೊಂಡ ಈ ಪಕ್ಷದಲ್ಲಿ ಶ್ರೀ ಡಿ.ಎಸ್. ಮಲ್ಲಪ್ಪ, ವಿ. ವೆಂಕಟಪ್ಪ, ಹೊಸಕೊಪ್ಪ ಕೃಷ್ಣರಾವ್, ತಗಡೂರು ರಾಮಚಂದ್ರರಾವ್, ನಾಗಮಂಗಲದ ಶಂಕರಲಿಂಗೇಗೌಡ ಮೊದಲಾದವರು ಪಕ್ಷದ ಮುಖಂಡತ್ವ ವಹಿಸಿದ್ದರು. ಕೆ.ಸಿ. ರೆಡ್ಡಿಯವರು ಈ ಪಕ್ಷದ ಪ್ರಥಮ ಕಾರ್ಯದರ್ಶಿಯಾದರು. ಪ್ರಜಾಪಕ್ಷದ ಸ್ಥಾಪನೆಯ ನಂತರ ಪ್ರಜಾಮಿತ್ರ ಮಂಡಳಿಯ ಪ್ರಾಬಲ್ಯ ಸಾಕಷ್ಟು ಕಡಿಮೆಯಾಯಿತು. ಜನಜಾಗೃತಿ ಉಂಟುಮಾಡುವಲ್ಲಿ ಪ್ರಜಾಪಕ್ಷ ಗಮನಾರ್ಹ ಸಾಧನೆಗಳನ್ನು ಮಾಡಿತು. ಸರ್ಕಾರದ ಧೋರಣೆಯನ್ನು ಪ್ರತಿಭಟಿಸುವಲ್ಲಿ ಅದು ಕಾಂಗ್ರೆಸ್ಸಿಗಿಂತ ಹೆಚ್ಚು ಪ್ರಭಾವಶಾಲಿಯಾಗಿ ಕೆಲಸ ಮಾಡಿತು. ಸಭಾತ್ಯಾಗ ಮಾಡುವ ಪದ್ಧತಿಯನ್ನು ಮೊದಲು ಆರಂಭಿಸಿದ ಕೀರ್ತಿಯೂ ಪ್ರಜಾಪಕ್ಷಕ್ಕೇ ಸೇರುತ್ತದೆ.

ಕಾಂಗ್ರೆಸ್ಸಿನಿಂದಲೂ ಪ್ರಜಾಪಕ್ಷದವರಿಂದಲೂ ಜವಾಬ್ದಾರಿ ಸರ್ಕಾರಕ್ಕಾಗಿ ಒತ್ತಾಯ ಹೆಚ್ಚುತ್ತಲೇ ಇತ್ತು. ತಮ್ಮ ಬೇಡಿಕೆಗಳ ಬಗ್ಗೆ ಸರ್ಕಾರವು ಅಲಕ್ಷ್ಯ ತೋರಿಸುತ್ತಿರುವುದರ ಬಗ್ಗೆ ಅನೇಕ ವೇದಿಕೆಗಳಿಂದ ಅವರು ಖಂಡಿಸುತ್ತಿದ್ದರು. ತಮ್ಮ ಬೇಡಿಕೆಗಳಿಗೆ ಬಲ ಬರಲೇಬೇಕಾದರೆ ಸಂಸ್ಥಾನದಲ್ಲಿ ಬೇರೆ ಬೇರೆಯಾಗಿ ಕಾರ್ಯ ನಿರ್ವಹಿಸುತ್ತಿದ್ದ ತಾವೆಲ್ಲರೂ ಒಂದುಗೂಡುವುದು ಅಗತ್ಯ ಎಂದು ವಿವಿಧ ಗುಂಪು, ಪಕ್ಷಗಳ ಮುಖಂಡರು ಆಲೋಚಿಸತೊಡಗಿದರು. ಈ ಹಿನ್ನೆಲೆಯಲ್ಲಿ ಹೆಚ್ಚುಕಡಿಮೆ ಒಂದೇ ಉದ್ದೇಶದ ಒಂದೇ ವರ್ಗದ ಜನರಿರುವ ಪ್ರಜಾ ಮಿತ್ರ ಮಂಡಳಿ ಮತ್ತು

ಪ್ರಜಾಪಕ್ಷಗಳನ್ನು ಒಟ್ಟುಗೂಡಿಸಿ ಪ್ರಜಾ ಸಂಯುಕ್ತ ಪಕ್ಷವನ್ನು ಹುಟ್ಟುಹಾಕಲಾಯಿತು. ಈ ಒಗ್ಗೂಡಿಕೆಯಲ್ಲಿ ಕೆ.ಸಿ. ರೆಡ್ಡಿಯವರು ಬಹು ಮುಖ್ಯ ಪಾತ್ರ ವಹಿಸಿದರು. 1935 ರಿಂದ 1937ರವರೆಗೆ ಅಂದರೆ ಪ್ರಜಾ ಸಂಯುಕ್ತ ಪಕ್ಷ ಕಾಂಗ್ರೆಸ್ಸಿನೊಂದಿಗೆ ವಿಲೀನಗೊಳ್ಳುವವರೆಗೆ ಕೆ.ಸಿ. ರೆಡ್ಡಿಯವರು ಪ್ರಜಾಸಂಯುಕ್ತ ಪಕ್ಷದ ಅಧ್ಯಕ್ಷರಾಗಿ ಸಮರ್ಥವಾಗಿ ಕಾರ್ಯ ನಿರ್ವಹಿಸಿದರು. ಹಿಂದುಳಿದ ಪಂಗಡಗಳವರ ಉದ್ಧಾರ ಹಾಗೂ ಜವಾಬ್ದಾರಿ ಸರ್ಕಾರದ ಸ್ಥಾಪನೆ-ಇವು ಹೊಸ ಪಕ್ಷದ ಉದ್ದೇಶಗಳಾದವು.

ಪ್ರಜಾಪಕ್ಷದ ಪ್ರಮುಖ ಬೆಂಬಲಿಗರಾಗಿದ್ದ ಹೆಸರಾಂತ ಪತ್ರಕರ್ತ ಶ್ರೀ ಬಿ.ಎನ್. ಗುಪ್ತ ಅವರು 1931ರಲ್ಲಿ ಮದ್ರಾಮಸಿನಿಂದ ಪ್ರಜಾಮತ ವಾರಪತ್ರಿಕೆಯನ್ನು ಹಾಗೂ ಜನವಾಣಿ (1934) ಎಂಬ ದಿನಪತ್ರಿಕೆಯನ್ನು ಆರಂಭಿಸಿದ್ದರು. ಗುಪ್ತ ಅವರು ಕೆ.ಸಿ. ರೆಡ್ಡಿಯವರ ಆತ್ಮೀಯ ಸ್ನೇಹಿತರೂ ಆಗಿದ್ದರು. ಗುಪ್ತರ ಜನವಾಣಿಗೆ 1937ರಲ್ಲಿ ಸುಮಾರು ಏಳು ತಿಂಗಳುಗಳ ಕಾಲ ಕೆ.ಸಿ. ರೆಡ್ಡಿ ಸಂಪಾದಕರಾಗಿದ್ದರು. 'ಜನವಾಣಿ' ಪ್ರಜೆಗಳ ಹಕ್ಕುಭಾದ್ಯತೆಗಳಿಗೆ ಹೊಡೆದಾಡುವ ಪತ್ರಿಕೆಗಳ ಶ್ರೇಣಿಯಲ್ಲಿ ಪ್ರಥಮ ಸ್ಥಾನ ಪಡೆದಿತ್ತು. ಸರ್ಕಾರದ ಅಧಿಕಾರಿಗಳಲ್ಲಿ ಕಂಡುಬರುತ್ತಿದ್ದ ಅನ್ಯಾಯದ ವರ್ತನೆಗಳ ಬಗ್ಗೆ ನಿರ್ಭಯವಾದ ಟೀಕೆ ಮತ್ತು ಖಂಡನಾತ್ಮಕ ಲೇಖನಗಳಿಗೆ 'ಜನವಾಣಿ' ಹೆಸರಾಗಿತ್ತು. ಸರ್ಕಾರದ ಉನ್ನತಾಧಿಕಾರಿಗಳು ಪ್ರತಿದಿನವೂ ಜನವಾಣಿಯನ್ನು ಓದದೆ ಮಲಗುತ್ತಿರಲಿಲ್ಲವಂತೆ.

ಪ್ರಜಾ ಸಂಯುಕ್ತ ಪಕ್ಷ ಉತ್ತಮವಾಗಿ ಬೆಳೆಯಿತು. ಈ ಪಕ್ಷದ ಕೆಲವರಲ್ಲಿ ಯಾದರೂ ಉಳಿದುಕೊಂಡಿದ್ದ ಬ್ರಾಹ್ಮಣ, ಬ್ರಾಹ್ಮಣೇತರ ಎಂಬ ಭಾವನೆ ದೂರವಾಗಿ ರಾಷ್ಟ್ರೀಯ ಭಾವನೆ ಪಕ್ವವಾಗತೊಡಗಿತು. ಆದರೂ ಜವಾಬ್ದಾರಿ ಸರ್ಕಾರದ ಬೇಡಿಕೆ ಈಡೇರಬೇಕಾದರೆ ಈ ಪಕ್ಷ ಕಾಂಗ್ರೆಸ್ಸಿನೊಂದಿಗೆ ವಿಲೀನಗೊಳ್ಳುವುದೇ ಸರಿಯಾದ ಮಾರ್ಗ ಎಂದು ಕೆ.ಸಿ. ರೆಡ್ಡಿ ಮೊದಲಾದ ನಾಯಕರ ಅಬಿಪ್ರಾಯವಾಗಿತ್ತು. ಕಾಂಗ್ರೆಸ್ಸಿನ ತಳಹದಿ ಹಾಗೂ ಉದ್ದೇಶ ಪ್ರಜಾಸಂಯುಕ್ತ ಪಕ್ಷಕ್ಕಿಂತ ತುಂಬ ವಿಶಾಲವಾಗಿತ್ತು. ಕಾಂಗ್ರೆಸ್ ಚಟುವಟಿಕೆಗಳು ಜನಸಾಮಾನ್ಯರನ್ನೂ, ಗ್ರಾಮೀಣ ಜನರನ್ನೂ ಹೆಚ್ಚು ಹೆಚ್ಚು ಆಕರ್ಷಿಸತೊಡಗಿದ್ದವು. ಜನಸಾಮಾನ್ಯರ ಮಟ್ಟದಲ್ಲಿ ಬೇರೂರಿ ಬೆಳೆಯಲಾರಂಭಿಸಿರುವ ಕಾಂಗ್ರೆಸ್ಸಿನ ಪ್ರಭಾವ ಹೆಚ್ಚಿದಂತೆ ಪ್ರಜಾಸಂಯುಕ್ತ ಪಕ್ಷದ ಪ್ರಭಾವ ಮಂಕಾಗುತ್ತದೆ ಎಂಬುದನ್ನು ಕಂಡುಕೊಂಡ ಮುಖಂಡರು ಕಾಂಗ್ರೆಸ್ಸಿನೊಂದಿಗೆ ಸೇರಿಕೊಳ್ಳುವ ಒಲವು ತೋರತೊಡಗಿದರು. ಆದರೆ ಈ ಪಕ್ಷದವರದು ಮುಖ್ಯವಾಗಿ ರಾಜಕೀಯ ಬದಲಾವಣೆಯನ್ನು ಆಶಿಸಿದ್ದ ಚಳುವಳಿ. ಸಂಸ್ಥಾನಗಳಲ್ಲಿ ಕಾರ್ಯ ನಿರ್ವಹಿಸುತ್ತಿರುವ ಕಾಂಗ್ರೆಸ್ಸು ಅಲ್ಲಿನ ಆಂತರಿಕ ವ್ಯವಹಾರಗಳಲ್ಲಿ ಕೈಹಾಕಬಾರದು ಎಂಬುದು ರಾಷ್ಟ್ರೀಯ ಕಾಂಗ್ರೆಸ್ಸಿನ ನೀತಿಯಾಗಿತ್ತು. ರಾಜಕೀಯ ಹೋರಾಟ ಕುರಿತು ಭಾರತದ ಕಾಂಗ್ರೆಸ್ ಯಾವ ನೀತಿಯನ್ನು ಅನುಸರಿಸುತ್ತದೆ ಎಂಬುದು ಸ್ಪಷ್ಟವಾಗುವವರೆಗೆ ಉಭಯ ಪಕ್ಷಗಳು ಒಂದಾಗುವುದು ಅಸಾಧ್ಯವಾಗಿತ್ತು. ಇದೇ ಸಂದರ್ಭದಲ್ಲಿ ಸಂಸ್ಥಾನಗಳ ಕಾಂಗ್ರೆಸ್ ವಿಷಯದಲ್ಲಿ ರಾಷ್ಟ್ರೀಯ ಕಾಂಗ್ರೆಸ್ಸು ತನ್ನ ಬಿಗುವನ್ನು ಸಡಿಲಗೊಳಿಸಬೇಕಾದಂಥ ಅನೇಕ ಘಟನೆಗಳು ನಡೆದವು. ತಮಗೂ ರಾಜಕೀಯ ಹೋರಾಟ ಮಾಡುವ ಅವಕಾಶ ಇರಬೇಕು ಎಂದು ಸಂಸ್ಥಾನಗಳಲ್ಲಿನ ಕಾಂಗ್ರೆಸ್ಸಿನವರಿಂದ ಒತ್ತಾಯ ಹೆಚ್ಚಾದಾಗ [illegible] ಬೇಡಿಕೆಗಳನ್ನು [illegible] ಕಾಂಗ್ರೆಸ್ ಒಪ್ಪಿಕೊಳ್ಳಲೇಬೇಕಾಯಿತು. ಕೋಲಾರದಲ್ಲಿ

ಪ್ರಜಾಸಂಯುಕ್ತ ಪಕ್ಷದ ಸಮ್ಮೇಳನ ನಡೆದಾಗ, ಈ ಪಕ್ಷವು ಕಾಂಗ್ರೆಸ್ಸಿನೊಂದಿಗೆ ವಿಲೀನವಾಗಬೇಕು ಎಂದು ಬಹಳ ಆಸ್ಥೆ ವಹಿಸಿದವರಲ್ಲಿ ಮುಖ್ಯರಾದ ಹೆಚ್.ಕೆ. ವೀರಣ್ಣಗೌಡ, ಪಿ.ಎಸ್.ನಾರಾಯಣ್, ವೀರಕೇಸರಿ ಸೀತಾರಾಮಶಾಸ್ತ್ರಿ , ತಗಡೂರು ರಾಮಚಂದ್ರರಾವ್ ಮೊದಲಾದವರು ತಮ್ಮ ಬಯಕೆಯನ್ನು ಕೆ.ಸಿ. ರೆಡ್ಡಿ ಅವರಲ್ಲಿ ವಿನಂತಿಸಿಕೊಂಡರು. ರೆಡ್ಡಿಯವರು ಈ ಬಗ್ಗೆ ವೈಯಕ್ತಿಕವಾಗಿ ಒಲವು ವ್ಯಕ್ತಪಡಿಸಿದರೂ, ಕಾಂಗ್ರೆಸ್ಸನ್ನು ಸೇರುವುದೇ ಆದರೆ ಪಕ್ಷದ ಕಾರ್ಯಕರ್ತರ ಸಹಿತವಾಗಿಯೇ ಸೇರುತ್ತೇನೆ, ಏಕಾಂಗಿಯಾಗಿ ಅಲ್ಲ ಎಂದು ಸ್ಪಷ್ಟಪಡಿಸಿದರು. ಈ ಎರಡೂ ಪಕ್ಷಗಳ ವಿಲೀನಕ್ಕಾಗಿ ರೆಡ್ಡಿಯವರು ಸತತ ಪ್ರಯತ್ನ ನಡೆಸಿದರು. ಕಾಂಗ್ರೆಸ್ಸನ್ನು ಬಲಪಡಿಸುವುದಕ್ಕೆ ಮುಂದಾಗಬೇಕು ಎಂದು ತಮ್ಮ ಪಕ್ಷಕ್ಕೆ ಮನದಟ್ಟು ಮಾಡಿಕೊಟ್ಟರು. ರೆಡ್ಡಿಯವರ ಅಭೀಪ್ಸೆ 1937ರ ಅಕ್ಟೋಬರ್ 16ರಂದು ನೆರವೇರಿತು.

**ಕಾಂಗ್ರೆಸ್‌ನೊಂದಿಗೆ ಪ್ರಜಾಸಂಯುಕ್ತ ಪಕ್ಷದ ವಿಲೀನ:**

1937ರ ಅಕ್ಟೋಬರ್ ತಿಂಗಳಲ್ಲಿ ಮೈಸೂರು ನಗರದಲ್ಲಿ ನಡೆದ ಪ್ರಜಾಪ್ರತಿನಿಧಿ ಸಭೆಯ ಅಧಿವೇಶನಕ್ಕಾಗಿ ಸಂಸ್ಥಾನದ ಎಲ್ಲೆಡೆಗಳಿಂದ ಪ್ರತಿನಿಧಿಗಳು ಸೇರಿದ್ದರು. ಜನರ ದನಿಗೆ ಕಿವಿಗೊಡದ ನಿಮ್ಮ ದುರಾಡಳಿತ ನೀತಿಯನ್ನು ಪ್ರತಿಭಟಿಸುವುದಕ್ಕಾಗಿ ನಾವು ವಾಕ್ ಔಟ್ ಮಾಡುತ್ತೇವೆ ಎಂದು ಹೇಳಿ ಕಾಂಗ್ರೆಸ್ ಪಕ್ಷದವರು ವಾಕ್ ಔಟ್ ಮಾಡಿದರು. ಈ ಘಟನೆಯ ನಂತರ ನಮ್ಮ ದನಿಗೆ ಬಲ ಬರಬೇಕಾದರೆ ಒಗ್ಗಟ್ಟಾಗದೆ ವಿಧಿಯಿಲ್ಲ ಎಂಬುದು ಎಲ್ಲರಿಗೂ ಇನ್ನಷ್ಟು ಮನದಟ್ಟಾಗಿತ್ತು. ಹೆಚ್.ಕೆ. ವೀರಣ್ಣಗೌಡ ಮೊದಲಾದ ಸ್ನೇಹಿತರು ಆಗಿಂದಾಗಲೇ ವಿಲೀನ ಕಾರ್ಯಕ್ರಮ ನಡೆಸಲು ಸನ್ನದ್ಧರಾದರು. ಈ ಎರಡು ಪಕ್ಷಗಳ ವಿಲೀನದ ಬಗ್ಗೆ ಕೆಲವರು ವಿರೋಧ ವ್ಯಕ್ತಪಡಿಸಿದರೂ ವಿಲೀನಕ್ಕೆ ಪ್ರಚಂಡ ಬೆಂಬಲವಿದ್ದುದರಿಂದ ವಿರೋಧದ ದನಿ ತಣ್ಣಗಾಯಿತು. ವಿ. ವೆಂಕಟಪ್ಪನವರ ಅಧ್ಯಕ್ಷತೆಯಲ್ಲಿ ನಡೆದ ವಿಶೇಷ ಅಧಿವೇಶನದಲ್ಲಿ ನಿರ್ಣಯ ಮಂಡಿಸುತ್ತಾ ಕೆ.ಸಿ. ರೆಡ್ಡಿ ಹೀಗೆ ಹೇಳಿದರು: "ಭಾರತವು ಏಕ ಮತ್ತು ಅಖಂಡ ಹಾಗೂ ಈ ಒಕ್ಕೂಟದ ತತ್ವ ಸಾರ್ವತ್ರಿಕವಾಗಿ ಅಂಗೀಕಾರವಾಗಿರುವುದರಿಂದ ಬ್ರಿಟಿಷ್ ಇಂಡಿಯಾ ಮತ್ತು ಭಾರತೀಯ ರಾಜ್ಯಗಳು ಒಂದು ಅಖಿಲ ಭಾರತ ಸಂಘಟನೆಯ ಮೂಲಕ ಒಟ್ಟಾಗಿ ಕಾರ್ಯನಿರ್ವಹಿಸುವುದು ಅಗತ್ಯ. ಭಾರತದ ರಾಷ್ಟ್ರೀಯ ಕಾಂಗ್ರೆಸ್ಸು ಒಂದು ಸಂಘಟನೆಯಾಗಿದ್ದು ಅದರ ಕಾರ್ಯಕ್ರಮವೂ ಕೂಡ ಮೈಸೂರಿನ ಪ್ರಜಾ ಸಂಯುಕ್ತ ಪಕ್ಷದ ಕಾರ್ಯಕ್ರಮದಂತೆಯೇ ಇದೆ. ಆದ್ದರಿಂದ ಮೈಸೂರಿನ ಪ್ರಜಾಸಂಯುಕ್ತ ಪಕ್ಷವನ್ನು ಒಂದು ಪ್ರತ್ಯೇಕ ಸಂಘಟನೆಯಾಗಿಟ್ಟುಕೊಳ್ಳುವುದು ಅಪೇಕ್ಷಣೀಯವಲ್ಲ. ರಾಜ್ಯದಲ್ಲಿ ಕಾಂಗ್ರೆಸ್ಸನ್ನು ಬಲಪಡಿಸುವ ಬಗ್ಗೆ ಹಿಂದಿನ ಸಮಿತಿಯು ನಿರ್ಧರಿಸಲು ಕೈಗೊಂಡ ಕ್ರಮವನ್ನು ಈ ಸಮಾವೇಶ ಸ್ಥಿರೀಕರಿಸುತ್ತದೆ ಮತ್ತು ಮೈಸೂರು ಪ್ರಜಾಸಂಯುಕ್ತ ಪಕ್ಷವು ಕಾಂಗ್ರೆಸ್ಸಿನೊಂದಿಗೆ ವಿಲೀನಗೊಳ್ಳುವುದೆಂದು ನಿರ್ಣಯಿಸುತ್ತದೆ." ಈ ನಿರ್ಣಯಕ್ಕೆ ಏಕಕಂಠದ ಒಪ್ಪಿಗೆ ದೊರೆಯಿತು.

ಕೆ. ಸಿ. ರೆಡ್ಡಿಯವರ ಮುಖ್ಯಸ್ಥಿಕೆಯಲ್ಲಿ ಮೈಸೂರು ಸಂಸ್ಥಾನದ ಎರಡು ಪ್ರಮುಖ ಪಕ್ಷಗಳು ಒಂದುಗೂಡಿದ್ದು ಮೈಸೂರಿನ ರಾಜಕೀಯ ಇತಿಹಾಸದಲ್ಲಿ ಮಹತ್ವದ ಘಟ್ಟ. ಈ ವಿಲೀನದಲ್ಲಿ ಕೆ.ಸಿ. ರೆಡ್ಡಿಯವರ ಪ್ರಯತ್ನ, ದೂರಾಲೋಚನೆಗಳು ಉಲ್ಲೇಖನೀಯ. ಈ ಮೊದಲು

ಪಕ್ಷಗಳ ಏಕೀಕರಣಕ್ಕಾಗಿ ಅನೇಕರು ಪ್ರಯತ್ನಿಸಿದರೂ ಅದು ಯಶಸ್ವಿಯಾಗಿರಲಿಲ್ಲ. ರೆಡ್ಡಿಯವರು ಎರಡೂ ಪಕ್ಷಗಳಲ್ಲಿ ವಿಶ್ವಾಸಗಳಿಸಿಕೊಂಡಿದ್ದ ಏಕೈಕ ವ್ಯಕ್ತಿಯಾಗಿದ್ದರು. ಈ ವಿಲೀನದಿಂದ ಹೆಚ್ಚು ಲಾಭವಾಗಿದ್ದು ಕಾಂಗ್ರೆಸ್ಸಿಗೆ. ಪ್ರಜಾಸಂಯುಕ್ತ ಪಕ್ಷದ ಅಪಾರ ಬೆಂಬಲ ದೊರಕಿದ್ದರಿಂದ ಅದು ಇನ್ನಷ್ಟು ಗಟ್ಟಿಯಾಗಿ ನೆಲೆ ಊರುವಂತಾಯಿತು.

**ಹರಿಪುರ ಅಧಿವೇಶನ:**

1938ನೇ ಫೆಬ್ರವರಿಯಲ್ಲಿ ಗುಜರಾತಿನ ಹರಿಪುರದಲ್ಲಿ ನಡೆದ 51ನೇ ಅಖಿಲ ಭಾರತ ರಾಷ್ಟ್ರೀಯ ಕಾಂಗ್ರೆಸ್ಸಿನ ಮಹಾಧಿವೇಶನದಲ್ಲಿ ಇನ್ನಿತರ ಕಾಂಗ್ರೆಸ್ ಮುಖಂಡರ ಜೊತೆ ಕೆ.ಸಿ. ರೆಡ್ಡಿಯವರೂ ಭಾಗವಹಿಸಿದರು. ಮೈಸೂರಲ್ಲಿ ಸಂಸ್ಥಾನದ ವಿರುದ್ಧ ನಡೆದ ಎಲ್ಲ ಚಳುವಳಿಗಳನ್ನೂ ರಾಷ್ಟ್ರೀಯ ಕಾಂಗ್ರೆಸ್ಸಿನ ಕಾರ್ಯಕ್ರಮಗಳೆಂದೇ ಬ್ರಿಟಿಷ್ ಸರ್ಕಾರ ಭಾವಿಸುತ್ತಿದ್ದರಿಂದ ಇದು ಗಾಂಧೀಜಿಯವರನ್ನು ಚಿಂತೆಗೀಡು ಮಾಡಿತು. ಬ್ರಿಟಿಷರು ಮತ್ತು ದೇಶೀಯ ಸಂಸ್ಥಾನಗಳ ರಾಜರ ವಿರುದ್ಧ ಏಕಕಾಲದಲ್ಲಿ ಹೋರಾಡುವುದು ಬುದ್ಧಿವಂತಿಕೆಯಲ್ಲ ಎಂದು ಗಾಂಧೀಜಿ ಅಭಿಪ್ರಾಯ ಪಟ್ಟರು. ಈ ಹಿನ್ನೆಲೆಯಲ್ಲಿ ದೇಶೀಯ ಸಂಸ್ಥಾನಗಳ ರಾಜಕೀಯ ಚಟುವಟಿಕೆಗಳಿಗೆ ಅಖಿಲ ಭಾರತ ಕಾಂಗ್ರೆಸ್ಸಿನ ಹೆಸರನ್ನು ಬಳಸಬಾರದು ಎಂಬ ನಿರ್ಣಯವನ್ನು ಹರಿಪುರದ ಸಮಾವೇಶ ಕೈಗೊಂಡಿತು. ಮೈಸೂರಿನ ಮುಖಂಡರೂ ಸೇರಿದಂತೆ ದೇಶೀಯ ಸಂಸ್ಥಾನಗಳ ಪ್ರತಿನಿಧಿಗಳೆಲ್ಲ ಸಂಘಟಿತರಾಗಿ ಈ ನಿರ್ಣಯವನ್ನು ವಿರೋಧಿಸಿದರು. ಕೆ.ಸಿ. ರೆಡ್ಡಿಯವರು ಸಂಸ್ಥಾನದ ಜನರ ಉದ್ದೇಶವನ್ನು ಸಮರ್ಥಿಸಿಕೊಂಡು ವಾದಿಸಿದರು. ಮೈಸೂರು ಸರ್ಕಾರ ನಡೆಸುತ್ತಿರುವ ದಬ್ಬಾಳಿಕೆಗಳ ಕಡೆಗೆ ಭಾರತದ ಮುಂದಾಳುಗಳ ಗಮನ ಸೆಳೆದರು. ದೇಶೀಯ ಸಂಸ್ಥಾನಗಳಲ್ಲಿ ಚಳುವಳಿ ನಡೆಸಲು ಅವಕಾಶ ಕೊಡಬೇಕೆಂದು ಕೇಳಿಕೊಂಡರು. ಇತರ ಮುಖಂಡರೂ ಈ ಬಗ್ಗೆ ರಾಷ್ಟ್ರನಾಯಕರಿಗೆ ಮನವರಿಕೆ ಮಾಡಿಕೊಡಲು ಸಾಕಷ್ಟು ಶ್ರಮಿಸಿದರು. ಈ ಪ್ರಯತ್ನದ ಫಲವಾಗಿ ದೇಶೀಯ ಸಂಸ್ಥಾನಗಳಲ್ಲಿರುವ ಪ್ರಜೆಗಳು ರಾಜಕೀಯ ಆಶೋತ್ತರಗಳ ಈಡೇರಿಕೆಗಾಗಿ ಬೇರೆ ಸಂಸ್ಥೆಗಳನ್ನು ಕಟ್ಟಿಕೊಂಡು ಹೋರಾಡಬಹುದು ಎಂಬ ಒಪ್ಪಿಗೆ ದೊರೆಯಿತು. ಹರಿಪುರದಲ್ಲಿ ಕೈಗೊಂಡ ನಿರ್ಣಯದ ಪ್ರಕಾರ ಮೈಸೂರಿನಲ್ಲಿ ಸತ್ಯಾಗ್ರಹ ನಡೆಸುವುದಕ್ಕಾಗಿ ಮೈಸೂರು ಕಾಂಗ್ರೆಸ್ ಎಂಬ ಹೆಸರಿನ ಸಂಸ್ಥೆಯನ್ನು 1938ರಲ್ಲಿ ಸ್ಥಾಪಿಸಲಾಯಿತು. 1938ರ ಏಪ್ರಿಲ್ ತಿಂಗಳ 11 ಮತ್ತು 12ರಂದು ಶಿವಪುರದಲ್ಲಿ ಮೈಸೂರು ಕಾಂಗ್ರೆಸ್ಸಿನ ಪ್ರಥಮ ಅಧಿವೇಶನವನ್ನು ಕರೆದು ಕಾಂಗ್ರೆಸ್ಸಿನ ಧ್ಯೇಯ ಧೋರಣೆಗಳನ್ನು ರೂಪಿಸಲು ತೀರ್ಮಾನವಾಯಿತು. ಕಾಂಗ್ರೆಸ್ಸಿನ ಧ್ವಜಾರೋಹಣ, ಶಿವಪುರ ಸಮಾವೇಶದ ಇನ್ನೊಂದು ಮುಖ್ಯ ಕಾರ್ಯಕ್ರಮವಾಗಿತ್ತು. ಮೈಸೂರು ಸಂಸ್ಥಾನದ ಗಂಡಭೇರುಂಡ ಲಾಂಛನದ ಧ್ವಜವನ್ನು ಹಾರಿಸುವುದೇ ಅಲ್ಲಿಯವರೆಗಿದ್ದ ರೂಢಿ. ಇಂಥ ಸಂದರ್ಭದಲ್ಲಿ ಕಾಂಗ್ರೆಸ್ಸಿನ ಧ್ವಜ ಹಾರಿಸಿದರೆ ಮಹಾರಾಜರ ಪ್ರಭುತ್ವಕ್ಕೆ ಚ್ಯುತಿ ಬಂದಂತಾಗುತ್ತದೆ ಎಂದು ಕಾಂಗ್ರೆಸ್ ಧ್ವಜಾರೋಹಣವನ್ನು ನಿಷೇಧಿಸಿ ಸರ್ಕಾರ ಆಜ್ಞೆ ಹೊರಡಿಸಿತು. ನಿಷೇದಾಜ್ಞೆಯನ್ನು ಹೊರಿಸಲಾದ 25ಜನ ಮುಖಂಡರಲ್ಲಿ ಕೆ.ಸಿ. ರೆಡ್ಡಿಯವರೂ ಒಬ್ಬರು. ಏನೇ ಅಡ್ಡಿ ಬಂದರೂ ರಾಷ್ಟ್ರಧ್ವಜಾರೋಹಣ ಮಾಡಲೇಬೇಕು ಎಂದು ಕಾರ್ಯಕಾರಿ ಸಮಿತಿ ತೀರ್ಮಾನಿಸಿತು. ಮೊದಲನೆ ದಿನ ಧ್ವಜಾರೋಹಣ ಮಾಡಲೆತ್ನಿಸಿದ ಸಮಾವೇಶದ ಅಧ್ಯಕ್ಷ ಟಿ.ಸಿದ್ದಲಿಂಗಯ್ಯನವರನ್ನು ಹಾಗೂ ಅನಂತರ ಧ್ವಜಾರೋಹಣ ಮಾಡಿದ ಎಂ.ಎನ್. ಜೋಯಿಸರನ್ನೂ ಸರ್ಕಾರ ಬಂಧಿಸಿತು.

ಮಾರನೇ ದಿನ ಧ್ವಜಾರೋಹಣ ಮಾಡುವುದಕ್ಕೆ ಹೆಚ್.ಸಿ. ದಾಸಪ್ಪ, ವಿ. ವೆಂಕಟಪ್ಪ ಹಾಗೂ ಕೆ.ಸಿ. ರೆಡ್ಡಿ ನೇಮಕವಾದರು. ಆಜ್ಞೆ ಉಲ್ಲಂಘನೆ ಮಾಡಿ ಧ್ವಜಾರೋಹಣಕ್ಕೆ ಪ್ರಯತ್ನಿಸಿದ ಈ ಮೂವರನ್ನೂ ಸಹ ಪೋಲಿಸರು ಬಂಧಿಸಿದರು. ನ್ಯಾಯಾಲಯವು ಇವರಿಗೆ 3 ತಿಂಗಳ ಸಾದಾ ಶಿಕ್ಷೆ ಹಾಗೂ 200 ರೂ. ದಂಡ ವಿಧಿಸಿತು. ಮೂವರೂ ಮುಖಂಡರು ತಾವು ನಿರಪರಾಧಿಗಳೆಂದೂ ಧ್ವಜಾರೋಹಣ ತಮ್ಮ ನಾಗರಿಕ ಹಕ್ಕು ಎಂದು ಸಮರ್ಥಿಸಿ ನ್ಯಾಯಾಲಯದಲ್ಲಿ ಒಂದು ಜಂಟಿ ಹೇಳಿಕೆ ನೀಡಿದರು. ಅದು ಹೀಗಿದೆ: "ತ್ರಿವರ್ಣ ಧ್ವಜವನ್ನು ಕಾಂಗ್ರೆಸ್ ಧ್ವಜವೆಂದು ಕರೆಯುವುದಕ್ಕಿಂತ ಹಿಂದೂಸ್ಥಾನದ ರಾಷ್ಟ್ರಧ್ವಜವೆಂದು ಕರೆಯುವುದು ಹೆಚ್ಚು ಯೋಗ್ಯ. ಸಂಸ್ಥಾನ ಸಹಿತವಾದ ಹಿಂದೂಸ್ತಾನದ ಮಾನವನ್ನು ರಕ್ಷಿಸುವುದಕ್ಕಾಗಿ ಹಾಗೂ ಸ್ವಾತಂತ್ರ್ಯಕ್ಕಾಗಿ ಈ ಧ್ವಜ ಹಾರಾಡುತ್ತದೆ. ಹಿಂದೂಸ್ಥಾನದ ಸ್ವಾತಂತ್ರ್ಯ ಸಮರದಲ್ಲಿ ಧುಮುಕುವುದು ಇಡೀ ಸಂಸ್ಥಾನದ ಪ್ರಜೆಗಳ ಕರ್ತವ್ಯ ಎಂದು ನಮಗನ್ನಿಸುತ್ತದೆ. ಹಾಗೆ ಮಾಡಲು ಅವರಿಗೆ ಹಕ್ಕಿದೆ. ಈ ರಾಷ್ಟ್ರಧ್ವಜವೇ ತಮ್ಮ ಧ್ವಜವೆಂದು ಸಂಸ್ಥಾನದ ಪ್ರಜೆಗಳು ಸಾರುವುದಲ್ಲದೆ ಬೇರೆ ಯಾವುದೂ ಸಂಸ್ಥಾನದ ಪ್ರಜೆಗಳ ಧ್ವಜವಾಗಲಾರದು. ಬ್ರಿಟಿಷ್ ಹಿಂದೂಸ್ತಾದಲ್ಲಿ ಯೂನಿಯನ್ ಜಾಕ್ ಮಾತ್ರವೇ ರಾಷ್ಟ್ರ ಧ್ವಜವೆಂದು ಸರ್ಕಾರವು ಸಾರಿದ್ದರೂ ತ್ರಿವರ್ಣ ಧ್ವಜವನ್ನು ಹಾರಿಸಲು ಅಲ್ಲಿ ಯಾವುದೇ ಬಗೆಯ ನಿರ್ಬಂಧವಿಲ್ಲ. ಶ್ರೀಮನ್ ಮಹಾರಾಜರ ಕೃಪಾಛತ್ರದ ಕೆಳಗೇ ಹೊಣೆಗಾರ ರಾಜ್ಯವನ್ನು ಪಡೆಯಬೇಕೆಂದು ಮೈಸೂರು ಸರ್ಕಾರದ ಪ್ರಜೆಗಳು ನಿರ್ಧರಿಸಿದ್ದಾರೆ ಎಂದ ಬಳಿಕ ತ್ರಿವರ್ಣ ರಾಷ್ಟ್ರಧ್ವಜವನ್ನೇರಿಸುವುದು ಮೈಸೂರಿನ ಧ್ವಜಕ್ಕೆ ಯಾವ ರೀತಿಯಿಂದಲೂ ಅಪಮಾನಕರವಾಗದು. ಅಲ್ಲದೆ ಇದರಿಂದ ಅವರ ಚಕ್ರವರ್ತಿತ್ವಕ್ಕೂ ಯಾವುದೇ ರೀತಿಯಿಂದ ಅಪಮಾನಗೊಳಿಸಿದಂತಾಗದು" (ಉಲ್ಲೇಖ:ಶಿವಪುರ ಧ್ವಜ ಸತ್ಯಾಗ್ರಹ, ಡಿ.ಲಿಂಗಯ್ಯ) ಎಂದು ತಮ್ಮ ಭಾಷಣದಲ್ಲಿ ಹೇಳಿದರು.

### ವಿದುರಾಶ್ವತ್ಥ ದುರಂತ:

ಇಡೀ ರಾಷ್ಟ್ರದ ಗಮನ ಸೆಳೆದ ಶಿವಪುರ ಧ್ವಜ ಸತ್ಯಾಗ್ರಹದ ಸಂಭ್ರಮದ ನೆನಪು ಇನ್ನೂ ಜನರ ಮನಸ್ಸಿನಲ್ಲಿ ಹಸಿರಾಗಿದ್ದಂತೆಯೇ ವಿದುರಾಶ್ವತ್ಥ ದುರಂತದ ಘಟನೆ ಇಡೀ ರಾಷ್ಟ್ರವನ್ನೇ ತಲ್ಲಣಿಸುವಂತೆ ಮಾಡಿತು. ಶಿವಪುರ ಧ್ವಜ ಸತ್ಯಾಗ್ರಹದ ಯಶಸ್ಸಿನಿಂದ ಸರ್ಕಾರಕ್ಕೆ ನಿಜಕ್ಕೂ ಆತಂಕವುಂಟಾಗಿತ್ತು. ಕೋಲಾರ ಜಿಲ್ಲಾಧಿಕಾರಿಯಾಗಿದ್ದ ಜೆ. ಅಪ್ಪಾಜಿಗೌಡರು ಉದ್ರೇಕಕಾರಿಯಾದ ಭಾಷಣಗಳನ್ನು ಮಾಡಬಾರದು ಎಂದು ಚೆಂಗಲರಾಯರೆಡ್ಡಿಯವರ ಮೇಲೆ ಒಂದು ಪ್ರತಿಬಂಧಕಾಜ್ಞೆಯನ್ನೂ ಜಾರಿ ಮಾಡಿದರು. ವಿದುರಾಶ್ವತ್ಥದಲ್ಲಿ ಏನೋ ಒಂದು ಸಣ್ಣ ಗಲಭೆಯ ನೆಪ ಮಾಡಿಕೊಂಡು ಪೋಲೀಸರು ಯದ್ವಾತದ್ವಾ ಗುಂಡು ಹಾರಿಸಿ ಅನೇಕ ಅಮಾಯಕರ ಸಾವಿಗೆ ಕಾರಣರಾದರು. 1938 ಏಪ್ರಿಲ್ 25ರಂದು ನಡೆದ ಈ ಘಟನೆಯನ್ನು ಖಂಡಿಸಿ ಸಂಸ್ಥಾನದ ಪ್ರತಿಯೊಂದು ಮೂಲೆಯಲ್ಲಿಯೂ ಸಂಸ್ಥಾನದ ಹೊರಗೂ ಅನೇಕ ಸ್ಥಳಗಳಲ್ಲಿ ಖಂಡನಾ ಸಭೆಗಳು ನಡೆದವು. ವಿದುರಾಶ್ವತ್ಥ ದುರಂತದ ಪ್ರಕರಣದಲ್ಲಿ ಮೃತಪಟ್ಟ ಹಾಗೂ ಗಾಯಗೊಂಡವರ ಸಹಾಯಾರ್ಥ ಸಂಗ್ರಹಿಸಲಾದ ನಿಧಿಯ ವಿನಿಯೋಗಕ್ಕಾಗಿ ನೇಮಕವಾದ ಸಮಿತಿಯಲ್ಲಿ ಕೆ.ಸಿ. ರೆಡ್ಡಿಯವರೂ ಇದ್ದರು. ಸೂಕ್ತರಾದವರಿಗೆ ಆ ನಿಧಿ ದೊರೆಯುವಂತೆ ನೋಡಿಕೊಂಡರು. ಇದಲ್ಲದೆ ವಿಧುರಾಶ್ವತ್ಥ ದುರಂತದ ಪ್ರತಿಭಟನಾರ್ಥ ಕೆ.ಸಿ. ರೆಡ್ಡಿಯವರು ಜಿಲ್ಲಾ ಬೋರ್ಡ್ ಅಧ್ಯಕ್ಷತೆ ಹಾಗೂ ನ್ಯಾಯ ವಿಧಾಯಕ ಸಭೆಯ ಸದಸ್ಯತ್ವಕ್ಕೆ ರಾಜೀನಾಮೆ ನೀಡಿದರು.

ಸರ್ಕಾರದ ದಬ್ಬಾಳಿಕೆಯ ಧೋರಣೆಗಳನ್ನು ಉಗ್ರವಾಗಿ ಪ್ರತಿಭಟಿಸುತ್ತಾ ಗಾಂಧೀಜಿಯ ವಿಚಾರಗಳನ್ನು ಪ್ರತಿಪಾದಿಸುತ್ತಾ ಕರ್ನಾಟಕದ ವಿವಿಧ ಭಾಗಗಳಲ್ಲಿ ಕೆ.ಸಿ. ರೆಡ್ಡಿಯವರು ಪ್ರವಾಸ ಮಾಡಿದರು. ಉತ್ಸಾಹ, ಶ್ರದ್ಧೆಗಳಿಂದ ಗಾಂಧೀ ವಿಚಾರಗಳನ್ನು ಪ್ರತಿಪಾದಿಸುತ್ತಿದ್ದ ಹಾಗೂ ಉಜ್ವಲ ಭಾಷಣಗಳ ಮೂಲಕ ಜನರನ್ನು ಹುರಿದುಂಬಿಸುತ್ತಿದ್ದ ಕೆ.ಸಿ. ರೆಡ್ಡಿಯವರನ್ನು ಹಾಗೂ ಡಾ. ಪಟ್ಟಾಭಿ ಸೀತಾರಾಮಯ್ಯ, ಟಿ. ಸಿದ್ದಲಿಂಗಯ್ಯ ಹಾಗೂ ಕೆ.ಟಿ. ಭಾಷ್ಯಂ ಅವರುಗಳನ್ನು ಗಾಂಧೀಜಿಯವರ ಲೆಫ್ಟಿನೆಂಟ್‌ಗಳು ಎಂದು ಕರ್ನಾಟಕದ ಜನ ಕರೆಯತೊಡಗಿದರು.

**ರಾಜಕೀಯ ಸುಧಾರಣಾ ಸಮಿತಿ:**

ಜವಾಬ್ದಾರಿ ಸರ್ಕಾರಕ್ಕಾಗಿ ಕಾಂಗ್ರೆಸ್ಸಿನ ಹೋರಾಟ ತೀವ್ರಗೊಂಡಾಗ ಸರ್ಕಾರ ರಾಜಕೀಯ ಸುಧಾರಣೆಗಳ ಸಂಬಂಧವಾಗಿ ಎರಡು ಸಮಿತಿಗಳನ್ನು ನೇಮಿಸುವುದಾಗಿಯೂ ಪ್ರಜೆಗಳಿಗೂ ಪ್ರಭುತ್ವಕ್ಕೂ ಇರುವ ವ್ಯತ್ಯಾಸವನ್ನು ಈ ಸಮಿತಿಗಳ ಮೂಲಕ ತೀರ್ಮಾನ ಮಾಡುವುದಾಗಿಯೂ ತಿಳಿಸಿತು. 1938ರಲ್ಲಿ ನೇಮಕವಾದ ರಾಜಕೀಯ ಸುಧಾರಣಾ ಸಮಿತಿಯಲ್ಲಿದ್ದ 4 ಮಂದಿ ಕಾಂಗ್ರೆಸ್ ಕಾರ್ಯಕರ್ತರಲ್ಲಿ ಕೆ.ಸಿ. ರೆಡ್ಡಿಯವರೂ ಒಬ್ಬರು. ಮುಂದೆ ಸಮಿತಿಯ ಒಬ್ಬರು ಕಾಂಗ್ರೆಸ್ ಪಕ್ಷದ ನಿಲುವಿನಿಂದ ದೂರ ಸರಿದರು. ಆದರೆ ರೆಡ್ಡಿಯವರೂ ಸೇರಿದಂತೆ ಉಳಿದ ಮೂವರು ಕಾಂಗ್ರೆಸ್ಸಿನ ಆದೇಶಕ್ಕನುಗುಣವಾಗಿಯೇ ಈ ಸಮಿತಿಯಲ್ಲಿ ಭಾಗವಹಿಸಿ, ಪ್ರತಿಯೊಂದು ಸಂದರ್ಭದಲ್ಲಿಯೂ ಸರ್ಕಾರದ ಧೋರಣೆಯನ್ನು ಟೀಕಿಸಿ, ಜವಾಬ್ದಾರಿ ಸರ್ಕಾರದ ಬೇಡಿಕೆಗೆ ಪಟ್ಟುಹಿಡಿಯುವ ಮೂಲಕ ತಮ್ಮ ಪ್ರತಿನಿಧಿತ್ವವನ್ನು ಸಾರ್ಥಕಪಡಿಸಿಕೊಂಡರು.

**ವಾರ್ಧಾದಲ್ಲಿ ಕೆ. ಸಿ. ರೆಡ್ಡಿ:**

ಸಂಸ್ಥಾನಗಳಲ್ಲಿ ಚಳುವಳಿ ನಡೆಸುವ ಸಂಬಂಧವಾಗಿ ಮಹಾತ್ಮಗಾಂಧಿಯವರ ನಿಲುವನ್ನು ತಿಳಿಯದೆ ಮುಂದೆ ಹೆಜ್ಜೆ ಇಡುವಂತಿರಲಿಲ್ಲ. ಕಾಂಗ್ರೆಸ್ ಕಾರ್ಯಕಾರಿ ಸಮಿತಿಯಿಂದ ನೇಮಕವಾದ ನಿಯೋಗವೊಂದು ಗಾಂಧೀಜಿಯವರ ಬಳಿಗೆ ತೆರಳಿ ಸಂಸ್ಥಾನದ ವಿದ್ಯಮಾನಗಳನ್ನು ತಿಳಿಸಿ, ಅವರಿಂದ ಸಲಹೆ ಪಡೆದುಕೊಂಡು ಬರುವ ಕೆಲಸ ಮಾಡಬೇಕಿತ್ತು. ಹೀಗೆ ಗಾಂಧಿ ಮತ್ತು ನೆಹರು, ಪಟೇಲ್ ಮೊದಲಾದ ರಾಷ್ಟ್ರನಾಯಕರನ್ನು ಭೇಟಿ ಮಾಡಿ ಬಂದ ನಿಯೋಗದಲ್ಲಿ ಕೆ.ಸಿ ರೆಡ್ಡಿಯವರು ಯಾವಾಗಲೂ ಇದ್ದೇ ಇರುತ್ತಿದ್ದರು. ಯಾವಾಗಲೋ ಒಂದು ಸಲ ದೊರೆಯುವ ಇಂಥ ವರದಿಗಳಿಂದ ಗಾಂಧೀಜಿಯವರಿಗೆ ತೃಪ್ತಿಯಾಗಲಿಲ್ಲ. ಗಾಂಧೀಜಿಯವರಿಗೆ ಮೈಸೂರಿನ ದಿವಾನರು ಹಾಗೂ ಮಹಾರಾಜರ ಮೇಲೆ ಒಳ್ಳೆಯ ಅಭಿಪ್ರಾಯವಿತ್ತು. ಹೀಗಾಗಿ ಅವರುಗಳ ಮೇಲೆ ಕಾಂಗ್ರೆಸ್ಸಿನವರು ಮಾಡುತ್ತಿದ್ದ ಆಕ್ಷೇಪಣೆ, ಆರೋಪಗಳನ್ನು ಸುಲಭವಾಗಿ ಗಾಂಧೀಜಿ ಒಪ್ಪುತ್ತಿರಲಿಲ್ಲ. ಆದರೂ ಮೈಸೂರು ಸಂಸ್ಥಾನದಲ್ಲಿನ ವಿದ್ಯಮಾನಗಳಿಂದ ಕ್ರಮೇಣ ಗಾಂಧೀಜಿಯವರಿಗೆ ನಿಜ ಪರಿಸ್ಥಿತಿ ಅರಿವಾಗತೊಡಗಿತು. ಮೈಸೂರು ಕಾಂಗ್ರೆಸ್ಸಿನ ಯಾರಾದರೊಬ್ಬ ಪ್ರತಿನಿಧಿ ತಮ್ಮ ಆಶ್ರಮದಲ್ಲಿದ್ದು ನಿಜ ಸಂಗತಿಗಳನ್ನು ವಿವರಿಸುತ್ತಿರಬೇಕು ಎಂದು ಗಾಂಧೀಜಿ ಸೂಚಿಸಿದಾಗ ಕೆ.ಸಿ. ರೆಡ್ಡಿಯವರನ್ನು ಕಾಂಗ್ರೆಸ್ಸು ತನ್ನ ಪ್ರತಿನಿಧಿಯಾಗಿ ಕಳಿಸಿತು. ಸುಮಾರು ನಾಲ್ಕೂವರೆ ತಿಂಗಳ ಕಾಲ ವಾರ್ಧಾದಲ್ಲಿ ಗಾಂಧೀಜಿಯವರ ಆಶ್ರಮದಲ್ಲಿ ಇದ್ದುಕೊಂಡು ಮೈಸೂರಿನ ಘಟನೆಗಳನ್ನು ಗಾಂಧೀಜಿಯವರಿಗೆ ತಿಳಿಸುವ ಹಾಗೂ ಅವರ ಸಂದೇಶವನ್ನು ಮೈಸೂರಿನ

ಸಹೋದ್ಯೋಗಿಗಳಿಗೆ ತಲುಪಿಸುವ ಕೆಲಸವನ್ನು ರೆಡ್ಡಿಯವರು ಸಮರ್ಥವಾಗಿ ಮಾಡಿದರು. ಆಶ್ರಮದಲ್ಲಿದ್ದಾಗ ರೆಡ್ಡಿಯವರನ್ನು ಗಾಂಧೀಯವರು ಪ್ರತಿದಿನ ಸುತ್ತಾಡಲು ತಮ್ಮೊಟ್ಟಿಗೆ ಕರೆದೊಯ್ಯುತ್ತಾ ಸತ್ಯಾಗ್ರಹದ ರೀತಿಯನ್ನೂ, ಅಹಿಂಸಾ ತತ್ವವನ್ನೂ ಮನದಟ್ಟು ಮಾಡಿಕೊಟ್ಟರು. ಮುಂದೆ ರೆಡ್ಡಿಯವರ ಎಲ್ಲ ಕಾರ್ಯಚಟುವಟಿಕೆಗಳಲ್ಲಿಯೂ ಆಶ್ರಮದಲ್ಲಿ ಕಳೆದ ಈ ಕೆಲವು ತಿಂಗಳ ಅನುಭವ ಫಲಪ್ರದವಾಗಿ ಪರಿಣಮಿಸಿತು. ಈ ಅನುಭವದಿಂದ ಅವರು ಒಬ್ಬ ಗಂಭೀರ ಕಾರ್ಯ ಚಟುವಟಿಕೆಯ ಸೂಕ್ಷ್ಮ ಸಂವೇದಿಯಾದ ವ್ಯಕ್ತಿಯಾಗಿ ರೂಪುಗೊಂಡರು.

**ರಾಬರ್ಟ್‌ಸನ್‌ಪೇಟೆ ಪ್ರಕರಣ:**

ಕೆ.ಸಿ. ರೆಡ್ಡಿಯವರ ನೇತೃತ್ವದಲ್ಲಿ ನಡೆದ ಮುಖ್ಯ ಹೋರಾಟಗಳಲ್ಲಿ ರಾಬರ್ಟ್‌ಸನ್‌ಪೇಟೆ ಪ್ರಕರಣವೂ ಒಂದು. ಕೋಲಾರದ ಚಿನ್ನದ ಗಣಿಗಳು ಮೈಸೂರು ಸಂಸ್ಥಾನದ ಮುಖ್ಯ ಆದಾಯ ಮೂಲಗಳಾಗಿದ್ದವು. ಸರ್ಕಾರವೇ ಈ ಗಣಿಗಳನ್ನು ಸ್ವತಃ ರೂಢಿಸಿದ್ದರೆ ದೇಶದ ಪಾಲಿಗೆ ಹೆಚ್ಚು ಆದಾಯ ದೊರಕುತ್ತಿತ್ತು. ಆದರೆ ಸರ್ಕಾರವು ಹೀಗೆ ಮಾಡದೆ ಗಣಿಗಳ ಗುತ್ತಿಗೆಯನ್ನು ವಿದೇಶೀ ಕಂಪನಿಗಳಿಗೆ ಕೊಟ್ಟಿದ್ದಲ್ಲದೆ 1940ರ ಮಾರ್ಚ್ ತಿಂಗಳಲ್ಲಿ ಮುಕ್ತಾಯವಾಗಬೇಕಾದ ಗುತ್ತಿಗೆಯನ್ನು ಇನ್ನೂ 30 ವರ್ಷಗಳಿಗೆ ವಿಸ್ತರಿಸಿತು. ಸರ್ಕಾರದ ಈ ಕ್ರಮವನ್ನು ಕಾಂಗ್ರೆಸ್ಸು ವಿರೋಧಿಸಿತು. ಈ ಪ್ರದೇಶದಲ್ಲಿ ಚಳುವಳಿ ನಡೆಸಿ ಅಲ್ಲಿದ್ದ ಜನರಲ್ಲಿ ಜಾಗೃತಿ ಉಂಟು ಮಾಡಲು ಕಾರ್ಮಿಕರ ಸ್ಥಿತಿಗತಿಗಳನ್ನು ಸುಧಾರಿಸಲು ಕಾಂಗ್ರೆಸ್ ಉತ್ಸುಕವಾಗಿತ್ತು. ಕೋಲಾರ ಚಿನ್ನದ ಗಣಿ ಪ್ರದೇಶದಲ್ಲಿ ಭಾಷಣ ಕಾರ್ಯಕ್ರಮಕ್ಕೆ ಕಾಂಗ್ರೆಸ್ ವ್ಯವಸ್ಥೆ ಮಾಡಿತು. ಕೆ.ಸಿ ರೆಡ್ಡಿಯವರ ಸ್ವಂತ ಸ್ಥಳವಾದ ಕ್ಯಾಸಂಬಳ್ಳಿಯಲ್ಲಿ ಕಾಂಗ್ರೆಸ್ ಮುಖಂಡರು ಒಟ್ಟುಗೂಡಿ ರೆಡ್ಡಿಯವರ ನೇತೃತ್ವದಲ್ಲಿ ರಾಬರ್ಟ್‌ಸನ್‌ಪೇಟೆ ಕಡೆಗೆ ಹೊರಟಾಗ ಪ್ರತಿಬಂಧಕಾಜ್ಞೆಯನ್ನು ಉಲ್ಲಂಘಿಸಿದ ಆರೋಪದ ಮೇಲೆ ಅವರೆಲ್ಲರನ್ನೂ ಪೋಲೀಸರು ಬಂಧಿಸಿದರು. ಅವರೆಲ್ಲರಿಗೂ ಮೂರು ತಿಂಗಳ ಕಠಿಣ ಶಿಕ್ಷೆ ಹಾಗೂ ಜುಲ್ಮಾನೆ ವಿಧಿಸಲಾಯಿತು. ಇವರನ್ನು ರಾಜಕೀಯ ಖೈದಿಗಳಂತೆ ಪರಿಗಣಿಸದೆ ಸಾಮಾನ್ಯ ಖೈದಿಗಳಂತೆ ಪರಿಗಣಿಸಿದ್ದು ಇನ್ನೊಂದು ವಿಶೇಷ. ಈ ಬಂಧನದಿಂದ ಚಳುವಳಿಯ ಮುಂಚೂಣಿಯಲ್ಲಿದ್ದ ಬಹುತೇಕ ಮುಖಂಡರು ಜೈಲಿನಲ್ಲಿರುವಂತಾಯಿತು. ಆಗ ಕೆ.ಸಿ. ರೆಡ್ಡಿಯವರು ಸೆರೆಮನೆಯಿಂದಲೇ ಕೆಂಗಲ್ ಹನುಮಂತಯ್ಯನವರಿಗೆ ಪತ್ರ ಬರೆದು, ನೀವು ಮಾತ್ರವೇ ಹೊರಗೆ ಉಳಿದಿರುವ ನಾಯಕರು, ನೀವು ದೇಶದ ಹಿತದೃಷ್ಟಿಯಿಂದ ನಾಯಕತ್ವ ವಹಿಸಬೇಕು ಎಂದು ತಿಳಿಸಿದರು. ಈ ಪತ್ರ ಹನುಮಂತಯ್ಯನವರ ಬದುಕಿನ ದಿಕ್ಕನ್ನೇ ಬದಲಿಸಿತು. ಕೈತುಂಬಾ ಹಣ ತರುವ ವಕೀಲಿ ವೃತ್ತಿ, ಸುಖ ಪ್ರತಿಷ್ಠೆಯ ಜೀವನ ಎಲ್ಲವನ್ನೂ ತ್ಯಜಿಸಿ, ದೇಶ ಸೇವೆಗಾಗಿ ಅವರು ರಾಜಕೀಯ ಚಳುವಳಿಯಲ್ಲಿ ಸಂಪೂರ್ಣವಾಗಿ ತೊಡಗಿಕೊಳ್ಳುವುದಕ್ಕೆ ಈ ಪತ್ರವೇ ಪ್ರೇರಣೆಯಾಯಿತಂತೆ.

**ಚಿನ್ನದ ಗಣಿಗಳ ಕಾರ್ಮಿಕ ಸಂಘಗಳ ಅಧ್ಯಕ್ಷರಾಗಿ ಕೆ. ಸಿ. ರೆಡ್ಡಿ:**

ಸ್ವಾತಂತ್ರ್ಯಕ್ಕಾಗಿ ಹೋರಾಟ ನಡೆದಿದ್ದ ಕಾಲದಲ್ಲಿ ಮೈಸೂರು ಸಂಸ್ಥಾನದಲ್ಲಿ ಕಾರ್ಮಿಕ ಸಂಘಗಳಿಗೆ ಮಾನ್ಯತೆ ಇರಲಿಲ್ಲ. ಕಾರ್ಮಿಕ ಸಂಘಟನೆಗಳನ್ನು ಬೆಳೆಸಲು ಶ್ರೀ ಕೆ.ಟಿ. ಭಾಷ್ಯಂ ಅವರು ಬಹುವಾಗಿ ಶ್ರಮಿಸಿದರು. ಕೋಲಾರ ಚಿನ್ನದ ಗಣಿಗಳಲ್ಲಿ ವಿದೇಶೀ ಕಂಪನಿಯವರಿಂದ

ನಡೆದಿದ್ದ ಕಾರ್ಮಿಕ ಶೋಷಣೆಯಿಂದಾಗಿ ಕಾಂಗ್ರೆಸ್ ಮುಖಂಡರು ಈ ವಿಷಯದ ಕಡೆ ವಿಶೇಷ ಗಮನ ವಹಿಸಿದರು. ಸಂಸ್ಥಾನದ ಕಾಂಗ್ರೆಸ್‌ನವರ ಪ್ರಯತ್ನದಿಂದಾಗಿ ಕರ್ನಾಟಕದ ಬ್ರಿಟಿಷ್ ಜಿಲ್ಲೆಗಳಿಗೂ ಮೊದಲು ಬೆಂಗಳೂರಿನಲ್ಲಿ ಕಾರ್ಮಿಕ ಸಂಘಟನೆ ಆರಂಭವಾಯಿತು. ಕೆಜಿಎಫ್‌ನಲ್ಲಿ ಕಾರ್ಮಿಕ ಹಿತೈಷಿ ಸಂಘ ಹುಟ್ಟಿಕೊಂಡಿತು. ವಿ.ವಿ. ಗಿರಿಯವರ ಅಧ್ಯಕ್ಷತೆಯಲ್ಲಿ ಕೆಜಿಎಫ್ ನಲ್ಲಿ ಕಾರ್ಮಿಕರ ಹಕ್ಕುಗಳಿಗಾಗಿ ನಡೆದ ಹೋರಾಟದಲ್ಲಿ ಕೆ.ಸಿ. ರೆಡ್ಡಿಯವರೂ ಸಹ ಭಾಗವಹಿಸಿದರು. ಈ ಹೋರಾಟದ ಫಲವಾಗಿ ಅಲ್ಲಿ ಕಾರ್ಮಿಕ ಸಂಘಟನೆಗೆ ಮಾನ್ಯತೆ ದೊರೆಯಿತು. 1942ರಲ್ಲಿ ಕಾರ್ಮಿಕ ಸಂಘಟನೆಗಳಿಗೆ ಚುನಾವಣೆಗಳು ನಡೆದವು. ಕೆಜಿಎಫ್ ನ ಬೇರೆ ಬೇರೆ ಗಣಿಗಳ ಪೈಕಿ ಬಹು ದೊಡ್ಡದಾದ ಚಾಂಪಿಯನ್ ರೀಫ್ ಗಣಿ ಪ್ರದೇಶದ ಕಾರ್ಮಿಕ ಸಂಘಕ್ಕೆ ಕೆ.ಸಿ. ರೆಡ್ಡಿಯವರು ಅಧ್ಯಕ್ಷರಾಗಿ ಚುನಾಯಿತರಾದರು. ಬೇರೆ ಬೇರೆ ಸಂಘಟನೆಗಳವರೆಲ್ಲ ಕೆ.ಸಿ. ರೆಡ್ಡಿಯವರಿಗೇ ಮಾನ್ಯತೆ ನೀಡಿದ್ದು ವಿಶೇಷವಾಗಿ ಗಮನಿಸಬೇಕಾದ ಅಂಶ. ರೆಡ್ಡಿಯವರು ಕಾರ್ಮಿಕ ನಾಯಕರಾಗಿ ಬಹಳ ಜನಪ್ರಿಯತೆ ಗಳಿಸಿದರು. 1946ರಲ್ಲಿ ರೆಡ್ಡಿಯವರು ಮೈಸೂರು ಕಾಂಗ್ರೆಸ್ಸಿನ ಅಧ್ಯಕ್ಷರಾಗಿ ಆಯ್ಕೆಯಾದ ನಂತರ ಕಾರ್ಮಿಕ ಸಂಘದ ಅಧ್ಯಕ್ಷತೆಗೆ ರಾಜಿನಾಮೆ ನೀಡಿದರು.

**ಸದನದ ಚರ್ಚೆಗಳಿಗೆ ರೆಡ್ಡಿಯವರ ಕೊಡುಗೆ:**

ಜವಾಬ್ದಾರಿ ಸರ್ಕಾರಕ್ಕಾಗಿ ಹೋರಾಡುವ ಪ್ರಕ್ರಿಯೆಯಲ್ಲಿ ಒಬ್ಬೊಬ್ಬ ಕಾಂಗ್ರೆಸ್ ವ್ಯಕ್ತಿಯೂ ಅತ್ಯಂತ ಸಮರ್ಥ ನಾಯಕರಾಗಿ ರೂಪಗೊಂಡಿದ್ದರು. ಸರ್ಕಾರದೊಂದಿಗೆ ಕಾಂಗ್ರೆಸ್ ನಾಯಕರು ಮಾಡುತ್ತಿದ್ದ ಚರ್ಚೆಗಳೂ, ವಾದಗಳೂ ಅತ್ಯುನ್ನತ ಮಟ್ಟದಲ್ಲಿರುತ್ತಿದ್ದವು. ಹೀಗೆ ಸರ್ಕಾರದೊಂದಿಗೆ ನಡೆಸುವ ಚರ್ಚೆಗಳು ಅರ್ಥಪೂರ್ಣವಾಗಿರುವಂತೆ ಮಾಡುವ ದಿಸೆಯಲ್ಲಿ ವಿಶೇಷತಃ ರೆಡ್ಡಿಯವರು ವಹಿಸಿದ ಪಾತ್ರ ಮಹತ್ವದ್ದು. ಈ ವಿಷಯಕ್ಕೆ ರೆಡ್ಡಿಯವರ ಕೊಡುಗೆಯನ್ನು ಈಗಲೂ ಸ್ಮರಿಸಿಕೊಳ್ಳುವವರಿದ್ದಾರೆ. ಸರ್ಕಾರವು ಒಂದು ಮಸೂದೆಯನ್ನು ಮಂಡಿಸುವುದಿದ್ದರೆ ಅದನ್ನು ಬೆಂಬಲಿಸುವುದೋ ವಿರೋಧಿಸುವುದೋ ಏನೇ ಮಾಡಿದರೂ ಆ ಬಗ್ಗೆ ಮಾತಾಡುವವರು ವಿಷಯವನ್ನು ಸರಿಯಾಗಿ ಅರ್ಥ ಮಾಡಿಕೊಂಡಿರಬೇಕು. ಸದನದಲ್ಲಿ ಚರ್ಚೆಗಳು ಶಿಸ್ತಿನಿಂದ ಕೂಡಿರಬೇಕು. ಇಲ್ಲದಿದ್ದರೆ ಸಮಯ ನಷ್ಟ, ಗೊಂದಲಗಳಾಗುತ್ತವೆ ಎಂದು ಮನಗಂಡಿದ್ದ ರೆಡ್ಡಿಯವರು ಒಂದು ಸಮಿತಿಯನ್ನು ರಚಿಸಿದ್ದರು. ಆ ಸಮಿತಿಯಲ್ಲಿ ಬಿ.ಎನ್. ಗುಪ್ತ, ಎಂ.ಎನ್. ಜೋಯಿಸ್ ಮೊದಲಾದ ರಾಜಕೀಯ ಮೇಧಾವಿಗಳಿದ್ದರು; ಟಿ.ಎಸ್. ರಾಜಗೋಪಾಲ ಅಯ್ಯಂಗಾರ್ ಅವರಂಥ ತಾಂತ್ರಿಕ ಸಲಹೆಗಾರರಿದ್ದರು. ಸದನದಲ್ಲಿ ಯಾರು ಯಾವ ವಿಷಯದ ಬಗ್ಗೆ ಮಾತಾಡಬೇಕು ಎಂಬ ಆಯ್ಕೆ ಹಿಂದಿನ ದಿನವೇ ನಡೆಯುತ್ತಿತ್ತು. ತಜ್ಞ ಸಮಿತಿಯು ಅವರಿಗೆ ಸಂಬಂಧಪಟ್ಟ ವಿಷಯದ ಆಮೂಲಾಗ್ರ ಪರಿಚಯ ಮಾಡಿಸುತ್ತಿತ್ತು. ಈ ಕ್ರಮದಿಂದಾಗಿ ಸದನದಲ್ಲಿ ಚರ್ಚೆಗಳಿಗೆ ಒಂದು ವಿಶೇಷ ಘನತೆ, ಮಟ್ಟ ಪ್ರಾಪ್ತವಾಗುತ್ತಿತ್ತು. ನ್ಯಾಪತಿ ಮಾಧವರಾಯರು ದಿವಾನರಾಗಿದ್ದ ಸಂದರ್ಭದಲ್ಲಿ ಅವರು ನೀಡಿದ ಯಾವುದೋ ಒಂದು ರೂಲಿಂಗ್‌ನ ಸಂಬಂಧವಾಗಿ ಅಸೆಂಬ್ಲಿಯಲ್ಲಿ ಚರ್ಚೆಯಾದಾಗ ಕಾಂಗ್ರೆಸ್ ಪರವಾಗಿ ಕೆ.ಸಿ. ರೆಡ್ಡಿ, ರಾಜಗೋಪಾಲ ಅಯ್ಯಂಗಾರ್, ಬಿ.ಎನ್. ಗುಪ್ತ, ಮೊದಲಾದವರು ತೂಕಬದ್ಧವಾದ ಚರ್ಚೆ ಮಂಡಿಸಿದರಂತೆ. ಈ ಚರ್ಚೆಯಲ್ಲಿದ್ದ ವಿಷಯ ವಿಶ್ಲೇಷಣಾ ಸಾಮರ್ಥ್ಯ, ವಿಷಯ ಮಂಡನೆಯ ರೀತಿಯಿಂದ ವಿಸ್ಮಿತರಾದ ದಿವಾನ್ ಮಾಧವರಾಯರು, ಈ ಮುಖಂಡರೆಲ್ಲ ಸರ್ಕಾರವನ್ನು ವಿರೋಧಿಸಿದವರು ಎಂಬುದನ್ನೂ

ಮರೆತು, ಇಂತಹ ಚರ್ಚೆ ಯಾವ ರೌಂಡ್ ಟೇಬಲ್ ಕಾನ್ಫರೆನ್ಸ್‌ನ ಚರ್ಚೆಗಾಗಲೀ, ಹೌಸ್ ಆಫ್ ಕಾಮನ್ಸ್‌ನ ಚರ್ಚೆಗಾಗಲೀ ಯಾವ ರೀತಿಯಲ್ಲೂ ಕಡಿಮೆ ಇಲ್ಲ ಎಂದು ಹೇಳಿ ಇವರುಗಳನ್ನು ಹಾರ್ದಿಕವಾಗಿ ಅಭಿನಂದಿಸಿದರಂತೆ. (ಈ ವಿಷಯ ತಿಳಿಸಿದವರು ಹಿರಿಯರಾದ ಶ್ರೀ ಎಂ.ಎನ್ ಜೋಯಿಸ್.) ಹೀಗೆ ದಿವಾನರೂ ಮೆಚ್ಚಿಕೊಳ್ಳುವಂತೆ ಸದನದ ಚರ್ಚೆಗಳನ್ನು ರೂಪಿಸಿದ ಕೀರ್ತಿ ರೆಡ್ಡಿಯವರದಾಯಿತು.

1944-45ರಲ್ಲಿ ಅಖಿಲ ಭಾರತ ದೇಶೀಯ ಸಂಸ್ಥಾನಗಳ ಪ್ರಜಾ ಪರಿಷತ್ತಿನ ಕಾರ್ಯಕಾರಿ ಮಂಡಲಿಯ ಸದಸ್ಯರಾಗಿ ರೆಡ್ಡಿಯವರು ಚುನಾಯಿತರಾದರು. 1946ರಲ್ಲಿ ಬೆಂಗಳೂರಿನಲ್ಲಿ ನಡೆದ ಮೈಸೂರು ಕಾಂಗ್ರೆಸ್ ಅಧಿವೇಶನದ ಅಧ್ಯಕ್ಷತೆಯನ್ನು ರೆಡ್ಡಿಯವರಿಗೆ ವಹಿಸಲಾಯಿತು. 1946-47ರ ಅವಧಿಯಲ್ಲಿ ರೆಡ್ಡಿಯವರು ಮೈಸೂರು ಸಂಸ್ಥಾನ ಕಾಂಗ್ರೆಸ್ಸಿನ ಅಧ್ಯಕ್ಷರಾದರು.

## ಮೈಸೂರು ಚಲೋ:

1947ರಲ್ಲಿ ಭಾರತ ಸ್ವತಂತ್ರವಾಯಿತು. ಬ್ರಿಟಿಷರು ಕಾಂಗ್ರೆಸ್ಸಿಗೆ ಆಡಳಿತ ಯಂತ್ರ ಒಪ್ಪಿಸಿದಾಗ ದೇಶೀಯ ಮಹಾರಾಜರು ಮತ್ತು ನವಾಬರು ಸ್ವತಂತ್ರರೆಂದು ಘೋಷಿಸಿದರು. ದೇಶೀಯ ಸಂಸ್ಥಾನಗಳು ಭಾರತ ಒಕ್ಕೂಟ ಸೇರಿಕೊಳ್ಳಲು ಒಪ್ಪದೆ ತಾವೇ ಸ್ವತಂತ್ರರಾಗಿರಲು ಪ್ರಯತ್ನಿಸಿದವು. ಒಟ್ಟಿನಲ್ಲಿ ಭಾರತಕ್ಕೆ ಸ್ವಾತಂತ್ರ್ಯ ಬಂದರೂ ಮೈಸೂರು ಸಂಸ್ಥಾನದ ಜನರಿಗೆ ಅದು ಬರಲಿಲ್ಲ. ಅದಕ್ಕಾಗಿ ಇಲ್ಲಿನ ಕಾಂಗ್ರೆಸ್ ನಾಯಕರು ಮತ್ತೆ ಚಳುವಳಿ ನಡೆಸಬೇಕಾಯಿತು. ಈ ಚಳುವಳಿಯ ವಿಚಾರ ಮೊದಲು ಮೂಡಿದ್ದು ಕೆಂಗಲ್ ಹನುಮಂತಯ್ಯನವರಲ್ಲಿ. ಅವರು ಚಳುವಳಿಗೆ ಕರೆ ನೀಡಿದಾಗ ಅವರ ಮೇಲೆ ರಾಜದ್ರೋಹದ ಅಪಾದನೆ ಹೊರಿಸಿ ಸರ್ಕಾರ ಅವರನ್ನು ಬಂಧಿಸಿತು. ಆಗ ಚಳುವಳಿಯನ್ನು ನಡೆಸುವ ಜವಾಬ್ದಾರಿ ಮೈಸೂರು ಸಂಸ್ಥಾನ ಕಾಂಗ್ರೆಸ್ಸಿನ ಅಧ್ಯಕ್ಷರಾಗಿದ್ದ ಕೆ.ಸಿ. ರೆಡ್ಡಿಯವರ ಹೆಗಲಿಗೆ ಬಿತ್ತು. ಈ ಚಳುವಳಿಯ ನೇತಾರರಾಗಿ ವಿದ್ಯುಕ್ತವಾಗಿ ಆಯ್ಕೆಯಾದ ರೆಡ್ಡಿಯವರು ಹಿಂದೆ ಸುಭಾಷರು ಡೆಲ್ಲಿ ಚಲೋ ಎಂದ ಹಾಗೆ ನಾವು ಮೈಸೂರು ಚಲೋ ಘೋಷಣೆ ಮಾಡಬೇಕಾಗಿದೆ. ಸೆಪ್ಟೆಂಬರ್ 4 ರಂದು ಮೈಸೂರು ಅರಮನೆಯ ಮುಂದೆ ಮುಷ್ಕರಕ್ಕೆ ರಾಜ್ಯದ ಎಲ್ಲ ಕಡೆಗಳಿಂದಲೂ ಕಾರ್ಯಕರ್ತರು ಜಾಥಾ ಬರಬೇಕು ಎಂದು ಕರೆ ನೀಡಿದರು. ಸತ್ಯಾಗ್ರಹ ಆರಂಭವಾಗುವ ಹಿಂದಿನ ದಿನವೇ ಕೆ.ಸಿ. ರೆಡ್ಡಿಯವರೂ ಸೇರಿದಂತೆ ಕಾಂಗ್ರೆಸ್ ಮುಖಂಡರನ್ನೆಲ್ಲ ಸರ್ಕಾರ ಬಂಧಿಸಿತು. ಬಂಧಿತರನ್ನು ಚಿಕ್ಕಮಗಳೂರು ಜೈಲಿಗೆ ಸಾಗಿಸಲಾಯಿತು. ಮುಖಂಡರು ಬಂಧಿತರಾದರೂ ಧೈರ್ಯಗುಂದದ ಜನತೆ ಚಳುವಳಿಯನ್ನು ಯಶಸ್ವಿಯಾಗಿ ಮುನ್ನಡೆಸಿಕೊಂಡು ಹೋಯಿತು. 'ಆರ್ಕಾಟ್ ಬಾಯ್ಕಾಟ್', 'ತಂಬೂಚೆಟ್ಟಿ ಚಟ್ಟಕಟ್ಟಿ, ಕೆ.ಸಿ.ರೆಡ್ಡಿ ಪಟ್ಟ ಕಟ್ಟಿ' ಎಂಬುವು ಈ ಚಳುವಳಿಯ ಮುಖ್ಯ ಘೋಷಣೆಗಳಾಗಿದ್ದವು. ಸಂಸ್ಥಾನದ ಎಲ್ಲಾ ಜಿಲ್ಲೆಗಳಿಗೂ ಹಬ್ಬಿದ ಈ ಚಳುವಳಿಯನ್ನು ಹತ್ತಿಕ್ಕಲು ಸರ್ಕಾರಕ್ಕೆ ಸಾಧ್ಯವಾಗಲಿಲ್ಲ. 1947ರ ಸೆಪ್ಟೆಂಬರ್ 24ರಂದು ಮಹಾರಾಜರು ಅನಿರೀಕ್ಷಿತವಾಗಿ ಒಂದು ನಿರೂಪ ಹೊರಡಿಸಿ ರಾಜ್ಯದಲ್ಲಿ ಜವಾಬ್ದಾರಿ ಸರ್ಕಾರವನ್ನು ರಚಿಸುವುದಾಗಿ ಘೋಷಿಸಿದರು. ಎಲ್ಲ ಮುಖಂಡರನ್ನು, ಸತ್ಯಾಗ್ರಹಿಗಳನ್ನು ಜೈಲಿನಿಂದ ಬಿಡುಗಡೆ ಮಾಡಲಾಯಿತು. 13-10-47 ರಂದು ಪ್ರಜಾಪ್ರತಿನಿಧಿಗಳ ಮಂತ್ರಿಮಂಡಲ ಸ್ಥಾಪನೆಯಾಗಿದೆ ಎಂದು ಸರ್ಕಾರ ಪ್ರಕಟಿಸಿತು.

ಮೈಸೂರು ಚಲೋ ಮೈಸೂರು ಜನತೆಯ ಪಾಲಿಗೆ ಒಂದು ಅಭೂತಪೂರ್ವ ಹೋರಾಟವಾಗಿತ್ತು. ಮೈಸೂರು ಸಂಸ್ಥಾನದಾದ್ಯಂತ ಜನರು ಭಾರೀ ಪ್ರಮಾಣದಲ್ಲಿ ಭಾಗವಹಿಸಿದ ಕೊನೆಯ ಹೋರಾಟ ಇದು. ಇಡೀ ಭಾರತದೇಶ ಸ್ವಾತಂತ್ರ್ಯಗಳಿಸಿದಾಗ ಅನುಭವಿಸಿದಂತಹ ಸಂತೋಷ ಮೈಸೂರು ಜನರ ಪಾಲಿಗೆ ಒಂದೂವರೆ ತಿಂಗಳ ನಂತರ ಸಿಕ್ಕಿತ್ತು. ಜವಾಬ್ದಾರಿ ಸರ್ಕಾರಕ್ಕಾಗಿ ಮೈಸೂರು ರಾಜ್ಯದಲ್ಲಿ ಕಾಂಗ್ರೆಸ್ ಆರಂಭಿಸಿದ ಹೋರಾಟಕ್ಕೆ ಈಗ ಸಂಪೂರ್ಣ ಜಯ ದೊರೆತಂತಾಯಿತು. ಆದರೂ ಈ ಚಳುವಳಿಯ ಹೊತ್ತಿಗಾಗಲೇ ರಾಜಕೀಯ ಸ್ವಾರ್ಥಗಳು, ವ್ಯಕ್ತಿ ಅಸೂಯೆಗಳು ಸ್ಪಷ್ಟವಾಗಿ ತಲೆ ಎತ್ತಲಾರಂಭಿಸಿದವು. ಜೈಲಿನಲ್ಲಿರುವಾಗಲೇ ಅಧಿಕಾರಾಕಾಂಕ್ಷಿ ನಾಯಕರ ಚಟುವಟಿಕೆ ಆರಂಭವಾಗಿತ್ತು. ಗೋಪ್ಯವಾಗಿ ದಿವಾನ್ ಆರ್ಕಾಟ್ ರಾಮಸ್ವಾಮಿ ಮೊದಲಿಯಾರ್ ಅವರನ್ನ ಭೇಟಿ ಮಾಡಿದವರೂ ಇದ್ದರು. ಮೈಸೂರು ಚಲೋ ಯಶಸ್ವಿಯಾದರೆ ಕೆ.ಸಿ ರೆಡ್ಡಿಯವರು ಸ್ವತಂತ್ರ ಮೈಸೂರು ರಾಜ್ಯದ ಮುಖ್ಯಮಂತ್ರಿ ಆಗುತ್ತಾರೆ ಎಂಬುದು ಖಚಿತವಾಗಿ ಗೊತ್ತಿತ್ತು. ಆದರೆ ಚಳುವಳಿಯ ಮುಂಚೂಣಿಯಲ್ಲಿದ್ದ ಕೆಲವರಿಗೆ ಇದು ಇಷ್ಟವಿರಲಿಲ್ಲ. ಅವರ ಅಭಿಪ್ರಾಯದಲ್ಲಿ ಕೆ.ಸಿ. ರೆಡ್ಡಿ ಮೂಲ ಕಾಂಗ್ರೆಸ್ಸಿಗರಲ್ಲ. ಇತರ ನಾಯಕರಷ್ಟು ಸಂಕಷ್ಟಗಳನ್ನು ಅನುಭವಿಸಿದವರೂ ಅಲ್ಲ. ಆದ್ದರಿಂದ ಚಳುವಳಿಯನ್ನೇ ಒಂದು ವರ್ಷಕಾಲ ಮುಂದೂಡಿದರೆ ರೆಡ್ಡಿಯವರು ಮುಖ್ಯ ಮಂತ್ರಿ ಆಗುವುದನ್ನು ತಪ್ಪಿಸಬಹುದು. ಮುಂದೆ ಇನ್ನೂ ಅರ್ಹರಾದವರಿಗೆ ಮುಖ್ಯ ಮಂತ್ರಿಯಾಗುವ ಅವಕಾಶ ಸಿಗಬಹುದು ಎಂದು ಅವರು ಹೋರಾಟಗಾರರ ಮನಸ್ಸನ್ನು ತಿರುಗಿಸಲು ಪ್ರಯತ್ನಿಸಿದರು. ಆದರೆ ನಿಷ್ಠಾವಂತ ಹೋರಾಟಗಾರರ ಉದ್ದೇಶವೇ ಬೇರೆಯಾಗಿತ್ತು ಅವರಿಗೆ ಜವಾಬ್ದಾರಿ ಸರ್ಕಾರದ ಸ್ಥಾಪನೆಯೇ ಏಕೈಕ ಗುರಿಯಾಗಿತ್ತು. ಅಧಿಕಾರದ ಆಸೆಯಿಂದ ನೀವು ಚಳುವಳಿಯನ್ನು ಮುಂದೂಡಬೇಡಿ ಮೊದಲು ಜನರ ಸರ್ಕಾರ ರಚನೆಯಾಗಲಿ, ನಾಯಕನ ಆಯ್ಕೆಯ ಬಗ್ಗೆ ಆನಂತರವೂ ಚಿಂತಿಸಬಹುದು. ನಮಗೆ ವ್ಯಕ್ತಿಗಿಂತ ದೇಶ ಮುಖ್ಯ, ಆದಷ್ಟು ಬೇಗ ಸ್ವಾತಂತ್ರ್ಯ ಬರಬೇಕು. ಚಳುವಳಿಯನ್ನು ಮುಂದೂಡುವ ಪ್ರಶ್ನೆಯೇ ಇಲ್ಲ ಎಂದು ತಿಳಿಸಿದರು. ಕೊನೆಗೂ ರೆಡ್ಡಿಯರರನ್ನೇ ಮುಖ್ಯ ಮಂತ್ರಿಯಾಗಿ ಆಯ್ಕೆ ಮಾಡಿದಾಗ ಎಲ್ಲ ಗುಂಪಿನವರೂ ಸಹಕರಿಸಿದ್ದು ಗಮನಿಸಿಬಹುದಾದ ಅಂಶ.

## ಪ್ರಥಮ ಮುಖ್ಯಮಂತ್ರಿ

ಮಹಾರಾಜರು ತಮ್ಮ ಪ್ರಜೆಗಳಿಗೆ ಜವಾಬ್ದಾರಿ ಸರ್ಕಾರವನ್ನು ನೀಡಿದ ನಂತರ 1947 ಅಕ್ಟೋಬರ್ 24 ವಿಜಯದಶಮಿಯಂದು ಅವರ ಒಪ್ಪಿಗೆ ಪಡೆದು ಹೊಸ ಮಂತ್ರಿಮಂಡಲ ಅಧಿಕಾರ ಸ್ವೀಕರಿಸಿತು. ಅಧಿಕಾರ ವಹಿಸಿಕೊಂಡ ನಾಯಕರು ಕಬ್ಬನ್ ಪೇಟೆಯ ಕಾಂಗ್ರೆಸ್ ಕಛೇರಿಯಿಂದ ಅಠಾರಾ ಕಛೇರಿಗೆ ತೆರಳುವಾಗ ನಡೆದ ಮೆರವಣಿಗೆಯಲ್ಲಿ ಲಕ್ಷಾಂತರ ಜನರು ಪಾಲುಗೊಂಡಿದ್ದರು.

ದಿವಾನ್ ರಾಮಸ್ವಾಮಿ ಮೊದಲಿಯಾರ್ ಮತ್ತು ಕಾಂಗ್ರೆಸ್ಸಿನವರ ನಡುವೆ ಆದ ಒಪ್ಪಂದದಂತೆ ಕಾಂಗ್ರೆಸ್ಸಿನಿಂದ ಆರುಜನ ಮಂತ್ರಿಗಳು ಸರ್ಕಾರದಿಂದ ಮೂರು ಜನ ಮಂತ್ರಿಗಳು ಹಾಗೂ ದಿವಾನರನ್ನು ಒಳಗೊಂಡು ಸರ್ಕಾರವನ್ನು ಸ್ಥಾಪಿಸಲಾಯಿತು. ಈ ಸರ್ಕಾರ ಮಹಾರಾಜರ

ಆಶ್ರಯದಲ್ಲಿ ನಡೆಯಬೇಕೆಂದು ತೀರ್ಮಾನವಾಯಿತು. ಕಾಂಗ್ರೆಸ್ಸಿನ ಪರವಾಗಿ ಶ್ರೀಯುತರಾದ ಕೆ.ಸಿ. ರೆಡ್ಡಿ, ಕೆ.ಟಿ. ಭಾಷ್ಯಂ ಹೆಚ್.ಸಿ. ದಾಸಪ್ಪ, ಹೆಚ್. ಸಿದ್ದಯ್ಯ, ಟಿ. ಮರಿಯಪ್ಪ, ಚೆನ್ನಿಗರಾಮಯ್ಯ ಅವರೂ ಕಾಂಗ್ರೆಸ್ಸೇತರರ ಪರವಾಗಿ ಡಿ.ಹೆಚ್ ಚಂದ್ರಶೇಖರಯ್ಯ, ಮುಸಲ್ಮಾನರ ಪರವಾಗಿ ಮಹಮದ್ ಷರೀಫ್, ಸ್ವತಂತ್ರರಾಗಿ ಶ್ರೀ ಪಾಮಡಿ ಸುಬ್ಬರಾಯ ಶೆಟ್ಟಿಯವರು ಅಧಿಕಾರ ಸ್ವೀಕರಿಸಿದರು. ಅಧಿಕಾರ ವಹಿಸಿಕೊಂಡ ನಂತರ ಬೆಂಗಳೂರಿನ ಬನಪ್ಪ ಪಾರ್ಕಿನಲ್ಲಿ ನಡೆದ ಪ್ರಚಂಡ ಬಹಿರಂಗ ಸಭೆಯಲ್ಲಿ ಭಾಷಣ ಮಾಡುತ್ತ ರೆಡ್ಡಿಯವರು "ಇಂದಿನಿಂದ ಮೈಸೂರಿನಲ್ಲಿ ಪ್ರಜಾಯುಗ ಆರಂಭವಾಗಿದೆ. ಅದರ ಜೊತೆಗೆ ಪ್ರಜೆಗಳ ಮೇಲೆ ಮಹತ್ತರವಾದ ಜವಾಬ್ದಾರಿ ಬಿದ್ದಿದೆ. ಜನತೆಯು ಸತ್ಯಕ್ಕೆ ಕಟ್ಟುಬಿದ್ದು, ದೇಶಭಕ್ತಿಯುತರಾಗಿ ಎಲ್ಲ ಕ್ಷೇತ್ರಗಳಲ್ಲಿಯೂ ಪ್ರಾಮಾಣಿಕವಾಗಿ ನಡೆದುಕೊಳ್ಳದಿದ್ದರೆ ಇಂದು ಆರಂಭವಾಗಿರುವ ಪ್ರಜಾಯುಗವು ಪ್ರಗತಿ ಪಥತದಲ್ಲಿ ಮುಂದುವರೆಯಲಾರದು. ಮೈಸೂರು ರಾಜ್ಯದ ಸರ್ವಪ್ರಜೆಗಳ ತ್ಯಾಗ, ಬಲಿದಾನ ಮತ್ತು ಅಮೋಘವಾದ ಸೇವೆಯಿಂದ ಇಂದು ಇಲ್ಲಿ ಪ್ರಜಾ ಸರ್ಕಾರ ಏರ್ಪಟ್ಟಿದೆ" ಪ್ರಜಾ ಸೇವಾಕಂಕಣಬದ್ಧರಾಗಿ ನಾವೆಲ್ಲ ಇಂದು ಅಧಿಕಾರ ವಹಿಸಿಕೊಂಡಿದ್ದೇವೆ. ನಮ್ಮ ರಾಷ್ಟ್ರಪಿತ ಪೂಜ್ಯ ಬಾಪೂಜಿಯವರ ಛಾಯಾನುವರ್ತಿಗಳಾಗಿ ಜನ ಸೇವೆಯನ್ನು ಮುಂದುವರೆಸೋಣ ಎಂದು ಹೇಳಿದರು.

ಆಗಷ್ಟೇ ಸ್ವಾತಂತ್ರ್ಯವನ್ನು ಪಡೆದುಕೊಂಡಂತಹ ರಾಜ್ಯದ ಅಧಿಕಾರ ಸೂತ್ರ ಹಿಡಿದ ರೆಡ್ಡಿಯವರ ಜವಾಬ್ದಾರಿ ಹಾಗೂ ಸಮಸ್ಯೆಗಳು ಗಹನತರವಾಗಿದ್ದರಲ್ಲಿ ಆಶ್ಚರ್ಯವೇನಿಲ್ಲ. ಆಡಳಿತ ಕ್ರಮವೆಲ್ಲವೂ ಹೊಸದಾಗಿ ರೂಪುಗೊಳ್ಳಬೇಕಿತ್ತು ಅವರದು ಪೂರ್ಣಪ್ರಮಾಣದ ಕಾಂಗ್ರೆಸ್ ಸಚಿವರ ಸರ್ಕಾರವಾಗಿರಲಿಲ್ಲ. ಅವರು ಅಧಿಕಾರ ವಹಿಸಿಕೊಂಡಾಗ ಮುಖ್ಯ ಮಂತ್ರಿ ಎಂಬ ಪದವೂ ಕೂಡ ಜಾರಿಯಲ್ಲಿರಲಿಲ್ಲ. ಸ್ವಾತಂತ್ರ್ಯಕ್ಕೂ ಮೊದಲು ಮುಖ್ಯ ಮಂತ್ರಿ ಎಂಬ ಪದ ಬೇರೊಂದು ಹುದ್ದೆಗೆ ಬಳಕೆಯಾಗುತ್ತಿತ್ತು. ಪ್ರಾಂತಗಳ ಮುಖ್ಯಸ್ಥರನ್ನು ಪ್ರಧಾನ ಸಚಿವರು ಎಂದು ನಿರ್ದೇಶಿಸಲಾಗುತ್ತಿತ್ತು. ಹೀಗಾಗಿ ಕೆ.ಸಿ. ರೆಡ್ಡಿಯವರ ಹುದ್ದೆಯನ್ನೂ ಕೂಡ ಪ್ರಧಾನ ಸಚಿವರ ಹುದ್ದೆ ಎಂದೇ ಕರೆಯಲಾಯಿತು. ಆರಂಭದ ವಿಧಾನಸಭಾ ಕಲಾಪಗಳಲ್ಲಿಯೂ ಕೂಡ ಪ್ರಧಾನ ಸಚಿವರು ಎಂಬ ಪದ ಬಳಕೆಯಲ್ಲಿರುವುದನ್ನು ನೋಡಬಹುದು. ಶಾಸಕರ ಸಭೆ ಪುಟ್ಟಣ್ಣಚೆಟ್ಟಿ ಭವನದಲ್ಲಿ ನಡೆಯುತ್ತಿತ್ತು. ವಿ. ವೆಂಕಟಪ್ಪನವರು ಸ್ಪೀಕರ್ ಆಗಿದ್ದರು. ವ್ಯವಸ್ಥಿತವಾದ ವಿರೋಧಪಕ್ಷ ಎಂಬುದಿರಲಿಲ್ಲ. ಸರ್ಕಾರದ ಆಡಳಿತ ಮತ್ತು ಧೋರಣೆಯಲ್ಲಿ ಕಂಡು ಬರುವ ದೋಷಗಳನ್ನು ಎತ್ತಿ ತೋರಿಸುವಂಥ ಒಂದು ವಿರೋಧಿ ಗುಂಪು ಇತ್ತು. ಶ್ರೀಯುತರಾದ ಡಿ.ಎಸ್. ಮಲ್ಲಪ್ಪ, ಜಿ. ವೀರಬಸಪ್ಪ, ಎಂ.ಸಿ. ಲಿಂಗೇಗೌಡ ಮೊದಲಾದ 10 ಜನರಿದ್ದ ಈ ವಿರೋಧಿ ಗುಂಪಿಗೆ ಜಗಳೂರಿನ ಇಮಾಂ ಸಾಹೇಬರು ನಾಯಕರಾಗಿದ್ದರು. ಈ ಗುಂಪು ಯಾವುದೇ ಪಕ್ಷಾಧಾರಿತವಾಗಿರಲಿಲ್ಲ.

ರೆಡ್ಡಿಯವರು ಆಡಳಿತ ವಹಿಸಿಕೊಳ್ಳುತ್ತಿದ್ದಂತೆಯೇ ಮೊದಲು ಎದ್ದ ಅಪಸ್ವರ ದಿವಾನರಾಗಿದ್ದ ರಾಮಸ್ವಾಮಿ ಮೊದಲಿಯಾರ್ ಅವರನ್ನು ಅವರ ಪದವಿಯೊಂದಿಗೆ ಹಾಗೇ ಉಳಿಸಿಕೊಂಡಿದ್ದಕ್ಕೆ ಸಂಬಂಧಿಸಿದ್ದಾಗಿತ್ತು. ಅವರನ್ನು ಉಳಿಸಿಕೊಂಡ ಬಗ್ಗೆ ಸಚಿವ ಸಂಪುಟದಲ್ಲಿಯಾಗಲೀ ಜನತೆಯಲ್ಲಾಗಲೀ ಒಮ್ಮತವಿರಲಿಲ್ಲ. ಆದರೆ ದಿವಾನರನ್ನು ಹಾಗೇ

ಉಳಿಸಿಕೊಳ್ಳುವ ಒಪ್ಪಂದಕ್ಕೆ ರೆಡ್ಡಿಯವರು ಕಟ್ಟುಬಿದ್ದಿದ್ದರು. ಇದಲ್ಲದೆ ರಾಮಸ್ವಾಮಿಯವರ ದಿವಾನ ಹುದ್ದೆಯನ್ನು ಗಮನದಲ್ಲಿಟ್ಟುಕೊಂಡೇ ಸರ್ದಾರ್ ಪಟೇಲರು ಅವರಿಗೆ ಜಿನಿವಾದಲ್ಲಿ ನಡೆದ ಫ್ರೀಡಂ ಆಫ್ ದಿ ಪ್ರೆಸ್ ಸಮಾವೇಶಕ್ಕೆ ಭಾರತೀಯ ನಿಯೋಗವನ್ನು ಕರೆದೊಯ್ಯುವ ಕೆಲಸವನ್ನು ಒಪ್ಪಿಸಿದರು. ಮೈಸೂರು ಸಂಸ್ಥಾನ ಈಗ ಭಾರತದ ಒಂದು ಅಂಗವಾದ್ದರಿಂದ ಸರ್ಕಾರದ ಆದೇಶ ಪಾಲಿಸುವುದು ರೆಡ್ಡಿಯವರ ಹೊಣೆಯಾಗಿತ್ತು ಒಟ್ಟಿನಲ್ಲಿ ಈ ವಿಷಯವಾಗಿ ರೆಡ್ಡಿಯವರು ಇಕ್ಕಟ್ಟಿಗೆ ಸಿಲುಕಿದ್ದರು. ಒಂದು ಕಡೆ ಮಹಾರಾಜರೂ, ರಾಜಾಜಿ ಮೊದಲಾದವರೆಲ್ಲ ರಾಮಸ್ವಾಮಿಯವರನ್ನು ಹಾಗೆ ಉಳಿಸಿಕೊಳ್ಳಬೇಕು ಎಂದು ಒತ್ತಡ ಹೇರುತ್ತಿದ್ದರು. ಇನ್ನೊಂದು ಕಡೆ ಮೈಸೂರು ಪ್ರಜೆಗಳಿಗೆ ಸರ್ಕಾರವನ್ನು ಒಪ್ಪಿಸಲು ವಿಳಂಬ ಮಾಡುವಂತೆ ರಾಜರಿಗೆ ಪ್ರಚೋದನೆ ನೀಡಿದವರೇ ರಾಮಸ್ವಾಮಿ ಮೊದಲಿಯಾರ್ ಆದ್ದರಿಂದ ಅವರನ್ನು ಉಳಿಸಿಕೊಳ್ಳಕೂಡದು ಎಂದು ಜನತೆ ಆಕ್ರೋಶದಿಂದ ಹೇಳುತ್ತಿತ್ತು. ರಾಮಸ್ವಾಮಿ ಮೊದಲಿಯಾರರು ನಿವೃತ್ತರಾಗುವವರೆಗೆ ಈ ಬಿಕ್ಕಟ್ಟು ಮುಂದುವರೆದುಕೊಂಡು ಹೋಯಿತು. ಮೊದಲಿಯಾರರು ಎರಡು ವರ್ಷಗಳವರೆಗೆ ದಿವಾನರಾಗಿದ್ದಕೊಂಡು ಸೇವೆ ಸಲ್ಲಿಸಿ 1949ರಲ್ಲಿ ನಿವೃತ್ತರಾದರು. 1949ರಲ್ಲಿ ದಿವಾನ್ ಹುದ್ದೆ ರದ್ದಾಯಿತು. ರಾಮಸ್ವಾಮಿಯವರು ಯಾವುದೇ ರೀತಿಯ ನಿವೃತ್ತಿ ಸೌಲಭ್ಯವನ್ನು ಪಡೆದುಕೊಳ್ಳಲಿಲ್ಲ. ರೆಡ್ಡಿಯವರ ಸರ್ಕಾರದೊಂದಿಗೆ ದಿವಾನರಾಗಿದ್ದ ಸಮಯದಲ್ಲಿ ಅವರಿಗೆ ಯಾವುದೇ ಕಾರ್ಯನಿರ್ವಹಣಾ ಅಧಿಕಾರಗಳು ಇರಲಿಲ್ಲ. ನಾಮಮಾತ್ರ ಮುಖ್ಯಸ್ಥರು ಎಂದೇ ತಿಳಿಸಲಾಗಿತ್ತು. ಆದರೂ ಪರಿಸ್ಥಿತಿ ಹಾಗೇ ಉಳಿಯಲಿಲ್ಲ. ಮೈಸೂರು ರಾಜ್ಯಕ್ಕೆ ಮುಖ್ಯಮಂತ್ರಿ ಮತ್ತು ದಿವಾನರು ಎಂಬ ಎರಡು ಸಮಾನ ಪದವಿಗಳು ಉಳಿದುಬಿಟ್ಟಂತಾಯಿತು. ಇವರಿಬ್ಬರ ಕಾರ್ಯವ್ಯಾಪ್ತಿ ಹಾಗೂ ಅಧಿಕಾರ ವ್ಯಾಪ್ತಿಯ ಸ್ಪಷ್ಟ ವಿಂಗಡಣೆ ಇರಲಿಲ್ಲ. ವಿಷಯವನ್ನು ಯಾರ ಮುಂದೆ ಮಂಡಿಸಬೇಕು, ಮುಖ್ಯಮಂತ್ರಿಗಳ ಮುಂದೋ, ದಿವಾನರ ಮುಂದೋ ಎಂಬ ಸಮಸ್ಯೆಗಳು ಎದುರಾಗುತ್ತಿದ್ದವು. ದಿವಾನರು ವಿಧಾನ ಪರಿಷತ್ತಿನ ಅಧ್ಯಕ್ಷತೆ ವಹಿಸುವುದನ್ನು ಕಾಂಗ್ರೆಸ್ಸಿನ ಕೆಲವರು ತೀವ್ರರಾಗಿ ವಿರೋಧಿಸಿದರು. ರೆಡ್ಡಿಯವರು ಇಂತಹ ಸಂದರ್ಭದಲ್ಲಿ ತುಂಬಾ ಇಕ್ಕಟ್ಟಿಗೆ ಸಿಲುಕುತ್ತಿದ್ದರು. ಅವರ ತೀರ ಮೆದು ಸ್ವಭಾವ ಹಾಗೂ ಹೊಂದಾಣಿಕೆಯ ಪ್ರವೃತ್ತಿಯಿಂದ ಇಂತಹ ಬಿಕ್ಕಟ್ಟಿಗೊಳಗಾಗುವುದು ಅನಿವಾರ್ಯವಾಗಿತ್ತು. ಮೊದ ಮೊದಲು ದಿವಾನರ ಬಗ್ಗೆ ಶಾಸನ ಸಭೆಯ ಸದಸ್ಯರಿಗೆ ಅಷ್ಟೇನೂ ಆದರ ಇರಲಿಲ್ಲವಾದರೂ ವಿಶ್ವಸಂಸ್ಥೆಯಲ್ಲಿ ಹೈದ್ರಾಬಾದ್‌ನ ವಿಷಯಕ್ಕಾಗಿ ಸರ್ಕಾರದ ಪರವಾಗಿ ವಾದಿಸಲು ಸರ್ದಾರ್ ಪಟೇಲರು ಮೊದಲಿಯಾರ್ ಅವರನ್ನೇ ಆಯ್ಕೆ ಮಾಡಿದಾಗ ಎಲ್ಲರೂ ಅವರನ್ನು ಗೌರವದಿಂದ ಕಾಣಲಾರಂಭಿಸಿದರು. ಮೊದಲಿಯಾರರು ಪ್ಯಾರಿಸ್ಸಿಗೆ ಹೋಗಿ ಭಾರತವನ್ನು ಸಮರ್ಥವಾಗಿ ಪ್ರತಿನಿಧಿಸಿದರು. ಹೈದ್ರಾಬಾದ್ ವಿವಾದ ಬಹು ಬೇಗ ಪರಿಹಾರವಾಯಿತು. ಹೈದ್ರಾಬಾದ್‌ನ್ನು ಭಾರತಕ್ಕೆ ಉಳಿಸಿಕೊಟ್ಟ ವ್ಯಕ್ತಿ ಎಂಬ ಕೀರ್ತಿಗೆ ರಾಮಸ್ವಾಮಿಯವರು ಪಾತ್ರರಾದರು. ಇದಾದ ನಂತರ, ಈ ಮೊದಲು ಅವರನ್ನು ವಿರೋಧಿಸುತ್ತಿದ್ದ ಸಚಿವರುಗಳು ಸಹ ಅವರ ಬಳಿಗೆ ಕಡತಗಳನ್ನು ತೆಗೆದುಕೊಂಡು ಹೋಗಿ ಅವರ ಸಲಹೆಗಳನ್ನು ಪಡೆಯತೊಡಗಿದರು. ಒಂದು ರೀತಿಯಲ್ಲಿ ಬ್ರಾಹ್ಮಣ ಬ್ರಾಹ್ಮಣೇತರ

ಸಚಿವರು ಎಂಬ ಒಡಕೂ ಕೂಡ ಮೂಡತೊಡಗಿತ್ತು. ಬ್ರಾಹ್ಮಣ ಸಚಿವರ ವಿಷಯದಲ್ಲಿ ಇತರ ಸಚಿವರು ಸಂದೇಹದಿಂದ ನಡೆದುಕೊಳ್ಳಲಾರಂಭಿಸಿದರು. ಹೀಗಾಗಿ ರಾಮಸ್ವಾಮಿ ಮೊದಲಿಯಾರರು ದಿವಾನರಾಗಿ ಇರುವ ತನಕ ರೆಡ್ಡಿಯವರಿಗೆ ಅಡಚಣೆ ತಪ್ಪಲಿಲ್ಲ. ಮುಂದೆ ಅವರು ಪೂರ್ಣ ಪ್ರಮಾಣದ ಮುಖ್ಯಮಂತ್ರಿಯಾಗುವ ವೇಳೆಗೆ (ಅಂದರೆ ಎಲ್ಲ ಕಾಂಗ್ರೆಸ್ ಸಚಿವರೇ ಇರುವಂಥ) ಶ್ರೀ ಕೆಂಗಲ್ ಹನುಮಂತಯ್ಯನವರಿಂದ ಅಡಚಣೆಗಳು ಎದುರಾಗತೊಡಗಿದ್ದವು.

ಆದರೂ 1947ರಿಂದ 1952ರವರೆಗೆ ರೆಡ್ಡಿಯವರು ಮುಖ್ಯಮಂತ್ರಿ ಪದವಿಯಲ್ಲಿದ್ದಷ್ಟು ಕಾಲವೂ ಅನೇಕ ಒಳ್ಳೆಯ ಕೆಲಸಗಳು ನಡೆದವು. ಮೈಸೂರು ರಾಜರ ಆಡಳಿತ ಕಾಲದ ಅಭಿವೃದ್ಧಿ ಕಾರ್ಯಗಳನ್ನು ಹಾಗೇ ಮುಂದುವರೆಸಿಕೊಂಡು ಬರಲಾಯಿತು. ಭಾರತದ ಉಜ್ವಲ ಭವಿಷ್ಯವನ್ನು ಹಾಗೂ ಅದರೊಳಗೆ ತನ್ನ ಪಾತ್ರವೇನು ಎಂಬುದನ್ನು ಅರಿತುಕೊಂಡು ಮೈಸೂರು ಮುಂದುವರಿಯಬೇಕು, ಬೇರೆ ಬೇರೆ ಕ್ಷೇತ್ರಗಳಲ್ಲಿ ಜನತೆಗೆ ದೊರೆಯಬೇಕಾದ ಪರಿಹಾರಗಳು ಬೇಗ ದೊರೆಯುವಂತಾಗಬೇಕು, ಸಾರ್ವಜನಿಕ ಕ್ಷೇತ್ರಗಳಲ್ಲಿ ಮುಖ್ಯವಾಗಿ ಸರ್ಕಾರಿ ಯಂತ್ರದಲ್ಲಿ ಪರಿಶುದ್ಧತೆ ಹಾಗೂ ದಕ್ಷತೆಗಳನ್ನು ನೆಲೆಗೊಳಿಸಬೇಕು. ಆಡಳಿತ ವೆಚ್ಚವನ್ನು ತಗ್ಗಿಸುವ ಪ್ರಯತ್ನ ನಿರಂತರವಾಗಿ ನಡೆಯುತ್ತಿರಬೇಕು ಎಂಬುದು ರೆಡ್ಡಿಯವರ ಕಾಳಜಿಯಾಗಿತ್ತು. ನಾವು ಹಾಕಿಕೊಳ್ಳುವ ಕೈಗಾರಿಕಾ ಯೋಜನೆಗಳು ದೇಶದ ಪ್ರಮುಖ ಸಮಸ್ಯೆಯಾದ ಆಹಾರ ಕೊರತೆಯನ್ನು ನೀಗುವುದಕ್ಕೆ ಪೂರಕವಾಗಿರಬೇಕು ಎಂಬುದು ರೆಡ್ಡಿಯರು ನಿಲುವು. ಆದ್ದರಿಂದ ಕೃಷಿಗೆ ಪೂರಕವಾದ ಕೈಗಾರಿಕೆಗಳ ಅಭಿವೃದ್ಧಿಗೆ ಅವರು ಹೆಚ್ಚಿನ ಒತ್ತು ನೀಡಿದರು. ಕಾವೇರಿ ಮತ್ತು ಶರಾವತಿ ಕಣಿವೆಗಳ ನೀರನ್ನು ಜಲವಿದ್ಯುತ್ ಶಕ್ತಿ ಉತ್ಪಾದನೆ ಹೆಚ್ಚಿಸುವ ಸಲುವಾಗಿ ಬಳಸಿಕೊಳ್ಳುವ ಯೋಜನೆಗಳನ್ನು ರೆಡ್ಡಿಯವರ ಅವಧಿಯಲ್ಲಿ ರೂಪಿಸಲಾಯಿತು. ರೆಡ್ಡಿಯವರ ಅಧಿಕಾರಾವಧಿಯಲ್ಲಿ ಮೈಸೂರು ರಾಜ್ಯದಲ್ಲಿ ಅನೇಕ ಹೊಸ ಕೈಗಾರಿಕಾ ಸಂಘ ಸಂಸ್ಥೆಗಳು ಆರಂಭವಾದವು. ಮೈಸೂರಿನಲ್ಲಿ ಸ್ಥಾಪಿತವಾದ ನ್ಯಾಷನಲ್ ಫುಡ್ ಟೆಕ್ನಾಲಜಿ ರಿಸರ್ಚ್ ಇನ್ಸ್ಟಿಟ್ಯೂಟ್, ಇದರಲ್ಲಿ ಮುಖ್ಯವಾದುದ್ದು. ಕೆ.ಸಿ. ರೆಡ್ಡಿಯವರು ಶಿಕ್ಷಣ ವ್ಯವಸ್ಥೆಯಲ್ಲಿನ ಲೋಪದೋಷಗಳ ಬಗ್ಗೆ ಅಧ್ಯಯನ ಮಾಡಿ ವರದಿ ಸಿದ್ಧಪಡಿಸುವುದಕ್ಕಾಗಿ ಡಾ.ಸಿ.ಆರ್. ರೆಡ್ಡಿಯವರ ಅಧ್ಯಕ್ಷತೆಯಲ್ಲಿ ಸಮಿತಿಯನ್ನು ರಚಿಸಿದರು. ರೆಡ್ಡಿಯವರು ಅಧಿಕಾರಕ್ಕೆ ಬರುವ ಕಾಲಕ್ಕೆ ಕನ್ನಡ ಸಾಹಿತ್ಯ ಪರಿಷತ್ತಿನ ಸ್ಥಾಪನೆಯಾಗಿ 33 ವರ್ಷಗಳಾಗಿದ್ದವು. ರೆಡ್ಡಿಯವರು ಸಾಹಿತ್ಯ ಪರಿಷತ್ತಿಗೆ ಖುದ್ದಾಗಿ ಭೇಟಿ ನೀಡಿ ಪರಿಷತ್ತಿನ ಕಾರ್ಯಚಟುವಟಿಕೆಗಳನ್ನೂ, ಅವಶ್ಯಕತೆಗಳನ್ನು ವಿವರವಾಗಿ ಪರಿಶೀಲಿಸಿದರು. ಸರ್ಕಾರದಿಂದ ಕಾಲಕ್ಕೆ ಸರಿಯಾಗಿ ಅನುದಾನ ಪಡೆಯುವಂತೆ ನೋಡಿಕೊಂಡರು. ಭಾರತದ ಒಕ್ಕೂಟಕ್ಕೆ ಸೇರಿದ ನಂತರ ಮೈಸೂರು ಈ ಮೊದಲಿದ್ದ ತನ್ನ ಅನೇಕ ಅಧಿಕಾರಗಳನ್ನು ಹಾಗೂ ಸಂಪನ್ಮೂಲಗಳನ್ನು ಕೇಂದ್ರದ ವಶಕ್ಕೆ ಬಿಟ್ಟುಕೊಡಬೇಕಾಯಿತು. ಈ ಸಂಬಂಧವಾಗಿ ರಾಜ್ಯದಲ್ಲಿ ವ್ಯಕ್ತವಾದ ವಿವಿಧ ರೀತಿಯ ಪ್ರತಿಭಟನೆ, ಆರೋಪಗಳಿಗೆ ಸರಿಯಾದ ಸಮಜಾಯಿಷಿ ನೀಡುವ ಜವಾಬ್ದಾರಿಯನ್ನು ರೆಡ್ಡಿಯವರು ನಿರ್ವಹಿಸಬೇಕಾಯಿತು. ಮೈಸೂರು ಸರ್ಕಾರ ಕೇಂದ್ರದ ಧೋರಣೆಯನ್ನು ಪ್ರಶ್ನಿಸುತ್ತಿಲ್ಲ ಕೇಂದ್ರ ಹೇಳಿದ್ದೆಲ್ಲವನ್ನೂ ಮರುಮಾತಾಡದೆ ಒಪ್ಪಿಕೊಳ್ಳಲಾಗುತ್ತಿದೆ ಎಂಬ ಟೀಕೆಗಳನ್ನು ರೆಡ್ಡಿಯವರ ಸರ್ಕಾರ ಎದುರಿಸಬೇಕಾಯಿತು.

ಸೇವಾದಳ ಸಂಘಟನೆ ಬೇರೂರಿ ಹಬ್ಬುವುದಕ್ಕೆ ರೆಡ್ಡಿಯವರು ಬಹಳ ಸಹಾಯ ಮಾಡಿದರು. ಸೇವಾದಳ ಸಂಸ್ಥೆ ನಡೆಯುವುದಕ್ಕೆ ಸರ್ಕಾರದಿಂದ ಧನಸಹಾಯ ಅಗತ್ಯವೆಂದು ರುಮಾಲೆ ಚೆನ್ನಬಸವಯ್ಯ ಮೊದಲಾದವರು ಒತ್ತಾಯಪಡಿಸಿದಾಗ ಇದು ಕಾಂಗ್ರೆಸ್ ಸಂಸ್ಥೆಗೆ ಸೇರಿರುವುದರಿಂದ ಹಣ ಕೊಡಲು ಬರುವುದಿಲ್ಲ. ಅದನ್ನು ಪಕ್ಷಾತೀತ ಸೇವಾದಳ ಮಾಡಿ ಎಂದು ರೆಡ್ಡಿಯವರು ಸಲಹೆ ನೀಡಿದರು. ಮಾಧ್ಯಮಿಕ ಮತ್ತು ಪ್ರೌಢಶಾಲೆಗಳಲ್ಲೂ ಸೇವಾದಳ ಸ್ಥಾಪನೆ ಮಾಡುವಂತೆ ತಿಳಿಸಿದರು. ಇದರಿಂದ ಸೇವಾದಳ ತರಬೇತಿ ಹೊಂದಿದ ಅನೇಕರಿಗೆ ಶಾಲೆಗಳಲ್ಲಿ ವ್ಯಾಯಾಮ ಶಿಕ್ಷಕರ ಕೆಲಸ ದೊರೆಯುವಂತಾಯಿತು. ತಮ್ಮ ಅಧಿಕಾರಾವಧಿಯಲ್ಲಿ ರೆಡ್ಡಿಯವರು ಸೇವಾದಳ ಸ್ಥಾಪಕರಾದ ಹರ್ಡೀಕರ್ ಅವರನ್ನು ಬರಮಾಡಿಕೊಂಡು ರಾಜ್ಯದಾದ್ಯಂತ ಅವರ ಪ್ರವಾಸಕ್ಕೆ ಏರ್ಪಾಡು ಮಾಡಿಕೊಟ್ಟರು. ಹರ್ಡೀಕರ್ ಅವರು ರಾಜ್ಯದ ಪ್ರತಿಯೊಂದು ಪ್ರೌಢಶಾಲೆಗೆ ಹೋಗಿ, ಉಪನ್ಯಾಸ ನೀಡಿ ವಿದ್ಯಾರ್ಥಿಗಳಲ್ಲಿ ದೇಶಭಕ್ತಿ ತುಂಬುವಂತಹ ಕೆಲಸ ಮಾಡಿದರು.

ಚಿನ್ನದ ಮೇಲಿನ ಸುಂಕ ರಿಯಾಯಿತಿ ಮಸೂದಾ ಕಾನೂನನ್ನು (1949) ಜಾರಿಗೆ ತರುವ ಸಂದರ್ಭದಲ್ಲಿ ಕೆ.ಸಿ. ರೆಡ್ಡಿಯವರು ವೈಯುಕ್ತಿಕವಾಗಿ ಬಹುವಾದ ಟೀಕೆಯನ್ನು ಎದುರಿಸಬೇಕಾಯಿತು. 1880ರಿಂದಲೂ ಚಿನ್ನದ ಗಣಿ ಗುತ್ತಿಗೆಯನ್ನು ನಡೆಸಿಕೊಂಡು ಬಂದ ಜಾನ್ ಟೈಲರ್ ಕಂಪನಿಯವರ ಗುತ್ತಿಗೆಯನ್ನು 1940ರಲ್ಲಿ ಮಹಾರಾಜರ ಸರ್ಕಾರವು ಪುನಃ 30 ವರ್ಷಗಳವರೆಗೆ ವಿಸ್ತರಿಸಿದಾಗ ಜರಾಬ್ದಾರಿ ಸರ್ಕಾರಕ್ಕಾಗಿ ಹೋರಾಟ ನಡೆಸಿದ್ದ ಕಾಂಗ್ರೆಸ್ಸಿಗರು ಅದನ್ನು ಬಹಳ ತೀವ್ರವಾಗಿ ವಿರೋಧಿಸಿದ್ದರು. ಇದೇ ರೀತಿ ಚಿನ್ನದ ಗಣಿ ಕಂಪನಿಯವರು ತಮ್ಮ ಖರ್ಚುವೆಚ್ಚಗಳು ಅಧಿಕವಾಗಿವೆ, ತಮಗೆ ಬಹಳ ನಷ್ಟವಾಗುತ್ತಿದೆ ಎಂದು ವಾದಿಸಿದಾಗ 1944-45ರಲ್ಲಿ ಗೋಲ್ಡ್ ಡ್ಯೂಟಿ ರಿಲೀಫ್ ಅಮೆಂಡ್‌ಮೆಂಟ್ ಕಾಯಿದೆಯನ್ನು ಜಾರಿಗೆ ತಂದಾಗಲೂ ಕಾಂಗ್ರೆಸ್ಸಿನವರು ಅದನ್ನು ತೀವ್ರವಾಗಿ ವಿರೋಧಿಸಿದ್ದರು. ಅದರಲ್ಲಿಯೂ ಕೆ.ಸಿ. ರೆಡ್ಡಿಯವರು ಮೈಸೂರು ದೇಶದಲ್ಲಿ ಚಿನ್ನದ ಗಣಿಗಿಂತಲೂ ಅನ್ಯಾಯವಾದ ಸಂಸ್ಥೆ ಇಲ್ಲ, ಈಗ ಜಾರಿಗೆ ತರುತ್ತಿರುವ ಮಸೂದೆ ಮನೆಗೆ ಮಾರಿ ಪರರಿಗೆ ಉಪಕಾರಿಯಾಗಿದೆ, ಮೈಸೂರಿನ ಜನತೆಯ ಹಿತವೇ ಮುಖ್ಯವಾಗಿರಬೇಕು, ಈ ಗಣಿಗಳಿಂದ ಬರುವ ವರಮಾನದ ಪ್ರತಿಯೊಂದು ಪೈಸೆಯೂ ಮೈಸೂರಿನ ಜನತೆಗೆ ಸೇರಬೇಕು ಎಂದು ವಾದಿಸಿದ್ದರು. ಇದಾದ ನಂತರ ಸ್ವಾತಂತ್ರ್ಯ ಬಂತು, ರೆಡ್ಡಿಯವರು ಈ ವಿಷಯದಲ್ಲಿ ತಾವು ವಾದಿಸಿದ ಹಾಗೆ ನಡೆದುಕೊಳ್ಳುತ್ತಾರೆ ಎಂದು ಜನಪ್ರತಿನಿಧಿಗಳ ನಿರೀಕ್ಷೆಯಾಗಿತ್ತು. ದೇಶದ ದೃಷ್ಟಿಯಿಂದ ಬಹುಮಹತ್ವದ ಚಿನ್ನದಗಣಿ ಉದ್ಯಮವನ್ನು ವಿದೇಶಿ ಸಂಸ್ಥೆಯೊಂದು ನಡೆಸಿಕೊಂಡು ಹೋಗುವುದು ಉಚಿತವಲ್ಲ, ಅದನ್ನು ಸರ್ಕಾರವೇ ವಹಿಸಿಕೊಳ್ಳಬೇಕು ಎಂಬ ಪ್ರಬಲ ಕೂಗು ಎದ್ದಿತು. ಇದೇ ಸಂದರ್ಭದಲ್ಲಿ ಚಿನ್ನದ ಗಣಿ ಕಂಪನಿಯವರು ತಮಗೆ ಭಾರೀ ಪ್ರಮಾಣದ ತೆರಿಗೆ ಸುಂಕಗಳ ಹೊರೆಯಿಂದಾಗಿ ಗಣಿಗಳನ್ನು ನಡೆಸಿಕೊಂಡು ಹೋಗುವುದು ಕಷ್ಟವಾಗಿದೆ ಎಂದು ವ್ಯಕ್ತಪಡಿಸಿದಾಗ ಈ ಪರಿಸ್ಥಿತಿಯನ್ನು ಪರಿಶೀಲಿಸುವುದಕ್ಕಾಗಿ ರೆಡ್ಡಿಯವರ ಸರ್ಕಾರ ಶ್ರೀ ಗುಂಡಪ್ಪಗೌಡರ ನೇತೃತ್ವದಲ್ಲಿ ಒಂದು ವಿಚಾರಣಾ ಸಮಿತಿಯನ್ನು ನೇಮಿಸಿತು. ಈ ಸಮಿತಿಯ ವರದಿಯ ಆಧಾರದ ಮೇಲೆ ರೆಡ್ಡಿಯವರ ಸರ್ಕಾರ 1949ರಲ್ಲಿ ಚಿನ್ನದ ಮೇಲಿನ ಸುಂಕ ರಿಯಾಯಿತಿ ಮಸೂದಾ ಕಾನೂನನ್ನು ಸಿದ್ಧಪಡಿಸಿತು.

ಕೈಗಾರಿಕಾ ಮತ್ತು ಹಣಕಾಸು ಸಚಿವರಾಗಿದ್ದ ಹೆಚ್.ಸಿ. ದಾಸಪ್ಪನವರು ಅದನ್ನು ಸದನದಲ್ಲಿ ಮಂಡಿಸಿದರು. ಮೈನಿಂಗ್ ಕಂಪನಿಗಳ ದೃಷ್ಟಿಯಿಂದಲೂ, ಮೈಸೂರು ದೇಶದ ಭವಿಷ್ಯದ ದೃಷ್ಟಿಯಿಂದಲೂ ಕೂಡ ಈ ಗಣಿಗಳ ಜೀವಮಾನ ಎಷ್ಟು ದೊಡ್ಡದಾಗಿದ್ದರೆ ಅಷ್ಟು ಅನುಕೂಲ. ಚಿನ್ನ ತೆಗೆಯುವ ಖರ್ಚಿನ ಜೊತೆಗೆ ಡಿಪ್ರಿಸಿಯೇಶನ್‌ಗೂ, ಅಭಿವೃದ್ಧಿ ಕೆಲಸಗಳಿಗೂ ಸ್ವಲ್ಪ ಅವಕಾಶ ಕೊಟ್ಟೇ ಕೊಡಬೇಕು ಎಂಬ ದೃಷ್ಟಿಯಿಂದ ಈ ಮಸೂದೆಯನ್ನು ತರಲಾಗುತ್ತಿದೆ ಎಂದು ಸರ್ಕಾರ ತಿಳಿಸಿತು. 1945ರಲ್ಲಿ ಇಂತಹ ಪರಿಹಾರ ನೀಡಿಕೆಯ ವಿರುದ್ಧ ವಾದಿಸಿದ ರೆಡ್ಡಿಯವರೇ ಈಗ ಇಂತಹ ಪರಿಹಾರ ಘೋಷಿಸುತ್ತಿದ್ದಾರೆಯೇ ಎಂದು ಸದನ ವಿಸ್ಮಯ ವ್ಯಕ್ತಪಡಿಸಿತು. ಆಡಳಿತಕ್ಕೆ ಬರುವ ಮುನ್ನ ವಿರೋಧ ಪಕ್ಷದಲ್ಲಿರುವಾಗ ಏನೇನು ಟೀಕೆ ಮಾಡಿದರೋ ಅದನ್ನು ಆಡಳಿತಕ್ಕೆ ಬಂದಮೇಲೆ ಮಾರ್ಪಾಡು ಮಾಡಿದ್ದು ಸರಿಯೇ ಎಂದು ಸದನವು ಪ್ರಶ್ನಿಸಿತು. ವಿಲಿನೀಕರಣದಿಂದಾಗಿ ಈಗಾಗಲೇ ನಮ್ಮ ವರಮಾನವು ಕಡಿಮೆಯಾಗಿರುವಾಗ ಇಂತಹ ರಿಯಾಯಿತಿ ನೀಡಿ ವರಮಾನವನ್ನು ಇನ್ನೂ ಕಡಿಮೆ ಮಾಡಿಕೊಳ್ಳುವುದರಲ್ಲಿ ಅರ್ಥವಿಲ್ಲ ಎಂದು ಟೀಕಿಸಲಾಯಿತು. ಇಷ್ಟೆಲ್ಲ ವಿರೋಧದ ನಡುವೆಯೂ ಮಸೂದೆಗೆ ಅನುಮೋದನೆ ಸಿಕ್ಕಿತು. ಸುಮಾರು 30,000 ಮಂದಿಗೆ ಉದ್ಯೋಗ ಕಲ್ಪಿಸಿದ್ದ ಹಾಗೂ ಈ ಉದ್ದಿಮೆಯನ್ನು ನಡೆಸಿಕೊಂಡು ಹೋಗುವುದಕ್ಕೆ ಬೇಕಾದ ತಂತ್ರಜ್ಞಾನ, ಅನುಭವ ಸಾಮರ್ಥ್ಯಗಳನ್ನು ಹೊಂದಿದ್ದ ವಿದೇಶೀ ಕಂಪನಿಯ ಗುತ್ತಿಗೆಯನ್ನು ಬಲವಾದ ಕಾರಣವಿಲ್ಲದೆ ಇದ್ದಕ್ಕಿದ್ದ ಹಾಗೆ ರದ್ದುಮಾಡುವುದು ಜಾಣತನವಲ್ಲ ಎಂಬ ವಾಸ್ತವ ಪ್ರಜ್ಞೆ ಎಲ್ಲರಿಗೂ ಇದ್ದುದರಿಂದ ಮಸೂದೆಗೆ ಅನುಮೋದನೆ ಸಿಕ್ಕಿತು ಎನ್ನಬಹುದು. ಇದಲ್ಲದೆ ಗೇಣಿದಾರರು ಕ್ರಮೇಣ ಸಿಬ್ಬಂದಿ ನೇಮಕಾತಿಯಲ್ಲಿ ಭಾರತೀಕರಣದ ನೀತಿಯನ್ನು ಅನುಸರಿಸಬೇಕು, ಸಾಧ್ಯವಾದಷ್ಟೂ ಭಾರತೀಯರನ್ನೇ ನೇಮಕ ಮಾಡಿಕೊಳ್ಳಬೇಕು, ಮೈಸೂರಿನವರಿಗೇ ಆದ್ಯತೆ ನೀಡಬೇಕು ಎಂಬ ಷರತ್ತುಗಳೂ ಕೂಡ ಒಪ್ಪಂದದಲ್ಲಿದ್ದುದರಿಂದ ವಿರೋಧದ ದನಿ ಸ್ವಲ್ಪ ಅಡಗಿತು ಎನ್ನಬಹುದು.

ಆದರೂ ಚಿನ್ನದ ಸುಂಕದ ರದ್ದತಿ ಹಾಗೂ ಗಣಿಗಾರಿಕೆ ಸಂಸ್ಥೆಯೊಂದಿಗೆ ನಡೆದ ಒಪ್ಪಂದಕ್ಕೆ ಸಂಬಂಧಿಸಿದಂತೆ ಶಾಸನ ಸಭೆಯಲ್ಲಿಯೂ ಹಾಗೂ ಸಾರ್ವಜನಿಕವಾಗಿಯೂ ಅನೇಕ ಟೀಕೆಗಳು ಇನ್ನೂ ವ್ಯಕ್ತವಾಗುತ್ತಲೇ ಇದ್ದುದರಿಂದ ಕೆ.ಸಿ. ರೆಡ್ಡಿಯವರ ನಂತರ ಅಧಿಕಾರಕ್ಕೆ ಬಂದ ಕೆಂಗಲ್ ಹನುಮಂತಯ್ಯನವರು ಅವರ ಸಂಪುಟದ ಗೃಹ ಮತ್ತು ಕೈಗಾರಿಕಾ ಸಚಿವ ಶ್ರೀ ಸಿದ್ದವೀರಪ್ಪನವರ ಅಧ್ಯಕ್ಷತೆಯಲ್ಲಿ ಒಂದು ವಿಚಾರಣಾ ಸಮಿತಿಯನ್ನು ನೇಮಿಸಿದರು. 1949ರಲ್ಲಿ ನಡೆದ ಒಪ್ಪಂದದ ನಿಬಂಧನೆಗಳನ್ನು ಚಿನ್ನದ ಗಣಿಗಾರಿಕೆ ಸಂಸ್ಥೆಗಳು ಎಷ್ಟರಮಟ್ಟಿಗೆ ಜಾರಿಗೆ ತಂದಿವೆ ಹಾಗೂ ಈ ಒಪ್ಪಂದದ ಫಲವಾಗಿ ಉಂಟಾದ ಸ್ಥಿತಿ ಮತ್ತು ಈ ಕಂಪನಿಗಳಿಂದಾಗಿ ಸರ್ಕಾರಕ್ಕೆ ಎಷ್ಟರಮಟ್ಟಿಗೆ ಕಂದಾಯದ ಕುಸಿತವಾಯಿತು ಎಂಬ ಅಂಶಗಳನ್ನು ವಿಚಾರಿಸುವುದು ಈ ಸಮಿತಿಯ ಕಾರ್ಯವ್ಯಾಪ್ತಿಗೆ ಸೇರಿತ್ತು. ಶ್ರೀ ಸಿದ್ದವೀರಪ್ಪನವರ ಸಮಿತಿ 1955ರ ಜನವರಿಯಲ್ಲಿ ತನ್ನ ವರದಿ ಸಲ್ಲಿಸಿತು. 'ದೇಶದ ಆರ್ಥಿಕ ಪ್ರಗತಿಗೆ, ರಾಜ್ಯದ ಸಂಪನ್ಮೂಲಕ್ಕೆ ಜನತೆಯ ಕಲ್ಯಾಣಕ್ಕೆ ಕಿಂಚಿತ್ತೂ ಸಹಾಯವಾಗದ ಚಿನ್ನದ ಗಣಿಯನ್ನು ರಾಷ್ಟ್ರೀಕರಿಸಬೇಕೆಂಬ ನಿರ್ಣಯವನ್ನು ಶಾಸನ ಸಭೆಯಲ್ಲಿ ಮಂಡಿಸಲಾಯಿತು. ಸದನದ ಸದಸ್ಯರು ರಾಷ್ಟ್ರೀಕರಣಕ್ಕೆ ಬಲವಾದ ಒತ್ತಾಸೆ ನೀಡಿದರು. ಇದರ ಫಲವಾಗಿ ಕೆಂಗಲ್ ಹನುಮಂತಯ್ಯನವರ ಸರ್ಕಾರವು ಕೋಲಾರ ಚಿನ್ನದ ಗಣಿಗಳನ್ನು ರಾಷ್ಟ್ರೀಕರಿಸುವಲ್ಲಿ ಯಶಸ್ವಿಯಾಯಿತು.

ಮೈಸೂರಿನ ರಾಜಮನೆತನದ ಆಸ್ತಿಪಾಸ್ತಿ ಹಾಗೂ ಸ್ಥಾನಮಾನಗಳ ಇತ್ಯರ್ಥದ ಸಂಬಂಧವಾಗಿ ಕ್ರಮ ಕೈಗೊಂಡಿದ್ದು ರೆಡ್ಡಿಯವರ ಮುಖ್ಯಮಂತ್ರಿತ್ವದಲ್ಲಿ ನಡೆದ ಮಹತ್ವದ ಕೆಲಸಗಳಲ್ಲಿ ಒಂದು. ಮಹಾರಾಜ ಜಯಚಾಮರಾಜ ಒಡೆಯರ್ ಅವರಿಗೆ ರೆಡ್ಡಿಯವರು ಆತ್ಮೀಯ ಸ್ನೇಹಿತರಾಗಿದ್ದರು. ರಾಜಮನೆತನದೊಂದಿಗೆ ಅವರ ಮಾವ ಗುರುವಾರೆಡ್ಡಿಯವರು ಹೊಂದಿದ್ದ ಆತ್ಮೀಯ ಸಂಬಂಧ ರೆಡ್ಡಿಯವರ ಕಾಲಕ್ಕೂ ಮುಂದುವರೆದುಕೊಂಡು ಬಂತು. ಮೈಸೂರು ಸಂಸ್ಥಾನದಲ್ಲಿ ಜವಾಬ್ದಾರಿ ಸರ್ಕಾರದ ಸ್ಥಾಪನೆಗಾಗಿ ಮಹಾರಾಜರ ವಿರುದ್ಧ ಹೋರಾಡಿದ ನಾಯಕರ ಪಂಕ್ತಿಯಲ್ಲಿ ಮುಂಚೂಣಿಯಲ್ಲಿದ್ದ ರೆಡ್ಡಿಯವರು ಮಹಾರಾಜರ ಆಪ್ತ ಸ್ನೇಹಿತರೂ ಆಗಿ ಉಳಿದುಕೊಂಡಿದ್ದು ವಿಚಿತ್ರವೆನ್ನಿಸಿದರೂ ಸತ್ಯಸಂಗತಿ.

ಮೈಸೂರು ಸಂಸ್ಥಾನದಲ್ಲಿ ಜವಾಬ್ದಾರಿ ಸರ್ಕಾರ ಸ್ಥಾಪಿತವಾದಂತಹ ಕಾಲದ ಸ್ಥಿತಿಗತಿಗಳು ಭಾರತದ ಇತರೆಲ್ಲ ಪ್ರಾಂತಗಳಿಗಿಂತ ಬಹಳ ಮಿಶ್ರಿಷ್ಟವಾಗಿದ್ದವು ಎಂಬುದನ್ನು ಮರೆಯುವಂತಿಲ್ಲ. ಯಾವುದೇ ಸ್ಥಿತ್ಯಂತರದ ಸ್ಥಿತಿಯಲ್ಲಿರುವ ಆತಂಕ, ಬಿಕ್ಕಟ್ಟು, ಸೂಕ್ಷ್ಮಗಳು ಇಲ್ಲಿದ್ದವು. ಪರಂಪರಾಗತ ರಾಜಾಡಳಿತಕ್ಕೆ ಹೊಂದಿಕೊಂಡಿದ್ದ ಜನರು ಜನತಂತ್ರದ ರೀತಿನೀತಿಗಳಿಗೆ ಹೊಂದಿಕೊಳ್ಳುವುದು ಒಂದು ಕಡೆಗಿದ್ದರೆ ಇನ್ನೊಂದು ಕಡೆ ಹಲವು ನೂರು ವರ್ಷಗಳಿಂದ ಆಳುವ ಸ್ಥಾನದಲ್ಲಿದ್ದ ರಾಜರು ಹಾಗೂ ರಾಜಮನೆತನದವರು ಹಲವಾರು ರೀತಿಯ ಹೊಂದಾಣಿಕೆಗಳನ್ನು ಮಾಡಿಕೊಳ್ಳುವುದು ಅನಿವಾರ್ಯವಾಗಿತ್ತು. ತಮ್ಮ ಅನೇಕ ಸೌಲಭ್ಯ, ಸವಲತ್ತುಗಳನ್ನು ಅವರು ಬಿಟ್ಟುಕೊಡಬೇಕಾಗಿತ್ತು. ರಾಜಾಂಶವನ್ನು ಗಣನೀಯವಾಗಿ ಕಡಿಮೆ ಮಾಡಿದ್ದರಿಂದ ಅರಮನೆಯ ಆಯವ್ಯಯವನ್ನು ಸರಿದೂಗಿಸುವುದು ಕಷ್ಟಕರವಾಗಿ ಪರಿಣಮಿಸಿತು. ನೌಕರರ ಸಂಖ್ಯೆಯನ್ನು ಖೋತಾ ಮಾಡಿ ಖರ್ಚು ವೆಚ್ಚಗಳನ್ನು ಕಡಿಮೆ ಮಾಡಿದ್ದರಿಂದ ಅರಮನೆಯ ಸಿಬ್ಬಂದಿಯಲ್ಲಿ ಅಸಮಧಾನ ಹಾಗೂ ಜಿಗುಪ್ಸೆಗಳು ಬೆಳೆಯತೊಡಗಿದ್ದವು. ವಿವಿಧ ವ್ಯಕ್ತಿ, ಸಂಸ್ಥೆ ಹಾಗೂ ಅರಮನೆಯ ಇಲಾಖೆಗಳಿಗೆ ನೀಡುತ್ತಿದ್ದ ಲಾವಾಜಮೆಯ ಪರಿಮಾಣ ಮೊದಲಿನಷ್ಟೇ ಇದ್ದರೂ ಈ ಲಾವಾಜಮೆಯ ಅಂಗವಾದ ಪದಾರ್ಥಗಳ ಬೆಲೆ ಬಹಳವಾಗಿದ್ದರಿಂದ ಖರ್ಚುಗಳನ್ನು ಸರಿದೂಗಿಸುವುದಕ್ಕೆ ಪರದಾಡುವಂತಾಗಿತ್ತು. ರಾಜಾಂಶದಿಂದ ಮಾಮೂಲು ಖರ್ಚು ವೆಚ್ಚಗಳನ್ನು ಬಿಟ್ಟು ಇನ್ನೇನು ಮಾಡಲಾಗದಂಥ ಸ್ಥಿತಿ ಎದುರಾಗಿತ್ತು.

ಅರಮನೆಗೆ ಸಂಬಂಧಿಸಿದ ಎರಡು ಮುಖ್ಯ ಪ್ರಶ್ನೆಗಳನ್ನು ಸರ್ಕಾರ ಇತ್ಯರ್ಥಪಡಿಸಬೇಕಿತ್ತು. (1) ಅರಮನೆಯ ಖಾಸಗಿ ಸ್ವತ್ತುಗಳ ಇತ್ಯರ್ಥ ಮತ್ತು (2) ಮಹಾರಾಜರ ಸ್ವಂತದ ಪದಾತಿದಳ ನೆಲೆಸಿರುವ ನಿವೇಶನ ಮತ್ತು ಕಟ್ಟಡಗಳ ಸಂಬಂಧವಾಗಿ ಸರ್ಕಾರವು ಮಹಾರಾಜರಿಗೆ ಪರಿಹಾರ ಧನ ನೀಡುವ ವಿಷಯ. ಖಾಸಗಿ ಸ್ವತ್ತುಗಳಿಗೆ ಸಂಬಂಧಿಸಿದಂತೆ ಯಾವುದೇ ರೀತಿಯ ನಿಷ್ಠುರ ಹಾಗೂ ಕಾನೂನಿಗೆ ಅಂಟಿಕೊಂಡ ನಿಲುವಿನಿಂದ ವಿಶ್ವಾಸಕ್ಕೆ ಹಾಗೂ ಸ್ನೇಹಕ್ಕೆ ಧಕ್ಕೆ ಉಂಟಾಗಬಹುದಾದ್ದರಿಂದ ಈ ವಿಷಯವನ್ನು ಮುಖತಃ ಚರ್ಚಿಸಿ ಕೊಡುಕೊಳ್ಳುವಿಕೆ ಮನೋಧರ್ಮದಿಂದ ಇತ್ಯರ್ಥಪಡಿಸಬೇಕು ಎಂದು ಭಾರತ ಸರ್ಕಾರವು ಹೊರಡಿಸಿದ ಶ್ವೇತಪತ್ರದಲ್ಲಿ ತಿಳಿಸಲಾಗಿತ್ತು. ಹೀಗಾಗಿ ಅರಮನೆಯ ಯಾವುದೇ ಖಾಸಗಿ ಆಸ್ತಿಯ ವಿವರವಾದ ತನಿಖೆ ನಡೆಸುವ ಅಗತ್ಯವಿರಲಿಲ್ಲ. ಹೀಗಿದ್ದೂ ಅತ್ಯಂತ ವ್ಯವಸ್ಥಿತವಾಗಿ ಆಸ್ತಿಪಾಸ್ತಿಗಳ ಲೆಕ್ಕಾಚಾರಗಳನ್ನು ಪಾಲಿಸಿಕೊಂಡು ಬಂದಿದ್ದ ಮೈಸೂರು ಅರಮನೆ ಕಛೇರಿಯು ಲಭ್ಯವಿದ್ದ ಎಲ್ಲ ಮಾಹಿತಿಯನ್ನೂ

ಸರ್ಕಾರಕ್ಕೆ ಒದಗಿಸಿತು. ಕಟ್ಟಡ ನಿವೇಶನಗಳ ಪರಿಹಾರದ ಸಂಬಂಧವಾಗಿ ಮಾರುಕಟ್ಟೆಯ ದರಕ್ಕಿಂತ ಬಹಳ ಕಡಿಮೆ ದರವನ್ನೇ ಕೋರಿದ ಮಹಾರಾಜರು ಅದಷ್ಟು ಬೇಗ ವಿಷಯವನ್ನು ಇತ್ಯರ್ಥ ಪಡಿಸಬೇಕೆಂದು ಸರ್ಕಾರಕ್ಕೆ ಮನವಿ ಮಾಡಿಕೊಂಡಿದ್ದರು. ಆದರೂ ಭಾರತದ ಇನ್ನಿತರ ರಾಜರುಗಳ ಖಾಸಗಿ ಆಸ್ತಿಯನ್ನು ಅಂತಿಮವಾಗಿ ತೀರ್ಮಾನಿಸಿ ಇತ್ಯರ್ಥಮಾಡಿದ್ದರೂ ಮೈಸೂರಿನಲ್ಲಿ ಮಾತ್ರ ಇದು ಇನ್ನೂ ಇತ್ಯರ್ಥವಾಗಿರಲಿಲ್ಲ. ರೆಡ್ಡಿಯವರು ಮಹಾರಾಜರಿಗೆ ಎಷ್ಟೇ ಆಪ್ತರಾಗಿದ್ದರೂ ಸಹ ಸಂಬಂಧಪಟ್ಟ ಎಲ್ಲ ಅಂಶಗಳನ್ನೂ ಪರಿಶೀಲಿಸಿ ಸಂಪುಟದ ಸಂಪೂರ್ಣ ಒಪ್ಪಿಗೆ ಪಡೆದುಕೊಳ್ಳುವ ಹೊರತು ನಿರ್ಣಯ ಕೈಗೊಳ್ಳುವಂತಿರಲಿಲ್ಲ. ಸರ್ಕಾರದ ನಿಯಮಗಳಿಗೆ ಧಕ್ಕೆ ತಾರದೆ ಅತ್ತ ರಾಜಮನೆತನದವರಿಗೂ ನೋವಾಗದ ಹಾಗೆ ಒಂದು ತೃಪ್ತಿಕರವಾದ ಪರಿಹಾರವನ್ನು ರೂಪಿಸುವ ಜವಾಬ್ದಾರಿ ಪ್ರಥಮ ಮುಖ್ಯ ಮಂತ್ರಿಯಾಗಿ ಅಧಿಕಾರ ಸ್ವೀಕರಿಸಿದ ಕೆ.ಸಿ. ರೆಡ್ಡಿಯವರ ಹೆಗಲಿಗೆ ಬಿತ್ತು. ಇಂತಹ ಒಂದು ಸಂದರ್ಭಕ್ಕೆ ಅಗತ್ಯವಾದ ನಿಷ್ಪಕ್ಷಪಾತ ದೃಷ್ಟಿ, ಸಮತೂಕದ ನಿಲುವು ಸಂಸ್ಕೃತಿ ಪರಂಪರೆಗಳ ತಿಳುವಳಿಕೆ ಮತ್ತು ಉದಾರತೆಗಳು ರೆಡ್ಡಿಯವರಲ್ಲಿ ಮೇಳೈಸಿದ್ದವು. ಹೀಗಾಗಿ ರಾಜತ್ವದಿಂದ ಪ್ರಜಾಪ್ರಭುತ್ವಕ್ಕೆ ನಡೆದ ಈ ಸಂಕ್ರಮಣ ಕಾರ್ಯವನ್ನು ಸುಸೂತ್ರಗೊಳಿಸುವಲ್ಲಿ ರೆಡ್ಡಿಯವರು ನೀಡಿದ ಕೊಡುಗೆ ದೊಡ್ಡದು. ರಾಜಾಂಶವನ್ನು 1949-50 ರಲ್ಲಿದ್ದ 32 ಲಕ್ಷರೂ.ಗಳಿಂದ 26 ಲಕ್ಷರೂ.ಗಳಿಗೆ ಇಳಿಸಿದ ಪ್ರಯುಕ್ತ ಅರಮನೆಗೆ ಅವುಗಳ ನಿರ್ವಹಣೆಯ ವೆಚ್ಚವನ್ನು ತಪ್ಪಿಸುವ ಉದ್ದೇಶದಿಂದ ಅರಮನೆಯ ಉದ್ಯಾನ, ಮೃಗಾಲಯ, ವಿದ್ಯುಚ್ಛಕ್ತಿ ಇಲಾಖೆ ಮೊದಲಾದುವನ್ನು ಸರ್ಕಾರದ ಆಯಾ ಇಲಾಖೆಗಳ ನಿಯಂತ್ರಣಕ್ಕೆ ಒಪ್ಪಿಸಬೇಕೆಂದು ರೆಡ್ಡಿಯವರ ಸರ್ಕಾರ ನಿರ್ಣಯಿಸಿತು. ಇದೇ ರೀತಿ ಅರಮನೆಯ ಆದಾಯ ಕಡಿಮೆಯಾಗಿರುವ ಹಿನ್ನೆಲೆಯಲ್ಲಿ ಮೈಸೂರು ಬೆಂಗಳೂರು ಅರಮನೆಗಳ ನಿರ್ವಹಣೆ ಸಾಧ್ಯವಾಗುವುದಿಲ್ಲ ಎಂದು ಮನಗಂಡು ಅವುಗಳ ನಿರ್ವಹಣೆಗಾಗಿ ವಾರ್ಷಿಕ 75,000 ಸಾವಿರ ರೂ. ನೀಡಲು ಒಪ್ಪಿಕೊಳ್ಳಲಾಯಿತು. ಭಾರತ ಸರ್ಕಾರ ಮತ್ತು ಮೈಸೂರು ಮಹಾರಾಜರ ನಡುವೆ ಆದ ಒಪ್ಪಂದದಲ್ಲಿ ಮೈಸೂರು ಅರಮನೆಯ ಘನತೆ, ಗೌರವ, ಸ್ಥಾನಮಾನವನ್ನು ಸಂರಕ್ಷಿಸುವ ರೀತಿಯಲ್ಲಿ ಮೈಸೂರು, ಬೆಂಗಳೂರು ಊಟಿಯಲ್ಲಿರುವ ಮೂರು ಅರಮನೆಗಳನ್ನು ಸರ್ಕಾರದ ವೆಚ್ಚದಲ್ಲಿ ಪರಿಪಾಲಿಸಬೇಕು ಎಂಬ ಖಾತರಿಯನ್ನು ನೀಡಲಾಯಿತು. ಇಷ್ಟು ಕೆಲಸ ಆಗುವ ಹೊತ್ತಿಗೆ ಸಾಕಷ್ಟು ಕಾಲ ವಿಳಂಬವಾಗಿತ್ತು. ಯಾವುದೇ ಸ್ಪಷ್ಟೀಕರಣ ಕೊಡಲು ಸಿದ್ಧವಿದ್ದ ಮಹಾರಾಜರಿಗೆ ಸರ್ಕಾರದ ವಿಳಂಬದಿಂದ ತುಂಬ ಮುಜುಗರವಾಯಿತು. ವಿಳಂಬವಾದರೂ ಒಂದು ಸೂಕ್ತ ಪರಿಹಾರ ರೂಪಿಸಿದ್ದೇನೆ ಎಂಬ ಸಮಾಧಾನ ರೆಡ್ಡಿಯವರಿಗಿತ್ತು. "ನಿಮಗೆ ಹಾಗೂ ದೇಶಕ್ಕೆ ನಮ್ಮ ಕರ್ತವ್ಯವನ್ನು ಮಾಡಿದ್ದೇವೆ ಎಂಬ ಸಮಾಧಾನ ಈಗ ಬಂದಿದೆ. ಈ ವಿಷಯಕ್ಕೆ ಸಂಬಂಧಿಸಿದಂತೆ ಸರ್ದಾರರ ಆಶಯವೇನಿತ್ತೋ ಅದನ್ನೂ ಸಹ ನಾವು ಈಡೇರಿಸಿದ್ದೇವೆ ಎಂಬ ವಿಶೇಷ ತೃಪ್ತಿ ಸಿಕ್ಕಿದೆ" ಎಂದು ಅವರು ಮಹಾರಾಜರಿಗೆ ಬರೆದ ಪತ್ರದಲ್ಲಿ ತಿಳಿಸಿದರು. ಆದರೆ ಅರಮನೆಗೆ ಸಂಬಂಧಿಸಿದ ವಿಷಯಗಳ ಸಂಪೂರ್ಣ ಇತ್ಯರ್ಥ ಇನ್ನೂ ಬಾಕಿ ಇರುವಾಗಲೇ ಮೈಸೂರು ಸರ್ಕಾರದಲ್ಲಿ ಬದಲಾವಣೆಗಳಾದವು. ರೆಡ್ಡಿಯವರು ಅಧಿಕಾರ ಬಿಟ್ಟುಕೊಟ್ಟರು. ಕೆಂಗಲ್ ಹನುಮಂತಯ್ಯನವರು ಮುಖ್ಯಮಂತ್ರಿಗಳಾದರು. ರೆಡ್ಡಿಯವರು ದೆಹಲಿಗೆ ತೆರಳಿ ಕೇಂದ್ರ ಸಚಿವರಾಗಿ ಅಧಿಕಾರ ವಹಿಸಿಕೊಂಡರು. ರೆಡ್ಡಿಯವರು ಕೇಂದ್ರ ಸರ್ಕಾರಕ್ಕೆ ಹೋದ ನಂತರವೂ ಮಹಾರಾಜರೊಂದಿಗೆ ಅವರ ಸ್ನೇಹ ಅವಿಚ್ಛಿನ್ನವಾಗಿ ಮುಂದುವರೆದುಕೊಂಡು ಬಂದಿತು.

ಮೈಸೂರು ಅರಸು ಮನೆತನದ ವಿಷಯಕ್ಕೆ ಸಂಬಂಧಿಸಿದಂತೆ ಹನುಮಂತಯ್ಯನವರ ನಿಲುವಿಗೂ ರೆಡ್ಡಿಯವರ ನಿಲುವಿಗೂ ಅಜಗಜಾಂತರವಿತ್ತು. ಹನುಮಂತಯ್ಯನವರು ಅಧಿಕಾರಕ್ಕೆ ಬಂದನಂತರ ಅರಮನೆಯ ವಿಷಯದಲ್ಲಿ ಸರ್ಕಾರದ ಧೋರಣೆ ತುಂಬಾ ನಿಷ್ಠುರ ರೀತಿಯದಾಗಿತ್ತು. ಅರಮನೆಯ ಸಂಬಂಧವಾಗಿ ರೆಡ್ಡಿಯವರ ಮಂತ್ರಿಮಂಡಲ ಕೈಗೊಂಡ ಅನೇಕ ನಿರ್ಣಯಗಳು ಹನುಮಂತಯ್ಯನವರ ಅವಧಿಯಲ್ಲಿ ಬದಲಾದವು, ತಿರುಗುಮುರುಗಾದವು. ಅರಮನೆಯ ಸಂಪ್ರದಾಯ, ಪದ್ಧತಿಗಳಲ್ಲಿ ಸರ್ಕಾರದ ಅನಗತ್ಯ ಮಧ್ಯ ಪ್ರವೇಶ, ತಾರತಮ್ಯ ನೀತಿಗಳಿಂದ ಮಹಾರಾಜರು ಅತೀವ ನೋವು ಅಪಮಾನ ಅನುಭವಿಸುವಂತಾಯಿತು. ಸರ್ಕಾರದ ಕೆಲವೊಂದು ರೀತಿ ನೀತಿಗಳು ಮೈಸೂರಿನ ಗೌರವ ಘನತೆ ಸತ್ಪರಂಪರೆಗಳಿಗೇ ಧಕ್ಕೆ ತರುವಂತಿದ್ದರೂ ಅವುಗಳನ್ನು ಪ್ರಶ್ನಿಸುವ ಯಾರೊಬ್ಬರೂ ಇಲ್ಲವಲ್ಲ ಎಂದು ಮಹಾರಾಜರು ತೀರಾ ಕಂಗೆಟ್ಟರು. ಇಂತಹ ತೊಳಲಾಟದ ಸಂದರ್ಭಗಳಲ್ಲಿ ತಮ್ಮ ಅಂತರಂಗವನ್ನು ನಿವೇದಿಸಿಕೊಳ್ಳುವ ಸುದೀರ್ಘ ಪತ್ರಗಳನ್ನು ಅವರ ತಮ್ಮ ಆಪ್ತ ಮಿತ್ರರಾದ ರೆಡ್ಡಿಯವರಿಗೆ ಬರೆಯುತ್ತಿದ್ದರು. ಒಂದು ಪತ್ರದಲ್ಲಿ ಅವರು ಹೀಗೆ ಬರೆದರು:

"---- ಇಂತಹ ಎಲ್ಲ ಪ್ರಸಂಗಗಳಿಂದಾಗಿ ನಾನು ನಿಮ್ಮೊಂದಿಗೆ ಮತ್ತು ನಿಮ್ಮ ಸಹೋದ್ಯೋಗಿಗಳೊಂದಿಗೆ ಕಾಪಾಡಿಕೊಂಡು ಬಂದಂತಹ ಸ್ನೇಹಪರವಾದ ನಿಲುವನ್ನು ಹನುಮಂತಯ್ಯನವರೊಂದಿಗೆ ಇಟ್ಟುಕೊಳ್ಳುವುದು ಸಾಧ್ಯವೇ ಇಲ್ಲ ಎಂಬ ಖಂಡಿತವಾದ ನಿರ್ಧಾರಕ್ಕೆ ಬರಬೇಕಾಯಿತು. ನನ್ನ ಪ್ರತಿಯೊಂದು ದಯಾಳು ವರ್ತನೆಯನ್ನೂ ಹನುಮಂತಯ್ಯನವರ ಸರ್ಕಾರ ದೌರ್ಬಲ್ಯವೆಂದು ಭಾವಿಸುತ್ತಿದೆ. ಒಂದು ರಾಜ್ಯದ ಪ್ರಮುಖ ವ್ಯಕ್ತಿಯ ಬಗ್ಗೆ ಇಂತಹ ಬೇಜವಾಬ್ದಾರಿಯುತವಾದ ಅಗೌರವಯುತವಾದ ಹಗುರವಾದ ವರ್ತನೆ ಅಸಹನೀಯವಾಗಿದೆ. ಇದು ಪ್ರಜಾಸತ್ತಾತ್ಮಕ ನಿಲುವಿಗೆ ತೀರಾ ವಿರುದ್ಧ. ಇದನ್ನು ನೀವು ಮಾತ್ರವೇ ಅರ್ಥಮಾಡಿಕೊಳ್ಳಬಲ್ಲಿರಿ. ನಾನು ಯಾವುದರ ಬಗ್ಗೆಯೂ ದೂರುತ್ತಿಲ್ಲ ಬದುಕಿನಲ್ಲಿ ಎಷ್ಟೋ ಸಂಗತಿಗಳನ್ನು ಅವು ಬಂದಂತೆ ಸ್ವೀಕರಿಸಬೇಕು. ಆದ್ದರಿಂದ ನಾನು ಗೊಣಗುವುದಿಲ್ಲ. ಆದರೆ ಯಾವುದೇ ಒಂದು ಘಟ್ಟಕ್ಕೆ ಬರದೆ ಇದು ನಿರಂತರವಾಗಿ ಹೀಗೇ ಮುಂದುವರೆಯುವುದನ್ನು ನೋಡಿಕೊಂಡಿರಲು ನನಗೆ ಸಾಧ್ಯವಿಲ್ಲ. ನಿಮ್ಮ ಸರ್ಕಾರದೊಂದಿಗೆ ಅಷ್ಟೊಂದು ಸೌಹಾರ್ದಯುತವಾಗಿದ್ದ ನಮ್ಮ ಸಂಬಂಧಕ್ಕೆ ಈ ಗತಿ ಬಂದುದಕ್ಕಾಗಿ ವಿಷಾದಿಸುತ್ತೇನೆ. ಎಲ್ಲವೂ ತಾವಂದುಕೊಂಡಂತೆ ಇಲ್ಲ ಎಂಬುದು ಜನರಿಗೆ ಈಗಲಾದರೂ ಅರ್ಥವಾಗಬಹುದು. ನಿಮ್ಮ ಸ್ನೇಹಿತ ತುಂಬ ಸಹಾಯ ಮಾಡಿದ್ದಾರೆ ಎಂಬುದೇನೋ ನಿಜ. ಆದರೆ ಅವರು ಅಸಾಧ್ಯವಾದುದನ್ನು ಸರಿಪಡಿಸುವುದಕ್ಕೆ ಹೊರಟಿದ್ದಾರೆ." ಕೆಂಗಲ್‌ರ ಕ್ರಮಗಳು ಅವರನ್ನು ಎಷ್ಟು ಘಾಸಿಗೊಳಿಸಿದವೆಂದರೆ ಇದೆಲ್ಲದರಿಂದ ತಮ್ಮ ಸ್ವಾಸ್ಥ್ಯ ಕೆಡದಂತೆ ನೋಡಿಕೊಳ್ಳುವುದಕ್ಕಾಗೇ ಕಲೆ, ಸಂಸ್ಕೃತಿ, ಸಾಹಿತ್ಯ ವಿಚಾರಗಳಲ್ಲಿ ಅವರು ತಮ್ಮನ್ನು ಹೆಚ್ಚು ಹೆಚ್ಚಾಗಿ ತೊಡಗಿಸಿಕೊಂಡರು. ವನ್ಯಜೀವಿ ಸಂರಕ್ಷಣೆ, ಪ್ರಾಕೃತಿಕ ಅಧ್ಯಯನ, ಅಧ್ಯಾತ್ಮ ಹಾಗೂ ಸಂಗೀತ ಶಾಸ್ತ್ರಗಳಿಗೆ ಸಂಬಂಧಿಸಿದಂತೆ ಅನೇಕ ಕೃತಿಗಳನ್ನು ರಚಿಸಿದರು. ತಾವು ಬರೆಯುತ್ತಿರುವ ಕೃತಿಗಳ ವಿಷಯವಾಗಿ ರೆಡ್ಡಿಯವರೊಂದಿಗೆ ಚರ್ಚಿಸುತ್ತಿದ್ದರು. ಅಭಿಪ್ರಾಯಕ್ಕಾಗಿ ಹಸ್ತಪ್ರತಿ ರೂಪದಲ್ಲಿ ಅದನ್ನು ರೆಡ್ಡಿಯವರಿಗೆ ಹಾಗೂ ಇಂತಹ ವಿಷಯಗಳಲ್ಲಿ ಅಪಾರವಾದ ಆಸಕ್ತಿಹೊಂದಿದ್ದ ನೆಹರೂ ಅವರಿಗೆ ಕಳಿಸಿಕೊಡುತ್ತಿದ್ದರು. 'ನಾನು ಪಡೆದಿರುವ

ಅಲ್ಪಸ್ವಲ್ಪ ಜ್ಞಾನದಿಂದ ನನ್ನ ಸಹಜೀವಿಗಳಿಗೆ ಹಾಗೂ ಮಾನವತೆಗೆ ಪರೋಕ್ಷವಾಗಿಯಾದರೂ ಸೇವೆ ಮಾಡುವ ಅವಕಾಶ ಒದಗಿಸಿದ ದೇವರಿಗೆ ನನ್ನ ವಂದನೆಗಳು, ಇಂತಹ ಕೆಲಸಗಳೇ ನಾನು ಬದುಕಿನಲ್ಲಿ ಆಸಕ್ತಿ ಕಾಯ್ದುಕೊಳ್ಳುವಂತೆ ಮಾಡಿರುವ ಶಕ್ತಿಗಳು ಎಂದು ಅವರು ರೆಡ್ಡಿಯವರಿಗೆ ಬರೆದ ಒಂದು ಪತ್ರದಲ್ಲಿ ತಿಳಿಸಿದ್ದರು.

ವಿಧಾನ ಸೌಧ:

ಕರ್ನಾಟಕದ ಅತಿ ಹೆಮ್ಮೆಯ ಕಟ್ಟಡವಾದ ವಿಧಾನ ಸೌಧದ ನಿರ್ಮಾಣಕ್ಕೆ ರೆಡ್ಡಿಯವರೇ ನಾಂದಿ ಹಾಕಿದರು ಎಂಬುದು ಗಮನಾರ್ಹ. ರೆಡ್ಡಿಯವರು ಅಧಿಕಾರಕ್ಕೆ ಬಂದಾಗ ಸರ್ಕಾರದ ಕಛೇರಿಗಳು ಬೇರೆ ಬೆರೆ ಕಡೆ ಹರಡಿಹೋಗಿದ್ದರಿಂದ ಕಾರ್ಯನಿರ್ವಹಣೆಗೆ ಅನಾನುಕೂಲವಾಗುತ್ತಿತ್ತು. ಆದ್ದರಿಂದ ಕೇಂದ್ರೀಯ ಕಟ್ಟಡವೊಂದರ ಅವಶ್ಯಕತೆ ಕಂಡುಬಂದಿತು. ಕಬ್ಬನ್‌ಪಾರ್ಕ್‌ನಲ್ಲಿ ಕಟ್ಟಡ ನಿರ್ಮಾಣ ಮಾಡಲು ರೆಡ್ಡಿಯವರು ಯೋಚಿಸಿದರು. ವಿಧಾನ ಸೌಧದ ರೂಪುರೇಷೆ ಸಿದ್ಧವಾಯಿತು. ಅವರು ಯೋಜಿಸಿದ ಇಟ್ಟಿಗೆಯ ಕಟ್ಟಡದ ನೆಲವಿಸ್ತೀರ್ಣ 1,74,600 ಚದರ ಅಡಿಗಳಷ್ಟಿದ್ದು, ಕಟ್ಟಡಕ್ಕೆ 30 ಲಕ್ಷ ರೂ. ವೆಚ್ಚವಾಗಬಹುದು ಎಂದು ಅಂದಾಜುಮಾಡಲಾಗಿತ್ತು. 1951ರಲ್ಲಿ ಪ್ರಧಾನ ಮಂತ್ರಿ ನೆಹರೂ ವಿಧಾನ ಸೌಧಕ್ಕೆ ಅಡಿಗಲ್ಲು ಹಾಕಿದರು. ಆದರೆ ವೆಚ್ಚದ ಪ್ರಶ್ನೆ ಬಂದಾಗ ಅರ್ಥಮಂತ್ರಿ ಹೆಚ್.ಸಿ. ದಾಸಪ್ಪನವರೂ ಸೇರಿದಂತೆ ಅನೇಕ ಮಂತ್ರಿಗಳು ಇದು ಸರ್ಕಾರಕ್ಕೆ ಭಾರೀ ಹೊರೆಯಾಗುತ್ತದೆ ಎಂದು ಅಭಿಪ್ರಾಯಪಟ್ಟರು. ಈ ವೆಚ್ಚದಿಂದಾಗಿ ರಾಜ್ಯದ ಇತರ ಅಭಿವೃದ್ಧಿ ಕಾರ್ಯಗಳು ಕುಂಠಿತವಾಗಬಹುದು ಎಂದು ರೆಡ್ಡಿಯವರ ಸರ್ಕಾರ ಯೋಚಿಸಿತು. ಹೀಗಾಗಿ ಕಟ್ಟಡದ ನಿರ್ಮಾಣಕ್ಕೆ ಅವರು ಹೆಚ್ಚಿನ ಆದ್ಯತೆ ಕೊಡಲಿಲ್ಲ. ಕೆಲಸ ಶುರುವಾಗುತ್ತಿದ್ದ ಸ್ವಲ್ಪ ಕಾಲದಲ್ಲಿಯೇ ರೆಡ್ಡಿಯವರು ಅಧಿಕಾರ ಬಿಟ್ಟುಕೊಡಬೇಕಾಗಿ ಬಂತು. ಅಧಿಕಾರ ತೊರೆಯುವ ಮುನ್ನ ಅವರು ಕೆಂಗಲ್ ಅವರನ್ನು ಕಂಡು ಈ ಕಟ್ಟಡವನ್ನು ನೀವೇ ಪೂರ್ಣಗೊಳಿಸಬೇಕು ಎಂದರಂತೆ. ಈ ಕಾರ್ಯಭಾರವನ್ನು ಸಂತೋಷದಿಂದ ಒಪ್ಪಿಕೊಂಡ ಕೆಂಗಲ್ ಅತ್ಯಂತ ಯಶಸ್ವಿಯಾಗಿ ಕೆಲಸ ಪೂರ್ಣಗೊಳಿಸಿದರು. ಕೆ.ಸಿ. ರೆಡ್ಡಿಯವರ ಶಿಫಾರಸ್ಸಿನ ಮೇರೆಗೆ ಕೆಂಗಲ್‌ರವರು, ಶ್ರೀ ಮುನಿಯಪ್ಪ ಅವರನ್ನೇ ವಿಧಾನ ಸೌಧ ನಿರ್ಮಾಣದ ವಿಶೇಷ ಇಂಜಿನಿಯರ್ ಆಗಿ ನೇಮಿಸಿದರು. ಇಂದು ವಿಧಾನ ಸೌಧವು ಕೆ.ಸಿ. ರೆಡ್ಡಿ ಮತ್ತು ಕೆಂಗಲ್ ಹನುಮಂತಯ್ಯ-ಈ ಇಬ್ಬರು ಮುಖ್ಯ ಮಂತ್ರಿಗಳ ಸಾರ್ಥಕ ಹಾಗೂ ಕನಸುಗಳ ಸ್ಮಾರಕವಾಗಿದೆ.

ಕರ್ನಾಟಕದ ಏಕೀಕರಣ:

ರೆಡ್ಡಿಯವರ ಮುಖ್ಯಮಂತ್ರಿತ್ವದ ಕಾಲದಲ್ಲಿ ಎದುರಾದ ಒಂದು ಜ್ವಲಂತ ಸಮಸ್ಯೆ ಕರ್ನಾಟಕದ ಏಕೀಕರಣವನ್ನು ಕುರಿತದ್ದು. ಕರ್ನಾಟಕದ ಏಕೀಕರಣದ ಬಗ್ಗೆ ಅನೇಕರಿಗೆ ಒಲವಿರಲಿಲ್ಲ. ಉತ್ತರ ಕರ್ನಾಟಕದ ಭಾಗಗಳು ಹಿಂದುಳಿದಿವೆ, ಏಕೀಕರಣವಾದರೆ ಪ್ರಗತಿಶೀಲ ಮೈಸೂರು ಭಾಗದ ಅಭಿವೃದ್ಧಿ ಕಾರ್ಯಗಳು ಕುಂಠಿತವಾಗುತ್ತವೆ ತಮ್ಮ ಪ್ರದೇಶದ ಆರ್ಥಿಕ ಅಭಿವೃದ್ಧಿಗೆ ಅಡಚಣೆಯಾಗುತ್ತದೆ ಎಂದು ಕೆಲವರು ಈ ಬಗ್ಗೆ ವಿರೋಧ ತಾಳಿದರೆ ಇನ್ನೂ ಕೆಲವರು ತಮ್ಮ ಜಾತೀಯ ಪ್ರಾಬಲ್ಯಕ್ಕೆ ಧಕ್ಕೆಯಾಗುತ್ತದೆ ಎಂಬ ಕಾರಣಕ್ಕಾಗಿ ಏಕೀಕರಣವನ್ನು ವಿರೋಧಿಸುತ್ತಿದ್ದರು. ರೆಡ್ಡಿಯವರನ್ನೂ ಕೂಡ ಮೈಸೂರುವಾದಿ ಎಂದು ಆರೋಪಿಸುವ ಪ್ರಯತ್ನಗಳು ನಡೆದಿದ್ದವು. ಏಕೀಕರಣದ ವಿಷಯದಲ್ಲಿ ರೆಡ್ಡಿಯವರ ನಿಲುವೇನು ಎಂಬುದನ್ನು 1948ರ ಅಕ್ಟೋಬರ್

11 ರಂದು ಉದಕಮಂಡಲದಲ್ಲಿ ಹಿಂದೂ ಪತ್ರಿಕೆಯ ಪ್ರತಿನಿಧಿಗೆ ನೀಡಿದ ಹೇಳಿಕೆಯಿಂದ ಸ್ಪಷ್ಟಪಡಿಸಿಕೊಳ್ಳಬಹುದು. ಈ ಹೇಳಿಕೆ 'ಭಾಷಾವಾರು ಪ್ರಾಂತಗಳೂ, ಕರ್ನಾಟಕವೂ -ಕೆ.ಸಿ.ರೆಡ್ಡಿಯವರ ಅಭಿಪ್ರಾಯವೂ' ಎಂಬ ಶೀರ್ಷಿಕೆಯಲ್ಲಿ 'ಕನ್ನಡ ನುಡಿ' ಯ 1948ರ ಅಕ್ಟೋಬರ್ ಸಂಚಿಕೆಯಲ್ಲಿ ಪ್ರಕಟವಾಯಿತು. ಅದು ಹೀಗಿದೆ- ಸೆಪ್ಟೆಂಬರ್ 11ರಂದು ಕೆ.ಸಿ. ರೆಡ್ಡಿಯವರು ಉದಕಮಂಡಲದಲ್ಲಿ ಹಿಂದೂ ಪತ್ರಿಕೆಯ ಪ್ರತಿನಿಧಿಗೆ ಕೆಳಗಿನಂತೆ ಹೇಳಿದರೆಂದು ಪ್ರಸಿದ್ಧವಾಗಿದೆ.

"ಮೈಸೂರು ಸರ್ಕಾರದ ಇಲ್ಲವೆ ಮೈಸೂರು ಕಾಂಗ್ರೆಸ್ಸಿಗರ ಪರವಾಗಿ ನಾನು ಏನನ್ನೂ ಹೇಳಲಾರೆನಾದರೂ ನನ್ನ ವ್ಯಕ್ತಿಗತ ಅಭಿಪ್ರಾಯವನ್ನು ಮಾತ್ರ ಕೊಡಬಲ್ಲೆ. ಮೈಸೂರು ಸಂಸ್ಥಾನದ ರಾಜ್ಯಾಂಗ ರಚನಾ ಸಭೆಯು ಈಗಾಗಲೇ ಸ್ಥಿರೀಕರಿಸಿರುವ ಗೊತ್ತುವಳಿಯ ಮೂಲಕ ಮೈಸೂರು ಸಂಸ್ಥಾನ, ಉತ್ತರ ದಕ್ಷಿಣ ಕನ್ನಡ ಜಿಲ್ಲೆಗಳು, ನೀಲಗಿರಿ ಜಿಲ್ಲೆ ಹಾಗೂ ಉಳಿದ ಕನ್ನಡ ಪ್ರಧಾನ ಪ್ರದೇಶಗಳು ಕೂಡಿ ಒಂದು ಪ್ರಾಂತ್ಯವಾಗಬೇಕೆಂದು ಇದ್ದ ಮೈಸೂರು ಜನತೆಯ ಇಚ್ಛೆಯನ್ನು ಪುನಃ ದೃಢೀಕರಿಸಿದೆ. ಕನ್ನಡಿಗರೆಲ್ಲರೂ ತಮ್ಮದೊಂದು ಪ್ರಾಂತವನ್ನು ಬಯಸುತ್ತಿರುವವರೆಗೆ ಅದನ್ನು ಮೈಸೂರು ಪ್ರಾಂತವೆಂದಾಗಲೀ, ಕರ್ನಾಟಕ ಪ್ರಾಂತವೆಂದಾಗಲೀ ಕರೆಯುವ ವಿಷಯ ಮಹತ್ವದ್ದಲ್ಲ. ಭಾಷಾನುಗುಣ ಪ್ರಾಂತ ನಿರ್ಮಾಣವು ಜನತೆಯ ತಾಳ್ಮೆಯ ಎಲ್ಲೆ ಮೀರುವವರೆಗೆ ವಿಳಂಬವೂ ಆಗಕೂಡದು ಕೊನೆಗೆ ಬಿಡಿಸಲಾಗದಂಥ ತೊಡಕುಗಳಲ್ಲಿ ಬೀಳುವಷ್ಟು ತ್ವರೆಯೂ ಒಳಿತಲ್ಲ.

ಭಾಷೆಯೇ ಈ ಹೊಸ ಪ್ರಾಂತಗಳ ನಿರ್ಮಾಣದ ತಳಹದಿಯಾದುದರಿಂದ ಕನ್ನಡ ಮಾತಾಡುವವರೇ ಬಹುಸಂಖ್ಯಾತರಾಗಿದ್ದ ನೀಲಗಿರಿಯನ್ನು ತಮಿಳುನಾಡು ಪ್ರಾಂತಕ್ಕೆ ಕೂಡಿಸಬೇಕೆಂದು ತಮಿಳುನಾಡು ಪ್ರಾಂತಿಕ ಕಾಂಗ್ರೆಸ್ ಸಮಿತಿಯವರು ಕೇಳಿದುದು ನಿರಾಧಾರ. ಅದಾಗ್ಯೂ ಇದನ್ನು ಪರಿಗಣಿಸದೆ ಆ ಜಿಲ್ಲೆಯನ್ನು ತಮಿಳುನಾಡು ಪ್ರಾಂತಕ್ಕೆ ಸೇರಿಸಿದರೆ ಈ ಪ್ರಾಂತ ನಿರ್ಮಾಣಗಳ ತತ್ವದ ಉಲ್ಲಂಘನೆಯೇ ಆಗುವುದು". ಏಕೀಕರಣದ ಕನಸು ನನಸಾಗುವ ಮೊದಲೇ ರೆಡ್ಡಿಯವರ ಮುಖ್ಯ ಮಂತ್ರಿ ಪದವಿ ಕೊನೆಗೊಂಡು ಕೆಂಗಲ್ ಹನುಮಂತಯ್ಯ ಅಧಿಕಾರಕ್ಕೆ ಬಂದರು. 1956ರಲ್ಲಿ ಕರ್ನಾಟಕ ಏಕೀಕರಣದ ಕನಸು ನನಸಾಯಿತು.

**ಮೈಸೂರು ರಾಜ್ಯಾಂಗ ರಚನೆ:**

ಮೈಸೂರು ರಾಜ್ಯಾಂಗ ರಚನಾ ಸಮಿತಿಯ ವಿಷಯದಲ್ಲಿ ಕೆ.ಸಿ. ರೆಡ್ಡಿಯವರು ವಹಿಸಿದ ಪಾತ್ರವೂ ಉಲ್ಲೇಖಾರ್ಹವಾಗಿದೆ. ಮೈಸೂರು ಸಂಸ್ಥಾನಕ್ಕೆ ಒಂದು ಹೊಸ ರಾಜ್ಯಾಂಗವನ್ನು ರಚಿಸುವ ಸಲುವಾಗಿ ಸಾರ್ವಭೌಮಾಧಿಕಾರವುಳ್ಳ ರಾಜ್ಯಾಂಗ ರಚನಾ ಸಭೆಯನ್ನು ರಚಿಸಬೇಕಾಯಿತು. ಇದಕ್ಕಾಗಿ ರಚಿತವಾದ ಸಭೆಯ ಹೆಸರು ಮೈಸೂರು ಕಾನ್ಸ್‌ಟಿಟುಯೆಂಟ್ ಅಸೆಂಬ್ಲಿ. ಈ ಸಮಿತಿಗಾಗಿ ಪ್ರತ್ಯೇಕವಾದ ಚುನಾವಣೆಗಳನ್ನು ನಡೆಸಬೇಕಾಯಿತು. ಸಂವಿಧಾನ ರೂಪಿಸುವುದಷ್ಟೇ ಈ ಸಮಿತಿಗೆ ಆಯ್ಕೆಯಾದವರ ಕೆಲಸ. ಆ ಸಂದರ್ಭದಲ್ಲಿ ಕಾಂಗ್ರೆಸ್ ಪಕ್ಷದ ಅಭ್ಯರ್ಥಿಗಳ ವಿರುದ್ಧ ನಿಂತು ಗೆಲ್ಲುವುದು ಬೇರೆ ಯಾರಿಗೂ ಅತಿ ಪ್ರಯಾಸದ ಕೆಲಸವೇ ಆಗಿತ್ತು. ಕಾಂಗ್ರೆಸ್ ಪಕ್ಷವೇ ಕೆಲವು ಸ್ಥಾನಗಳನ್ನು ಇತರರಿಗೆ ಬಿಟ್ಟುಕೊಟ್ಟಿತು. ರೆಡ್ಡಿಯವರು ಭಾರತದ ರಾಜ್ಯಾಂಗ ರಚನಾ ಸಭೆಗೆ ಮೈಸೂರು ಸಂಸ್ಥಾನದ ಪ್ರಜಾಪ್ರತಿನಿಧಿ ಸಭೆಯಿಂದ ಆಯ್ಕೆಯಾಗಿ

ಅಲ್ಲಿ ಕಾರ್ಯನಿರ್ವಹಿಸಿ ಸಾಕಷ್ಟು ಅನುಭವ ಪಡೆದಿದ್ದರು. ಕೇಂದ್ರ ಸಂವಿಧಾನ ಸಭೆಯಲ್ಲಿ ಡಾ. ಅಂಬೇಡ್ಕರ್, ಗೋಪಾಲಸ್ವಾಮಿ ಅಯ್ಯಂಗಾರ್ ಮೊದಲಾದ ಮೇಧಾವಿಗಳೂ ಸಮರ್ಥರೂ ಇದ್ದರು. ಮೈಸೂರು ರಾಜ್ಯಾಂಗ ಸಭೆಯೂ ಅಷ್ಟೇ ಘನತೆವೆತ್ತ ಸಮಿತಿಯಾಗಿರಬೇಕು ಎಂಬುದು ರೆಡ್ಡಿಯವರ ಆಶಯವಾಗಿತ್ತು. ಆದರೆ ಅರ್ಹತೆ ಮತ್ತು ಯೋಗ್ಯತೆಯುಳ್ಳ ಎಲ್ಲ ಜನರೂ ಪಕ್ಷದ ಮಿತಿಯೊಳಗೇ ಸಿಗುವುದು ಕಷ್ಟವಾಗಿತ್ತು. ಅರ್ಹರಾದವರು ಮಾತ್ರವೇ ಸಮಿತಿಯಲ್ಲಿರಬೇಕಾದರೆ ಅಂಥವರು ಕಾಂಗ್ರೆಸ್ಸಿಗರಾಗದಿದ್ದರೂ ಪರವಾಗಿಲ್ಲ ಎಂಬ ನಿಲುವು ತಾಳಿದ ರೆಡ್ಡಿಯವರು ಅಂತಹ ಸೂಕ್ತ ವ್ಯಕ್ತಿಗಳಿಗಾಗಿ ಶೋಧ ನಡೆಸಿದರು. ಸ್ವತಃ ಸಂವಿಧಾನ ಕರಡು ರಚನಾ ಸಮಿತಿಯ ಅಧ್ಯಕ್ಷರಾಗಿದ್ದ ಡಾ. ಅಂಬೇಡ್ಕರ್ ಅವರೇ ಕಾಂಗ್ರೆಸ್ಸಿಗರಲ್ಲ ಎಂಬುದು ರೆಡ್ಡಿಯವರ ಮನಸ್ಸಿನಲ್ಲಿತ್ತು. ಈ ಹಿನ್ನೆಲೆಯಲ್ಲಿ ಡಿವಿಜಿ ಯವರಂತಹ ಮಹಾಮೇಧಾವಿಯನ್ನು ಅವರು ಸಮಿತಿಗೆ ತೆಗೆದುಕೊಳ್ಳಲು ನಿರ್ಧರಿಸಿದರು. ಡಿವಿಜಿಯವರು ತಾವು ಸಲಹೆ ಕೊಡುತ್ತಾ ಹೊರಗೆ ಇರುವುದಾಗಿ ಹೇಳಿದರೂ ಪಟ್ಟು ಬಿಡದೆ ರೆಡ್ಡಿಯವರು ಅವರ ಮನ ಒಲಿಸಿದರು. ಆದರೆ ಅನಂತರ ಸಂವಿಧಾನ ಸಭೆಯ ಹೆಸರು ಯಾವ ರೀತಿ ಇರಬೇಕು ಎಂಬ ವಿಷಯದಲ್ಲಿ ಸಮಿತಿಯ ಇತರರೊಂದಿಗೆ ಉಂಟಾದ ಭಿನ್ನಾಭಿಪ್ರಾಯದಿಂದ ಡಿವಿಜಿ ಯವರು ತಮ್ಮ ಸದಸ್ಯತ್ವಕ್ಕೆ ರಾಜಿನಾಮೆ ನೀಡಿದರು. ಇದರಿಂದ ಎಲ್ಲರಿಗೂ ವಿಷಾದವಾಯಿತು. ಹೆಚ್ಚಿನ ವಿಷಾದವಾಗಿದ್ದು ರೆಡ್ಡಿಯವರಿಗೆ. ಈ ಸಂಬಂಧವಾಗಿ ಅವರು ಡಿವಿಜಿ ಯವರಿಗೆ ಪತ್ರ ಬರೆದು (1950 ಫೆಬ್ರವರಿ 7) ರಾಜ್ಯಾಂಗ ರಚನಾ ಸಭೆ ಹಾಗೂ ಹೊಸ ಶಾಸಕ ಸಭೆಗೆ ನೀವು ರಾಜಿನಾಮೆ ನೀಡಿದ್ದು ತುಂಬ ದುಃಖಕರ. ಮೈಸೂರಿಗೆ ಒಂದು ಸೂಕ್ತಸಂವಿಧಾನವನ್ನು ರೂಪಿಸಲು ನಿಮ್ಮ ಅತ್ಯಮೂಲ್ಯ ಸೇವೆ ವಿಪುಲ ಅನುಭವವನ್ನು ಪಡೆದುಕೊಳ್ಳಬೇಕು ಎಂಬ ದೃಷ್ಟಿಯಿಂದ ನಿಮ್ಮನ್ನು ಈ ಸಭೆಯಲ್ಲಿ ಉಳಿಸಿಕೊಳ್ಳಬೇಕೆಂದಿದ್ದೆ. ಆದರೆ ಮೈಸೂರಿಗಿಂತ ಹೆಚ್ಚಾಗಿ ದೇಶದ ಉಳಿದೆಡೆಯ ರಾಜಕೀಯ ಘಟನೆಗಳ ಒತ್ತಡಗಳು ಇಡೀ ದೃಶ್ಯವನ್ನು ಬದಲಿಸಿದವು. ನಾವೊಂದು ಎಣಿಸಿದರೆ ಆಗಿದ್ದು ಇನ್ನೊಂದು ಆದರೂ ಸಂವಿಧಾನ ಪಡೆದುಕೊಂಡ ಒಟ್ಟಾರೆ ರೂಪದ ಬಗ್ಗೆ ನನಗೆ ಸಮಾಧಾನವಿದೆ. ಸಂವಿಧಾನ ಕಾರ್ಯರೂಪಕ್ಕೆ ಬಂದಾಗಷ್ಟೆ ಅದರ ಸರಿಯಾದ ಮೌಲ್ಯ ನಿರ್ಣಯ ಸಾಧ್ಯವಾದೀತು. ಇದೊಂದು ಕಷ್ಟಕಾಲ. ಬರಲಿರುವ ಕಾಲ ಇನ್ನೂ ಹೆಚ್ಚು ಸಮಸ್ಯೆಗಳಿಂದ ಕೂಡಿರಬಹುದು. Let me resist the temptation of a discourse in matters in which you are an authority".

ರಾಜ್ಯಾಂಗ ರಚನಾ ಸಭೆ ಕೇಂದ್ರಕ್ಕೆ ವರದಿ ಸಲ್ಲಿಸುವ ಬಗ್ಗೆ ಇನ್ನೂ ಚರ್ಚೆಗಳು ನಡೆಯುತ್ತಿರುವಾಗಲೇ ದೇಶೀಯ ರಾಜರುಗಳು ಭಾರತದ ಒಕ್ಕೂಟದಲ್ಲಿ ವಿಲೀನಗೊಳ್ಳುವ ಕರಾರಿಗೆ ಸಹಿ ಮಾಡಿದ್ದರಿಂದ ಕೇಂದ್ರ ಸರ್ಕಾರವು ಅಖಿಲ ಭಾರತದ ಎಲ್ಲ ರಾಜ್ಯಗಳಿಗೂ ಏಕರೂಪದ ರಾಜ್ಯಂಗವನ್ನು ರಚಿಸಲು ನಿರ್ಧರಿಸಿತು. ಆದ್ದರಿಂದ ರಾಜ್ಯಗಳು ರಚಿಸಿದ್ದ ರಾಜ್ಯಾಂಗ ರಚನಾ ಸಭೆಯನ್ನು ಕೊನೆಗಾಣಿಸಬೇಕೆಂದು ತಿಳಿಸಲಾಯಿತು. ಅದರಂತೆ ಮೈಸೂರು ರಾಜ್ಯಾಂಗ ವ್ಯವಸ್ಥೆ ತನ್ನ ಕೆಲಸ ನಿಲ್ಲಿಸಿತು. ಮೈಸೂರು ರಾಜ್ಯಾಂಗ ರೂಪಿಸಲು ಚುನಾಯಿತವಾದ ಸಭೆಯ ಕಾರ್ಯಕಲಾಪಗಳು ಮಧ್ಯದಲ್ಲೆ ನಿಂತುಹೋದ ಕಾರಣ ಆರು ತಿಂಗಳ ಮಟ್ಟಿಗೆ ಚುನಾಯಿಸಲ್ಪಟ್ಟ ಸರ್ಕಾರವು ಕೇಂದ್ರ ಸರ್ಕಾರದವರು ರಾಜ್ಯಾಂಗ ರಚನೆಯನ್ನು ಪೂರೈಸುವವರೆಗೆ ಕಾಯಬೇಕಾಯಿತು ಹೀಗಾಗಿ ಕೆ.ಸಿ ರೆಡ್ಡಿಯವರ ಸರ್ಕಾರ ಕೊನೆಯವರೆಗೂ ಮುಂದುವರೆದುಕೊಂಡು ಬಂದಿತು.

ಕೆಲವರು ಹೊಸ ಚುನಾವಣೆಗಳು ನಡೆದು ಹೊಸ ಸರ್ಕಾರ ನೇಮಿಸಬೇಕೆಂದು ಒತ್ತಾಯಿಸಿದರು. ಅಧಿಕಾರಕ್ಕಾಗಿ ಹಾತೊರೆಯುತ್ತಿದ್ದ ಕೆಲವರಿಗೆ ರೆಡ್ಡಿಯವರ ಸರ್ಕಾರದ ವಿರುದ್ಧ ಆರೋಪ ಮಾಡಲು ಇದೂ ಒಂದು ತಾಂತ್ರಿಕ ಸಮರ್ಥನೆಯಾಗಿ ದೊರೆಯಿತು.ಈ ಗೊಂದಲದಲ್ಲಿಯೇ ರೆಡ್ಡಿಯವರು ಐದು ವರ್ಷ ಪೂರೈಸಿದರು. 1952ರಲ್ಲಿ ಸಾರ್ವತ್ರಿಕ ಚುನಾವಣೆಗಳು ನಡೆದು ಕೆಂಗಲ್ ಹನುಮಂತಯ್ಯನವರು ಅಧಿಕಾರಕ್ಕೆ ಬಂದರು.

**ಪದವಿ ತ್ಯಾಗ:**

ರೆಡ್ಡಿಯವರ ಮುಖ್ಯಮಂತ್ರಿ ಪದವಿ ಕೊನೆಗೊಳ್ಳುವುದಕ್ಕೆ ಹನುಮಂತಯ್ಯನವರು ಮುಖ್ಯ ಕಾರಣರಾದರು ಎನ್ನಬಹುದು. ಸ್ವಾತಂತ್ರ್ಯ ಬಂದನಂತರ ಮುಖ್ಯಮಂತ್ರಿಗಳಾಗುವ ಸಮಾನ ಅವಕಾಶ, ಅರ್ಹತೆ ಹೊಂದಿದ್ದ ಅನೇಕ ಧುರೀಣರು ಇದ್ದರು. ಆದರೂ ಮುಖ್ಯಮಂತ್ರಿಯಾಗಲೇಬೇಕೆಂಬ ಅಪಾರ ಇಚ್ಛೆ ಇದ್ದದ್ದು ಹನುಮಂತಯ್ಯನವರಿಗೆ ಮಾತ್ರ. ಆದರೆ ಅದು ತಮ್ಮ ಕೈತಪ್ಪಿ ರೆಡ್ಡಿಯವರ ಪಾಲಾಗಿದ್ದರಿಂದ ಹನುಮಂತಯ್ಯನವರಿಗೆ ಆಶಾಭಂಗವಾಗಿದ್ದು ಸಹಜ. ರೆಡ್ಡಿಯವರ ಕಾರ್ಯನಿರ್ವಹಣೆಯಲ್ಲಿ ಅವರು ಏನಾದರೂ ತಪ್ಪು ಹುಡುಕುತ್ತಲೇ ಇದ್ದರು. ರೆಡ್ಡಿಯವರ ಸರ್ಕಾರ ಬಡವರ ಪರವಾಗಿಲ್ಲ ಎಂಬ ಆರೋಪವನ್ನು ಅವರು ಪದೇ ಪದೇ ಮಾಡುತ್ತಿದ್ದರು. ಸಣ್ಣಪುಟ್ಟ ವಿಷಯಗಳಿಗೆಲ್ಲ ಅವಿಶ್ವಾಸ ನಿರ್ಣಯ ಮಂಡಿಸುತ್ತಿದ್ದರು. ಮೈಸೂರು ರಾಜ್ಯದಲ್ಲಿ ಸಾಹುಕಾರ ಚೆನ್ನಯ್ಯನವರ ಗುಂಪು, ಕೆಂಗಲ್ ಹನುಮಂತಯ್ಯನವರ ಗುಂಪು ಎಂಬ ಎರಡು ಬಣಗಳೇರ್ಪಟ್ಟಿದ್ದವು. ಹನುಮಂತಯ್ಯನವರಿಂದ ಪ್ರೇರಿತರಾದ ಗುಂಪಿನವರು ತಾಂತ್ರಿಕ ಕಾರಣಗಳಿಂದ ರೆಡ್ಡಿಯವರು ಅಧಿಕಾರದಲ್ಲಿರುವುದು ಸಕ್ರಮವಾಗಿಲ್ಲ ಎಂಬ ಗಲಾಟೆಯನ್ನೂ ಎಬ್ಬಿಸಿದರು. ರಾಜಕೀಯ ಬಿಕ್ಕಟ್ಟಿನ ಪರಿಹಾರಕ್ಕಾಗಿ ನೆಹರೂ ಅವರು ಲಾಲ್‌ಬಹದ್ದೂರ್ ಶಾಸ್ತ್ರಿಯವರನ್ನು ಕಳಿಸಿದರು. ಶಾಸ್ತ್ರಿಯವರ ತೀರ್ಮಾನದಂತೆ ಎಲ್ಲರ ಸಮ್ಮತಿಯ ಮೇರೆಗೆ 30-3-1952ರಂದು ಕೆಂಗಲ್ ಹನುಮಂತಯ್ಯನವರು ಮುಖ್ಯಮಂತ್ರಿಯಾಗಿ ನೇಮಕವಾದರು.

ರೆಡ್ಡಿಯವರು ಯಾವುದೇ ತಳಮಳವಿಲ್ಲದೆ ಅಧಿಕಾರ ತ್ಯಾಗ ಮಾಡಿದರು. ಅಧಿಕಾರ ತ್ಯಾಗದ ನಂತರವೂ ಅವರು ಹನುಮಂತಯ್ಯನವರೊಂದಿಗೆ ಒಳ್ಳೆಯ ಸ್ನೇಹ ಬೆಳೆಸಿಕೊಂಡು ಬಂದರು.

ರೆಡ್ಡಿಯವರು ಅತ್ಯಂತ ಮೆದುಸ್ವಭಾವದ ಸರಳ ವ್ಯಕ್ತಿಯಾಗಿದ್ದರು. ಅಧಿಕಾರದ ಸ್ಥಾನಮಾನ, ದರ್ಪ, ಜೋರುಗಳಿಂದ ಅವರು ಸದಾ ದೂರವೇ ಉಳಿದರು. ಈ ಪದವಿ ಅಧಿಕಾರಗಳೆಲ್ಲ ಇಂದಿದ್ದು ನಾಳೆ ಹೋಗುವಂಥವು. ನಾವು ಮೇಲೆ ಮೇಲೆ ಹೋದಷ್ಟೂ ಹೆಚ್ಚುಹೆಚ್ಚು ಸರಳತೆ ಬೆಳೆಸಿಕೊಳ್ಳಬೇಕು ಎಂಬುದು ಅವರ ನಿಲುವಾಗಿತ್ತು. ರೆಡ್ಡಿಯವರ ತಿಳಿಹಾಸ್ಯ ಪ್ರಜ್ಞೆ, ಹೃದಯ ತುಂಬಿ ನಗುವ ರೀತಿ ಎಲ್ಲರನ್ನೂ ಆಕರ್ಷಿಸುತ್ತಿದ್ದವು. ಅವರ ಆಲೋಚನೆಗಳು ಯಾವಾಗಲೂ ರಾಷ್ಟ್ರದ ನೆಲೆಯಲ್ಲಿರುತ್ತಿದ್ದವು. ಸ್ವಂತದ ಅಧಿಕಾರ, ಸ್ವಂತ ರಾಜ್ಯ, ಸ್ವಂತ ಪಕ್ಷ ಎಂಬ ಸಂಕುಚಿತತೆ ಇರಲಿಲ್ಲ. ಇದನ್ನು ಅರ್ಥ ಮಾಡಿಕೊಂಡವರು ಕಡಿಮೆ. ಅಂಥವರು ನಮ್ಮ ರಾಜ್ಯಕ್ಕಾಗಿ, ನಮ್ಮ ಊರಿಗಾಗಿ, ನಮ್ಮ ಜನಕ್ಕಾಗಿ ರೆಡ್ಡಿಯವರು ಏನೂ ಮಾಡಲಿಲ್ಲ ಎಂದು ಅಪಾದಿಸುತ್ತಿದ್ದರು, ದೂರುತ್ತಿದ್ದರು. ರೆಡ್ಡಿಯವರು ಅಧಿಕಾರದಲ್ಲಿದ್ದಾಗ ಅವರ ಸ್ವಂತ ಹಳ್ಳಿ

ಕ್ಯಾಸಂಬಳ್ಳಿಗೆ ರಸ್ತೆ ನಿರ್ಮಾಣವಾದ ವಿಷಯದಲ್ಲಿ ವಿರೋಧಿಗಳ ಗುಂಪು ಬಹುದೊಡ್ಡ ಅಪಾದನೆ ಮಾಡಿತು. ಆದರೆ ವಾಸ್ತವವಾಗಿ ಪ್ರಧಾನ ಮಂತ್ರಿ ನೆಹರೂ ಅವರು ಕೆಜಿಎಫ್‌ಗೆ ಭೇಟಿ ನೀಡಿ ಅನಂತರ ಕ್ಯಾಸಂಬಳ್ಳಿಯ ರೆಡ್ಡಿಯವರ ಮನೆಗೂ ಭೇಟಿ ನೀಡಲಿಚ್ಛಿಸಿದ್ದರಿಂದ ಜನರೇ ನೆಹರೂ ಅವರ ಮೇಲಿನ ಅಭಿಮಾನದಿಂದ ಈ ರಸ್ತೆ ನಿರ್ಮಾಣವಾಗುವಂತೆ ನೋಡಿಕೊಂಡಿದ್ದರು. ರಾಜ್ಯಗಳ ಪುನರ್ವಿಂಗಡಣೆಯ ಸಮಯದಲ್ಲಿ ಕೋಲಾರವನ್ನು ಆಂಧ್ರ ಪ್ರದೇಶಕ್ಕೆ ಸೇರಿಸಲು ಪ್ರಯತ್ನಿಸಬಾರದೇಕೆ, ನೀವೆಲ್ಲ ರಾಜಕೀಯ ಪಟುಗಳು ಕೋಲಾರ ಆಂಧ್ರ ಗಡಿ ಪ್ರದೇಶದವರೇ ಇದ್ದೀರಲ್ಲ ಎಂದು ಕೆಲವರು ರೆಡ್ಡಿಯವರನ್ನು ಕೇಳುತ್ತಿದ್ದರು. ಆಗ ರೆಡ್ಡಿಯವರು ನಾವು ಇಲ್ಲಿ ಹಾಯಾಗಿದ್ದೇವೆ, ದಯವಿಟ್ಟು ನಮ್ಮನಮ್ಮಲ್ಲಿ ವಿಷಬೀಜ ಬಿತ್ತಬೇಡಿ ಎಂದು ಹೇಳುತ್ತಿದ್ದರು.

ರೆಡ್ಡಿಯವರು ಮುಖ್ಯಮಂತ್ರಿಯಾಗುವುದಕ್ಕೂ ಮೊದಲಿನಿಂದಲೇ ಅವರಿಗೆ ಕಿವಿನೋವಿನ ತೀವ್ರ ಸಮಸ್ಯೆ ಇತ್ತು. ಸ್ವಾತಂತ್ರ್ಯ ಹೋರಾಟ ಕಾಲದಲ್ಲಿ ಪೋಲಿಸನೊಬ್ಬ ಅವರ ಎಡಕೆನ್ನೆಗೆ ಜೋರಾಗಿ ಹೊಡೆದಿದ್ದರ ಪರಿಣಾಮವಾಗಿ ಕಿವಿಯ ತಮಟೆ ಒಡೆದು ತೀವ್ರ ತೊಂದರೆ ಅನುಭವಿಸಬೇಕಾಯಿತು. ಯಾವಾಗೆಂದರೆ ಆಗ ಕಿವಿನೋವು ಕಾಣಿಸಿಕೊಂಡು ಅವರು ದಿನಗಟ್ಟಲೆ ಹಾಸಿಗೆ ಹಿಡಿಯಬೇಕಾಗಿತ್ತು. ಇದರಿಂದ ಕಾರ್ಯಕಲಾಪಗಳಿಗೆ ಅಡ್ಡಿಯಾಗುತ್ತಿತ್ತು. ರಾಜಕೀಯ ಸಮಸ್ಯೆ ಎದುರಾದಾಗಲೆಲ್ಲ ರೆಡ್ಡಿಯವರು ಕಿವಿ ನೋವಿನ ನೆಪವೊಡ್ಡಿ ಸೋಗು ಹಾಕುತ್ತಾರೆ ಎಂಬ ವಿರೋಧ ಪಕ್ಷದವರ ಟೀಕೆಗೂ ರೆಡ್ಡಿಯವರು ಗುರಿಯಾದರು.

ಇದೇನೇ ಇದ್ದರೂ ರೆಡ್ಡಿಯವರು ಎಂದೂ ಸ್ವಾರ್ಥಪರವಾಗಿ ನಡೆದುಕೊಳ್ಳಲಿಲ್ಲ. ನಾಡಿನ ಹಿತಚಿಂತನೆ ಅವರ ಪ್ರಥಮ ಆದ್ಯತೆಯಾಗಿತ್ತು. ಅವರು ಎಲ್ಲರಿಗೂ ಸಹಾಯ ಮಾಡುತ್ತಿದ್ದರು. ಆದರೆ ಅಪಾತ್ರರಿಗೆ ಸಹಾಯ ಮಾಡುವಂಥ ಕೆಲಸವನ್ನು ಅವರು ಮಾಡಲಿಲ್ಲ. ಇಂದು ನಮ್ಮ ರಾಜ್ಯದಲ್ಲಿರುವ ಅನೇಕ ಸಂಘ ಸಂಸ್ಥೆಗಳು ಹಾಗೂ ಅಭಿವೃದ್ಧಿ ಕಾರ್ಯಗಳಿಗೆ ರೆಡ್ಡಿಯವರು ತಮ್ಮದೇ ಆದ ಕೊಡುಗೆ ಸಲ್ಲಿಸಿದ್ದಾರೆ.

**ಕೇಂದ್ರ ಸಚಿವರಾಗಿ:**

ರೆಡ್ಡಿಯವರು ಮುಖ್ಯಮಂತ್ರಿ ಪದವಿ ತ್ಯಜಿಸಿದ ಆರೇಳು ದಿನಗಳಲ್ಲಿಯೇ ಸಾಧ್ಯವಾದಷ್ಟು ಬೇಗ ನೀವು ದೆಹಲಿಗೆ ಬರಬೇಕು ಎಂದು ಸ್ವತಃ ನೆಹರೂ ಅವರಿಂದ ಫೋನ್ ಕರೆ ಬಂದಿತು. ನೆಹರೂ ಅವರಿಂದ ಇಂತಹ ಕರೆಗಾಗಿ ದೇಶದಾದ್ಯಂತ ಮಹತ್ವಾಕಾಂಕ್ಷಿಗಳು ಫೋನಿಗೆ ಕಿವಿಹಚ್ಚಿ ಕೂರುತ್ತಿದ್ದ ಕಾಲ ಅದು. ಆದರೆ ಇಂತಹ ಯಾವ ನಿರೀಕ್ಷೆಯೂ ಇಲ್ಲದ ರೆಡ್ಡಿಯವರಿಗೆ ಅಯಾಚಿತವಾಗಿಯೇ ಅವಕಾಶ ದೊರತಿತ್ತು. ನೆಹರೂ ಅವರು ರೆಡ್ಡಿಯವರನ್ನು ದೆಹಲಿಗೆ ಕರೆಸಿಕೊಂಡಿದ್ದಷ್ಟೇ ಅಲ್ಲ, ಬಹುಮುಖ್ಯವಾದ ಖಾತೆಯನ್ನೂ ಸಹ ಅವರಿಗೆ ವಹಿಸಿಕೊಟ್ಟರು. ನೆಹರೂ ಆದೇಶದ ಮೇರೆಗೆ 1952ರ ಮೇ 15ರಂದು ಕೇಂದ್ರದ ಸಚಿವರಾಗಿ ರೆಡ್ಡಿಯವರು ಪ್ರಮಾಣವಚನ ಸ್ವೀಕರಿಸಿದರು. ರೆಡ್ಡಿಯವರಿಗೆ ಉತ್ಪಾದನ ಸಚಿವ ಖಾತೆಯನ್ನು ನೀಡಲಾಯಿತು. ಇದೊಂದು ಹೊಸ ಖಾತೆಯಾಗಿದ್ದು ಕೈಗಾರಿಕಾ ಖಾತೆಯಿಂದ ಕೆಲವು ಇಲಾಖೆಗಳನ್ನು ತೆಗೆದು ಈ ಹೊಸ ಖಾತೆಯನ್ನು ರೂಪಿಸಲಾಗಿತ್ತು. ಈ ಖಾತೆಯ ಮುಖ್ಯ ಉದ್ದೇಶ ಸಾರ್ವಜನಿಕ ವಲಯದ ಕೈಗಾರಿಕೆಗಳ ಸ್ಥಾಪನೆ. ಇತರ ಸಂಸ್ಥಾಪಿತ ಸಚಿವ ಖಾತೆಗಳಿಗಿಂತ ಉತ್ಪಾದನಾ ಖಾತೆಯ ಕೆಲಸ

ವಿಭಿನ್ನವಾಗಿತ್ತು ಇದು ಹೆಚ್ಚುಕಡಿಮೆ ಯಾರೂ ಮೆಟ್ಟದ ನೆಲವಾಗಿದ್ದು ಅನೇಕ ರೀತಿಯ ಮುಂಚೂಣಿ ಸಿದ್ಧತೆಯ ಕೆಲಸಗಳನ್ನೊಳಗೊಂಡಿತ್ತು. ವಿವಿಧ ಕೈಗಾರಿಕಾ ಉದ್ದಿಮೆಗಳ ಪ್ರಗತಿ ಅಥವಾ ಪ್ರಗತಿಹೀನತೆಯನ್ನು ಇವರ ಖಾತೆ ನಿರಂತರವಾಗಿ ಗಮನಿಸಬೇಕಿತ್ತು. ಹೊಸ ಕೈಗಾರಿಕೆಗಳ ನಿರ್ಮಾಣದ ಅಡೆತಡೆ ತೊಂದರೆಗಳನ್ನು ಪರಿಹರಿಸಬೇಕಿತ್ತು. ಆ ಸಂಧರ್ಭದಲ್ಲಿ ಮೂಲ ಕೈಗಾರಿಕೆಗಳಿಗೆ ಹೆಚ್ಚಿನ ಹೂಡಿಕೆ ಮಾಡುವುದು ಅಗತ್ಯವಿತ್ತು. ಅಷ್ಟು ದೊಡ್ಡ ಹೂಡಿಕೆ ಮಾಡುವುದು ಖಾಸಗಿಯವರಿಗೆ ಸಾಧ್ಯವಿರಲಿಲ್ಲ. ಆದ್ದರಿಂದ ಕಲ್ಲಿದ್ದಲು, ಉಕ್ಕು, ಸಿಮೆಂಟ್, ಭಾರೀ ಇಂಜಿನಿಯರಿಂಗ್, ಭಾರೀ ವಿದ್ಯುತ್ ಉಪಕರಣಗಳ ತಯಾರಿಕೆ ಮೊದಲಾದ ಕೈಗಾರಿಕೆಗಳಲ್ಲಿ ಸರ್ಕಾರ ಹೂಡಿಕೆ ಮಾಡಿತು. ಮೊದಲ ಹಾಗೂ ಎರಡನೇ ಪಂಚವಾರ್ಷಿಕ ಯೋಜನೆಗಳಲ್ಲಿ ಕೈಗೊಂಡ ಕೈಗಾರಿಕಾ ಅಭಿವೃದ್ಧಿ ಯೋಜನೆಗಳಲ್ಲಿ ಬಹು ಮುಖ್ಯ ಪಾತ್ರ ವಹಿಸಿದ ರೆಡ್ಡಿಯವರು ನೆಹರೂ ಕನಸನ್ನು ನನಸಾಗಿಸಲು ಶದ್ಧಾಪೂರ್ವಕವಾಗಿ ಶ್ರಮಿಸಿದರು. ಹೊಸ ಕಾರ್ಖಾನೆಗಳು ಸರ್ಕಾರಿ ವಲಯದಲ್ಲಿ ಸ್ಥಾಪಿತವಾಗಬೇಕು ಎಂಬ ನಿಬಂಧನೆಯಂತೆ 1950ರ ದಶಕದ ಮಧ್ಯಭಾಗದಲ್ಲಿ ಭಿಲಾಯ್, ರೂರ್ಕೆಲಾ ಮತ್ತು ದುರ್ಗಾಪುರಗಳಲ್ಲಿ ಅನುಕ್ರಮವಾಗಿ ಸೋವಿಯತ್ ದೇಶ, ಜರ್ಮನಿ ಹಾಗೂ ಬ್ರಿಟನ್ನಿನ ನೆರವಿನಿಂದ ಉಕ್ಕು ಮತ್ತು ಕಬ್ಬಿಣದ ಅತಿದೊಡ್ಡ ಕೈಗಾರಿಕೆಗಳನ್ನು ಸರ್ಕಾರವು ಸ್ಥಾಪಿಸಿತ್ತು. ಈ ಕೈಗಾರಿಕೆಗಳ ಸಂಬಂಧವಾದ ಮಾತುಕತೆಗಳು, ಒಪ್ಪಂದಗಳು ತ್ವರಿತ ಗತಿಯಲ್ಲಿ ನಡೆಯಲು ಹಾಗೂ ಬೇಗ ಅವುಗಳನ್ನು ಕಾರ್ಯಗತಗೊಳಿಸಲು ರೆಡ್ಡಿಯವರು ಸಾಕಷ್ಟು ಶ್ರಮವಹಿಸಿ ದುಡಿದರು. ಯಾವುದೇ ಯೋಜನೆಯ ಆರಂಭ, ಅವುಗಳ ಸಾಧಕ ಬಾಧಕಗಳ ಬಗ್ಗೆ ನೆಹರೂ ಮತ್ತು ರೆಡ್ಡಿಯವರ ನಡುವೆ ಅರ್ಥಪೂರ್ಣ ಚರ್ಚೆ, ಸಮಾಲೋಚನೆ ನಡೆಯುತ್ತಿತ್ತು.

ರೆಡ್ಡಿಯವರು 1956ರ ಅಕ್ಟೋಬರ್ ತಿಂಗಳಲ್ಲಿ ಒಂದು ನಿಯೋಗದೊಂದಿಗೆ ರಷ್ಯಾಕ್ಕೆ ಭೇಟಿ ನೀಡಿದರು. ಇದೊಂದು ಮಹತ್ವದ ಭೇಟಿ. ರೆಡ್ಡಿಯವರು ಅನೇಕ ಮಹತ್ವದ ಒಪ್ಪಂದಗಳನ್ನು ಮಾಡಿಕೊಂಡರು. ಸೋವಿಯತ್ ಯೂನಿಯನ್ನಿನ ಜೊತೆ ಅವರು ಹಣಕಾಸಿನ ಸಹಕಾರ, ಸ್ನೇಹ ಮತ್ತು ಶಾಂತಿ ಸಂಬಂಧಗಳ ವಿಸ್ತರಣೆಯ ಬಗ್ಗೆ ಮಾತುಕತೆ ನಡೆಸಿದ್ದು ಒಂದು ಅಂಶವಾದರೆ ಭಾರೀ ಯಂತ್ರ ಸಾಮಗ್ರಿಗಳ ಸ್ಥಾವರ, ತೈಲ ಶುದ್ಧೀಕರಣ ಸ್ಥಾವರ, ಆಪ್ಟಿಕಲ್ ಗಾಜು ಸ್ಥಾವರ, ಕಲ್ಲಿದ್ದಲು ಗಣಿಗಾರಿಕೆ ಸಲಕರಣೆ ಮುಂತಾದ ಪರಿಯೋಜನೆಗಳಿಗೆ ದೀರ್ಘಾವಧಿ ಸಾಲವನ್ನು ಪಡೆದುಕೊಳ್ಳಲು ಮಾಡಿದ ಪ್ರಯತ್ನ ಇನ್ನೊಂದು ಮುಖ್ಯ ಅಂಶ.

1957ರಿಂದ 1961ರವರೆಗೆ ರೆಡ್ಡಿಯವರು ಕಾಮಗಾರಿ, ಗೃಹನಿರ್ಮಾಣ ಹಾಗೂ ಸರಬರಾಯಿ [Works, Housing and Supplies] ಸಚಿವರಾಗಿ ಕಾರ್ಯನಿರ್ವಹಿಸಿದರು. ಇದಾದ ನಂತರ ಅವರ ಪಾಲಿಗೆ ಬಂದಿದ್ದು ವಾಣಿಜ್ಯ ಮತ್ತು ಕೈಗಾರಿಕಾ ಇಲಾಖೆ. ಇದಕ್ಕೆ ಮೊದಲು ಲಾಲ್ ಬಹದ್ದೂರ್ ಶಾಸ್ತ್ರಿಯವರು ಈ ಇಲಾಖೆಯ ಸಚಿವರಾಗಿದ್ದರು. ಈ ಇಲಾಖೆಯ ಒಳಹೊರಗುಗಳನ್ನೆಲ್ಲ ಚೆನ್ನಾಗಿ ಅರಿತಿದ್ದ ಶಾಸ್ತ್ರಿಯವರು ಇದು ದುಡ್ಡು ಮಾಡುವವರಿಗೆ ಹೇಳಿ ಮಾಡಿಸಿದ ಇಲಾಖೆ, ಆದ್ದರಿಂದ ಪ್ರಾಮಾಣಿಕರಾದವರನ್ನೇ ಇಲ್ಲಿಗೆ ನೇಮಿಸಬೇಕು ಎಂದು ಪ್ರಧಾನಿ ನೆಹರೂ ಅವರಿಗೆ ಸೂಚಿಸಿದ್ದರಂತೆ. ರೆಡ್ಡಿಯವರ ಪ್ರಿಯ ಮಿತ್ರರೂ ಆಗಿದ್ದ ಶಾಸ್ತ್ರಿಯವರಿಗೆ ರೆಡ್ಡಿಯವರ ಶುದ್ಧಹಸ್ತ ಗುಣ ಗೊತ್ತಿತ್ತು. ಹೀಗಾಗಿ ರೆಡ್ಡಿಯವರಿಗೇ ಈ ಇಲಾಖೆಯನ್ನು ಕೊಡಲಾಯಿತು.

ರೆಡ್ಡಿಯವರು ಈ ಖಾತೆಯನ್ನು ವಹಿಸಿಕೊಳ್ಳುವ ವೇಳೆಗಾಗಲೇ ದೆಹಲಿಯ ರಾಜಕಾರಣ ಬಹಳ ಬದಲಾಯಿಸಿತ್ತು. ಮಂತ್ರಿಗಳ ಕಾರ್ಯವೈಖರಿ ನಡೆನುಡಿಗಳಲ್ಲಿ ಸಾಕಷ್ಟು ಬದಲಾವಣೆಗಳಾಗಿದ್ದವು. ಮಹತ್ವಾಕಾಂಕ್ಷಿಗಳು ತುಂಬ ಮುಖ್ಯವಾದ ಹಾಗೂ ಹೆಚ್ಚು ಅಧಿಕಾರವುಳ್ಳ ಖಾತೆಗಳನ್ನು ಪಡೆದುಕೊಳ್ಳಲು ಹೊಂಚು ಹಾಕುತ್ತಿದ್ದರು. ಪ್ರಭಾವೀ ವ್ಯಕ್ತಿಗಳ ಸಂಪರ್ಕ ಹೊಂದಿದ್ದ ಕಿರಿಯ ಅಧಿಕಾರಿಗಳು ಮೇಲಿನವರನ್ನು ಕಡೆಗಣಿಸಿ ಕಿರಿ ಕಿರಿ ಉಂಟುಮಾಡುತ್ತಿದ್ದರು. ರೆಡ್ಡಿಯವರು ಕಾರ್ಯನಿರ್ವಹಿಸುತ್ತಿದ್ದ ಇಲಾಖೆ ಬಂಡವಾಳಶಾಹಿಗಳ ಕೈಗೆ ಸಿಲುಕಿತ್ತು. ರೆಡ್ಡಿಯವರು ಮೂಲತಃ ಸರಳ ವ್ಯಕ್ತಿ, ಒಳ್ಳೆಯ ವ್ಯಕ್ತಿ, ಅಧಿಕಾರಕ್ಕಾಗಿ ಹಾತೊರೆಯುವ, ಮಸಲತ್ತು ಮಾಡುವ, ಮೇಲಿನವರನ್ನು ಓಲೈಸುವ ಪ್ರವೃತ್ತಿಯವರಲ್ಲ. ಇದೇ ಸಮಯದಲ್ಲಿ ಅವರನ್ನು ಆರೋಗ್ಯ ಸಮಸ್ಯೆಯೂ ತೀವ್ರವಾಗಿ ಕಾಡುತ್ತಿತ್ತು. ಅದನ್ನೇ ನೆಪ ಮಾಡಿಕೊಂಡ ಅವರು 1963ರ ಜುಲೈ 17ರಂದು ವಾಣಿಜ್ಯ ಮತ್ತು ಕೈಗಾರಿಕಾ ಸಚಿವ ಸ್ಥಾನಕ್ಕೆ ರಾಜಿನಾಮೆ ನೀಡಿದರು. ಇವರ ರಾಜೀನಾಮೆಯನ್ನು ಅಂಗೀಕರಿಸಿದ ನೆಹರೂ, "ನೀವು ರಾಜಿನಾಮೆ ನೀಡಿದ ಮಾತ್ರಕ್ಕೆ ನಮ್ಮ ಕಾಮ್ರೇಡ್‌ಶಿಪ್ ಮುಗಿಯುವುದಿಲ್ಲ. ನಾವು ಈ ದೇಶಕ್ಕಾಗಿ ಮಾಡಬೇಕಾದ ಕೆಲಸ ಕೇವಲ ಸರ್ಕಾರದ ಕೆಲಸಕ್ಕಷ್ಟೆ ಸೀಮಿತವಾಗಿಲ್ಲ. ನಾವು ಎಲ್ಲೇ ಇರಲಿ ಭಾರತ ಹಾಗೂ ಭಾರತದ ಜನರಿಗಾಗಿ ದುಡಿಯಬೇಕು" ಎಂದು ರೆಡ್ಡಿಯವರಿಗೆ ಬರೆದರು. ನೆಹರೂ ನಂತರ ಮೊರಾರ್ಜಿ, ನಂತರ ರೆಡ್ಡಿ ಹೀಗೆ ನೆಹರೂ ಸಂಪುಟದಲ್ಲಿ ಅಗ್ರಶ್ರೇಣಿಯಲ್ಲಿ ಮೂರನೇ ಸ್ಥಾನದಲ್ಲಿದ್ದ ರೆಡ್ಡಿಯವರ ಪದವಿ ಈ ರಾಜೀನಾಮೆಯೊಂದಿಗೆ ಕೊನೆಗೊಂಡಿತು.

ಸಚಿವರಾಗಿದ್ದ ಅವಧಿಯಲ್ಲಿ ರೆಡ್ಡಿಯವರು ತಮ್ಮ ಸಹೋದ್ಯೋಗಿಗಳು, ಅಧಿಕಾರಿಗಳು ಹಾಗೂ ರಾಜಕಾರಣಿಗಳ ಮೇಲೆ ಸಾಕಷ್ಟು ಪ್ರಭಾವ ಬೀರಿದ್ದರು. ನಾವು ಏನಾದರೂ ಸ್ವಲ್ಪ ಕೆಲಸ ಕಲಿತಿದ್ದರೆ ಅದು ರೆಡ್ಡಿಯವರಿಂದ ಎಂದು ಕೆಲವೊಂದು ಉನ್ನತ ಅಧಿಕಾರಿಗಳೇ ಹೇಳುತ್ತಿದ್ದರು. ಈ ವೇಳೆಗೆ ರೆಡ್ಡಿಯವರು ಒಳ್ಳೆಯ ಅರ್ಥಶಾಸ್ತ್ರಜ್ಞ ಎಂಬ ಹೆಸರನ್ನು ಪಡೆದಿದ್ದರು. ಆದರೆ ಅವರ ವೈಯಕ್ತಿಕ ಆರ್ಥಿಕ ಸ್ಥಿತಿಯಲ್ಲಿ ಅರ್ಥಶಾಸ್ತ್ರದ ಯಾವ ಲೆಕ್ಕಚಾರವೂ ಇರಲಿಲ್ಲ. ನಾಳಿನ ಯೋಚನೆಯನ್ನೇ ಮಾಡದ ಅವರ ಜೇಬಿನಲ್ಲಿ ಹಣವಿದ್ದುದೇ ಅಪರೂಪ. ಆದರೂ ಐದು ವರ್ಷಗಳ ಕಾಲ ಮೈಸೂರಿನ ಮುಖ್ಯಮಂತ್ರಿ, ಸುಮಾರು ಹನ್ನೊಂದು ವರ್ಷ ಕಾಲ ಕೇಂದ್ರ ಮಂತ್ರಿ ಹೀಗೆ ಸುದೀರ್ಘ 16 ವರ್ಷಗಳ ನಂತರ ಮಂತ್ರಿ ಪದವಿಯನ್ನು ತ್ಯಜಿಸಿ ಬಂದ ರೆಡ್ಡಿಯವರಿಗೆ ಒಂದು ರೀತಿಯ ಬಿಡುಗಡೆಯ ಆನಂದ ಸಿಕ್ಕಿದಂತಾಗಿತ್ತು. ನಾನು ನನ್ನ ಕರ್ತವ್ಯಗಳನ್ನು ಕೈಲಾದ ಮಟ್ಟಿಗೂ ಸರಿಯಾಗಿ ನಿರ್ವಹಿಸಿದ್ದೇನೆ ಎಂದು ಅವರಿಗೆ ತೃಪ್ತಿಯಾಗಿತ್ತು.

ರೆಡ್ಡಿಯವರು ರಾಜಿನಾಮೆ ನೀಡಿದಾಗ ಶ್ರೀ ಟಿ. ಸಿದ್ದಲಿಂಗಯ್ಯನವರು ಬರೆದ ಪತ್ರ ಈ ಇಬ್ಬರು ಮಹನೀಯರ ವ್ಯಕ್ತಿತ್ವದ ಬಗ್ಗೆ ಬೆಳಕು ಚೆಲ್ಲುತ್ತದೆ. ಸಿದ್ದಲಿಂಗಯ್ಯನವರು ಹೀಗೆ ಬರೆದಿದ್ದರು"ನಿಮ್ಮ ರಾಜೀನಾಮೆಯ ಸುದ್ದಿಯನ್ನು ಪತ್ರಿಕೆಗಳಲ್ಲಿ ಓದಿದೆ; ಸಂತೋಷವಾಯಿತು. ಈ ಜನ್ಮಕ್ಕೆ ಈ ಪ್ರಾಪಂಚಿಕ ಜಂಜಾಟ ಸಾಕು, ಅದರಲ್ಲಿಯೂ ನಿಮ್ಮಂತಹ ಅತೀ ಒಳ್ಳೆಯವರಿಗೆ ಇದು ಸಾಕೇ ಸಾಕು. ಆದರ್ಶವಾದವನ್ನು ರಾಜಕೀಯದಲ್ಲಿ ತರಲು ಹೋಗಿ ನಾನು ಮೂರ್ಖನಾದೆ, ಒಂದು ರೀತಿ ಸೋತೆ ಎಂದೇ ಹೇಳಬೇಕು. ಆದರೆ ಈ ಜಗತ್ತು ಏನೂ ಕೊಡಬಲ್ಲದೋ ಅದನ್ನು ಮೀರಿದ ಒಂದು ಭವಿಷ್ಯವಿದೆ ಎಂಬುದು ನನಗೂ ನಿಮಗೂ ಗೊತ್ತು. ಈ ಆಧ್ಯಾತ್ಮಿಕ ಉಳಿವಿಗಾಗಿ

ನಾವು ಸಿದ್ಧರಾಗೋಣ ಮತ್ತು ಅದರತ್ತ ನಡೆಯೋಣ. ಈ ಜಗತ್ತಿನ ಎಲ್ಲ ಪೂರ್ವಗ್ರಹಗಳಿಂದ ದೂರವಾಗಿ, ವ್ಯಯಕ್ತಿಕವಾಗಿ ನಾನು ನಿಮ್ಮನ್ನು ಇಷ್ಟಪಡುತ್ತೇನೆ. ಅಂತಿಮವಾಗಿ ನಾವೆಲ್ಲರೂ ಒಟ್ಟು ಸೇರುವ ಉನ್ನತ ಜೀವನದೆಡೆಗೆ ನಿಮಗೆ ಸ್ವಾಗತ. ಈ ಜಗತ್ತಿನ ಬಗ್ಗೆ ಇನ್ನು ಮುಂದೆ ತಲೆ ಕೆಡಿಸಿಕೊಳ್ಳುವುದೇ ಬೇಡ.

ನೀವು ಈಗಲೂ ರಾಜ್ಯಪಾಲರಾಗಿ ಹೋಗುವುದಾದರೆ ಅದೂ ದೊಡ್ಡದೇ ಅಲ್ಲಿಯೂ ನೀವು ಆಧ್ಯಾತ್ಮಿಕ ಧ್ಯೇಯವನ್ನು ಅನುಸರಿಸಬಹುದು”.

ಈ ಪತ್ರಕ್ಕೆ ಉತ್ತರಿಸುತ್ತಾ ರೆಡ್ಡಿಯವರು ಹೀಗೆ ಬರೆದರು-“ಪ್ರಿಯ ಟಿವಿಸ್, ಹದಿನಾರು ವರ್ಷಗಳ ಸುದೀರ್ಘ ಅಧಿಕಾರದಿಂದ ನನಗೆ ವಿಶ್ರಾಂತಿಯ ಅಗತ್ಯವಿತ್ತು. ಎಲ್ಲಕ್ಕಿಂತ ಮುಖ್ಯವಾಗಿ ನನ್ನ ಆರೋಗ್ಯ ನೋಡಿಕೊಳ್ಳಬೇಕಾಗಿತ್ತು.. ನೀವು ನಿಮ್ಮ ಪತ್ರದಲ್ಲಿ ಬದುಕಿನ ಮೂಲಭೂತ ಮೌಲ್ಯಗಳ ಬಗ್ಗೆ ತಿಳಿಸಿದ್ದೀರಿ. ಹೌದು, ನಾನು ಈ ಪ್ರಾಪಂಚಿಕ ಕ್ಷುದ್ರ ರಾಜಕೀಯದಿಂದ ಮೇಲೆ ಬರಬೇಕೆಂದು ಬಯಸುತ್ತೇನೆ ಮತ್ತು ಸಂಪೂರ್ಣ ಸಮರ್ಪಣಾ ಸೇವೆಯ ಬದುಕು ನಡೆಸಬೇಕೆಂದು ಬಯಸುತ್ತೇನೆ. ಆದರೆ ಇಷ್ಟೆಲ್ಲ ನ್ಯೂನತಾ ಭಾವನೆಗಳು ತುಂಬಿಕೊಂಡಿರುವ ನನ್ನಿಂದ ಇದು ಸಾಧ್ಯವಾಗುವುದೇ ಎಂದು ಸಂದೇಹ. ಆದರೆ ದೇವರ ದಯೆಯಿಂದ ಇದರಲ್ಲಿ ಯಶಸ್ವಿಯಾಗಬಹುದು”.

ರೆಡ್ಡಿಯವರು ಕೇಂದ್ರದ ಬಹುಮುಖ್ಯ ಹುದ್ದೆಗಳಲ್ಲಿ ಇದ್ದುದರಿಂದ ರಾಜ್ಯದ ಅಭಿವೃದ್ಧಿಗೆ ಸಾಕಷ್ಟು ಅನುಕೂಲವಾಯಿತು. ರಾಜ್ಯದ ಕೈಗಾರಿಕಾ ಹಾಗೂ ರಾಜಕೀಯ ಸಮಸ್ಯೆಗಳಿಗೆ ಸಂಬಂಧಿಸಿದ ಪರಿಹಾರವನ್ನು ದೊರಕಿಸುವಲ್ಲಿ ರೆಡ್ಡಿಯವರು ಆಸಕ್ತಿಯಿಂದ ದುಡಿದರು. ಅವರು ಕೇಂದ್ರ ವಾಣಿಜ್ಯ ಮತ್ತು ಕೈಗಾರಿಕಾ ಸಚಿವರಾಗಿದ್ದ ಅವಧಿಯಲ್ಲಿ ಮೈಸೂರು ರಾಜ್ಯಕ್ಕೆ ಹಲವಾರು ಕಾರ್ಖಾನೆಗಳು ಮಂಜೂರಾಗುವುದಕ್ಕೆ ನೆರವಾದರು. ಸಣ್ಣ ಕೈಗಾರಿಕೆಗಳ ಅಭಿವೃದ್ಧಿಗಾಗಿ ಉತ್ತಮ ಯೋಜನೆಗಳನ್ನು ರೂಪಿಸಿಕೊಟ್ಟರು. ರಾಜ್ಯದಿಂದ ದೂರವಾಗಿ ದೆಹಲಿಯಲ್ಲಿ ದಶಕಕ್ಕೂ ಹೆಚ್ಚು ಕಾಲವಿದ್ದರೂ ಮೈಸೂರು ಸಂಸ್ಕೃತಿಯನ್ನು ಬಿಡದೆ, ಅಲ್ಲಿಯೂ ಕಾಪಾಡಿಕೊಂಡು ಬಂದಿದ್ದು ಅವರ ವಿಶೇಷ . ದೆಹಲಿ ಕರ್ನಾಟಕ ಸಂಘದ ಸ್ಥಾಪನೆಯಲ್ಲಿ ರೆಡ್ಡಿಯವರ ಪಾತ್ರ ಹಿರಿದು. ಅವರು ಕಾಮಗಾರಿ ಮತ್ತು ವಸತಿ ಸಚಿವರಾಗಿದ್ದಾಗ ಕನ್ನಡ ಸಂಘಕ್ಕಾಗಿ ಲೋಧಿ ಎಸ್ಟೇಟ್‌ನಲ್ಲಿ ಬೃಹತ್ ನಿವೇಶನ ಸಿಗುವಂತೆ ಮಾಡಿದರು. ಸಂಘವು ಅದೇ ಜಾಗದಲ್ಲಿ ದೆಹಲಿ ಕನ್ನಡ ಶಾಲೆಯನ್ನು ಆರಂಭಿಸಿತು. ದೆಹಲಿಯ ಕರ್ನಾಟಕ ಭವನಕ್ಕೆ ಸ್ಥಳ ದೊರಕುವಂತೆ ಮುಂಜಾಗ್ರತೆ ವಹಿಸಿದವರೂ ರೆಡ್ಡಿಯವರೇ. ಜತ್ತಿಯವರು ಮೈಸೂರು ರಾಜ್ಯದ ಮುಖ್ಯಮಂತ್ರಿಯಾಗಿದ್ದ ಸಂದರ್ಭದಲ್ಲಿ ಕರ್ನಾಟಕ ಸರ್ಕಾರವು ದೆಹಲಿಯ ಚಾಣಕ್ಯಪುರಿಯಲ್ಲಿ ಜಾಗ ತೆಗೆದುಕೊಳ್ಳಬೇಕು ಮತ್ತು ಸರ್ಕಾರಿ ಅಧಿಕಾರಿಗಳಿಗೆ ಹಾಗೂ ಮಂತ್ರಿಗಳಿಗೆ ಅಲ್ಲಿ ಉಳಿದುಕೊಳ್ಳುವುದಕ್ಕಾಗಿ ಒಂದು ಸೊಗಸಾದ ಕಟ್ಟಡ ಕಟ್ಟಬೇಕೆಂದು ರೆಡ್ಡಿಯವರು ತಿಳಿಸಿದರು. ಈ ವಿಷಯವಾಗಿ ಮೈಸೂರು ಮಂತ್ರಿಮಂಡಲದಲ್ಲಿ ಚರ್ಚೆಯಾಯಿತು. ದೆಹಲಿಯ ಹೈದ್ರಾಬಾದ್ ಹೌಸ್‌ನಲ್ಲಿ ನಮ್ಮ ಪಾಲು ಇರುವುದರಿಂದ ನಾವು ಬೇರೆಯ ಸ್ಥಳ ತೆಗೆದುಕೊಳ್ಳುವ ಅಗತ್ಯವಿಲ್ಲ ಎಂದು ಮಂತ್ರಿಮಂಡಲ ಅಭಿಪ್ರಾಯಪಟ್ಟಿತು. ಈ ಅಭಿಪ್ರಾಯವನ್ನು

ರೆಡ್ಡಿಯವರಿಗೆ ತಿಳಿಸಿದಾಗ ಈಗ ಅದನ್ನು ತೆಗೆದುಕೊಳ್ಳದಿದ್ದರೆ ಮುಂದೆ ಅದು ಸಿಗುವುದು ಕಷ್ಟ ಎಂದರು. ಹಾಗೇ ಆಯಿತು. ಹೈದ್ರಾಬಾದ್ ಹೌಸಿನಲ್ಲಿಯ ಸ್ಥಳ ಪುನಃ ಕರ್ನಾಟಕಕ್ಕೆ ಸಿಗುವುದಿಲ್ಲ ಎಂದು ತಿಳಿದಾಗ ಮುಖ್ಯ ಮಂತ್ರಿ ಜತ್ತಿಯವರು ಪುನಃ ಮಂತ್ರಿಮಂಡಲದಲ್ಲಿ ಈ ವಿಷಯದ ಬಗ್ಗೆ ಚರ್ಚಿಸಿ, ಚಾಣಕ್ಯಪುರಿಯಲ್ಲಿ ಶ್ರೀ ಕೆ.ಸಿ. ರೆಡ್ಡಿಯವರು ಹೇಳಿರುವ ಸ್ಥಳವನ್ನು ಕೊಳ್ಳುವುದು ಸರಿ ಎಂದು ನಿರ್ಣಯಿಸಿದರು. ಆ ಸ್ಥಳ ಪಡೆದುಕೊಂಡು ಅಲ್ಲಿ ಯೋಗ್ಯ ಕಟ್ಟಡವನ್ನು ಕಟ್ಟಬೇಕೆಂದು ನಿರ್ಣಯಿಸಲಾಯಿತು. ಅದರಂತೆ ಅಲ್ಲಿ ನಿರ್ಮಾಣವಾದ ಕಟ್ಟಡವೇ ಇಂದಿನ ಕರ್ನಾಟಕ ಭವನ.

ರೆಡ್ಡಿಯವರು ಅಧಿಕಾರ ತ್ಯಜಿಸಿದ್ದರಿಂದ ಅವರ ಮಿತ್ರವರ್ಗದವರಿಗೆ ಮತ್ತು ಮೈಸೂರು ರಾಜ್ಯದ ಏಳಿಗೆಯ ಬಗ್ಗೆ ಕಾಳಜಿ ಹೊಂದಿದವರಿಗೆ ನಿಜಕ್ಕೂ ಅಪಾರ ನೋವಾಯಿತು. ರೆಡ್ಡಿಯವರು ಕೇಂದ್ರದಲ್ಲಿರುವುದು ದಕ್ಷಿಣದವರಿಗೆ ಅದರಲ್ಲಿಯೂ ಮೈಸೂರು ರಾಜ್ಯದವರಿಗೆ ಒಂದು ರೀತಿಯ ಘನತೆ ಹಾಗೂ ಧೈರ್ಯದ ಸಂಗತಿಯಾಗಿತ್ತು. ರೆಡ್ಡಿಯವರಿಗಿದ್ದ ಅಮೂಲ್ಯ ಅನುಭವ, ಚಾರಿತ್ರ್ಯವನ್ನು ಬೇರೆಯವರಿಂದ ನಿರೀಕ್ಷಿಸುವಂತಿರಲಿಲ್ಲ. ಅವರಿಂದ ತೆರವಾದ ಸ್ಥಾನವನ್ನು ಬೇರೆ ಯಾರೂ ತುಂಬಲಾರರು ಎಂಬುದು ಅವರ ಅಭಿಮಾನಿಗಳ ಅನಿಸಿಕೆಯಾಗಿತ್ತು. ಅಭಿಮಾನಿಗಳ ಅಭಿಪ್ರಾಯಕ್ಕೆ ಪ್ರತಿಕ್ರಿಯೆ ಸೂಚಿಸುತ್ತಾ ರೆಡ್ಡಿಯವರು ತಮ್ಮ ಮಿತ್ರರೊಬ್ಬರಿಗೆ ಬರೆದ ಪತ್ರದಲ್ಲಿ "ಬದುಕನ್ನು ಅದು ಬಂದ ಹಾಗೆ ಸ್ವೀಕರಿಸಬೇಕೇ ಹೊರತು ತಲೆ ಕೆಡಿಸಿಕೊಳ್ಳಬಾರದು, ಕೆಲವೊಂದು ಸಂದರ್ಭದಲ್ಲಿ ಮಾನವ ಪ್ರಯತ್ನದಿಂದ ಏನೂ ಆಗುವುದಿಲ್ಲ" ಎಂದು ತಿಳಿಸಿದರು.

ಈ ಸಂದರ್ಭದಲ್ಲಿ ರೆಡ್ಡಿಯವರು ಮದ್ರಾಸ್ ರಾಜ್ಯದ ರಾಜ್ಯಪಾಲರಾಗಿ ನೇಮಕಗೊಳ್ಳಲಿದ್ದಾರೆ ಎಂಬ ಸುದ್ದಿಗಳು ಬರತೊಡಗಿದವು. ಆದರೆ ಈ ಸುದ್ದಿಗಳನ್ನು ವಿಶ್ವಾಸಾರ್ಹವೆನ್ನುವಂತಿರಲಿಲ್ಲ. ಈ ಮೊದಲು ಪಂಜಾಬಿನ ರಾಜ್ಯಪಾಲರಾಗಿ ರೆಡ್ಡಿಯವರ ನೇಮಕ ಅಂತಿಮ ಹಂತಕ್ಕೆ ಬಂದು ಕಾರಣಾಂತರಗಳಿಂದ ನಿಂತುಹೋಗಿತ್ತು. ರೆಡ್ಡಿಯವರ ಪಾಲಿಗೆ ಅದೊಂದು ಕಹಿ ಅನುಭವವಾಯಿತು. 1961ರಲ್ಲಿ ಎನ್.ವಿ. ಗಾಡ್ಗೀಳ್ ಅವರ ರಾಜೀನಾಮೆಯಿಂದ ಪಂಜಾಬಿನ ರಾಜ್ಯಪಾಲ ಹುದ್ದೆ ತೆರವಾಯಿತು. ವಾಣಿಜ್ಯ ಮತ್ತು ಕೈಗಾರಿಕಾ ಇಲಾಖೆಯಲ್ಲಿದ್ದ ರೆಡ್ಡಿಯವರನ್ನು ಗಾಡ್ಗೀಳ್ ಅವರ ಉತ್ತರಾಧಿಕಾರಿಯಾಗಿ ಹೋಗುವಂತೆ ಒಪ್ಪಿಸಲಾಯಿತು. ಅನಂತರ ಪ್ರಧಾನಮಂತ್ರಿ ನೆಹರೂ ಅವರು ರೆಡ್ಡಿಯವರ ಹೆಸರನ್ನು ರಾಷ್ಟ್ರಪತಿಗಳಿಗೆ ಶಿಫಾರಸ್ಸು ಮಾಡಿದರು. ಆದರೆ ಕೊನೇಗಳಿಗೆಯಲ್ಲಿ ರೆಡ್ಡಿಯವರು ಈ ಹುದ್ದೆಯನ್ನು ನಿರಾಕರಿಸಿ ನೆಹರು ಅವರಿಗೆ ಪತ್ರ ಬರೆಯುವಂತಾಯಿತು. ಈ ಪತ್ರದಲ್ಲಿ ಅವರು "....ನಾನು ಹಿಂಜರಿಯುತ್ತಲೇ ಪಂಜಾಬಿಗೆ ಹೋಗುವುದಾಗಿ ತಿಳಿಸಿದ್ದೆ. ಅನಂತರ ಇದನ್ನು ಒಪ್ಪಿಕೊಂಡಿದ್ದಕ್ಕೆ ಕಾರಣಗಳನ್ನು ತಿಳಿಸಿದೆ. ಇದಾದನಂತರ ನಾನು ಈ ಹುದ್ದೆ ಒಪ್ಪಿಕೊಂಡಿದ್ದರ ಬಗ್ಗೆ ನನ್ನ ಕ್ಷೇತ್ರದಲ್ಲಿ ಹಾಗೂ ನನ್ನ ರಾಜ್ಯದಲ್ಲಿ ವ್ಯಕ್ತವಾದ ತೀವ್ರ ಪ್ರತಿಕ್ರಿಯೆಗಳ ಬಗ್ಗೆ ನಿಮಗೆ ತಿಳಿಸುವ ಧೈರ್ಯ ಮಾಡಿದೆ. ಪಾರ್ಲಿಮೆಂಟಿನ ಲಾಬಿಯಲ್ಲಿ ಕೇವಲ ನನ್ನ ಪಕ್ಷಕ್ಕೆ ಸೇರಿದ ಸದಸ್ಯರಿಂದಷ್ಟೇ ಅಲ್ಲ ವಿರೋಧ ಪಕ್ಷಗಳಿಂದಲೂ ಕೂಡ ಉಂಟಾದ ಮುಜುಗರದ ವಿಷಯಗಳನ್ನು ಮಾತ್ರ ನಿಮಗೆ ತಿಳಿಸಲಿಲ್ಲ. ಅವರಲ್ಲಿ ಯಾರಿಗೂ ನನ್ನ ನಿರ್ಧಾರದ ಬಗ್ಗೆ ಸಂತೋಷವಾಗಲಿಲ್ಲ. ನೇರವಾದ ಮಾತುಗಳಲ್ಲಿ ಅದನ್ನು ನನಗೆ ತಿಳಿಸಿದರು.......ಒಟ್ಟಿನಲ್ಲಿ ನಿಮಗೆ ಇಂತಹ ಮುಜುಗರದ ಸನ್ನಿವೇಶವನ್ನು

ತಂದುದಕ್ಕಾಗಿ ನನಗೆ ತುಂಬಾ ಬೇಸರವಾಯಿತು. ಇದನ್ನು ನೀವು ಕ್ಷಮಿಸಬೇಕೆಂದು ಕೋರುತ್ತೇನೆ.....". ನಿವು ಈ ಪತ್ರವನ್ನು ಓದುವ ವೇಳೆಗೆ ಪಟ್ಟಂಥಾನು ಪಿಳ್ಳೆಯವರು ಚಂಡೀಘಡದಲ್ಲಿ ಪ್ರಮಾಣವಚನ ಸ್ವೀಕರಿಸಿರಬಹುದು. ಒಟ್ಟಿನಲ್ಲಿ ಈ ಕಾಗದದ ಉದ್ದೇಶ ನಿಮಗೆ ಮುಜುಗರ ಉಂಟುಮಾಡಿದ್ದಕ್ಕಾಗಿ ಕ್ಷಮೆ ಕೇಳುವುದು. ಎರಡನೆಯದಾಗಿ ನನ್ನ ಸಮಸ್ಯೆಗೆ ಪರಿಹಾರ ಕಂಡುಹಿಡಿಯುವಲ್ಲಿ ನೀವು ತೋರಿಸಿದ ಉದಾತ್ತತೆ ಮತ್ತು ಪಿತೃಸಮಾನವಾದ ವಾತ್ಸಲ್ಯಕ್ಕಾಗಿ ನನ್ನ ಹೃತ್ಪೂರ್ವಕ ಧನ್ಯವಾದಗಳನ್ನು ಅರ್ಪಿಸುತ್ತಿದ್ದೇನೆ" ಎಂದು ಬರೆದರು. (ರೆಡ್ಡಿಯವರು ಪಂಜಾಬಿನ ರಾಜ್ಯಪಾಲ ಹುದ್ದೆಯನ್ನು ಅಂಗೀಕರಿಸುವುದಕ್ಕೆ ಯಾವ ರೀತಿಯ ವಿರೋಧಗಳು ಬಂದವು, ಯಾಕಾಗಿ ಬಂದವು ಎಂಬುದರ ಸ್ಪಷ್ಟ ವಿವರ ಸಿಕ್ಕಿಲ್ಲ). ಒಟ್ಟಿನಲ್ಲಿ ಇಂಥ ಕಹಿ ಅನುಭವದಿಂದಾಗಿ ಮದ್ರಾಸಿಗೆ ರಾಜ್ಯಪಾಲರಾಗಿ ಹೋಗುವ ಪ್ರಸ್ತಾಪವನ್ನು ರೆಡ್ಡಿಯವರು ಎಲ್ಲಿ ತಿರಸ್ಕರಿಸಿಬಿಡುತ್ತಾರೋ ಎಂಬ ಆತಂಕ ಅವರ ಅಭಿಮಾನಿಗಳಲ್ಲಿ ಮೂಡಿತ್ತು. ಸುದ್ದಿಪತ್ರಿಕೆಗಳಲ್ಲಿ ಬರುವ ವರದಿಗಳಿಗೆ ಯಾವ ಆಧಾರವೂ ಇಲ್ಲ. ಈ ಹಿಂದೆ ನಡೆದ ವಿವಾದದಿಂದ ಹೊರಬರುವುದಕ್ಕೇ ಸಾಕಷ್ಟು ಕಾಲ ಹಿಡಿದಿದೆ. ಲೋಕಸಭೆಯ ಸದಸ್ಯತ್ವದ ಅವಧಿ ಮುಗಿಯುವವರೆಗೆ ಬೇರೆ ಯಾವುದಕ್ಕೂ ತಲೆ ಹಾಕದೆ ನನ್ನ ಪಾಡಿಗೆ ದೆಹಲಿಯಲ್ಲಿರುತ್ತೇನೆ ಎಂದು ರೆಡ್ಡಿಯವರು ನಿರ್ಧರಿಸಿದರು.

1964ರಲ್ಲಿ ರೆಡ್ಡಿಯವರು ಕಾಂಗ್ರೆಸ್ ಪಾರ್ಲಿಮೆಂಟರಿ ಪಕ್ಷದ ಉಪನಾಯಕರಾಗಿ ಪುನರಾಯ್ಕೆಯಾದರು. ಇದು ಸರ್ವಾನುಮತದ ಆಯ್ಕೆಯಾಗಿತ್ತು. ರೆಡ್ಡಿಯವರ ಸಾಮರ್ಥ್ಯಕ್ಕೆ ರಾಜ್ಯಪಾಲ ಸ್ಥಾನವೇ ಸೂಕ್ತವಾದರೂ ಉಪನಾಯಕರಾಗಿಯಾದರೂ ಆಯ್ಕೆಯಾದರಲ್ಲ ಎಂದು ಅವರ ಅಭಿಮಾನಿಗಳಿಗೆ ಸಂತಸವಾಯಿತು. ಒಟ್ಟಿನಲ್ಲಿ ಈ ಸ್ಥಾನ ರೆಡ್ಡಿಯವರಿಗೆ ಸಿಕ್ಕಿದ್ದು ಸರ್ಕಾರದ ದೀರ್ಘಾವಧಿ ಸೇವೆಯಲ್ಲಿ ಅವರು ಸಾಧಿಸಿದ ಯಶಸ್ಸಿನ ಹಾಗೂ ಕಾಂಗ್ರೆಸ್ ಪಕ್ಷವು ಅವರ ಮೇಲಿಟ್ಟಿದ್ದ ವಿಶ್ವಾಸದ ದ್ಯೋತಕವಾಗಿತ್ತು. ಈ ಹುದ್ದೆಯಲ್ಲಿದ್ದಾಗ ಅವರು ಬ್ರಿಟನ್, ಅಮೆರಿಕಾ ಸಂಯುಕ್ತ ಸಂಸ್ಥಾನ, ಸೋವಿಯತ್ ದೇಶ ಹಾಗೂ ಯೂರೋಪಿನ ಕೆಲವೊಂದು ರಾಜ್ಯಗಳಲ್ಲಿ ಸಂಚಾರ ಮಾಡಿದರು.

### ಶಾಸ್ತ್ರೀಜಿಯವರೊಂದಿಗೆ ಸ್ನೇಹ:

ಲಾಲ್‌ಬಹದ್ದೂರ್ ಶಾಸ್ತ್ರಿಯವರು ರೆಡ್ಡಿಯವರ ಆತ್ಮೀಯ ಹಿತೈಷಿಗಳಲ್ಲಿ ಬಹು ಮುಖ್ಯರಾದವರಾಗಿದ್ದರು. ಇವರದು ಅನುಪಮ ಸ್ನೇಹ. ಕೆ.ಸಿ. ರೆಡ್ಡಿ ಸಚಿವರಾಗಿ ದೆಹಲಿಯಲ್ಲಿದ್ದಾಗ ಶಾಸ್ತ್ರಿಯವರು ಗೃಹಮಂತ್ರಿ. ದೆಹಲಿಯ ಜನಪಥ್‌ನಲ್ಲಿ ಇವರದು ಎದುರು ಬದುರು ಮನೆ. ಇವರ ಸ್ನೇಹ ಪರಸ್ಪರರ ಕುಟುಂಬಗಳವರೆಗೂ ವ್ಯಾಪಿಸಿತ್ತು. ರೆಡ್ಡಿಯವರ ಮನೆಯ ಇಡ್ಲಿ ದೋಸೆ ಶಾಸ್ತ್ರಿಯವರಿಗೆ ಅಚ್ಚುಮೆಚ್ಚು. ಶಾಸ್ತ್ರಿವರಂತೆ ರೆಡ್ಡಿಯವರೂ ಸರಳ ಜೀವಿ. ಇಬ್ಬರ ಮಕ್ಕಳೂ ನಡೆದುಕೊಂಡೇ ಶಾಲೆಗೆ ಹೋಗುತ್ತಿದ್ದರಂತೆ. ಮಕ್ಕಳು ಸೈಕಲ್ ಬೇಕೆಂದು ಹಠ ಹಿಡಿದಾಗ ರೆಡ್ಡಿಯವರು ತಮ್ಮ ಮಕ್ಕಳಿಗೆ ಕೊಡಿಸಿದರೆ ನಾನೂ ಕೊಡಿಸುತ್ತೇನೆ ಎಂದು ಶಾಸ್ತ್ರಿ, ಶಾಸ್ತ್ರಿಯವರು ಕೊಡಿಸಿದರೆ ನಾನೂ ಕೊಡಿಸುತ್ತೇನೆ ಎಂದು ರೆಡ್ಡಿ ಹೀಗೆ ಹೇಳಿಕೊಂಡೇ ಅದೆಷ್ಟೋ ಕಾಲ ತಮ್ಮ ಮಕ್ಕಳಿಗೆ ಸೈಕಲ್ ಕೊಡಿಸಲೇ ಇಲ್ಲವಂತೆ. ರೆಡ್ಡಿ ಶಾಸ್ತ್ರಿ ಇಬ್ಬರದೂ ಶುದ್ಧಹಸ್ತದ

ಆಡಳಿತ. ಕಿಂಚಿತ್ ಅವ್ಯವಹಾರ ನಡೆದರೂ ಆಕಾಶವೇ ತಲೆಯ ಮೇಲೆ ಕಳಚಿಬಿದ್ದಂತೆ ಕುಸಿದುಹೋಗುವ ಸ್ವಭಾವ. ಆಗಿನ ಕೆಲಸವನ್ನು ಆಗಿಂದಾಗಲೇ ಮಾಡಿ ಮುಗಿಸುವುದೂ ಕೂಡ ಅವರಿಬ್ಬರ ಶೈಲಿ. ಇವರಿಬ್ಬರನ್ನೂ ಸಂಪುಟದ ಸಹೋದ್ಯೋಗಿಗಳು Do it Now Ministers, ಡಿನ್ (DIN) ಮಿನಿಸ್ಟರ್ಸ್ ಎಂದು ಕರೆಯುತ್ತಿದ್ದರಂತೆ.

ರೆಡ್ಡಿಯವರು ಸುಮ್ಮನೆ ಕೂರುವುದು ಶಾಸ್ತ್ರಿಯವರಿಗೆ ಇಷ್ಟವಿರಲಿಲ್ಲ. ಅವರು ಎತ್ತರೆತ್ತರ ಸ್ಥಾನಗಳಿಗೆ ಹೋಗಬೇಕು ಎಂಬುದು ಅವರ ಇಚ್ಛೆ. ಶಾಸ್ತ್ರಿಯವರು ಮುತುವರ್ಜಿ ವಹಿಸಿದ ಫಲವಾಗಿ ರೆಡ್ಡಿಯವರು ಮಧ್ಯಪ್ರದೇಶದ ರಾಜ್ಯಪಾಲರಾಗಿ ಆಯ್ಕೆಯಾದರು. 1965ರಲ್ಲಿ ರಾಜ್ಯಪಾಲರಾಗಿ ಅಧಿಕಾರ ಸ್ವೀಕರಿಸಿದ ರೆಡ್ಡಿಯವರು ಆರೂವರೆ ವರ್ಷದ ಕಾಲ ರಾಜ್ಯಪಾಲರಾಗಿ ಕಾರ್ಯನಿರ್ವಹಿಸಿ ನಂತರ 1971ರಲ್ಲಿ ನಿವೃತ್ತಿ ಪಡೆದರು. ಮಧ್ಯ ಪ್ರದೇಶದಲ್ಲಿ ಕಾರ್ಯನಿರ್ವಹಿಸುವುದು ಅಷ್ಟೇನೂ ಸುಲಭವಾಗಿರಲಿಲ್ಲ. "ಇಲ್ಲಿಯ ರಾಜಕೀಯ ಬೆಳವಣಿಗೆಗಳಲ್ಲಿ ಮುಳುಗಿಹೋಗಿದ್ದೇನೆ. ಇಲ್ಲಿನ ವಿದ್ಯಮಾನಗಳು ಕ್ಷಣ ಕ್ಷಣಕ್ಕೂ ಬದಲಾಗುತ್ತಿವೆ. ಎಲ್ಲವೂ ಅನಿಶ್ಚಿತ ಮತ್ತು ವಿಚಿತ್ರ. ನನ್ನ ಆರೋಗ್ಯ ಅತ್ಯಂತ ಕ್ಷೀಣವಾಗಿರುವ ಈ ಸಂದರ್ಭದಲ್ಲಿ ಈ ವಿದ್ಯಮಾನಗಳು ನನ್ನನ್ನು ಮುಳ್ಳು ಮೊನೆಯ ಮೇಲೆ ಕೂರಿಸಿವೆ" ಎಂದು ಕರ್ನಾಟಕದ ಮುಖ್ಯಮಂತ್ರಿಯಾಗಿದ್ದ ಶ್ರೀ ವೀರೇಂದ್ರ ಪಾಟೀಲರಿಗೆ ರೆಡ್ಡಿಯವರು 1968ರಲ್ಲಿ ಪತ್ರ ಬರೆದಿರುವುದು ಈ ಮಾತನ್ನು ಸ್ಪಷ್ಟಪಡಿಸುತ್ತದೆ.

ರೆಡ್ಡಿಯವರು ಮಧ್ಯ ಪ್ರದೇಶದ ರಾಜ್ಯಪಾಲರಾಗಿ ಕಾರ್ಯನಿರ್ವಹಿಸುತ್ತಿರುವಾಗಲೇ ಶಾಸ್ತ್ರೀಜಿಯವರು ತಾಷ್ಕೆಂಟ್‌ನಲ್ಲಿ ನಿಧನರಾದ ಸುದ್ದಿ ಬಂದಿತು. ಆ ಸುದ್ದಿ ತಿಳಿದ ಕೂಡಲೇ ಹೃದಯಾಘಾತಕ್ಕೊಳಗಾದ ರೆಡ್ಡಿಯವರು ದೀರ್ಘಕಾಲ ಚಿಕಿತ್ಸೆ ಪಡೆಯಬೇಕಾಯಿತು. ರಾಜ್ಯಪಾಲ ಹುದ್ದೆಯಿಂದ ನಿವೃತ್ತರಾದ ನಂತರ ಬೆಂಗಳೂರಿಗೆ ಬಂದು ನೆಲೆಸಿದ ರೆಡ್ಡಿಯವರು ನಂತರ ರಾಜಕೀಯದಲ್ಲಿ ಮುಂದುವರೆಯ ಬಯಸಲಿಲ್ಲ.

ಕೊನೆಯದಾಗಿ.........

ಸ್ವಾತಂತ್ರ್ಯಪೂರ್ವದಲ್ಲಿಯೂ ಹಾಗೂ ಸ್ವಾತಂತ್ರ್ಯ ನಂತರವೂ ಕರ್ನಾಟಕ ಹಾಗೂ ಭಾರತದ ನಿರ್ಮಾಣ ಮತ್ತು ಅಭಿವೃದ್ಧಿಗಾಗಿ ದುಡಿದ ಒಬ್ಬ ಒಳ್ಳೆಯ ನಾಯಕರಾಗಿ ರೆಡ್ಡಿ ಕಾಣಿಸಿಕೊಳ್ಳುತ್ತಾರೆ. ಕಾಂಗ್ರೆಸ್‌ನಲ್ಲಿ ಅವರು ಎಲ್ಲರ ಗೌರವ ಸಂಪಾದಿಸಿದ್ದರು. ಪಕ್ಷದ ಮುತ್ಸದ್ದಿಗಳು ಅವರನ್ನು ವಿಶೇಷ ಮರ್ಯಾದೆಯಿಂದ ಕಾಣುತ್ತಿದ್ದರು. ಅವರು ಮೊದಲ ಪಂಕ್ತಿಯ ನಾಯಕ ಎನಿಸಿಕೊಳ್ಳಲು ತಕ್ಕ ವ್ಯಕ್ತಿಯಾಗಿದ್ದರು. ಪದವಿ, ಅಧಿಕಾರಗಳು ರೆಡ್ಡಿಯವರನ್ನು ಹಿಂಬಾಲಿಸಿದವೇ ಹೊರತು ಅವರು ಅವುಗಳ ಬೆನ್ನು ಹತ್ತಲಿಲ್ಲ. ಕೈಗೆ ಬಂದ ಅಧಿಕಾರವನ್ನು ಯಾವ ಆಸೆ, ದ್ವಂದ್ವಗಳಿಲ್ಲದೆ ಬಿಟ್ಟುಕೊಟ್ಟರು. ಮುಖ್ಯಮಂತ್ರಿ ಪದವಿಗೆ ಕೆಂಗಲ್ ಹನುಮಂತಯ್ಯನವರ ಗುಂಪಿನಿಂದ ತೀವ್ರ ಉಪಟಳ ಆರಂಭವಾದಾಗ ರೆಡ್ಡಿಯವರು ಹೆಚ್ಚಿನ ಗಲಭೆ, ಬಿಕ್ಕಟ್ಟುಗಳಿಗೆ ಎಡೆಮಾಡಿಕೊಡದೆ ಶಾಂತಚಿತ್ತರಾಗಿಯೇ ಪದವಿಯನ್ನು ತ್ಯಜಿಸಿದರು. ಕೇಂದ್ರ ಸಚಿವರಾಗಿದ್ದಾಗ ಟಿಟಿಕೆ ಯವರಿಂದ ಅವರ ಸ್ಥಾನಕ್ಕೆ ಸಂಚಕಾರ ಒದಗಿತು. ಆಗಲೂ ಸಹ ಅವರು ಮರು ಮಾತಿಲ್ಲದೆ ಖಾತೆಯ ಬದಲಾವಣೆಯನ್ನು ಒಪ್ಪಿಕೊಂಡರು. ಉಸಿರುಗಟ್ಟಿಸುವ ಪರಿಸರದಲ್ಲಿ ಕಾರ್ಯನಿರ್ವಹಿಸುವುದು ಅವರಿಗೆ ಬೇಡವಾಗಿತ್ತು. ಇದರಿಂದ ಹೊರಬರುವುದಕ್ಕೆ ಅವರು

[illegible]ತ್ತಿದ್ದರು. ಅಧಿಕಾರ ಶಾಶ್ವತವಲ್ಲ, ಅದು ಇಂದು ಇದ್ದು ನಾಳೆ ಹೋಗುವಂಥದ್ದು. ಆದ್ದರಿಂದ ಸರ್ಕಾರದ ಸವಲತ್ತುಗಳನ್ನು ನೆಚ್ಚಿಕೊಂಡು ನಿಮ್ಮ ಜೀವನ ಶೈಲಿಯನ್ನು ರೂಪಿಸಿಕೊಳ್ಳಬೇಡಿ ಎಂದು ಅವರು ತಮ್ಮ ಮಕ್ಕಳಿಗೆ ಹೇಳುತ್ತಿದ್ದರು.

ರೆಡ್ಡಿಯವರ ಕುಟುಂಬ ಜೀವನ ಆದರ್ಶಪೂರ್ಣವಾಗಿತ್ತು. ಅವರು ಕುಟುಂಬ ಪ್ರೇಮಿ. ಚಿಕ್ಕಮಕ್ಕಳ ಬಗ್ಗೆ ಅವರಿಗೆ ಅಪಾರ ಅಕ್ಕರೆ. ಐವರು ಗಂಡುಮಕ್ಕಳು ಹಾಗೂ ಒಬ್ಬ ಹೆಣ್ಣುಮಗಳ ರೆಡ್ಡಿಯವರ ಕುಟುಂಬ ಸಾಕಷ್ಟು ದೊಡ್ಡದು. ಆದರೂ ತಮ್ಮ ಅಣ್ಣನ ಬಗ್ಗೆ ಅಪಾರ ಪ್ರೀತಿ ಗೌರವಗಳನ್ನು ಹೊಂದಿದ್ದ ರೆಡ್ಡಿಯವರು ತಾವು ಎಲ್ಲೇ ಹೋದರೂ ಅಣ್ಣ ವೆಂಕಟರಾಮರೆಡ್ಡಿಯವರ ಮಕ್ಕಳನ್ನೂ ಜೊತೆಯಲ್ಲಿಟ್ಟುಕೊಂಡು ಓದಿಸಿ, ಬೆಳೆಸಿ ನೆಲೆ ನಿಲ್ಲುವಂತೆ ಮಾಡುವ ಸಂಪೂರ್ಣ ಜವಾಬ್ದಾರಿ ವಹಿಸಿಕೊಂಡರು. ಈ ವಿಷಯದಲ್ಲಿ ರೆಡ್ಡಿಯವರ ಪತ್ನಿ ಸರೋಜಮ್ಮನವರ ಸಹಕಾರ ಉಲ್ಲೇಖನೀಯ. ಪತಿ ಬಿಡುವಿಲ್ಲದ ವ್ಯಕ್ತಿ ಎಂಬುದನ್ನು ಅರ್ಥ ಮಾಡಿಕೊಂಡಿದ್ದ ಅವರು ಕುಟುಂಬ ಸಂಬಂಧವಾದ ಎಲ್ಲ ಜವಾಬ್ದಾರಿಗಳನ್ನೂ ವಹಿಸಿಕೊಂಡು ನಿರ್ವಹಿಸಿದರು. ಸ್ವತಃ ಇಂಗ್ಲಿಷ್ ಮತ್ತು ಹಿಂದಿ ಭಾಷೆಗಳನ್ನೂ ಚೆನ್ನಾಗಿ ತಿಳಿದಿದ್ದ ಅವರು ಹಿಂದೀ ಪ್ರಚಾರ ಪರಿಷತ್ತಿನ ಸಕ್ರಿಯ ಕಾರ್ಯಕರ್ತರಾಗಿ ಗಮನಾರ್ಹ ಸೇವೆ ಸಲ್ಲಿಸಿದರು. ಅನೇಕ ಸಾಮಾಜಿಕ ಚಟುವಟಿಕೆಗಳಲ್ಲಿಯೂ ಅವರು ತೊಡಗಿಕೊಂಡಿದ್ದರು. ಅವರು 1959ರಲ್ಲಿ ಸ್ಥಾಪಿತವಾದ ದೆಹಲಿ ಕನ್ನಡ ಶಿಕ್ಷಣ ಸಂಘದ ವತಿಯಿಂದ ನಡೆಯುತ್ತಿದ್ದ ಕನ್ನಡ ಹೈಯರ್ ಸೆಕೆಂಡರಿ ಶಾಲೆಯ ಶಾಲಾ ಮಂಡಳಿಯ ಉಪಾಧ್ಯಕ್ಷೆಯೂ ಆಗಿದ್ದರು.

ರೆಡ್ಡಿಯವರ ಸರಳತೆ ಅವರ ಆಪ್ತ ಮಿತ್ರರಿಗೇ ವಿಸ್ಮಯ ತರುತ್ತಿತ್ತು. ಅಧಿಕಾರದ ಗಡಿಬಿಡಿಯ ಮಧ್ಯೆಯೂ ಆಪ್ತ ಮಿತ್ರರಿಗೆ ಶುಭಾಶಯ ಪತ್ರಗಳನ್ನು ಕಳುಹಿಸಲು ಅವರು ಮರೆಯುತ್ತಿರಲಿಲ್ಲ. ಮಧ್ಯ ಪ್ರದೇಶದ ರಾಜ್ಯಪಾಲ ವೃತ್ತಿಯನ್ನು ಮುಗಿಸಿ ಬಂದನಂತರ ಮೈಸೂರಿನಲ್ಲಿ ತಮ್ಮ ಕಾಂಗ್ರೆಸ್ ಮಿತ್ರ ಎಂ.ಎನ್. ಜೋಯಿಸ್ ಅವರನ್ನು ಭೇಟಿ ಮಾಡಿ ನಮ್ಮ ಜೊತೆಯಲ್ಲಿ ಕೆಲಸ ಮಾಡಿದವರು ಯಾರ್‍ಯಾರು ಇದ್ದಾರೆ ಹೇಳಿ, ಅವರನ್ನೆಲ್ಲ ಹೋಗಿ ನೋಡಿಕೊಂಡು ಬರುತ್ತೀನಿ ಎಂದರಂತೆ. ಆದರೆ ಹೀಗೆ ಒಬ್ಬೊಬ್ಬರನ್ನೇ ಹುಡುಕಿಕೊಂಡು ಹೋಗುವುದು ತೊಂದರೆ ಎಂದು ಹೇಳಿದ ಜೋಯಿಸರು ಅವರ ಹಳೆಯ ಕಾಂಗ್ರೆಸ್ ಮಿತ್ರರನ್ನೆಲ್ಲ ಒಂದೆಡೆ ಸೇರಿಸುವಂಥ ವ್ಯವಸ್ಥೆ ಮಾಡಿದರು. ಅದು ಹಳೆಯ ಮಿತ್ರರಿಗೆಲ್ಲ ಪುನರ್ಮಿಲನದ ಅಪೂರ್ವ ಅವಕಾಶ ಒದಗಿಸಿತು.

ಯಾರ ಬಗೆಗಾದರೂ ವಿರುದ್ಧ ಕ್ರಮ ಕೈಗೊಳ್ಳುವಾಗಲೂ ಅವರೊಂದಿಗೆ ಸ್ನೇಹ, ಅನುನಯಗಳಿಂದ ವರ್ತಿಸುತ್ತಿದ್ದುದು ರೆಡ್ಡಿಯವರಲ್ಲಿದ್ದ ಒಂದು ವಿಶೇಷ ಗುಣ. ಅವರು ಕೇಂದ್ರ ಸಚಿವರಾಗಿದ್ದ ಸಂದರ್ಭದಲ್ಲಿ ವಿದೇಶಿ ಒಡೆತನದಲ್ಲಿದ್ದ ತೈಲ ಸಂಸ್ಥೆಗಳನ್ನು ಸರ್ಕಾರದ ಒಡೆತನಕ್ಕೆ ತೆಗೆದುಕೊಳ್ಳುವ ವಿಶೇಷ ಪರಿಸ್ಥಿತಿಯನ್ನು ನಿಭಾಯಿಸಬೇಕಾಗಿ ಬಂತು. ಆಗ ಭಾರತದಲ್ಲಿದ್ದ ತೈಲ ಸಂಸ್ಥೆಗಳೆಲ್ಲವೂ ವಿದೇಶಿ ಒಡೆತನದವು. ಈ ಸಂಸ್ಥೆಗಳು ಅತ್ಯುತ್ತಮವಾಗಿ ಕಾರ್ಯನಿರ್ವಹಿಸುವುದರ ಜೊತೆಗೆ ಅಪಾರ ಲಾಭವನ್ನು ಗಳಿಸುತ್ತಿದ್ದವು. ಇವು ಸರ್ಕಾರಕ್ಕೆ ಸರಿಯಾದ ಲಾಭದ ಪಾಲನ್ನು ಕೊಡದೆ ವಂಚಿಸುತ್ತಿವೆ ಎಂಬ ಹಿನ್ನೆಲೆಯಲ್ಲಿ ಭಾರತ ಸರ್ಕಾರದ ಒಡೆತನದಲ್ಲಿಯೇ ತೈಲ ಸಂಸ್ಥೆಗಳನ್ನು ಸ್ಥಾಪಿಸುವ ಯೋಜನೆ ಹಾಕಲಾಯಿತು. ಆದರೆ ತಮ್ಮನ್ನು ಹೀಗೆ ಏಕಾಏಕಿ ಓಡಿಸಬಹುದು ಎಂದು ವಿದೇಶೀ ಕಂಪನಿಗಳವರು ತಿಳಿದಿರಲಿಲ್ಲ. ಭಾರತವನ್ನು

ಪೂರ್ವಾರ್ಧಗೋಳದ ಕೇಂದ್ರವಾಗಿ ಮಾಡಬೇಕೆನ್ನುವ ಉದ್ದೇಶ ಹೊಂದಿದ್ದ ಆ ಕಂಪನಿಗಳು ತಮ್ಮ ಸಂಶೋಧನಾ ಅಭಿವೃದ್ಧಿ ವ್ಯವಸ್ಥೆ, ಶುದ್ಧೀಕರಣ ಸ್ಥಾವರ ಮೊದಲಾದುವನ್ನೆಲ್ಲ ಭಾರತದಲ್ಲಿ ಸ್ಥಾಪಿಸಿದ್ದರು. ಭಾರತೀಯರಿಗೆ ವಿದೇಶಗಳಲ್ಲಿ ತರಬೇತಿ ಕೊಡಿಸಿದ್ದರು. ದೇಶದ ಬೇರೆ ಬೇರೆ ಭಾಗಗಳಲ್ಲಿ ಸಂಸ್ಥೆಯ ಕಛೇರಿಗಳನ್ನು ತೆರೆದಿದ್ದರು. ಸರ್ಕಾರದ ಕ್ರಮದಿಂದ ವಿದೇಶಿ ಕಂಪನಿಗಳಿಗೆ ನೋವಾಗಿದ್ದು ಸಹಜ. ಅವರ ಸಂಕಷ್ಟಗಳನ್ನು ರೆಡ್ಡಿಯವರು ಅರ್ಥಮಾಡಿಕೊಂಡಿದ್ದರು. ಆದ್ದರಿಂದ ಅವರು ವಿದೇಶೀ ಕಂಪನಿಗಳನ್ನು ಶತ್ರುಗಳು ಎಂಬಂತೆ ಪರಿಗಣಿಸದೆ, ಸರ್ಕಾರದ ನಿಲುವನ್ನು ಸ್ನೇಹಪರವಾದ ಮಾತುಗಳಲ್ಲಿಯೇ ಅಲ್ಲಿನ ಅಧಿಕಾರಿಗಳಿಗೆ ಮನದಟ್ಟು ಮಾಡಿದರು. ಆದರೆ ರೆಡ್ಡಿಯವರ ನಂತರ ಬಂದ ಸಚಿವರುಗಳಲ್ಲಿ, ಅಧಿಕಾರಿಗಳಲ್ಲಿ ಇಂತಹ ಸ್ನೇಹಪರತೆ ಇರಲಿಲ್ಲ. ವಿದೇಶೀ ಕಂಪನಿಗಳಿಂದಾಗಿಯೇ ನಮ್ಮ ದೇಶ ಮುಳುಗಿ ಹೋಗಿದೆಯೇನೋ ಎನ್ನುವಂತೆ ಸಚಿವರುಗಳು, ರಾಜಕಾರಣಿಗಳು ಹೇಳಿಕೆಗಳನ್ನು ಕೊಡುತ್ತಿದ್ದರು. ವಿದೇಶಿ ಕಂಪನಿಯ ಅಧಿಕಾರಿಗಳೊಂದಿಗೆ ರಕ್ತಪಿಪಾಸುಗಳಂತೆ ವರ್ತಿಸುತ್ತಿದ್ದರು. ಅಂತಿಮವಾಗಿ ವಿದೇಶಿ ಕಂಪನಿಗಳ ವ್ಯವಹಾರ ಭಾರತಕ್ಕೆ ಹಸ್ತಾಂತರಗೊಂಡಿತು.

ಮಧ್ಯಪ್ರದೇಶದಿಂದ ಹಿಂದಿರುಗಿದ ನಂತರ ರೆಡ್ಡಿಯವರು ಜಯನಗರದಲ್ಲಿದ್ದ ಮನೆಯಲ್ಲಿ ನೆಲೆಸಿದರು. ಆ ಮನೆಯನ್ನು ಅವರ ಮಾವ ಗುರುವಾರೆಡ್ಡಿಯವರು ಮಗಳಿಗಾಗಿ ಕಟ್ಟಿಸಿಕೊಟ್ಟಿದ್ದರು. ಮನ್ನಾಜಿರಾವ್, ಜೀನಾಬಾಯಿ ದೇವಿದಾಸ್, ಡಿವಿಜಿ, ವೆಂಕಾಜಿರಾವ್, ಹೆಚ್.ಎಸ್. ಸೀತಾರಾಂ, ವಿ. ವೆಂಕಟಪ್ಪ, ಬಿ.ಎಸ್.ಗುಪ್ತ, ಎಚ್.ಸಿ. ಮಲ್ಲಯ್ಯ ಮೊದಲಾದವರೆಲ್ಲ ರೆಡ್ಡಿಯವರ ಕೊನೆಗಾಲದ ಸ್ನೇಹಿತರು. ಆಗಾಗ ಅವರುಗಳ ಭೇಟಿಯಾಗುತ್ತಿತ್ತು. ಈಗಿನ ಅವ್ಯವಸ್ಥೆ, ಭ್ರಷ್ಟಾಚಾರಗಳ ಬಗ್ಗೆ ಅವರೆಲ್ಲರ ಮಾತಿನಲ್ಲೂ ವ್ಯಥೆ ತುಂಬಿರುತ್ತಿತ್ತು.

ಸ್ವಾತಂತ್ರ್ಯ ನಂತರದ ರಾಜಕೀಯದಲ್ಲಿ ತಲೆದೋರಿದ ಲಂಚ ರುಷುವತ್ತುಗಳು, ರಾಜಕೀಯ ಹುನ್ನಾರಗಳು, ಒಳಸಂಚುಗಳು, ಮೇಲಾಟಗಳು, ಅಟ್ಟಹಾಸ ದರ್ಪಗಳಿಂದ ರೆಡ್ಡಿಯವರ ಮನಸ್ಸು ರೋಸಿಹೋಗಿತ್ತು. ಮನಶ್ಶಾಂತಿಗಾಗಿ ಅವರು ತಿರುವಣ್ಣಾಮಲೈ, ರಮಣಮಹರ್ಷಿಗಳ ಆಶ್ರಮ, ಪಾಂಡಿಚೆರಿಯ ಅರವಿಂದಾಶ್ರಮ, ಬಸವನಗುಡಿಯ ಥಿಯೊಸಾಫಿಕಲ್ ಸೊಸೈಟಿಗಳಿಗೆ ಹೋಗಿಬರುತ್ತಿದ್ದರು. ಆಧ್ಯಾತ್ಮಿಕ ಒಲವು ಆ ಕಾಲದ ಬದುಕಿನ ಒಂದು ಲಕ್ಷಣವೇ ಆಗಿತ್ತೇನೊ. ಕೆ.ಸಿ. ರೆಡ್ಡಿ, ಕೆಂಗಲ್ ಹನುಮಂತಯ್ಯ, ಟಿ. ಸಿದ್ಧಲಿಂಗಯ್ಯ ಮೊದಲಾದ ಮುಂಚೂಣಿಯ ನಾಯಕರಲ್ಲಿ ಆಧ್ಯಾತ್ಮಿಕ ಚಿಂತನೆಯನ್ನು ಪ್ರಧಾನವಾಗಿ ಕಾಣಬಹುದಿತ್ತು. ರೆಡ್ಡಿಯವರು ಯಾವುದೇ ಪೂರ್ವಸಿದ್ಧತೆಯಿಲ್ಲದೆ ಅಧ್ಯಾತ್ಮಿಕ ವಿಚಾರಗಳ ಬಗ್ಗೆ ಗಂಟೆಗಟ್ಟಲೆ ಭಾಷಣ ಮಾಡಬಲ್ಲವರಾಗಿದ್ದರು.

ರೆಡ್ಡಿಯವರು ಪ್ರಚಂಡ ಓದುಗಾರ. ರಾಜಕೀಯದಿಂದ ನಿವೃತ್ತಿಯಾದ ನಂತರ ಸತತವಾಗಿ ಓದುತ್ತಿದ್ದರು. ಮಕ್ಕಳ ಮನೆಯಲ್ಲಾಗಲೀ ಅಣ್ಣನ ಮಕ್ಕಳ ಮನೆಯಲ್ಲಾಗಲೀ ಸಾಕಷ್ಟು ಪುಸ್ತಕಗಳಿಲ್ಲದಿದ್ದರೆ ನೀವು ಸಾಕಷ್ಟು ಪುಸ್ತಕ ಇಟ್ಟಿಲ್ಲ ಎಂದು ಅಸಮಾಧಾನಗೊಳ್ಳುತ್ತಿದ್ದರು.

ನಿವೃತ್ತಿಯ ನಂತರ ಅನೇಕ ಸಾಮಾಜಿಕ ಕಾರ್ಯಗಳಲ್ಲಿ ರೆಡ್ಡಿಯವರು ತೊಡಗಿಕೊಂಡರು. ಅವರಿಗೆ ಪ್ರಕೃತಿ ಚಿಕಿತ್ಸೆ ಪದ್ಧತಿಯಲ್ಲಿ ತುಂಬ ಆಸಕ್ತಿ ಇತ್ತು. ಅವರು ಜಯನಗರದಲ್ಲಿ ಈಗಿರುವ ಪ್ರಕೃತಿ ಚಿಕಿತ್ಸಾ ಕೇಂದ್ರದ ಸ್ಥಾಪಕ ಅಧ್ಯಕ್ಷರಾಗಿದ್ದರು.

ಕೊನೆ ಕೊನೆಯಲ್ಲಿ ರೆಡ್ಡಿಯವರ ಆರೋಗ್ಯ ತೀರಾ ಬಿಗಡಾಯಿಸಿತು. ಕಿವಿ ನೋವು ಎಂದಿನಂತೆ ಅವರನ್ನು ಭಾದಿಸುತ್ತಲೇ ಇತ್ತು. ಆಗ ಅವರಿಗೆ ಯಾರೊಡನೆಯೂ ಮಾತಾಡುವ ಮನಸ್ಸಿರುತ್ತಿರಲಿಲ್ಲ. 1976ರಲ್ಲಿ ಜಯನಗರದ ಮನೆಯಲ್ಲಿರುವಾಗಲೇ ಅವರಿಗೆ ಹೃದಯಾಘಾತವಾಯಿತು. ತಕ್ಷಣ ಅವರನ್ನು ಮಾರ್ಥಾಸ್ ಆಸ್ಪತ್ರೆಗೆ ಸೇರಿಸಲಾಯಿತು. ಆದರೆ ಆಸ್ಪತ್ರೆ ಸೇರುವುದು ಅವರಿಗಿಷ್ಟವಿರಲಿಲ್ಲ. ನನಗೆ ಯಾವ ಚಿಕಿತ್ಸೆಯೂ ಅಗತ್ಯವಿಲ್ಲ ಎಂದು ಹೇಳಿ ಗಾಂಧೀ ಮಾರ್ಗದ ಉಪವಾಸ ವ್ರತ ಹಿಡಿಯುತ್ತಿದ್ದರು. ಹೀಗೆಲ್ಲ ಮಾಡಿದರೆ ಟ್ಯೂಬ್ ಮೂಲಕ ಆಹಾರ ಕೊಡಬೇಕಾಗುತ್ತೆ ಎಂದು ಎಚ್ಚರಿಸಿದರೆ If you do that I Will take Action ಎಂದು ಮಂಪರಿನಲ್ಲಿಯೇ ಹೇಳುತ್ತಿದ್ದರಂತೆ.

1976ರ ಫೆಬ್ರವರಿ 27ರಂದು ರೆಡ್ಡಿ ನಿಧನರಾದರು. ಅವರ ನಿಧನದ ವಿಷಯ ದೊಡ್ಡ ಸುದ್ದಿಯಾಗಲಿಲ್ಲ. ಕೆಂಗಲ್ ಹನುಮಂತಯ್ಯ, ದೇವರಾಜ ಅರಸು ಮೊದಲಾದ ಗಣ್ಯರು ಅವರ ಪಾರ್ಥಿವ ಶರೀರಕ್ಕೆ ಅಂತಿಮ ನಮನ ಸಲ್ಲಿಸಲು ಜಯನಗರದ ಮನೆಗೆ ಧಾವಿಸಿ ಬಂದರಂತೆ. ಅಲ್ಲಿ ಕೆಲವೇ ಜನ ಸೇರಿದ್ದನ್ನು ನೋಡಿ ಕೆಂಗಲ್ ಹನುಮಂತಯ್ಯನವರು ಇಂಥ ದೊಡ್ಡ ವ್ಯಕ್ತಿಗೆ ಗೌರವ ತೋರಿಸುವುದೂ ನಮ್ಮ ಜನಕ್ಕೆ ಗೊತ್ತಿಲ್ಲ ಎಂದು ಗುಡುಗಿದರಂತೆ. ರೆಡ್ಡಿಯವರು ಒಮ್ಮೆ ವಿಲ್ಸನ್ ಗಾರ್ಡನ್ ಕಡೆ ಕಾರಿನಲ್ಲಿ ಹೋಗುತ್ತಿದ್ದಾಗ ಆಗಷ್ಟೆ ಪೂರ್ಣಗೊಂಡಿದ್ದ ವಿದ್ಯುತ್ ಚಿತಾಗಾರವನ್ನು ನೋಡಿ ನನ್ನ ಅಂತಿಮ ಸಂಸ್ಕಾರ ಇಲ್ಲಿ ಆಗಬೇಕು ಎಂದಿದ್ದರಂತೆ. ಅವರ ಬಯಕೆಯಂತೆ ವಿಲ್ಸನ್ ಗಾರ್ಡನ್ನಿನ ವಿದ್ಯುತ್ ಚಿತಾಗಾರದಲ್ಲಿಯೇ ಅವರ ಅಂತಿಮ ಸಂಸ್ಕಾರ ನಡೆಯಿತು.

ಅಧಿಕಾರವನ್ನು, ಜನಸೇವೆಗೆ ಒದಗಿದ ಅವಕಾಶ ಎಂದು ಭಾವಿಸಿದ್ದ ರೆಡ್ಡಿಯವರು ಅಧಿಕಾರ ಬಂದಾಗ ಹಿಗ್ಗಲಿಲ್ಲ, ಅಧಿಕಾರ ಹೋದಾಗ ಕುಗ್ಗಲಿಲ್ಲ. ರಾಜಪ್ರಭುತ್ವದ ಹಿಡಿತದಿಂದ ಕರ್ನಾಟಕವನ್ನು ಮುಕ್ತಗೊಳಿಸುವಲ್ಲಿ, ನವಭಾರತ ನಿರ್ಮಾಣದಲ್ಲಿ ಅಷ್ಟೆಲ್ಲ ಮುಖ್ಯ ಪಾತ್ರ ವಹಿಸಿದ್ದ ರೆಡ್ಡಿಯವರ ನೆನಪನ್ನು ಉಳಿಸಿಕೊಂಡು ಬರುವಂತಹ ಸರಿಯಾದ ಸ್ಮಾರಕ ನಮ್ಮಲ್ಲಿಲ್ಲ. ಸ್ವಾತಂತ್ರ್ಯ ಸುವರ್ಣ ಮಹೋತ್ಸವ ವರ್ಷದಲ್ಲಿ ಕರ್ನಾಟಕ ಸ್ವಾತಂತ್ರ್ಯ ಸಂಗ್ರಾಮದ ನೆನಪುಗಳು ತೇಲಿಬಂದವು. ರೆಡ್ಡಿಯವರ ವ್ಯಕ್ತಿತ್ವಕ್ಕೆ ಸರಿಯಾದ ಸ್ಮಾರಕವಿಲ್ಲ ಎಂಬ ಕೂಗು ವಿಧಾನ ಸಭೆಯಲ್ಲಿಯೂ ಪ್ರಸ್ತಾಪವಾಯಿತು. ಆದರೂ ಈ ದಿಸೆಯಲ್ಲಿ ಏನೂ ಆಗಿಲ್ಲ. ರೆಡ್ಡಿಯವರ ಮಕ್ಕಳು ಸದಾಶಿವನಗರದಲ್ಲಿ ಆರಂಭಿಸಿರುವ ಈಜುಕೊಳಕ್ಕೆ ಕೆ.ಸಿ. ರೆಡ್ಡಿ ಈಜುಕೊಳ ಎಂದು ಹೆಸರಿಟ್ಟಿದ್ದಾರೆ. ರೆಡ್ಡಿಯವರು ನಂಬಿಕೊಂಡು ಬಂದ ಸರಳತೆ, ಪ್ರಾಮಾಣಿಕತೆ ಹಾಗೂ ದೇಶಭಕ್ತಿಯ ಮೌಲ್ಯಗಳನ್ನು ನೆನಪಿಸುವುದಕ್ಕಾಗಿಯಾದರೂ ಒಂದು ಸೂಕ್ತ ಸ್ಮಾರಕ ಅಗತ್ಯವಿದೆ. ಈ ನಿರೀಕ್ಷೆ ಕೈಗೂಡುವುದೆ?

## ಪ್ರಜಾಪ್ರತಿನಿಧಿ ಸಭೆಯ ನಡೆವಳಿಕೆಗಳು

## (23 ಡಿಸೆಂಬರ್, 1947)

### 1.ಮುಖ್ಯಮಂತ್ರಿಗಳ ಉಪಸಂಹಾರ ಭಾಷಣ:

**ಕೆ. ಚೆಂಗಲರಾಯರೆಡ್ಡಿಯವರು (ಪ್ರಧಾನ ಸಚಿವರು):-** ಮೊಟ್ಟಮೊದಲನೆಯದಾಗಿ ನಾನು ಈಗ ಹೇಳುವ ವಿಷಯ ಇಂಗ್ಲಿಷಿನಲ್ಲಿ ಟೈಪ್ ಆಗಿರುವುದರಿಂದ ಅದನ್ನು ಇಂಗ್ಲಿಷಿನಲ್ಲಿ ಓದುತ್ತೇನೆ. ಇದಕ್ಕಾಗಿ ನನ್ನನ್ನು ಕ್ಷಮಿಸಬೇಕೆಂದು ಸದಸ್ಯರಲ್ಲಿ ಬಿನ್ನವಿಸುತ್ತೇನೆ. ಈ ಭಾಷಣದ ಕನ್ನಡ ತುರ್ಜುಮೆಯನ್ನು ಸದಸ್ಯರಿಗೆ ಹಂಚಲಾಗುತ್ತದೆ (ಇಂಗ್ಲಿಷ್ ಭಾಷಣದ ಅನುವಾದವನ್ನು ಇಲ್ಲಿ ಕೊಡಲಾಗಿದೆ).

ಸಭೆಯ ಪ್ರತಿಯೊಂದು ಅಧಿವೇಶನದ ಮುಕ್ತಾಯ ಘಟ್ಟದಲ್ಲಿ ಸರ್ಕಾರದ ಪರವಾಗಿ ಕೆಲವೊಂದು ಮಾತುಗಳನ್ನು ಹೇಳುವುದು ಈ ಸದನದ ಸಂಪ್ರದಾಯ. ಇದರ ಪಕಾರವಾಗಿ ನಾನು ಈ ಅವಕಾಶವನ್ನು ಬಳಸಿಕೊಂಡು, ಮುಖ್ಯಮಂತ್ರಿಯಾಗಿ ನನ್ನ ಅಭಿಪ್ರಾಯಗಳನ್ನು ವ್ಯಕ್ತಪಡಿಸುತ್ತಿದ್ದೇನೆ.

ಪ್ರಾರಂಭದಲ್ಲಿಯೇ ನಾನು ಅತ್ಯಂತ ವಿಷಾದದಿಂದ ನಿವೇದಿಸಿಕೊಳ್ಳುವ ಅಂಶವೇನೆಂದರೆ ನನ್ನ ಅನಾರೋಗ್ಯದ ಕಾರಣದಿಂದಾಗಿ ಅಧಿವೇಶನದ ಬಹುಪಾಲು ಸಮಯದವರೆಗೂ ನಾನು ಹಾಜರಾಗಲು ಸಾಧ್ಯವಾಗಲಿಲ್ಲ. ಮುಕ್ತಾಯದ ದಿನಗಳಲ್ಲಿಯಾದರೂ ಈ ಸದನದ ಪರ್ಯಾಲೋಚನೆಗಳಲ್ಲಿ ಭಾಗವಹಿಸುವಂತಾದುದೇ ಸಂತೋಷ.

ಕಾಂಗ್ರೆಸ್ ಮತ್ತು ದಿವಾನರ ನಡುವೆ ಒಪ್ಪಂದವಾದ ನಂತರ ಹಾಗೂ ಮಹಾಸ್ವಾಮಿಯವರಾದ ಮಹಾರಾಜರವರ ಅನುಮೋದನೆಯ ನಂತರ ರೂಪಿತವಾದ ಈ ಹೊಸ ಮಂತ್ರಿಮಂಡಲಕ್ಕೆ ಹಾರ್ದಿಕ ಸ್ವಾಗತ ಬಯಸಿದ ಈ ಘನತೆವೆತ್ತ ಸದನಕ್ಕೆ ನನ್ನ ಹೃತ್ಪೂರ್ವಕ ಧನ್ಯವಾದಗಳನ್ನು ಅರ್ಪಿಸುತ್ತಿದ್ದೇನೆ. ಹೊಸ ಮಂತ್ರಿಮಂಡಲದ ಬಗ್ಗೆ ಅನೇಕ ರೀತಿಗಳಲ್ಲಿ ವಿಶ್ವಾಸ ವ್ಯಕ್ತಪಡಿಸಲಾಗಿದೆ. ಅದಕ್ಕಾಗಿಯೂ ಸಹ ನನ್ನ ಕೃತಜ್ಞತೆಗಳನ್ನು ವ್ಯಕ್ತಪಡಿಸುತ್ತಿದ್ದೇನೆ.

ಸಭೆಗೆ ಒಂದು ಹೊಸ ವಾತಾವರಣದ ಅನುಭವವಾಗಿರುವುದು ಖಂಡಿತ. ಹೊಸ ಸಂವಿಧಾನವನ್ನು ಸುಭದ್ರವಾಗಿ ಪ್ರತಿಷ್ಠಾಪಿಸಿ ಉದ್ಘಾಟಿಸಿದ ನಂತರವೇ ಶಾಸಕಾಂಗದ ಪೂರ್ಣ ಪ್ರಜಾಸತ್ತಾತ್ಮಕ ಸದನಗಳು ಅಸ್ತಿತ್ವಕ್ಕೆ ಬರುತ್ತವೆ ಎಂಬುದು ನಿಜ. ಆದರೂ ಈ ಸಭೆಯೂ ಕೂಡ ಈ ಅಧಿವೇಶನದಲ್ಲಿ ಕೇವಲ "ಪ್ರತಿನಿಧಿ ಸಭೆ" ಯಾಗಿಲ್ಲ. ತನ್ನ ನಿರ್ಣಯಗಳಿಗೆ ಸರ್ಕಾರವು ಬದ್ಧವಾಗುವಂತೆ ಮಾಡುವ ಶಕ್ತಿ ತನಗಿದೆ ಎಂಬ ಪೂರ್ಣ ಪ್ರಜ್ಞಾಪೂರ್ವಕತೆಯಿಂದಲೇ ಈ ಸದನ ಕಾರ್ಯ ನಿರ್ವಹಿಸಿದೆ ಹಾಗೂ ಅವಿಶ್ವಾಸ ನಿರ್ಣಯವನ್ನು ಮಂಡಿಸುವ ಹಾಗೂ ಅನುಮೋದಿಸುವ ಮೂಲಕ ಮಂತ್ರಿಮಂಡಲವನ್ನು ಪದಚ್ಯುತಿಗೊಳಿಸುವಂತಹ ಅಧಿಕಾರವನ್ನೂ ಸಹ ಇದು ಪಡೆದುಕೊಂಡಿದೆ. ಈ ವ್ಯವಸ್ಥೆಯಲ್ಲಿ ಕೆಲವೊಂದು ಲೋಪದೋಷಗಳಿವೆ. ಅದು ನಮ್ಮೆಲ್ಲರಿಗೂ ಗೊತ್ತು. ಆದರೆ ಈಗ ನಾವಿರುವಂತಹ ಸ್ಥಿತ್ಯಂತರದ ಸಾಂವಿಧಾನಿಕ ಸ್ಥಿತಿಯಲ್ಲಿ ಇದು ಸ್ವಭಾವತಃ ಇರುವ ಅರ್ಥವೇ ಆಗಿದೆ.

ಈ ಅಧಿವೇಶನದಲ್ಲಿ ಸಾಕಷ್ಟು ಮಟ್ಟಿಗೆ ಕಾರ್ಯಕಲಾಪ ನಡೆದಿರುವುದು ಸಂತೋಷ. ಈಗ ಆಗಿರುವುದಕ್ಕಿಂತಲೂ ಹೆಚ್ಚು ಸಂಖ್ಯೆಯ ಪ್ರಶ್ನೆಗಳ ಪರಿಶೀಲನೆಯೂ ನಡೆಯಬಹುದಿತ್ತು. ಆದರೆ ಪ್ರಶ್ನೆಗಳ ಮಹತ್ವ ಹಾಗೂ ವ್ಯಾಪ್ತಿಯ ಬಗ್ಗೆ ಪ್ರತಿಯೊಬ್ಬರಿಗೂ ಸರಿಯಾದ ತಿಳುವಳಿಕೆ ಇರುವುದು ಅಗತ್ಯವಾಗುತ್ತದೆ. ಈ ಅಂಶವನ್ನು ಎಲ್ಲರೂ ಪೂರ್ಣವಾಗಿ ಅರ್ಥಮಾಡಿಕೊಳ್ಳುತ್ತಾರೆ ಮತ್ತು ಹೊಸ ಸಂವಿಧಾನದ ಅಡಿಯಲ್ಲಿ ಈ ಅವಕಾಶವನ್ನು ಉತ್ತಮ ಉದ್ದೇಶಕ್ಕಾಗಿ ದುಡಿಸಿಕೊಳ್ಳುತ್ತಾರೆ ಎಂದು ನಿರೀಕ್ಷಿಸುತ್ತೇನೆ. ನಿಯಮಗಳು ಸೂಚಿಸುವಂತೆ ಮಾಹಿತಿಯನ್ನು ಪಡೆದುಕೊಳ್ಳುವುದೇ ಪ್ರಶ್ನೆಗಳ ಮುಖ್ಯ ಉದ್ದೇಶವಾಗಿರಬೇಕು. ಮನವಿಗಳನ್ನು ಸಲ್ಲಿಸುವುದಾಗಲೀ, ಚರ್ಚೆ ಅಥವಾ ವಿವಾದಗಳನ್ನು ಎಬ್ಬಿಸುವುದಾಗಲೀ ಪ್ರಶ್ನೆಯ ಉದ್ದೇಶವಾಗಿರಕೂಡದು.

ಈ ಅಧಿವೇಶನದ ಅವಧಿಯಲ್ಲಿ ಸದನದ ಮುಂದೆ ಅನೇಕ ಮಸೂದೆಗಳನ್ನು ಮಂಡಿಸಲಾಗಿದೆ ಮತ್ತು ಅವುಗಳನ್ನು ವಿಧ್ಯುಕ್ತವಾಗಿ ಅನುಮೋದಿಸಲಾಗಿದೆ. ಸಣ್ಣ ಕೆರೆಗಳ ಪುನರುದ್ಧಾರಕ್ಕೆ ಸಂಬಂಧಿಸಿದ (ತಿದ್ದುಪಡಿ) ಮಸೂದೆ ಮೇಲೆ ನಡೆದ ಚರ್ಚೆಯಿಂದ ಭೂಮಾಲೀಕರಿಂದ ಕಡಿಮೆ ಕೊಡುಗೆಯನ್ನು ನಿರೀಕ್ಷಿಸಬೇಕು ಎಂಬ ಅಂಶ ವ್ಯಕ್ತವಾಗಿದೆ. ರೈತ ಸಮುದಾಯಕ್ಕೆ ಅನುಕೂಲಕರವಾದ ನಿರ್ಣಯ ಕೈಗೊಳ್ಳಬೇಕೆಂಬ ಉದ್ದೇಶವಿರುವುದರಿಂದ ಈ ಮಂತ್ರಾಲಯವು ಯಾರ ಪರವನ್ನೂ ವಹಿಸುವುದಿಲ್ಲ. ಆದರೆ ಇದು ಹಣಕಾಸು ವಿಷಯವಾದ್ದರಿಂದ ಆ ಅಂಶವನ್ನು ಪೂರ್ಣ ಕಡೆಗಣಿಸುವುದೂ ಕೂಡ ಸರಿಯಾಗಲಾರದು. ಕಾರ್ಮಿಕರ ಹಕ್ಕು ಮತ್ತು ಸವಲತ್ತುಗಳಿಗೆ ಸಂಬಂಧಿಸಿದಂತಹ ಅನೇಕ ಮಸೂದೆಗಳನ್ನು ಅದಿವೇಶನದಲ್ಲಿ ಸಕಾಲಕ್ಕೆ ಮಂಡಿಸಿರುವುದು ಸಂತೋಷದ ಸಂಗತಿ. ಶ್ರಮಜೀವಿಗಳ ಸ್ಥಿತಿಗಳನ್ನು ಇನ್ನಷ್ಟು ಸುಧಾರಿಸುವ ದೃಷ್ಟಿಯಿಂದ ಆದಷ್ಟು ಬೇಗ ಜಾರಿಗೆ ತರಬೇಕಾದ ಇನ್ನೂ ಕೆಲವು ಅಗತ್ಯ ಮಸೂದೆಗಳಿವೆ. ನಾವು ಈ ಬಗ್ಗೆ ಪ್ರಯತ್ನಿಸುತ್ತಿದ್ದೇವೆ ಮತ್ತು ಆದಷ್ಟು ಬೇಗ ದೂರಗಾಮಿಯಾದ ಕಾರ್ಮಿಕ ಶಾಸನಗಳನ್ನು ಜಾರಿಗೆ ತರಲು ಸಾಧ್ಯವಾಗುತ್ತದೆ ಎಂದು ಆಶಿಸುತ್ತೇನೆ. ಪೌರ ಸ್ವಾತಂತ್ರ್ಯವನ್ನು ರಕ್ಷಿಸುವುದಕ್ಕೆ ಸಂಬಂಧಿಸಿದಂತಹ ಮಸೂದೆಗಳನ್ನೂ ಕೂಡ ಈ ಸದನವು ಜಾರಿಗೊಳಿಸಿದೆ. ನಾನು ಇಲ್ಲಿ ಹೇಬಿಯಸ್ ಕಾರ್ಪಸ್ ಹಾಗೂ ಆಜ್ಞಾಪತ್ರ (Mandamus) ಮಸೂದೆಗಳ ಬಗ್ಗೆ ಉಲ್ಲೇಖಿಸುತ್ತಿದ್ದೇನೆ. ಈ ಶಾಸನ ಬಹಳ ಹಿಂದೆಯೇ ಬರಬೇಕಿತ್ತು. ಇದನ್ನು ಜಾರಿಗೆ ತರಲು ನಮಗೆ ಸಾಧ್ಯವಾಯಿತು ಎಂಬುದು ಅತ್ಯಂತ ತೃಪ್ತಿ ತರುವಂತಹ ವಿಷಯ. ಈ ಮೂಲಕ ನಾವು ಅಂತಹುದೇ ಶಾಸನವಿರುವ ಭಾರತ ಹಾಗೂ ಜಗತ್ತಿನ ಇತರ ಭಾಗಗಳ ಸಾಲಿಗೆ ಸೇರಿದಂತಾಗಿದೆ. ಭಾರತ ಆಗಸ್ಟ್ 15ರಂದು ಸ್ವಾತಂತ್ರ್ಯಗಳಿಸಿದ ನಂತರ ಮತ್ತು ರಾಜ್ಯದಲ್ಲಿರುವ ಯೂರೋಪಿಯನ್ ಹಾಗೂ ಬ್ರಿಟಿಷ್ ಪ್ರಜೆಗಳಿಗೆ ಮತ್ತು ಅಮೆರಿಕನ್ ಟ್ರಯಲ್‌ಗೆ ಸಂಬಂಧಿಸಿದ ದಂಡ ಪ್ರಕ್ರಿಯಾ ಸಂಹಿತೆ (ತಿದ್ದುಪಡಿ) ಮಸೂದೆಯನ್ನು ಈ ಸರ್ಕಾರ ಜಾರಿಗೊಳಿಸುವ ಮೂಲಕ ನಾವು ಸರಿಯಾದ ಕೆಲಸವನ್ನು ಮಾಡಿದ್ದೇವೆ. ಈಗ ನಾನು ಸದನವು ಜಾರಿಗೊಳಿಸಿದ ಹರಿಜನರ ದೇವಾಲಯ ಪ್ರವೇಶ (ಅಧಿಕರಣ) ಮಸೂದೆಯನ್ನು ಪ್ರಸ್ತಾಪಿಸ ಬಯಸುತ್ತೇನೆ. ರಾಜ್ಯದಲ್ಲಿ ಈ ಕ್ರಮವನ್ನು ಜಾರಿಗೆ ತರಬೇಕು ಎಂಬ ಬಗ್ಗೆ ಬಹು ಕಾಲದಿಂದಲೂ ಜನತೆ ಒತ್ತಾಯಿಸುತ್ತಿದೆ. ಇಂತಹ ಕ್ರಮವನ್ನು ಜಾರಿಗೊಳಿಸಬೇಕು ಎಂಬ ಬಗ್ಗೆ ಪ್ರಜಾಪ್ರತಿನಿಧಿ ಸಭೆಯ ವಿವಿಧ ಅಧಿವೇಶನಗಳಲ್ಲಿ ಭಾರೀ ಬಹುಮತದಿಂದ ನಿರ್ಣಯಗಳಾಗಿವೆ. ವಿಧಾನ ಪರಿಷತ್ತಿನಲ್ಲಿಯೂ ಸಹ ಇಂಥದ್ದೇ

ಅಭಿಪ್ರಾಯ ವ್ಯಕ್ತವಾಗಿದೆ. ಇತರ ರಾಜ್ಯ ಮತ್ತು ಪ್ರಾಂತಗಳಲ್ಲಿ ಇಂತಹ ಅಮೂಲಾಗ್ರ ಬದಲಾವಣೆ ಹಲವು ವರ್ಷಗಳ ಹಿಂದೆಯೇ ನಡೆದಿದೆ. ಮೈಸೂರಿನವರಾದ ನಾವು ಈ ವಿಷಯದಲ್ಲಿ ಹಿಂದೆ ಉಳಿದಿರುವುದು ಚಿಂತಿಸಬೇಕಾದ ವಿಷಯ. ಈ ಮಸೂದೆಯನ್ನು ಜಾರಿಗೊಳಿಸುವ ಮೂಲಕ ನಮ್ಮ ಒಡಹುಟ್ಟಿದವರೇ ಆದ ಹರಿಜನರ ವಿಷಯಕ್ಕೆ ನಾವು ನ್ಯಾಯ ಸಲ್ಲಿಸಿದಂತಾಗಿದೆ. ಆದರೆ ಈ ಶಾಸನವನ್ನು ಜಾರಿಮಾಡಿದ ಮಾತ್ರಕ್ಕೆ ಅವರಿಗೆ ನಾವು ಸಂಪೂರ್ಣ ನ್ಯಾಯ, ಸಮಾನತೆಗಳನ್ನು ತೋರಿಸಿದಂತಾಗಲಿಲ್ಲ ಎಂಬುದು ನನ್ನ ಅಭಿಪ್ರಾಯ. ಇದು ನಾವು ಕ್ಷೇತ್ರಗಳಲ್ಲಿ ಅವರ ಬಗ್ಗೆ ತೋರಿಸಬೇಕಾದ ಮನೋಧರ್ಮಕ್ಕೆ ಕೇವಲ ಒಂದು ಸೂಚಿ. ಎಲ್ಲರಿಗೂ ಸಮಾನ ಅವಕಾಶವಿರಬೇಕು ಎಂಬ ಮಾತನ್ನು ನಾವು ಸದಾ ಹೇಳುತ್ತಲೇ ಇರುತ್ತೇವೆ. ಅಲ್ಲೊ ಇಲ್ಲೋ ಒಂದೊಂದು ಉದ್ಯೋಗ ದೊರಕಿಸಿಕೊಡುವುದಕ್ಕಷ್ಟೇ ಈ ಉದ್ದೇಶ ಸೀಮಿತವಾಗುವುದಾದರೆ ನಾವು ನಮ್ಮ ಕರ್ತವ್ಯದಲ್ಲಿ ವಿಫಲರಾದಂತೆಯೇ ಸರಿ. ನಾವು ಅತ್ಯಂತ ವ್ಯಾಪಕ ಅರ್ಥದಲ್ಲಿ ಆರ್ಥಿಕ, ಶೈಕ್ಷಣಿಕ ಹಾಗೂ ಸಾಂಸ್ಕೃತಿಕ ಕ್ಷೇತ್ರಗಳಲ್ಲಿಯೂ ಸಹ ಅವರಿಗೆ ಸಮಾನ ಅವಕಾಶಗಳನ್ನು ದೊರಕಿಸಿಕೊಡಲು ಹೋರಾಡಬೇಕು. ಬದುಕಿನ ಎಲ್ಲ ಕ್ಷೇತ್ರಗಳಲ್ಲಿಯೂ ಹರಿಜನರಿಗೆ ಸಮಾನ ಅವಕಾಶಗಳನ್ನು ದೊರಕಿಸಿಕೊಡಲು ನಮ್ಮ ಕೈಲಾದ ಸಕಲ ಪ್ರಯತ್ನಗಳನ್ನೂ ಮಾಡಬೇಕು ಎಂದು ಈ ಹಿನ್ನೆಲೆಯಲ್ಲಿ ಒತ್ತಿಹೇಳುತ್ತಿದ್ದೇನೆ. ದಿವಾನರು ಪ್ರಜಾಪ್ರತಿನಿಧಿ ಸಭೆಯನ್ನು ಉದ್ದೇಶಿಸಿ ಮಾಡಿದ ಭಾಷಣದಲ್ಲಿ ಹೊಸ ಮಂತ್ರಾಲಯದ ನಿಲುವೇನಿರಬೇಕು ಮತ್ತು ಕಾರ್ಯಕ್ರಮಗಳೇನಿರಬೇಕು ಎಂಬುದನ್ನು ಪ್ರಕಟಿಸಲು ನಿರಾಕರಿಸಿದ್ದು ಸರಿಯಾಗಿಯೇ ಇದೆ. ಈ ಮಂತ್ರಾಲಯವು ಅಧಿಕಾರದಲ್ಲಿ ಕೇವಲ ಅಲ್ಪಕಾಲದವರೆಗೆ ಮಾತ್ರ ಇರುವಂಥದ್ದು. ಹೀಗಾಗಿ ದೂರಗಾಮಿ ಸ್ವರೂಪದ ನೀತಿ ನಿಲುವುಗಳನ್ನು, ಕಾರ್ಯಕ್ರಮಗಳನ್ನು ನೇರವಾಗಿ ಪ್ರಕಟಿಸಿಬಿಡುವುದು ಸರಿಯಲ್ಲ. ಈ ಮಂತ್ರಾಲಯದ ಸ್ವರೂಪವೇ ಅತ್ಯಂತ ಅಲ್ಪಕಾಲದ್ದು.

ಮಹಾರಾಜರ ಕೃಪಾಶ್ರಯದಲ್ಲಿ ಸಂಪೂರ್ಣ ಜವಾಬ್ದಾರಿಯುತ ಸರ್ಕಾರವನ್ನು ಆಧರಿಸಿ ಮೈಸೂರಿಗೆ ಒಂದು ಸೂಕ್ತ ಸಂವಿಧಾನದ ಕರಡನ್ನು ರೂಪಿಸುವುದಕ್ಕಾಗಿ ಒಂದು ರಾಜ್ಯಾಂಗ ರಚನಾ ಸಭೆಯನ್ನು ಜಾರಿಗೆ ತರುವಂತಹ ಕೆಲಸವನ್ನೂ ಸಹ ಈ ಮಂತ್ರಿಮಂಡಲಕ್ಕೆ ಒಪ್ಪಿಸಲಾಗಿದೆ. 1948ರ ಜುಲೈ ಹೊತ್ತಿಗೆ ಹೊಸ ಸಂವಿಧಾನವನ್ನು ಸ್ಥಾಪಿಸುವುದಕ್ಕಾಗಿ ನಾವು ತ್ವರಿತವಾಗಿ ಕ್ರಮ ಕೈಗೊಳ್ಳಬೇಕಾದುದು ನಮ್ಮ ಭಾದ್ಯತೆಯಾಗಿದೆ. ಇದು ಬಹಳ ಕಠಿಣವಾದ ಹಾಗೂ ಜವಾಬ್ದಾರಿಯುತವಾದ ಕರ್ತವ್ಯ. ನಾವು ಸಕಾಲಕ್ಕೆ ನಿರ್ಧಾರಗಳನ್ನು ಕೈಗೊಳ್ಳಬೇಕಾಗಿದೆ. ಈ ಸಂಬಂಧವಾಗಿ ಕೈಗೊಳ್ಳಬೇಕಾದ ಕ್ರಮದ ಬಗ್ಗೆ ನಿರ್ಧಾರ ಮಾಡುವ ಮೊದಲು ಅಸೆಂಬ್ಲಿ ಹಾಗೂ ಕೌನ್ಸಿಲ್‌ಗಳ ಅಭಿಪ್ರಾಯವನ್ನು ಖಚಿತಪಡಿಸಿಕೊಳ್ಳಲು ಕಾಯುವುದಕ್ಕೆ ಹೋಗದಿದ್ದುದಕ್ಕೆ ಇದೂ ಒಂದು ಕಾರಣ. ಈಗ ಪ್ರಕಟಿಸಲಾಗಿರುವ ಯೋಜನೆಗೆ ಸಂಬಂಧಿಸಿದಂತೆ ಮಾಡಿರುವ ವಿವಿಧ ಟೀಕೆಗಳ ಬಗ್ಗೆ ಪ್ರಸ್ತಾಪಿಸುವ ಇಚ್ಛೆ ನನಗಿಲ್ಲ. ಆದರೆ ಅದರಲ್ಲಿ ಕೆಲವು ಮುಖ್ಯವಾದುವನ್ನು ಮಾತ್ರ ಪ್ರಸ್ತಾಪಿಸುತ್ತೇನೆ. ಸರಿಯಾದ ದೃಷ್ಟಿಯಿಂದ ನೋಡುವುದಾದರೆ ವಯಸ್ಕ ಮತದಾನದ ಮೇಲೆ ರಾಜ್ಯಾಂಗ ರಚನಾ ಸಭೆಯನ್ನು ಚುನಾಯಿಸುವುದು ನಿಜಕ್ಕೂ ಅಪೇಕ್ಷಣೀಯವಾಗಿತ್ತು. ಆದರೆ ಸಮಯದ ತುರ್ತಿನ ಕಾರಣದಿಂದಾಗಿ ಈ ಕ್ರಮವನ್ನು ಕೈಬಿಡಬೇಕಾಯಿತು. ಭಾರತದ ರಾಜ್ಯಾಂಗ ರಚನಾ ಸಭೆಯ ವಿಷಯದಲ್ಲಿಯೂ ಹೀಗೆ ಆಗಿದೆ. ಈಗಿರುವ ಶಾಸಕಾಂಗದ ಜಂಟಿ

ಅಧಿವೇಶನದ ಮೂಲಕವೇ ರಾಜ್ಯಾಂಗ ರಚನಾ ಸಭೆಯ ಸದಸ್ಯರನ್ನು ಚುನಾಯಿಸಬೇಕಾಗಿತ್ತು ಎಂದು ವಾದಿಸಲಾಯಿತು. ಈ ಸಂಬಂಧವಾಗಿ ಭಾರತದ ರಾಜ್ಯಾಂಗ ರಚನಾ ಸಭೆ ಅನುಸರಿಸಿದ ಕ್ರಮವನ್ನು ಉದಾಹರಿಸಲಾಯಿತು. ನಾನು ಇಲ್ಲಿ ಸನ್ಮಾನ್ಯ ಸದಸ್ಯರ ಗಮನಕ್ಕಾಗಿ ಒಂದು ಅಂಶವನ್ನು ತಿಳಿಸಲು ಇಚ್ಛಿಸುತ್ತೇನೆ. ಪ್ರಾಂತಗಳ ಶಾಸಕಾಂಗಗಳಿಗೆ ಇತ್ತೀಚೆಗಷ್ಟೇ ಚುನಾವಣೆಗಳು ನಡೆದವು. ಆದರೆ ಈ ಸದನಕ್ಕೆ ಹಾಗೂ ಕೌನ್ಸಿಲ್‌ಗೆ ಚುನಾವಣೆಗಳು ನಡೆದು ಮೂರು ವರ್ಷವಾಯಿತು. ಈ ಅವಧಿಯಲ್ಲಿ ಮೈಸೂರಿನ ಸಾರ್ವಜನಿಕ ಅಭಿಪ್ರಾಯ ಬಹಳ ಮುಂದುವರೆದಿದೆ, ಅದರಲ್ಲಿಯೂ ಕಳೆದ ಕೆಲವು ತಿಂಗಳುಗಳಲ್ಲಿ ಬಹಳ ಬೆಳವಣಿಗೆಗಳಾಗಿವೆ ಎಂದರೆ ನೀವೂ ಕೂಡ ಒಪ್ಪುತ್ತೀರಿ. ಮೊದಲು ಪ್ರತಿನಿಧಿ ಸಭೆ ಹಾಗೂ ವಿಧಾನ ಪರಿಷತ್ತಿನ ಹೊಸ ಚುನಾವಣೆಗಳನ್ನು ನಡೆಸಿ ಅನಂತರ ಹೊಸದಾಗಿ ರೂಪುಗೊಂಡ ಶಾಸಕಾಂಗದ ಸದನಗಳ ಮೂಲಕ ಪರೋಕ್ಷವಾಗಿ ರಾಜ್ಯಾಂಗ ರಚನಾ ಸಭೆಯನ್ನು ಚುನಾಯಿಸುವ ಕೆಲಸವನ್ನು ನಾವು ಮಾಡಬಹುದಾಗಿತ್ತು. ಆದರೆ ಅದಕ್ಕೂ ಕೂಡ ಸಾಕಷ್ಟು ಸಮಯ ಹಿಡಿಯುತ್ತಿತ್ತು. ನಮ್ಮ ವೇಳಾಪಟ್ಟಿಯನ್ನು ಪಾಲಿಸುವುದು ಸಾಧ್ಯರಾಗುತ್ತಿರಲಿಲ್ಲ. ಇಂತಹ ಸನ್ನಿವೇಶದಿಂದಾಗಿ ನಾವು ಈಗ ಏನು ಪ್ರಕಟಿಸಿದ್ದೇವೋ ಆ ಯೋಜನೆಯನ್ನು ಅನುಸರಿಸಬೇಕಾಯಿತು. ಈ ಸದನದ ಯಾವುದೇ ಸನ್ಮಾನಿತ ಸದಸ್ಯರಾಗಲೀ ಅಥವಾ ಬಾಡಿ ಪಾಲಿಟಿಕ್‌ನ ಸದಸ್ಯರಾಗಲೀ ಮತದಾನವನ್ನು ಎದುರಿಸುವುದಕ್ಕೆ ಅಥವಾ ಮತದಾರರ ಅಭಿಪ್ರಾಯಕ್ಕೆ ತಲೆಬಾಗುವುದಕ್ಕೆ ಏಕೆ ಹಿಂಜರಿಯಬೇಕು ಎಂದು ಅರ್ಥವಾಗುತ್ತಿಲ್ಲ. ಅನೇಕ ಸದಸ್ಯರ (Multi Members Constituencies) ಮತಕ್ಷೇತ್ರಗಳನ್ನು ಕಲ್ಪಿಸಿರುವುದು ಹಾಗೂ ಜಿಲ್ಲೆಯನ್ನು ಒಂದು ಘಟಕವಾಗಿ ನಿಗದಿಸಿರುವುದರಿಂದ ಪಕ್ಷೇತರರು ಆರಿಸಿ ಬರುವುದು ಕಷ್ಟವಾಗುತ್ತದೆ ಎಂಬ ವಾದವನ್ನು ಮುಂದಿಡಲಾಗಿದೆ. ಆದರೆ ನನಗೆ ಹಾಗೆನ್ನಿಸುವುದಿಲ್ಲ. ನಾವು ಒಂದು ವೇಳೆ ಏಕ ಅಭ್ಯರ್ಥಿಯ ಮತಕ್ಷೇತ್ರಗಳನ್ನು ಕಲ್ಪಿಸಿದ್ದೇ ಆದರೆ ಬಹಳಷ್ಟು ಸಂದರ್ಭಗಳಲ್ಲಿ ಪಕ್ಷೇತರರು ಆರಿಸಿ ಬರುವುದು ಈಗಿರುವ ಯೋಜನೆಯ ಸಂದರ್ಭಕ್ಕಿಂತ ಹೆಚ್ಚು ಕಷ್ಟಕರವಾಗುತ್ತಿತ್ತು. ಎಂದು ನನ್ನ ಅಭಿಪ್ರಾಯ. ಭಾರತೀಯ ಕ್ರಿಶ್ಚಿಯನ್ನರು, ಮಹಿಳೆಯರು, ಕಾರ್ಮಿಕರು ಮೊದಲಾದವರಿಗೂ ಕೂಡ ಸರಿಯಾದ ಪ್ರಾತಿನಿಧ್ಯ ಸಿಗುತ್ತದೆ. ಉತ್ತಮ ಸೌಹಾರ್ದ ಮತ್ತು ಹೊಂದಾಣಿಕೆಯ ಮೂಲಕ ಅವರು ರಾಜ್ಯಾಂಗ ರಚನಾ ಸಭೆಗೆ ಸೂಕ್ತವಾಗಿ ಆರಿಸಿ ಬರುತ್ತಾರೆ. ಅದರಲ್ಲಿ ಯಾವ ಕಷ್ಟವೂ ಇಲ್ಲ. ಯಾವುದೇ ಅಸಮಾಧಾನಕ್ಕೆ ಆಸ್ಪದವಾಗದಂತೆ ಪ್ರಯತ್ನಿಸಲಾಗುವುದು. ಭಾರತದ ರಾಜ್ಯಾಂಗ ರಚನಾ ಸಭೆಗೆ ಚುನಾವಣೆಗಳು ನಡೆದಾಗ ಬೇರೆ ಬೇರೆ ವರ್ಗಗಳವರಿವಾಗಿ ಇಂತಹ ಯಾವುದೇ ಮೀಸಲಾತಿಗಳನ್ನು ಮಾಡಲಿಲ್ಲ ಎಂಬುದನ್ನು ನೆನಪಿಸಿಕೊಳ್ಳಬಹುದು. ಈಗಿನ ನಿರ್ಧಾರದ ಪ್ರಕಾರ ಹೊಸದಾದ ಭಾರತೀಯ ಅಥವಾ ಪ್ರಾಂತೀಯ ಸಂವಿಧಾನಗಳಲ್ಲಿ ಯಾವುದೇ ಮೀಸಲಾತಿಗಳನ್ನು ಇಡಕೂಡದೆಂದು ಉದ್ದೇಶಿಸಲಾಗಿದೆ. ವಾಸ್ತವವಾಗಿ, ಭಾರತೀಯ ರಾಜ್ಯಾಂಗ ಸಭೆಯಲ್ಲಿರುವ ಅನೇಕ ಕ್ರಿಶ್ಚಿಯನ್ ಪ್ರತಿನಿಧಿಗಳು ತಮ್ಮ ಕೋಮಿನವರಿಗೆ ಅಂತಹ ಮೀಸಲಾತಿಗಳನ್ನು ಇಡುವುದರ ಬಗ್ಗೆ ಸ್ಪಷ್ಟ ವಿರೋಧವನ್ನು ವ್ಯಕ್ತಪಡಿಸಿದ್ದಾರೆ. ಯಾವುದೇ ಮೀಸಲಾತಿ ಇಲ್ಲದೆ ಒಟ್ಟಾಗಿ ನಡೆಯುವ ಮತ ವ್ಯವಸ್ಥೆಯಲ್ಲಿಯೇ ತಮಗೆ ಸಾಕಷ್ಟು ಅವಕಾಶ ಸಿಗುತ್ತದೆ ಎಂಬ ವಿಶ್ವಾಸ ಅವರಿಗಿದೆ. ಬಹುಮುಖ್ಯವಾದ ಈ ವಿಷಯದ ಬಗ್ಗೆ, ಅವಕಾಶ ದೊರೆತಾಗ ಅಗತ್ಯವಿದ್ದಲ್ಲಿ ಮತ್ತೊಮ್ಮೆ ಪ್ರಸ್ತಾಪಿಸಬಹುದೆನ್ನಿಸುತ್ತದೆ.

ಇತರ ಕ್ಷೇತ್ರಗಳಲ್ಲಿ ನಮ್ಮ ನೀತಿ ಹಾಗೂ ಕಾರ್ಯಕ್ರಮಕ್ಕೆ ಸಂಬಂಧಿಸಿದಂತೆ ಕೆಲವು ವಿಷಯಗಳ ಬಗ್ಗೆ ಬಹು ದೀರ್ಘವಾಗಿ ಪ್ರಸ್ತಾಪಿಸಬೇಕಾಗಿದೆಯಾದರೂ ನಾನು ಒಲ್ಲದ ಮನಸ್ಸಿನಿಂದಲೇ ಅದನ್ನು ಕೈಗೆತ್ತಿಕೊಳ್ಳುತ್ತಿಲ್ಲ. ಸದನಕ್ಕೆ ತಿಳಿದಿರುವಂತೆ ನಾವು ಈಗಷ್ಟೆ ಬಹು ದೂರಗಾಮೀ ಪರಿಣಾಮದ ಕೆಲವು ವಿಶೇಷ ನಿರ್ಣಯಗಳನ್ನು ಅಂಗೀಕರಿಸಿದ್ದೇವೆ. ಸರ್ಕಾರದ ಭೂ ಕಂದಾಯ ನೀತಿಗೆ ಸಂಬಂಧಿಸಿದಂತೆ ಒಂದು ತಜ್ಞ ಸಮಿತಿಯನ್ನು ಸ್ಥಾಪಿಸಲು ನಾವು ಒಪ್ಪಿದ್ದೇವೆ. ಕಾಲವನ್ನು ನಿಗದಿಸುವುದಕ್ಕಾಗಲೀ ಅಥವಾ ವಿಷಯವನ್ನು ಮೂಲೆಗೊತ್ತರಿಸಲೆಂದಾಗಲೀ ನಾವು ಈ ಸಮಿತಿ ಸ್ಥಾಪಿಸಿಲ್ಲ. ಬದಲಿಗೆ ತ್ವರಿತವಾಗಿ ನಿರ್ಣಯ ಕೈಗೊಳ್ಳಬೇಕು ಹಾಗೂ ಅವುಗಳನ್ನು ಕೂಡಲೇ ಅನುಷ್ಠಾನಕ್ಕೆ ತರಬೇಕು ಎಂಬುದು ನಮ್ಮ ಉದ್ದೇಶವಾಗಿದೆ. ಮೈಸೂರಿನಲ್ಲಿ ಪ್ರಚಲಿತವಾಗಿರುವ ಭೂ ಕಂದಾಯ ವ್ಯವಸ್ಥೆಯಲ್ಲಿನ ಕೆಲವು ವಿಷಯಗಳನ್ನು ತಕ್ಷಣವೇ ಮಾರ್ಪಡಿಸುವುದು ಅಗತ್ಯವಾಗಿದೆ. ಇದಕ್ಕೆ ಸಂಬಂಧಿಸಿದ ಕೆಲವು ಮೂಲಭೂತ ವಿಷಯಗಳಿಗೆ ಸಂಬಂಧಿಸಿದಂತೆ ಅವುಗಳ ಪರಿಶೀಲನೆಗೆ ಹಾಗೂ ದೂರಗಾಮೀ ಪರಿಣಾಮದ ಶಾಸನದ ಜಾರಿಗೆ ಸ್ವಲ್ಪ ಕಾಲಾವಕಾಶ ಬೇಕಾಗಬಹುದು.

ಅಬ್ಕಾರಿ ನೀತಿಗೆ ಸಂಬಂಧಿಸಿದಂತೆ ಪಾನನಿರೋಧವನ್ನು ಸರ್ಕಾರ ತನ್ನ ನೀತಿಯಾಗಿ ಅಂಗೀಕರಿಸಿದೆ ಎಂಬುದು ನಿಮಗೆ ನಿಶ್ಚಿತವಾಗಿ ತಿಳಿದಿದೆ. ಈ ದಿಸೆಯಲ್ಲಿ ಐದು ವರ್ಷದ ಒಂದು ಕಾರ್ಯಕ್ರಮವನ್ನು ಪ್ರಕಟಿಸಲಾಗಿದೆ. ಪಾನನಿರೋಧದ ಉದ್ದೇಶ ಹಾಗೂ ಅವಧಿಯ ಬಗ್ಗೆ ಈ ಸಚಿವ ಮಂಡಲ ಸಮ್ಮತಿಸಿದೆಯಾದರೂ ಅದನ್ನು ಸಂಪೂರ್ಣವಾಗಿ ಜಾರಿಗೆ ತರುವ ಮೊದಲು ಅದರ ಕೆಲವಂಶಗಳನ್ನು ಪರಿಶೀಲಿಸುವುದು ಅತ್ಯಗತ್ಯ. ಯಾವ ಅಂಶಗಳನ್ನು ಮರುಪರಿಶೀಲಿಸಬೇಕು ಎಂಬ ಬಗ್ಗೆ ಸರ್ಕಾರ ಗಮನಹರಿಸಬೇಕಾಗಿದೆ. ಎಲ್ಲಿ ಪಾನನಿರೋಧವನ್ನು ಜಾರಿಗೆ ತರಲಾಗಿದೆಯೋ ಅಂತಹ ಪ್ರಾಂತಗಳ ಗಡಿಯ ಪಕ್ಕದಲ್ಲಿರುವ ಎಲ್ಲ ಅಂಗಡಿಗಳನ್ನೂ ಮುಚ್ಚುವುದು ಮತ್ತು ಮಾದಕ ಪದಾರ್ಥಗಳ ಮಾರಾಟಕ್ಕೆ ಒಂದು ಸೀಲಿಂಗ್ ಬೆಲೆಯನ್ನು ನಿಗದಿಸುವುದು ಎಂಬ ಅಂಶಗಳನ್ನು ಪಾನನಿರೋಧ ಸಮಿತಿಯು ಶಿಫಾರಸ್ಸು ಮಾಡಿದ್ದು ಆ ಬಗ್ಗೆ ಸರ್ಕಾರ ಕೂಡಲೇ ಗಮನಹರಿಸಬೇಕಾಗಿದೆ. ಈ ದಿಸೆಯಲ್ಲಿ ಶೀಘ್ರದಲ್ಲಿಯೇ ಒಂದು ಆದೇಶವನ್ನು ಹೊರಡಿಸಲು ಸಾಧ್ಯವಾಗಬಹುದು ಎಂದು ಆಶಿಸಲಾಗಿದೆ.

ರಾಜ್ಯದ ಆಹಾರ ಪರಿಸ್ಥಿತಿಯ ಬಗ್ಗೆ ಪೂರ್ಣ ಪ್ರಮಾಣದ ಚರ್ಚೆ ನಡೆದಿದೆ. ಈ ಸಮಸ್ಯೆ ಇಡೀ ಜನತೆಯ ಗಮನ ಸೆಳೆದಿರುವಂತಹ ಸಮಸ್ಯೆ. ಒಂದು ತೃಪ್ತಿಕರವಾದ ಆಹಾರ ನೀತಿ ಹಾಗೂ ಕಾರ್ಯಕ್ರಮ ರೂಪಿಸಬೇಕು ಎಂಬ ಬಗ್ಗೆ ಆಹಾರ ಬೆಳೆಗಾರರು ಹಾಗೂ ಬಳಕೆದಾರರು ಈ ಎರಡೂ ವರ್ಗಗಳವರು ಸಮಾನ ಆಸಕ್ತಿ ಹೊಂದಿದ್ದಾರೆ. ಚರ್ಚೆಯ ಸಂದರ್ಭದಲ್ಲಿ ಪ್ರಸ್ತಾಪಿಸಲಾದ ವಿವಿಧ ಮುಖ್ಯಾಂಶಗಳ ಬಗ್ಗೆ ನಾನು ಮತ್ತೆ ಪ್ರಸ್ತಾಪಿಸುವುದಿಲ್ಲ. ಆದರೆ ಈ ಮಂತ್ರಿ ಮಂಡಲವು ಯಾರಿಗೂ ಅನ್ಯಾಯವಾಗದ ಹಾಗೆ ನೋಡಿಕೊಳ್ಳುತ್ತದೆ. ಬಳಕೆದಾರರಾಗಲೀ, ಉತ್ಪಾದಕರಾಗಲೀ ಈ ಯಾರೊಬ್ಬರ ಬಗೆಗೂ ಯಾವುದೇ ಪೂರ್ವ ಗ್ರಹದಿಂದ ಹಾನಿಕರವಾಗಿ ಸರ್ಕಾರ ನಡೆದುಕೊಳ್ಳುವುದಿಲ್ಲ ಎಂದು ನಾನು ಹೇಳಬಲ್ಲೆ. ಇದು ಬಹಳ ಕಠಿಣ ಕೆಲಸ. ನಮ್ಮ ಜನಪ್ರಿಯತೆಗೆ ಧಕ್ಕೆಯಾದರೂ ಪರವಾಗಿಲ್ಲ ನಾವು ಈ ಕೆಲಸ ಮಾಡಬೇಕಾಗಿದೆ. ಉತ್ಪಾದಕರಿಗೆ ನ್ಯಾಯಸಮ್ಮತ ಬೆಲೆ ದೊರಕಿಸಿಕೊಡಲು ಎಲ್ಲ ಪ್ರಯತ್ನಗಳನ್ನೂ ಮಾಡಲಾಗಿದೆ. ಅದೇ ರೀತಿ

ಬಳಕೆದಾರರ ಪಾಲಿಗೆ ಅನುಕೂಲಕರವಾದ ಹಾಗೂ ನ್ಯಾಯಸಮ್ಮತವಾದ ಬೆಲೆ ನಿಗದಿಸಲು ಸರ್ವಪ್ರಯತ್ನ ಮಾಡಲಾಗುವುದು. ಈಗಾಗಲೇ ಘೋಷಿಸಿರುವಂತೆ ಕ್ರಮೇಣವಾಗಿ ನಿಯಂತ್ರಣವನ್ನು ತೆಗೆಯಬೇಕು ಎಂದು ನಾವು ನಿರ್ಧರಿಸಿದ್ದೇವೆ ಮತ್ತು ಬೇಗನೆ ಅಲ್ಲವಾದರೂ ಕನಿಷ್ಟ 1948ರ ಅಂತ್ಯದ ಹೊತ್ತಿಗಾದರೂ ನಿಯಂತ್ರಣವನ್ನು ಸಂಪೂರ್ಣವಾಗಿ ತೆಗೆಯಲು ಸಾಧ್ಯವಾಗಬಹುದು ಎಂದು ನಾನು ತೀವ್ರವಾಗಿ ಆಶಿಸುತ್ತಿದ್ದೇನೆ. ಸದನಕ್ಕೆ ತಿಳಿದಿರುವಂತೆ ನಾವು ಈಗಾಗಲೇ ಅನೇಕ ನಿಯಂತ್ರಣಗಳನ್ನು ತೆಗೆದುಹಾಕಿದ್ದೇವೆ. ಇಂತಹ ನಿಯಂತ್ರಣವನ್ನು ತೆಗೆಯುವುದರಿಂದ ರಾಜ್ಯದ ಯಾವ ಪ್ರಜೆಯೂ ಕೂಡ ಆಹಾರವೇ ಇಲ್ಲದೆ ಅಥವಾ ಅರೆ ಆಹಾರದ ದುಃಸ್ಥಿತಿಗೆ ತುತ್ತಾಗುವುದಿಲ್ಲ ಎಂಬ ಸಮಾಧಾನ ಸಿಕ್ಕಿತೆಂದರೆ ಆಹಾರ ಧಾನ್ಯಗಳ ಮೇಲೆ ನಿಯಂತ್ರಣವನ್ನು ತೆಗೆದುಹಾಕುವುದು ಸರ್ಕಾರದ ಪಾಲಿಗೆ ಅತ್ಯಂತ ಸಂತೋಷದ ವಿಷಯವಾಗುತ್ತದೆ.

ಆಹಾರಕ್ಕೆ ಸಂಬಂಧಿಸಿದಂತೆ ಮೂಲ ಸಮಸ್ಯೆಯೆಂದರೆ ನಮ್ಮ ರಾಜ್ಯದಲ್ಲಿ ಹೆಚ್ಚು ಹೆಚ್ಚು ಆಹಾರ ಧಾನ್ಯವನ್ನು ಬೆಳೆಯಬೇಕಾದ ಅಗತ್ಯತೆಗೆ ಸಂಬಂಧಿಸಿದ್ದು. ವಿಶ್ವೇಶ್ವರಯ್ಯನವರು ನಾವು ಕೈಗಾರಿಕೀಕರಣ ಸಾಧಿಸಬೇಕು ಇಲ್ಲವೇ ನಾಶ ಕಟ್ಟಿಟ್ಟದ್ದು ಎಂದು ಬಹಳ ಹಿಂದೆಯೇ ಹೇಳಿದರು. ಇದು ಅತ್ಯಂತ ಸತ್ಯವಾದ ಮಾತು. ಆದರೆ ಈಗಿನ ಸಂದರ್ಭದಲ್ಲಿ ನಾವು ಹೆಚ್ಚು ಆಹಾರ ಧಾನ್ಯ ಬೆಳೆಯಬೇಕು ಇಲ್ಲವೆ ನಾಶ ಕಟ್ಟಿಟ್ಟದ್ದು ಎಂದು ಹೇಳಬಹುದು. ಮೈಸೂರು ರಾಜ್ಯದ ಜನಸಂಖ್ಯೆ 1881ರಲ್ಲಿದ್ದ 40 ಲಕ್ಷದಿಂದ ಈಗ ಸುಮಾರು 80 ಲಕ್ಷದಷ್ಟಕ್ಕೆ ಏರಿದೆ. ಆದರೆ ಕೃಷಿ ಯೋಗ್ಯವಾದ ಭೂಮಿಯ ಪ್ರಮಾಣ ಮಾತ್ರ ಹೆಚ್ಚಾಗಿಲ್ಲ. ಅಷ್ಟೇ ಅಲ್ಲ ಈ ಮಧ್ಯದ ಅವಧಿಯಲ್ಲಿ ಅದು ಕಡಿಮೆಯೂ ಆಗಿದೆ ಎಂಬುದು ನಿಜಕ್ಕೂ ಆಘಾತ ತರುತ್ತದೆ. ನಾನು ಅಂಕಿಅಂಶಗಳಿಂದ ನಿಮ್ಮ ಸಹನೆಯನ್ನು ಪರೀಕ್ಷಿಸಲು ಹೋಗುವುದಿಲ್ಲ. ಈ ಸಮಸ್ಯೆ ಬಗ್ಗೆ ಪರಿಪೂರ್ಣವಾದ ಅಧ್ಯಯನ ನಡೆಸಬೇಕು. ಬರೀ ಅಧ್ಯಯನ ನಡೆಸುವುದಷ್ಟೇ ಅಲ್ಲ ಉತ್ಪಾದನೆಯ ಸ್ಥಿತಿಯನ್ನು ಸರಿಪಡಿಸುವುದಕ್ಕಾಗಿ ಪ್ರತಿಯೊಬ್ಬರೂ ಬೆವರು ಸುರಿಸಿ ಶ್ರಮಿಸಬೇಕು ಎಂದು ನಾನು ಪ್ರತಿಯೊಬ್ಬ ಸದಸ್ಯರಲ್ಲಿ ಮನವಿ ಮಾಡಿಕೊಳ್ಳುತ್ತೇನೆ. ಆದರೆ ಇಷ್ಟು ಮಾತ್ರ ಹೇಳಬಲ್ಲೆ. ವ್ಯವಸಾಯ ನೀತಿ ಹಾಗೂ ಕಾರ್ಯಕ್ರಮವನ್ನು ಪುನಃ ಚೇತನಗೊಳಿಸುವುದಕ್ಕಾಗಿ ಈಗಿನ ಸಚಿವಸಂಪುಟ ಸಂಪೂರ್ಣ ಶ್ರಮಿಸುತ್ತದೆ. ಕೃಷಿಯನ್ನು ವಿಸ್ತರಿಸುವ ಹಾಗೂ ಅದನ್ನು ಹೆಚ್ಚು ಸುಧಾರಿಸುವ ದಿಸೆಯಲ್ಲಿ ರಾತ್ರೋರಾತ್ರಿ ಅಲ್ಪ ಕಾಲದಲ್ಲಿ ಎಲ್ಲವನ್ನೂ ಮಾಡುವುದಕ್ಕಾಗುವುದಿಲ್ಲ. ಈ ದಿಸೆಯಲ್ಲಿ ಐದು ವರ್ಷದ ಕಾರ್ಯಕ್ರಮವೊಂದನ್ನು ರೂಪಿಸಲಾಗಿದೆ. ನಮ್ಮ ರಾಜ್ಯದಲ್ಲಿ ನಮ್ಮ ಅಗತ್ಯತೆಗೆ ತಕ್ಕಷ್ಟು ಆಹಾರ ಧಾನ್ಯಗಳನ್ನು ಉತ್ಪಾದಿಸುವುದಕ್ಕಾಗಿ ಈ ಕಾರ್ಯಕ್ರಮವನ್ನು ಅಗತ್ಯಕ್ಕೆ ತಕ್ಕಂತೆ ಮಾರ್ಪಡಿಸಲಾಗುವುದು. ಈ ವಿಷಯದಲ್ಲಿ ಸ್ವಾವಲಂಬನೆ ಸಾಧಿಸುವುದೇ ನಮ್ಮ ಗುರಿ ಹಾಗೂ ಧ್ಯೇಯವಾಗಿರಬೇಕು. ನಾನು ಸ್ವಲ್ಪ ಕಠಿಣವಾಗಿ ಹೇಳುವುದಾದರೆ ಆಹಾರ ಧಾನ್ಯಗಳಿಗಾಗಿ ಜಗತ್ತಿನ ಇತರ ದೇಶಗಳವರನ್ನು ಬೇಡಿಕೊಳ್ಳುವುದು ನಿಜಕ್ಕೂ ಅಪಮಾನಕಾರಿ.

ಇತ್ತೀಚೆಗೆ ನಡೆದ ಕೈಗಾರಿಕಾ ಸಮಾವೇಶದಲ್ಲಿ ನಾವು ಎದುರಿಸಬೇಕಾಗಿರುವ ಈ ಪ್ರಮುಖ ಸಮಸ್ಯೆಯ ಬಗ್ಗೆ ತೀವ್ರವಾಗಿ ಒತ್ತಿಹೇಳಲಾಗಿದೆ. ಆಹಾರ ಕ್ಷೇತ್ರದಲ್ಲಾಗಲೀ, ಕೈಗಾರಿಕಾ ಕ್ಷೇತ್ರದಲ್ಲಾಗಲೀ ನಾವು ನಮ್ಮ ಉತ್ಪಾದನೆಯನ್ನು ಹೆಚ್ಚಿಸಬೇಕು ಇಲ್ಲವೇ ಕೆಳಗುಳಿಯಬೇಕು. ಈ ಉದ್ದೇಶ ಸಾಧನೆಗಾಗಿ, ಕನಿಷ್ಠ ಮೂರು ವರ್ಷಗಳವರೆಗಾದರೂ ಕೈಗಾರಿಕಾ ಸ್ಥಿರತೆಯನ್ನು ಗಳಿಸುವುದಕ್ಕೆ ಅಗತ್ಯವಾದ ಕ್ರಮಗಳನ್ನು ಕೈಗೊಳ್ಳಲು ದೂರಗಾಮೀ ನಿರ್ಣಯಗಳನ್ನು ತೆಗೆದುಕೊಳ್ಳಲಾಗಿದೆ. ಇದು ಸಾಧ್ಯವಾಗುವಂತೆ ಒಂದು ಸೂತ್ರವನ್ನು ರೂಪಿಸಲಾಗಿದೆ.

ಭಾರತದ ಈಗಿನ ಬಹು ಮುಖ್ಯವಾದ ಸಂಕ್ರಮಣದ ಹಂತದಲ್ಲಿ ಯಾವುದೇ ಮುಷ್ಕರ, ಲಾಕ್‌ಔಟ್‌ಗಳು ನಡೆಯದಂತೆ ನೋಡಿಕೊಳ್ಳುವುದು ಕೈಗಾರಿಕೋದ್ಯಮಿಗಳು ಹಾಗೂ ಕಾರ್ಮಿಕರ ದೃಷ್ಟಿಯಿಂದಷ್ಟೇ ಅಲ್ಲ ಇಡೀ ದೇಶದ ದೃಷ್ಟಿಯಿಂದ ಒಳ್ಳೆಯದು. ದೆಹಲಿಯಲ್ಲಿ ಇತ್ತೀಚೆಗೆ ಘೋಷಿಸಲಾದ ನೀತಿಗೆ ಅನುಗುಣವಾಗಿ ಅಗತ್ಯವಾದ ಕ್ರಮಗಳನ್ನು ಕೈಗೊಳ್ಳುವುದಕ್ಕಾಗಿ ಹಾಗೂ ಸಲಹೆ ಪಡೆದುಕೊಳ್ಳುವುದಕ್ಕಾಗಿ ರಾಜ್ಯದ ಎಲ್ಲ ಕೈಗಾರಿಕೋದ್ಯಮಿಗಳು ಹಾಗೂ ಕಾರ್ಮಿಕ ಪ್ರತಿನಿಧಿಗಳ ಸಮಾವೇಶವನ್ನು ನಡೆಸಬೇಕೆಂದು ಸರ್ಕಾರ ಅಪೇಕ್ಷಿಸುತ್ತದೆ. ಬೇಗ ನಿರ್ಣಯ ಕೈಗೊಳ್ಳಲು ಸಾಧ್ಯವಾಗಲಿ ಹಾಗೂ ಕೈಗಾರಿಕೆ ಮತ್ತು ಕಾರ್ಮಿಕರು ಭುಜಕ್ಕೆ ಭುಜ ಕೊಟ್ಟು ದುಡಿದು ಈಗಿನ ಸಂದರ್ಭದಲ್ಲಿ ಅತ್ಯಗತ್ಯವಾದ ಉತ್ಪಾದನಾ ಏರಿಕೆ ಸಾಧಿಸುವಂತಾಗಲಿ ಎಂದು ನಾನು ಹಾರೈಸುತ್ತೇನೆ.

ನನ್ನ ಮಾತನ್ನು ಮುಗಿಸುವ ಮೊದಲು ಕೇವಲ ಇನ್ನೊಂದು ಅಂಶದ ಬಗ್ಗೆ ಮಾತ್ರ ಪ್ರಸ್ತಾವಿಸಬಯಸುತ್ತೇನೆ. ಇದು ಸರ್ಕಾರದ ಕಾರ್ಯಕ್ರಮಗಳ ನಿರ್ವಹಣೆ ಹಾಗೂ ಸೇವೆಗಳಿಗೆ ಸಂಬಂಧಿಸಿದಂತೆ ದೇಶದಲ್ಲಿರಬೇಕಾದ ರುಜುತ್ವವನ್ನು ಕುರಿತದ್ದು. ಜನತೆಯ ಕ್ಷೇಮ ಕಲ್ಯಾಣ ಹಾಗೂ ಸಂತೋಷಕ್ಕೆ ಮಾರಕವಾದ ಯಾವುದೇ ರೀತಿಯ ಭ್ರಷ್ಟಾಚಾರ ಅಥವಾ ಕಾಳಸಂತೆಕೋರತನವನ್ನು ಸರ್ಕಾರ ಸಹಿಸುವುದಿಲ್ಲ ಎಂದು ಪದೇ ಪದೇ ಘೋಷಿಸಲಾಗಿದೆ. ಈ ಎರಡು ಪಿಡುಗುಗಳು ಇಡೀ ದೇಶವನ್ನೇ ಹಾಳುಮಾಡುತ್ತವೆ. ಈ ಪಿಡುಗುಗಳನ್ನು ಕಿತ್ತುಹಾಕಬೇಕು. ಮನುಷ್ಯರು ಈ ವಿಷಯದಲ್ಲಿ ತಮ್ಮ ವಿವೇಚನೆ ಹಾಗೂ ಸದ್ಗುಣಗಳಿಂದ ವರ್ತಿಸಬೇಕು ಎಂದು ಮನವಿ ಮಾಡಿಕೊಳ್ಳುತ್ತೇವೆ. ಜನರೆಲ್ಲ ಒಂದಾಗಿ ಇದರ ವಿರುದ್ಧ ಹೋರಾಡಬೇಕು. ಜನ ನೈತಿಕವಾಗಿ ವರ್ತಿಸುತ್ತಾರೆ ಎಂಬ ವಿಶ್ವಾಸವಿಟ್ಟುಕೊಂಡೇ ನಾವು ಈ ಎರಡು ತಿಂಗಳುಗಳಲ್ಲಿ ಕಾನೂನನ್ನು ಬಳಸಿ ತೀವ್ರಕ್ರಮ ಕೈಗೊಳ್ಳುವಂತಹ ಕೆಲಸಕ್ಕೆ ಕೈಹಾಕಿಲ್ಲ. ಜನ ಸರ್ಕಾರೀ ಸೇವೆಯಲ್ಲಿ ಇರಲಿ ಇಲ್ಲವೇ ಯಾವುದೇ ಚಟುವಟಿಕೆಯಲ್ಲಿ ತೊಡಗಿರಲಿ ಅತ್ಯಂತ ಪ್ರಾಮಾಣಿಕತೆಯಿಂದ ತಮ್ಮ ಕಾರ್ಯ ನಿರ್ವಹಿಸಬೇಕು ಎಂದು ಮತ್ತೊಮ್ಮೆ ಕಳಕಳಿಯಿಂದ ನಾನು ವಿನಂತಿಸಿಕೊಳ್ಳುತ್ತೇನೆ. ಆದರೆ ಈ ಮನವಿ ವಿಫಲವಾದಲ್ಲಿ ಮತ್ತು ನಾವು ತೀವ್ರ ಕ್ರಮ ಕೈಗೊಳ್ಳಬೇಕಾದಂಥ ಪರಿಸ್ಥಿತಿ ಎದುರಾದಲ್ಲಿ ನಾವು ಬಿಗಿಯಾಗಿ ವರ್ತಿಸುತ್ತೇವೆ ಎಂದು ಒತ್ತಿಹೇಳುತ್ತಿದ್ದೇನೆ. ನಾವು ಗುಲಾಬಿ ದಳಗಳಷ್ಟೇ ಮೃದುವಾಗಿರಬೇಕೆಂದು ನಮ್ಮ ಇಷ್ಟ ಆದರೆ ಅದೇ ಸಂದರ್ಭದಲ್ಲಿ ಸಮಾಜ ವಿರೋಧಿ ನಡತೆಯ ವಿಷಯದಲ್ಲಿ ನಾವು ಕಲ್ಲಿನಷ್ಟು ಕಠಿಣವಾಗಿರಲು ಹಿಂಜರಿಯುವುದಿಲ್ಲ.

ಬೆಂಗಳೂರು ನಗರದಲ್ಲಿ ಇತ್ತೀಚೆಗೆ ನಡೆದ ಕೋಮು ಗಲಭೆಯ ವಿಷಯ ಪ್ರಸ್ತಾಪಿಸದಿದ್ದರೆ ನಾನು ಕರ್ತವ್ಯಲೋಪ ಮಾಡಿದಂತಾಗುತ್ತದೆ. ಈ ಘಟನೆಯಿಂದ ತೀವ್ರ ನೋವಾಗಿದೆ. ಸರ್ಕಾರ ಹಾಗೂ ಜನತೆ ಕೈಗೊಂಡಕ್ರಮಗಳಿಂದ ಶಾಂತಪರಿಸ್ಥಿತಿ ಸ್ಥಾಪನೆಯಾಗಿರುವುದು ಸಮಾಧಾನಕರವಾದರೂ ಅದು ಪೂರ್ಣ ಸಮಾಧಾನ ಕೊಟ್ಟಿಲ್ಲ. ಉತ್ತರ ಭಾರತದ ಕೆಲವು ಕಡೆಗಳಲ್ಲಿ ವ್ಯಕ್ತವಾದಂತಹ ಘರ್ಷಣೆಗಳು ಮತ್ತು ಬರ್ಬರ ಕೃತ್ಯಗಳು ಮೈಸೂರು ರಾಜ್ಯದಲ್ಲಿ ಪ್ರತಿಬಿಂಬಿಸಿದಂತಿದೆ. ಇದರ ಪ್ರಮಾಣ ಕಡಿಮೆ ಇರಬಹುದು. ಆ ಘಟನೆಗಳಿಗೆ ಇಲ್ಲೇಕೆ ಅವಕಾಶ ಕೊಡಬೇಕು ಎಂಬುದೇ ನನ್ನ ಕಳಕಳಿಯ ಪ್ರಶ್ನೆ. ಮೈಸೂರು ರಾಜ್ಯದಲ್ಲಿ ತಲೆತಲೆಮಾರುಗಳ ಕಾಲದಿಂದಲೂ ಎಲ್ಲ ಕೋಮು ವರ್ಗಗಳ ಜನರೂ ಸೋದರರಂತೆ ಬದುಕಿದ್ದಾರೆ ಮುಂದಿನ ತಲೆಮಾರುಗಳವರೆಗೂ ನಾವು ಇದೇ ಸೋದರರಂತೆ ಬಾಳಬೇಕಾಗಿತ್ತು. ನಾವು ಅರಣ್ಯ ನೀತಿಗೆ ಬಲಿಯಾಗಬಾರದು. ಆದರೆ ನಾವು ನೀತಿ ನಿಷ್ಠೆಯಿಂದ ನಡೆದುಕೊಳ್ಳಬೇಕು ಮತ್ತು ಯಾವಾಗಲೂ ನೀತಿ ನಿಷ್ಠೆಗೆ ಬದ್ಧವಾಗಿರಬೇಕು. ಇದು ಯಾವ ಒಂದು ಧರ್ಮಕ್ಕೆ ಸೀಮಿತವಾದ ಅಂಶವಲ್ಲ. ಯಾವಾಗಲೂ ಸಂಪೂರ್ಣ ಸಾಮರಸ್ಯವಿರುವಂತೆ ನಾವು ಎಲ್ಲ ಕಾಲದಲ್ಲಿಯೂ ಎಚ್ಚರವಹಿಸಬೇಕು ಹಾಗೂ ಆ ಬಗ್ಗೆ ಚಿಂತಿಸಬೇಕು.

ಈ ಅಧಿವೇಶನದ ಅವಧಿಯಲ್ಲಿ ನೀವು ನೀಡಿದ ಸಹಕಾರಕ್ಕಾಗಿ ನಾನು ಮತ್ತೊಮ್ಮೆ ಧನ್ಯವಾದಗಳನ್ನು ಅರ್ಪಿಸುತ್ತೇನೆ. ಈ ಅಧಿವೇಶನದ ನಂತರ ಮನೆಗಳಿಗೆ ತೆರಳಲಿರುವ - ವಿಶ್ರಾಂತಿಗಲ್ಲ, ಕೆಲಸಕ್ಕಾಗಿ- ನಿಮ್ಮೆಲ್ಲರಿಗೂ ಶುಭ ಹಾರೈಸುತ್ತೇನೆ. ಈಗ ನಾವು ಬಹಳ ವಿಷಮ ಪರಿಸ್ಥಿತಿಯಲ್ಲಿ ಸಾಗುತ್ತಿದ್ದೇವೆ. ತಕ್ಷಣದಲ್ಲಿಯೇ ನಾವು ಅನೇಕ ಕ್ಲಿಷ್ಟಕರ ಸಮಸ್ಯೆಗಳನ್ನೆದುರಿಸಬೇಕಾಗಿದೆ. ಆಹಾರ ಸಮಸ್ಯೆಯ ಬಗ್ಗೆ ನೀವು ಗಂಭೀರವಾಗಿ ಗಮನಿಸಬೇಕು ಎಂದು ಮತ್ತೊಮ್ಮೆ ತಿಳಿಸುತ್ತಿದ್ದೇನೆ. ಬೆಳಗಾರರಿಗೆ ಸಂಕಷ್ಟವೊಡ್ಡದೆ ಅನ್ಯಾಯ ಮಾಡದೆ ಆದಷ್ಟೂ ಹೆಚ್ಚು ಆಹಾರ ಧಾನ್ಯಗಳನ್ನು ವಸೂಲು ಮಾಡಲು ಸಹಾಯ ಮಾಡಬೇಕೆಂದು ಎಲ್ಲರಲ್ಲಿಯೂ ಮನವಿ ಮಾಡಿಕೊಳ್ಳುತ್ತಿದ್ದೇನೆ ಮತ್ತು ವಸೂಲಾದ ಆಹಾರ ಸಮಾನವಾಗಿ ಹಂಚಿಕೆಯಾಗುವಂತೆ ಸರ್ಕಾರಕ್ಕೆ ಸಹಾಯ ಮಾಡಬೇಕು ಎಂದೂ ವಿನಂತಿಸಿಕೊಳ್ಳುತ್ತೇನೆ.

ಮಹಾನ್ ಕವಿಯೊಬ್ಬ ಹೇಳಿದಂತೆ ಎಲ್ಲ ವಿಷಯದಲ್ಲಿಯೂ ನಾವು ಮಾಡಬೇಕಾದ್ದೇನೆಂದರೆ - "Ring out the old and Ring in the New".

## 2. ಮೈಸೂರು ಪ್ರಜಾಪ್ರತಿನಿಧಿ ಸಭೆಯಲ್ಲಿ ಪ್ರಧಾನ ಮಂತ್ರಿಗಳು ಮತ್ತು ಇನ್‌ಚಾರ್ಜ್ ದಿವಾನರವರಾದ ಶ್ರೀ ಕೆ. ಚೆಂಗಲರಾಯರೆಡ್ಡಿಯವರು ಮಾಡಿದ ಅಧ್ಯಕ್ಷ ಭಾಷಣದ ಮೊದಲನೆಯ ಭಾಗ:-

## 1948 ಅಕ್ಟೋಬರ್, 9

### ಅಧ್ಯಕ್ಷರ ಭಾಷಣ

ಪ್ರಜಾಪ್ರತಿನಿಧಿ ಸಭೆಯ ಮಾನ್ಯ ಸದಸ್ಯರೇ,

ಈ ಸಭೆಯು ದಸರಾ ಅಧಿವೇಶನಕ್ಕೆ, ನನ್ನ ಪರವಾಗಿಯೂ ಮತ್ತು ನನ್ನ ಸಹೋದ್ಯೋಗಿಗಳಾದ ಸಚಿವರುಗಳ ಪರವಾಗಿಯೂ ತಮಗೆ ಅತ್ಯಂತ ಆದರದ ಸ್ವಾಗತವನ್ನು ಬಯಸುವುದು ನನಗೆ ಬಹಳ ಸಂತೋಷಕರವಾಗಿದೆ. ಈ ಅಧಿವೇಶನದಲ್ಲಿ ಮಹತ್ವವುಳ್ಳ ಹಲವು ಮಸೂದಾ ಕಾನೂನುಗಳು ತಮ್ಮ ಮುಂದೆ ಪರ್ಯಾಲೋಚನೆಗೆ ಬರುತ್ತವೆ. ಹಾಗೆಯೇ ಇತರ ಬೇರೆ ಬೇರೆ ವಿಷಯಗಳೂ ಪರ್ಯಾಲೋಚನೆಗೆ ಬರುತ್ತವೆ. ಅವುಗಳಲ್ಲಿ ಕೆಲವು ಬಹಳ ಪ್ರಾಮುಖ್ಯವಾದವುಗಳಾಗಿವೆ. ಇಲ್ಲಿ ಚರ್ಚೆಗಳು ನಡೆಯುವ ಕಾಲದಲ್ಲಿ ನಾನಾ ವಿಷಯಗಳೂ ಸೂಕ್ಷ್ಮವಾದ ವಿಮರ್ಶಾಬುದ್ಧಿಯಿಂದಲೂ, ವಸ್ತುಸ್ಥಿತಿ ದೃಷ್ಟಿಯಿಂದಲೂ ವಿಚಾರ ಮಾಡಲ್ಪಟ್ಟು, ವಿವೇಕಯುತವಾದ ತೀರ್ಮಾನಗಳು ನಡೆಯುತ್ತವೆಂದು ನನಗೆ ಭರವಸೆಯಿದೆ. ಈ ಸಭೆಯಲ್ಲಿ ಹಿಂದಿನಿಂದಲೂ ನಡೆದುಕೊಂಡು ಬಂದಿರುವ ಸಂಪ್ರದಾಯಗಳನ್ನು ನಾನು ಅರಿತಿರುವುದೇ ನನ್ನ ಭರವಸೆಗೆ ಕಾರಣ.

ಭರತ ಖಂಡಕ್ಕೆ 1947ನೆಯ ಇಸವಿ ಆಗಸ್ಟ್ ತಿಂಗಳು 15ನೆಯ ತಾರೀಖಿನ ದಿನ ಸ್ವಾತಂತ್ರ್ಯವು ಲಭಿಸಿದ ತರುವಾಯ, ಮನಸ್ಸನ್ನು ಮುಗ್ಧಗೊಳಿಸುವ ಅನೇಕ ಸಮಸ್ಯೆಗಳು ತಲೆದೋರಿದವು. ಅವುಗಳಲ್ಲಿ ಕೆಲವಂತೂ ಪ್ರಪಂಚದ ಇತಿಹಾಸದಲ್ಲಿ ಹಿಂದೆ ಎಂದೂ ಕಂಡು ಬರದೆ ಇದ್ದಂಥ ಅಸಾಧಾರಣ ಸಮಸ್ಯೆಗಳು. ಪಾಕಿಸ್ಥಾನದಿಂದ ಲಕ್ಷಾಂತರ ಜನಗಳು ಅತ್ಯಂತ ದುರಂತವಾದ ಸನ್ನಿವೇಶಗಳಲ್ಲಿ ನಿರಾಶ್ರಿತರಾಗಿ ಇಂಡಿಯಾಕ್ಕೆ ವಲಸೆ ಬಂದುದು ಒಂದು ದಾರುಣ ಘಟನೆ. ಅದರ ಫಲಿತಾಂಶವಾಗಿ ಉಂಟಾದ ಪರಿಸ್ಥಿತಿಯು ಅತ್ಯಂತ ಜಟಿಲವಾದ ಸಮಸ್ಯೆಯಾಗಿ ಪರಿಣಮಿಸಿ ಅದನ್ನು ಬಗೆಹರಿಸಬೇಕಾದ ಸ್ಥಿತಿಯೊದಗಿತು. ಕೋಮುವಾರು ವಿದ್ವೇಷವು ಉದ್ರೇಕಗೊಂಡು ವಿಜೃಂಭಿಸಿತು. ಪದೇ ಪದೇ ಅತ್ಯಂತ ಹೀನವಾದ ಅತ್ಯಂತ ವಿಷಾದಕರವಾದ ರೀತಿಯಲ್ಲಿ ಘೋರವಾದ ಕೋಮುವಾರು ಘರ್ಷಣೆಗಳು ಮೇಲಿಂದ ಮೇಲೆ ನಡೆದವು. ಅವುಗಳನ್ನು ವಿವರವಾಗಿ ಪ್ರಸ್ತಾಪಿಸುವುದಾಗಲಿ ಅಥವಾ ಇತರ ಮುಖ್ಯವಾದ ವಿಚಾರಗಳನ್ನು ಸೂಚಿಸುವುದಾಗಲಿ ಅವಶ್ಯಕವೆಂದು ನಾನು ಭಾವಿಸುವುದಿಲ್ಲ. ಆದರೆ ಒಂದು ವಿಚಾರವನ್ನು ಮಾತ್ರ ನಾನು ಪ್ರಸ್ತಾಪಿಸಲೇಬೇಕಾಗಿದೆ. ಭಾರತೀಯ ಸಂಸ್ಥಾನಗಳಿಗೆ ಸಂಬಂಧಪಟ್ಟುದೇ ಆ ವಿಚಾರ. ಬ್ರಿಟಿಷ್ ಸರ್ಕಾರದವರು ಭಾರತೀಯರ ಕೈಗೆ ಅಧಿಕಾರ ಸೂತ್ರವನ್ನು ವಹಿಸಿ ಕೊಟ್ಟಾಗ,

ಅವರು ಸಂಸ್ಥಾನಗಳ ಮೇಲೆ ಇಂಡಿಯಾ ಸರ್ಕಾರಕ್ಕಿದ್ದ ಪರಮಾಧಿಕಾರವು (ಎಂದರೆ “ಪ್ಯಾರಮೌಂಟ್‌ಸಿ” ಅಧಿಕಾರವು) ಮುಕ್ತಾಯವಾಯಿತೆಂದೂ, ಸಂಸ್ಥಾನಗಳವರು ತಮಗೆ ಇಷ್ಟಬಂದಂತೆ ಮಾಡಲು ಸಂಪೂರ್ಣವಾಗಿ ಸ್ವತಂತ್ರರಾಗಿರುವರೆಂದೂ ತೀರ್ಮಾನಿಸಿ ಪ್ರಕಟಪಡಿಸಿದರು. ದೇಶದಲ್ಲಿ ಒಡಕನ್ನು ಹುಟ್ಟಿಸಿ ಭೇದಭಾವನೆಯನ್ನು ಹೆಚ್ಚಿಸುವ ಮನೋಧರ್ಮವುಳ್ಳವರಿಗೆ ಇದರಿಂದ ಬಲವು ದೊರೆತಂತಾಗಿ ಅವರ ಪ್ರಯತ್ನಗಳು ವೃದ್ಧಿಗೊಂಡು ಭರತಖಂಡದ ಒಕ್ಕಟ್ಟಿಗೂ ಮತ್ತು ಐಕ್ಯಮತ್ಯಕ್ಕೂ ಭಂಗವುಂಟಾಗಲು, ಆ ಮೂಲಕ ಬಹಳ ಅಪಾಯಕರವಾದ ಒಂದು ಅವಕಾಶವನ್ನು ಕಲ್ಪಿಸಿಕೊಟ್ಟಂತಾಯಿತು. ಆದರೆ ಸಂಸ್ಥಾನಗಳ ಪ್ರಜೆಗಳೂ ಮತ್ತು ಸಂಸ್ಥಾನಧೀಶರುಗಳೂ ದೇಶಾಭಿಮಾನಪೂರಿತವಾಗಿ ವಿವೇಕದಿಂದ ವರ್ತಿಸಿದರು. ಆದರ ಫಲಿತಾಂಶವಾಗಿ ಅನೇಕ ಸಂಸ್ಥಾನಗಳು ಪರಸ್ಪರ ಒಪ್ಪಂದವಾದ ಕೆಲವು ಷರತ್ತುಗಳ ಮೇಲೆ “ಇಂಡಿಯನ್ ಯೂನಿಯನ್” ವ್ಯವಸ್ಥೆಗೆ ಸೇರಿದವು. ಈ ಸಂಬಂಧವಾದ ಘಟನೆಗಳು ಒಂದರಮೇಲೊಂದರಂತೆ ಅತ್ಯದ್ಭುತವಾದ ವೇಗದಲ್ಲಿ ನಡೆದು ಪರಿಣಾಮವಾಗಿ ಸಮೂಲವಾದ ಅನೇಕ ಬದಲಾವಣೆಗಳು ಆಶ್ಚರ್ಯಕರವಾಗಿ ನಡೆದವು. ಇಂಡಿಯಾ ದೇಶದಲ್ಲಿ ರಾಜ್ಯಾವಿಭಾಗಗಳ ಸ್ವರೂಪವೇ ಬದಲಾವಣೆಯಾಗುವಂತೆ ವಿದ್ಯಮಾನಗಳು ನಡೆದು, ಆರುನೂರಕ್ಕೂ ಹೆಚ್ಚಿನ ಸಂಖ್ಯೆಯಲ್ಲಿ ಹಿಂದಿದ್ದ ಭಾರತೀಯ ಸಂಸ್ಥಾನಗಳ ಪೈಕಿ ಅತ್ಯಧಿಕ ಸಂಖ್ಯೆಯವು ಪ್ರತ್ಯೇಕ ಸ್ವರೂಪವನ್ನು ಕಳೆದುಕೊಂಡು ವಿಲೀನ ಹೊಂದಿದವು. ಅವುಗಳಲ್ಲಿ ಕೆಲವು ಸಂಸ್ಥಾನಗಳು “ಯೂನಿಯನ್” ವ್ಯವಸ್ಥೆಯಲ್ಲಿ ಒಟ್ಟುಗೂಡಿದವು; ಮತ್ತೆ ಕೆಲವು ಇತರ ಪ್ರಾಂತ್ಯಗಳೊಡನೆ ವಿಲೀನವಾಗಿ ಸೇರಲ್ಪಟ್ಟುವು. ಸಂಸ್ಥಾನಗಳ ಪೈಕಿ ತೊಂದರೆಗೆ ಕಾರಣಗಳಾದ ಸಂಸ್ಥಾನಗಳೆಂದರೆ ಕಾಶ್ಮೀರ ಮತ್ತು ಹೈದರಾಬಾದು ಇವೆರಡು ಮಾತ್ರ. ಕಾಶ್ಮೀರದಲ್ಲಿ ಮಿಲಿಟರಿ ಕಾರ್ಯಾಚರಣೆಗಳು ನಡೆಯುತ್ತಿವೆ; ಅಲ್ಲದೆ, ಶಾಂತಿಸ್ಥಾಪನೆಗಾಗಿ “ಯು.ಎನ್.ಓ. ಕಮಿಷನ್” ಸದಸ್ಯರು ಮಾಡಿದ ಪ್ರಯತ್ನಗಳು ಇನ್ನೂ ಫಲಕಾರಿಯಾಗಿ ಪರಿಣಮಿಸಿಲ್ಲ. ಕಾಶ್ಮೀರ ಸಮಸ್ಯೆಯನ್ನು ಶಾಂತವಾದ ರೀತಿಯಲ್ಲಿ ಬಗೆಹರಿಸಲು ಆ ಸದಸ್ಯರು ಮಾಡಿದ ಸಲಹೆಗಳಿಗೆ ಇಂಡಿಯಾ ಸರ್ಕಾರದವರು ಸಮ್ಮತಿಸಿದಾಗ್ಯೂ, ಪಾಕಿಸ್ತಾನದವರು ಮಾತ್ರ ಅದಕ್ಕೆ ಸಮ್ಮತಿಸದೆ ಇನ್ನೂ ಹೊಂದಾಣಿಕೆ ಯಿಲ್ಲದ ರೀತಿಯಲ್ಲಿಯೇ ವರ್ತಿಸುತ್ತಿದ್ದಾರೆ. ಇದಕ್ಕಾಗಿ ವಿಷಾದಪಡಬೇಕಾಗಾಗಿದೆ. ಆದರೆ ಹೈದರಬಾದ್ ಸಂಸ್ಥಾನಕ್ಕೆ ಸಂಬಂಧಪಟ್ಟ ಸಮಸ್ಯೆಯು ತೃಪ್ತಿಕರವಾಗಿ ಬಗೆಹರಿಯುವುದರಲ್ಲಿದೆ. ಇದು ಅತ್ಯಂತ ಸಂತೋಷಕರವಾದ ವಿಚಾರ. ಹೈದರಬಾದಿನಲ್ಲಿ ನಡೆದ ಘಟನೆಗಳು ತೀರಾ ಈಚೆಗೆ ನಡೆದು ಎಲ್ಲರಿಗೂ ತಿಳಿದೇ ಇರುವುದರಿಂದ, ನಾನು ಅವುಗಳನ್ನು ಮತ್ತೆ ವಿಶದವಾಗಿ ಪ್ರಸ್ತಾವಿಸಬೇಕಾದ ಪ್ರಕೃತವೇ ಇಲ್ಲ. ಇಂಡಿಯಾ ಸರ್ಕಾರದವರು ಶ್ಲಾಘ್ಯ ರೀತಿಯಲ್ಲಿ ತಾಳ್ಮೆಯನ್ನು ಸಹನಶೀಲತೆಯನ್ನೂ ತೋರಿಸಿದರು ಸಂಧಾನ ನಡೆಸುವ ಮೂಲಕ ನ್ಯಾಯವಾದೊಂದು ತೀರ್ಮಾನಕ್ಕೆ ಬರುವುದಕ್ಕಾಗಿ ಸರ್ವಪ್ರಯತ್ನಗಳನ್ನು ಮಾಡಿ ತಮಗೆ ದೊರೆತ ಸಮಸ್ತ ಅವಕಾಶಗಳನ್ನೂ ಉಪಯೋಗಿಸಿಕೊಂಡರು. ಆದಾಗ್ಯೂ. ಕೆಲವು ವರ್ಗಗಳವರ ಮುಖ್ಯವಾಗಿ ರಜಾಕಾರರ ಮತ್ತು ಅವರ ಪಕ್ಷಕ್ಕೆ ಒತ್ತಾಸೆಕೊಡುತ್ತಿದ್ದವರ ಹಟವಾದಿತನದಿಂದ ಅದು ಸಾಧ್ಯವಾಗಲಿಲ್ಲ. ರಜಾಕಾರರು ಅವರ ಪಕ್ಷಕ್ಕೆ ಒತ್ತಾಸೆ ಕೊಡುತ್ತಿದ್ದವರೂ ತಮ್ಮ ಸ್ವಾರ್ಥಸಾಧನೆಗಾಗಿ ಹಿಂಸೆಯ ಮಾರ್ಗವನ್ನೂ, ಪಾಶವೀ ವೃತ್ತಿಯನ್ನೂ ಅನುಸರಿಸತಕ್ಕ ಮನೋವೃತ್ತಿಯುಳ್ಳವರಾಗಿದ್ದರು. ಆದಕಾರಣ ಹೈದರಾಬಾದಿನೊಡನೆ

ಸಂಧಾನವು ವಿಫಲವಾಯಿತು. ಪರಿಣಾಮದಲ್ಲಿ ಸನ್ನಿವೇಶವು ಬಿಗಡಾಯಿಸಿ ಉತ್ಕಟವಾದ ಅವಶ್ಯಕತೆಯುಂಟಾದುದರ ದೆಸೆಯಿಂದ, ಇಂಡಿಯಾ ಸರ್ಕಾರದವರು ನಿರ್ವಾಹವಿಲ್ಲದೆ ಪ್ರಜಾ ನೆಮ್ಮದಿಯನ್ನು ನೆಲೆಗೊಳಿಸುವುದಕ್ಕಾಗಿ "ಪೋಲೀಸು ಕಾರ್ಯಕ್ರಮ" ವನ್ನು ಕೈಗೊಳ್ಳಬೇಕಾಯಿತು. ಭಾರತೀಯ ಸೈನ್ಯದಳಗಳು ತಮ್ಮ ಕರ್ತವ್ಯವನ್ನು ಸೊಗಸಾಗಿ ನೆರವೇರಿಸಿ ತಮಗೆ ವಹಿಸಿದ ಕಾರ್ಯಗಳನ್ನು ತೀರಾ ಅಲ್ಪಕಾಲದಲ್ಲೇ ಪೂರೈಸಿದವು. ತಮ್ಮ ಕರ್ತವ್ಯವನ್ನು ಭವ್ಯವಾಗಿ ನಿರ್ವಹಿಸಿರುವುದಕ್ಕಾಗಿ ಇಂಡಿಯಾ ಸರ್ಕಾರದವರಿಗೂ, ಸರ್‌ದಾರ್ ವಲ್ಲಭಭಾಯಿ ಪಟೇಲರ ಪ್ರತಿಭಾನ್ವಿತವಾದ ಅಧಿಷ್ಠಾ ತತ್ವದಲ್ಲಿ ಕೆಲಸ ಮಾಡುತ್ತಿರುವ ಸಂಸ್ಥಾನಗಳ ಸಂಬಂಧವಾದ ಸಚಿವಮಂಡಲ ಶಾಖೆಗೂ ಮತ್ತು ಭಾರತೀಯ ಸೈನ್ಯದಳಗಳಿಗೂ ಆದರ ಪೂರ್ವಕವಾಗಿ ಶ್ಲಾಘನೆಯನ್ನು ಸಮರ್ಪಿಸುವುದರಲ್ಲಿ ತಾವೆಲ್ಲರೂ ಹೃತ್ಪೂರ್ವಕವಾಗಿ ನನ್ನೊಡನೆ ಸೇರುತ್ತೀರೆಂದು ನಾನು ನಂಬಿದ್ದೇನೆ. ಅದರಲ್ಲಿಯೂ ವಿಶೇಷವಾಗಿ ಬ್ರಿಗೇಡಿಯರ್ ಭಾಳ್ ಅವರಿಗೂ ಅವರ ಕೈಕೆಳಗೆ ಕಲಸಮಾಡಿದ ಸಂಸ್ಥಾನದ ಸೈನ್ಯದಳಗಳವರಿಗೂ, ಹೈದರಾಬಾದು ಸಂಸ್ಥಾನದ ಮೇಲೆ ನಡೆದ ಕಾರ್ಯಾಚರಣೆಯಲ್ಲಿ ಅವರು ಯಶಸ್ವಿಯಾಗಿ ಭಾಗವಹಿಸಿ ಸಾಹಸ ಪರಾಕ್ರಮಗಳನ್ನು ತೋರಿಸಿದುದಕ್ಕಾಗಿ, ನಮ್ಮೆಲ್ಲರ ಹೃತ್ಪೂರ್ವಕವಾದ ಮೆಚ್ಚಿಗೆಯನ್ನು ಮತ್ತು ಅಭಿನಂದನೆಗಳನ್ನೂ ಸೂಚಿಸಲಿಚ್ಛಿಸುವೆನು. ಅವರನ್ನು ಕಂಡು, ನಿಜವಾಗಿಯೂ ನಮಗೆ ಹೆಮ್ಮೆಯುಂಟಾಗಿದೆ. ಒಟ್ಟುಗೂಡಿದ ರಾಷ್ಟ್ರಗಳ ಭದ್ರತಾ ಸಮಿತಿಯ (ಎಂದರೆ "ಯು.ಎನ್.ಓ. ಸೆಕ್ಯೂರಿಟಿ ಕೌನ್ಸಿಲ್") ಮುಂದೆ ಕೌಶಲ್ಯಯುತವಾಗಿ ವಾದಿಸಿದ ಭಾರತೀಯ ಪ್ರತಿನಿಧಿಯುವರಾದ ಸರ್ ರಾಮಸ್ವಾಮಿ ಮೊದಲಿಯಾರರವರಿಗೂ ನಮ್ಮ ಅಭಿನಂದನೆಗಳನ್ನು ಸೂಚಿಸಲಿಚ್ಛಿಸುತ್ತೇನೆ. ಹೈದರಾಬಾದಿನಲ್ಲಿ ಘಟನೆಗಳು ಈಗ ರೂಪಿತವಾಗಿರುವ ಬಗೆಯನ್ನು ಕುರಿತು ನಾನು ಮತ್ತೇನನ್ನೂ ವಿಶದೀಕರಿಸಿ ತಿಳಿಸುವನಾಗಿಲ್ಲ. ಹೈದರಾಬಾದ್ ಸಂಸ್ಥಾನದ ಘಟನೆಗಳ ಪರಿಣಾಮವನ್ನು ಮೈಸೂರು ಸಂಸ್ಥಾನದಲ್ಲಿ ನಾವು ಕೂಡ ಬಹಳ ಜಾಗರೂಕತೆಯಿಂದ ಪರಿಶೀಲಿಸಿ ಎಚ್ಚರಿಕೆಯಿಂದಿದ್ದು ನಮ್ಮ ಹಿತರಕ್ಷಣೆಗಾಗಿ ಅವಶ್ಯವಾದ ಕಾರ್ಯಕ್ರಮಗಳನ್ನು ಕೈಗೊಳ್ಳಬೇಕಾಯಿತು. ನಮ್ಮ ಪ್ರಯತ್ನಗಳು ಸಫಲವಾಗಿರುವುದಕ್ಕಾಗಿ ಹರ್ಷಿಸುತ್ತೇನೆ. ಇನ್ನೂ ಮುಂದೆ ಸೌಹಾರ್ದವೂ ಮತ್ತು ಸಾಮರಸ್ಯವೂ ನೆಲೆಗೊಳ್ಳುತ್ತವೆಂದೂ ಮತ್ತು ಶಾಂತಿ ಪ್ರಗತಿಗಳ ಸಾದನೆಗಾಗಿ ನಾವು ಇನ್ನು ಮುಂದೆ ಏಕಾಮುಖವಾಗಿಯೂ ನಿರಾತಂಕವಾಗಿಯೂ ಗಮನ ಕೊಡುವುದು ಸಾಧ್ಯವಾಗುತ್ತದೆಂದೂ ನಾನು ನಂಬಿದ್ದೇನೆ.

ಈ ಸಭೆಯ ಹಿಂದಿನ ಅಧಿವೇಶನವು ನಡೆದಾಗಿನಿಂದ ಈಚೆಗೆ ಪ್ರಮುಖರಲ್ಲಿಬ್ಬರು ಕಾಲವಶರಾದ ವಿಷಾದ ಘಟನೆಯನ್ನು ಇತರ ವಿಚಾರಗಳನ್ನು ಪ್ರಸ್ತಾಪಿಸುವುದಕ್ಕಿಂತ ಮುಂಚಿತವಾಗಿ ನಾನು ಸೂಚಿಸಲಿಚ್ಛಿಸುತ್ತೇವೆ. ಪಾಕಿಸ್ತಾನದ ನಿರ್ಮಾಪಕರಾದ ಕ್ವಯಿದ್-ಎ-ಅಜಂ ಜಿನ್ನಾ ಅವರು ದಿವಂಗತರಾದರು. ಅವರ ಕಾರ್ಯಶ್ರದ್ಧೆಯೂ, ಅಕಲ ಸಂಕಲ್ಪವೂ, ಉದ್ದೇಶ ಸಾಧನೆಯ ಸ್ಥಿರ ಮನಸ್ಸೂ ಮತ್ತು ಅಸಾಧಾರಣಾ ಮೇಧಾಶಕ್ತಿಯೂ ಶ್ಲಾಘನೀಯವಾಗಿದೆ. ಅವರು ದೊಡ್ಡ ಮುಖಂಡರಾಗಿ ಬಹುಮಂದಿ ಅನುಯಾಯಿಗಳನ್ನು ಪಡೆದಿದ್ದರು. ಸ್ವಾತಂತ್ರ್ಯದ ಹೋರಾಟದಲ್ಲಿ ಧೀರತೆಯಿಂದ ವರ್ತಿಸಿದವರು ಮತ್ತು ಅಧಿಕಾರ ಪೀಠದಲ್ಲಿಲ್ಲದಿದ್ದೂ ಬಹು ದೀರ್ಘಕಾಲ ಆಗಾಧ ಪ್ರಭಾವವುಳ್ಳ ಮುಂಬಯಿ ನಗರದ ಮುಖಂಡರು ಆಗಿದ್ದ ಶ್ರೀ ಕೆ.ಎಫ್. ನಾರಿಮನ್ ಅವರು ಅಕಾಲ ಮರಣಕ್ಕೆ ಗುರಿಯಾದರು.ಅವರು ಉತ್ಸಾಹ ಶೀಲರಾದ ಉಜ್ವಲ

ದೇಶಾಭಿಮಾನಿಗಳಾಗಿದ್ದರು. ಮೈಸೂರು ಸಂಸ್ಥಾನದ ಜನರಿಗೆ ಅವರಿಂದ ನಡೆದ ಅಮೂಲ್ಯ ಸೇವೆಯ ಉಪಕಾರವನ್ನು ನಾವು ಕೃತಜ್ಞತೆಯಿಂದ ಸ್ಮರಿಸುವುದು ನಮ್ಮ ಕರ್ತವ್ಯವಾಗಿದೆ. ಈ ಇಬ್ಬರು ಪ್ರಮುಖ ವ್ಯಕ್ತಿಗಳ ಮರಣಕ್ಕಾಗಿ ನಾವು ಸಂತಾಪಪಡುತ್ತಿದ್ದೇವೆ. ನಮ್ಮ ಹೃತ್ಪೂರ್ವಕವಾದ ಸಂತಾಪವನ್ನು ಅವರ ಕುಟುಂಬಗಳವರಿಗೆ ಸೂಚಿಸಲು ತಮ್ಮ ಅನುಮತಿಯನ್ನು ಕೋರುತ್ತೇನೆ.

ಇನ್ನು, ಕಳೆದ ಜೂನ್ ತಿಂಗಳಿನಲ್ಲಿ ನಾವು ಸಭೆ ಸೇರಿದ್ದಾಗಿನಿಂದ ಈಚೆಗೆ ಸಂಸ್ಥಾನದಲ್ಲಿ ನಡೆದಿರತಕ್ಕ ಆಡಳಿತದ ಮುಖ್ಯಾಂಶಗಳಲ್ಲಿ ಕೆಲವನ್ನು ಕುರಿತು ಈಗ ಸಂಕ್ಷೇಪವಾಗಿ ವಿಮರ್ಶಿಸಿ ಸೂಚಿಸುತ್ತೇನೆ. 1947-48ನೆ ಸಾಲಿನಲ್ಲಿ ನಾನಾ ಇಲಾಖೆಗಳಲ್ಲಿಯೂ ನಡೆದಿರುವ ಕಾರ್ಯಕಲಾಪಗಳ ಸಾರಾಂಶವು ಈ ಭಾಷಣದ ಎರಡನೆಯ ಭಾಗದಲ್ಲಿ ಸೂಚಿತವಾಗಿದೆ. ತಾವು ಅದನ್ನು ಆಲೋಚಿಸಲಬೇಕೆಂದು ಬಿನ್ನೈಸುತ್ತೇನೆ. ಅದರಲ್ಲಿ ಸೂಚಿತವಾಗಿರುವ ವಿವರಗಳ ಫಲಿತಾಂಶವಾಗಿ ಕಂಡು ಬರುವ ಪ್ರಾಮುಖ್ಯವಾದ ಕೆಲವು ಅಂಶಗಳನ್ನು ಮಾತ್ರ ಸೂಚಿಸಿ ಕಳೆದ ಜೂನ್ ತಿಂಗಳಿನಿಂದ ಇದುವರೆಗೆ ನಡೆದಿರುವ ಪ್ರಗತಿ ಸಾಧನೆಯನ್ನು ಸ್ಥೂಲವಾಗಿ ಈಗ ಪ್ರಸ್ತಾಪಿಸುತ್ತೇನೆ.

ನಾವು ಯಾವ ವಿಷಯಗಳನ್ನು ವಹಿಸಿಕೊಟ್ಟು "ಇಂಡಿಯನ್ ಯೂನಿಯನ್" ವ್ಯವಸ್ಥೆಗೆ ಸೇರಿದ್ದೇವೋ ಅವುಗಳು ಮಾತ್ರವೇ ಅಲ್ಲದೆ, ಇತರ ಹಲವು ಮುಖ್ಯ ವಿಷಯಗಳಲ್ಲಿ ಕೂಡ ನಮ್ಮ ಕಾರ್ಯನೀತಿಗಳೂ ಮತ್ತು ನಮ್ಮ ಕಾರ್ಯಕ್ರಮಗಳೂ, ಅಖಿಲ ಭಾರತೀಯ ಕಾರ್ಯನೀತಿಗಳಿಗೂ ಮತ್ತು ಕಾರ್ಯಕ್ರಮಗಳಿಗೂ ಅನುಸಾರವಾಗಿ ಅವುಗಳಂತೆಯೇ ಇರಬೇಕಾದುದು ಅವಶ್ಯಕ. ಜೀವನಕ್ಕೆ ಅತ್ಯಗತ್ಯವಾಗಿ ಬೇಕಾದ ಆಹಾರ, ಬಟ್ಟೆ, ಮತ್ತು ಇತರ ಮುಖ್ಯ ಪದಾರ್ಥಗಳ ವಿಚಾರದಲ್ಲಿ ಇದು ಸುಸ್ಪಷ್ಟವಾಗಿ ವ್ಯಕ್ತವಾಗುತ್ತದೆ. ಹತೋಟಿ ವ್ಯವಸ್ಥೆಯನ್ನು ತೆಗೆದುಹಾಕುವುದಾಗಿ ಇಂಡಿಯಾ ಸರ್ಕಾರದವರು ತೀರ್ಮಾನಿಸಿದರು. ಅದಕ್ಕನುಸಾರವಾಗಿ ನಾವೂ ಸಹ, ಸರ್ವೇಸಾಧಾರಣವಾಗಿ ಹತೋಟಿಯನ್ನು ("ಕಂಟ್ರೋಲ್") ತೆಗೆದುಹಾಕುವ ಕಾರ್ಯನೀತಿಯನ್ನೇ ಅನುಸರಿಸಬೇಕೆಂದು ನಿರ್ಧರಿಸಿದೆವು. ಆಹಾರ ಧಾನ್ಯಗಳ ಮೇಲಿನ ಹತೋಟಿಯನ್ನು ("ಕಂಟ್ರೋಲ್") ತೆಗೆದು ಹಾಕುವ ಕಾರ್ಯನೀತಿಯನ್ನು ಮಾತ್ರ ಕ್ರಮಕ್ರಮವಾಗಿ ಜಾರಿಯಲ್ಲಿ ತಂದೆವು. ಆರಂಭದಲ್ಲಿ ಅದರಿಂದ ಉತ್ತಮವಾದ ಫಲಿತಾಂಶಗಳೇ ಉಂಟಾದವು. ಹತೋಟಿಯು ಆಚರಣೆಯಲ್ಲಿದ್ದುದರ ದೆಸೆಯಿಂದ ಅದುವರೆಗೂ ಉಂಟಾಗಿದ್ದ ನಿರ್ಬಂಧಗಳೂ ಮತ್ತು ಅನಾನುಕೂಲಗಳೂ ತಪ್ಪಿ ಹೋಗಿ ಅನುಕೂಲವಾಯಿತೆಂದು ಆಹಾರ ಧಾನ್ಯಗಳನ್ನು ಬಳಸುವವರೂ ಮತ್ತು ಬೆಳೆಯುವವರು ಸಮಾಧಾನ ಪಟ್ಟು ಸಂತೋಷಿಸಿದರು. ಆದರೆ, ಕ್ರಮಕ್ರಮವಾಗಿ ಪರಿಸ್ಥಿತಿಯು ಹದಗೆಟ್ಟು, ಹತೋಟಿಯನ್ನು ತೆಗೆದುಹಾಕಿದ ಆಹಾರ ಧಾನ್ಯಗಳ ಧಾರಣೆಗಳು ಹತೋಟಿ ಹೋಗುವುದಕ್ಕೆ ಮುಂಚಿತವಾಗಿದ್ದ ಧಾರಣೆಗಳಿಗಿಂತ ಸುಮಾರು ದ್ವಿಗುಣವಾಗಿ ಏರಿಹೋದವು. ಭರತಖಂಡದ ಇತರ ಭಾಗಗಳಲ್ಲಿಯೂ ಹೀಗೆಯೇ ಆಯಿತು. ಇಂಡಿಯಾ ಸರ್ಕಾರದವರು ಇಡೀ ವಿಚಾರವನ್ನೇ ಮತ್ತೆ ಹೊಸದಾಗಿ ಸಮಾಲೋಚನೆ ಮಾಡಬೇಕಾಯಿತು. ಕಳೆದ ತಿಂಗಳು ದೆಹಲಿಯಲ್ಲಿ ನಡೆದ ಪ್ರಾಂತಗಳ ಮತ್ತು ಸಂಸ್ಥಾನಗಳ ಪ್ರಧಾನ ಸಚಿವರುಗಳ ಸಮ್ಮೇಳನದಲ್ಲಿ ಆ ವಿಚಾರವಾಗಿ ಚರ್ಚೆ ನಡೆಯಿತು. ಆಹಾರ ಧಾನ್ಯಗಳ ಹತೋಟಿಯ ಕಾರ್ಯನೀತಿಯನ್ನು ಮತ್ತೆ ಅನುಸರಿಸುವುದು ಸೂಕ್ತವೆಂದು ನಿರ್ಧರಿಸಿ ಇಂಡಿಯಾ ಸರ್ಕಾರದವರು ಈಗ ಪ್ರಕಟಿಸಿದ್ದಾರೆ. ಆ ಕಾರ್ಯ ನೀತಿಯನ್ನು ಆಚರಣೆಗೆ ತರುವುದಕ್ಕೆ ಕೂಡಲೆ ಕ್ರಮ

ಜರುಗಿಸಬೇಕೆಂದು ಅವರು ಪ್ರಾಂತಗಳಿಗೂ ಮತ್ತು ಸಂಸ್ಥಾನಗಳಿಗೂ ವಿಶದವಾಗಿ ಅನುಜ್ಞೆಗಳನ್ನು ಕೊಟ್ಟಿದ್ದಾರೆ. ವಿಧಾಯಕವಾದಂತೆ ಪರಮಾವಧಿ ಪ್ರಮಾಣಗಳಲ್ಲಿ ನಾನಾ ಸರ್ಕಾರಗಳವರೂ ತಮ್ಮ ತಮ್ಮ ಆಡಳಿತಕ್ಕೊಳಪಟ್ಟ ಪ್ರದೇಶಗಳಲ್ಲಿ ವ್ಯವಸಾಯಗಾರರ ಸ್ವಂತ ಉಪಯೋಗಕ್ಕೆ ಸಾಕಾಗಿ ಮಿಕ್ಕ ಹೆಚ್ಚಿಗೆ ಧಾನ್ಯಗಳನ್ನು ಸಂಗ್ರಹಿಸಿ ವ್ಯವಹರಿಸಬೇಕೆಂದು, ಇಂಡಿಯಾ ಸರ್ಕಾರದವರು ತೀರ್ಮಾನಿಸಿದ್ದಾರೆ.ಬೆಳೆಯತಕ್ಕವರಿಗೆ ಸೂಕ್ತವಾದ ಬೆಲೆಯು ದೊರೆಯುವಂತೆ ಮಾಡುವುದಕ್ಕಾಗಿ ಹತೋಟಿ ಹೋಗುವುದಕ್ಕೆ ಮುಂಚೆ ಗೊತ್ತಾಗಿದ್ದ ಬೆಲೆಗಿಂತ ಶೇಕಡ 25 ರಂತೆಯೂ ಮತ್ತು ಅಸಾಧಾರಣ ಸಂದರ್ಭಗಳಲ್ಲಿ ಶೇಕಡ 50 ರಂತೆಯೂ ಬೆಲೆಯು ಹೆಚ್ಚಿಸಬೇಕೆಂದು ಸಲಹೆಯಾಗಿದೆ. ಬೆಳೆಯ ತಕ್ಕವರಿಗೆ ಕೊಡತಕ್ಕ ಬೆಲೆಯನ್ನು ಹೆಚ್ಚಿಸಿದಂತೆಯೇ ಬಳಸುವವರಿಂದ ತೆಗೆದುಕೊಳ್ಳುವ ಬೆಲೆಯನ್ನು ಸುಮಾರು ಶೇಕಡಾ 2 ರಷ್ಟು ಹೆಚ್ಚಿಸಬೇಕೆಂದೂ ಗೊತ್ತಾಗಿದೆ. ಸಂಸ್ಥಾನದಲ್ಲಿ ಯಾವ ಕಾರ್ಯನೀತಿಯನ್ನೂ ಮತ್ತು ಯಾವ ಕಾರ್ಯಕ್ರಮವನ್ನೂ ಆಚರಣೆಗೆ ತರಬೇಕೆಂಬುದನ್ನು ಪರ್ಯಾಲೋಚಿಸುವುದರಲ್ಲಿ, ನಾವು ಈ ಸಂಗತಿಗಳನ್ನು ಮನಸ್ಸಿನಲ್ಲಿಟ್ಟುಕೊಂಡಿರಬೇಕು. ಇಂಡಿಯಾ ಸರ್ಕಾರದವರು ಅನುಸರಿಸುವ ಕಾರ್ಯನೀತಿಗೆ ವಿರುದ್ಧವಾದ ಯಾವುದೇ ಕಾರ್ಯನೀತಿಯನ್ನು ಅನುಸರಿಸುವ ಯೋಚನೆ ಮಾಡುವುದು ನಮಗೆ ಸುತಾರಾಂ ಸಾಧ್ಯವಿಲ್ಲವೆಂಬ ಸಂಗತಿಯನ್ನು ನಾನು ಒತ್ತಿ ಹೇಳಿ ಸೂಚಿಸಲಿಚ್ಛಿಸುತ್ತೇನೆ. ಮೈಸೂರು ಸಂಸ್ಥಾನವು ಆಹಾರ ಧಾನ್ಯಗಳ ವಿಷಯದಲ್ಲಿ ಮೊದಲಿನಿಂದಲೂ ಕೊರತೆಯ ಪ್ರದೇಶ; ಎಂದರೆ, ಸಂಸ್ಥಾನದ ಬಳಕೆಗೆ ಬೇಕಾದಷ್ಟು ಧಾನ್ಯಗಳು ಸಂಸ್ಥಾನದಲ್ಲಿ ಬೆಳೆಯುತ್ತಿಲ್ಲ. ನಾವು ನಮ್ಮ ವ್ಯವಸಾಯವನ್ನು ಉತ್ತಮಗೊಳಿಸಲು ಅತ್ಯುತ್ತಮ ರೀತಿಯಲ್ಲಿ ಸರ್ವ ಪ್ರಯತ್ನಗಳನ್ನು ಮಾಡಿಯೂ ಕೂಡ, ಇನ್ನೂ ಸ್ವಲ್ಪ ಕಾಲ ಈ ಕೊರತೆಯ ಪರಿಸ್ಥಿತಿಯು ಇದ್ದೇ ಇರುತ್ತದೆ. ಆದಕಾರಣ, ಸಂಸ್ಥಾನದಲ್ಲಿ ಬೆಳೆಯುವ ಧಾನ್ಯಗಳ ಜೊತೆಗೆ ನಮಗೆ ಅವಶ್ಯವಾಗಿ ಬೇಕಾದಷ್ಟು ಧಾನ್ಯಗಳನ್ನು ಇಂಡಿಯಾ ಸರ್ಕಾರದವರ ಮೂಲಕ ನಾವು ಸಂಸ್ಥಾನಕ್ಕೆ ಆಮದು ಮಾಡಿ ತರಿಸಿಕೊಳ್ಳದೆ ನಿರ್ವಾಹವೇ ಇಲ್ಲವೆಂಬುದು ಇದರ ಪರಿಣಾಮವಾಗಿ ಫಲಿತವಾಗುವ ಅಂಶ. ಅಖಿಲ ಭಾರತೀಯ ಯೋಜನೆಯಲ್ಲಿ ನಾವೂ ಭಾಗಿಗಳಾಗಿ ಅದರಿಂದ ಪ್ರಯೋಜನ ಪಡೆಯಬೇಕಾದರೆ, ಅಖಿಲ ಭಾರತೀಯ ವ್ಯವಸ್ಥೆಗೆ ಹೊಂದುವಂಥ ಯೋಜನೆಯನ್ನೇ ನಾವು ಅನುಸರಿಸಬೇಕು. ನಮ್ಮ ಕಾರ್ಯಕ್ರಮವನ್ನು ನಿರ್ಧರಿಸುವಲ್ಲಿ, ನಾವು ಗೊತ್ತು ಮಾಡುವ ಧಾರಣೆಗಳಿಂದ ಆಹಾರ ಧಾನ್ಯಗಳನ್ನು ಬೆಳೆಯತಕ್ಕವರಿಗೆ ಅನ್ಯಾಯವಾಗಿ ಅವರಿಗೆ ಅನಾನುಕೂಲವನ್ನೂ ಮತ್ತು ತೊಂದರೆಯನ್ನೂ ಉಂಟುಮಾಡದಂತೆಯೂ ನೋಡಿಕೊಳ್ಳಬೇಕು; ಮತ್ತು ಆಹಾರ ಧಾನ್ಯಗಳನ್ನು ಬೆಳೆಯದೆ ಅವುಗಳನ್ನು ಕೊಂಡು ಬಳಸತಕ್ಕವರಿಗೆ ಬಹಳ ಭಾರವಾಗದಂತೆ ಅವರ ಅವಶ್ಯಕತೆಗಳಿಗೆ ಗಮನಕೊಟ್ಟು ನೋಡಿಕೊಳ್ಳಲೂ ಬೇಕು. ಇದು ಬಹಳ ಸೂಕ್ಷ್ಮವಾದ ಮತ್ತು ಬಹಳ ಕಷ್ಟವಾದ ಕೆಲಸವೇನೋ ಹೌದು. ತೃಪ್ತಿಕರವಾದ ತೀರ್ಮಾನಕ್ಕೆ ಬಂದು ಈ ಕೆಲಸವನ್ನು ನಿರ್ವಹಿಸಬೇಕಾದರೆ ನಮ್ಮ ಸರ್ವಸಾಮರ್ಥ್ಯವನ್ನೂ, ಕೌಶಲ್ಯವನ್ನೂ ಮತ್ತು ವಿವೇಕ ವಿವೇಚನೆಗಳನ್ನೂ ವಿನಿಯೋಗಿಸಿ ವರ್ತಿಸಬೇಕಾಗುತ್ತದೆ.

ಆಹಾರ ಧಾನ್ಯಗಳನ್ನು ಸಂಸ್ಥಾನದ ಹೊರಗಿನಿಂದ ಸರ್ಕಾರದವರು ತರಿಸಿಕೊಂಡು ಅಸಲು ಬೆಲೆಗಿಂತಲೂ ಕಡಿಮೆ ಬೆಲೆಗಳಿಗೆ ಸಂಸ್ಥಾನದಲ್ಲಿ ಜನಗಳಿಗೆ ಸರಬರಾಜು ಮಾಡುತ್ತಿರುವುದರ ಸಂಬಂಧವಾಗಿ "ಸಬ್ಸಿಡಿ" ರೂಪದಲ್ಲಿ (ಎಂದರೆ ನಷ್ಟಭರ್ತಿಗಾಗಿ) ಸರ್ಕಾರದವರು ವಹಿಸಬೇಕಾಗಿರುವ ಸಹಾಯ ದ್ರವ್ಯದ ರೂಪದಲ್ಲಿ ಸರ್ಕಾರದವರಿಗೆ ವಿಶೇಷ ಹೆಚ್ಚಾಗಿ ವೆಚ್ಚ ತಗುಲುತ್ತಿರುವುದು ತಮ್ಮೆಲ್ಲರಿಗೂ ಗೊತ್ತೆ ಇದೆ. ಕಳೆದ ವರ್ಷ ಈ ವೆಚ್ಚವು ಸುಮಾರು 1,75,00,000 ರೂಪಾಯಿಗಳಾಗಿದ್ದಿತು. ಈ ವರ್ಷದಲ್ಲಿ ಇದಕ್ಕಾಗಿ ತಗಲತಕ್ಕ ವೆಚ್ಚವು ಅಂದಾಜು ಸುಮಾರು ಎರಡುವರೆ ಕೋಟಿ ರೂಪಾಯಿಗಳು. ಸರ್ಕಾರದವರಿಗೆ ಇದು ಬಹಳ ಭಾರೀ ವೆಚ್ಚದ್ದಾಗಿದೆಯೆಂಬುದನ್ನು ಹೊಸದಾಗಿ ಹೇಳಬೇಕಾಗಿಯೇ ಇಲ್ಲ. ನಾನಾ ಪ್ರಾಂತ್ಯಗಳ ವಿಷಯದಲ್ಲಿ ಇಂಡಿಯಾ ಸರ್ಕಾರದವರು, ಆಯಾ ಪ್ರಾಂತ್ಯಗಳ ಸರ್ಕಾರದವರಿಗೆ "ಸಬ್ಸಿಡಿ" ಬಾಬ್ತು ತಗಲಿದ ವೆಚ್ಚದಲ್ಲಿ 2/3 ಭಾಗದಷ್ಟು ಮೊಬಲಗನ್ನು ಸಹಾಯದ್ರವ್ಯವಾಗಿ ಕೊಡುತ್ತಿದ್ದರು. ಆದರೆ ಸಂಸ್ಥಾನಗಳಿಗೆ ಆ ರೀತಿ ಯಾವ ಮೊಬಲಗೂ ದೊರೆಯುತ್ತಿರಲಿಲ್ಲ. ಅಲ್ಲದೆ ಆಯಾ ಪ್ರಾಂತ್ಯಗಳಲ್ಲಿಯೇ ಶೇಖರಿಸಲ್ಪಟ್ಟ ಆಹಾರ ಧಾನ್ಯಗಳಿಗೆ, ಅವುಗಳನ್ನು ಬೆಳೆದ ರೈತರಿಗೆ "ಬೋನಸ್" ಮೊಬಲಗನ್ನು ಕೊಡುವುದರ ಸಂಬಂಧದಲ್ಲಿ ಸಹ ಆ ಪ್ರಾಂತ್ಯಗಳಿಗೆ ಇಂಡಿಯಾ ಸರ್ಕಾರದವರು ಹಣವನ್ನು ಒದಗಿಸಿ ಸಹಾಯ ಮಾಡುತ್ತಿದ್ದರು. ಸಂಸ್ಥಾನಗಳವರಿಗೆ ಆ ಬಗೆಯ ಸಹಾಯವೂ ದೆರೆಯುತ್ತಿಲ್ಲ. ಈ ವಿಚಾರವು ಇತ್ತೀಚೆಗೆ ನಡೆದ ಆಹಾರ ವಿಚಾರಕ್ಕೆ ಸಂಬಂಧಪಟ್ಟ ಸಮ್ಮೇಳನದಲ್ಲಿ ಪ್ರಾಮುಖ್ಯವಾಗಿ ಚರ್ಚೆಗೆ ಬಂದಿತು. ಸಂಸ್ಥಾನಗಳ ಸರ್ಕಾರಗಳವರು ಹೊರಗಿನಿಂದ ತರಿಸಿಕೊಂಡ ಆಹಾರ ಧಾನ್ಯಗಳನ್ನು ಜನಗಳಿಗೆ ಮಾರಾಟ ಮಾಡುವುದರ ಸಂಬಂಧದಲ್ಲಿ ವಹಿಸಬೇಕಾಗುವ ನಷ್ಟ ಭರ್ತಿ ವೆಚ್ಚದಲ್ಲಿ (ಎಂದರೆ "ಸಬ್ಸಿಡಿ" ವೆಚ್ಚದಲ್ಲಿ) ಅರ್ಧ ಭಾಗದಷ್ಟು ಮೊಬಲಗನ್ನು ಈ ವರ್ಷದ ಅಕ್ಟೋಬರ್ ಒಂದನೇಯ ತಾರೀಖಿನಿಂದ ಕೊಡುವುದಾಗಿ ಇಂಡಿಯಾ ಸರ್ಕಾರದವರು ದಯವಿಟ್ಟು ಒಪ್ಪಿರುತ್ತಾರೆಂಬುದನ್ನು ತಮ್ಮ ಅವಗಾಹನೆಗೆ ತರಲು ಹರ್ಷಿಸುತ್ತೇನೆ, ಅಲ್ಲದೆ, ಸಂಸ್ಥಾನದೊಳಗೇ ಸಂಗ್ರಹಿಸಲ್ಪಟ್ಟ ಆಹಾರ ಧಾನ್ಯಗಳ ಸಂಬಂಧದಲ್ಲಿ ಇಂಡಿಯಾದೇಶದ ಪ್ರಾಂತಗಳ ವಿಷಯದಲ್ಲಿ ಕೊಡುತ್ತಿರುವಂತೆಯೇ 'ಬೋನಸ್' ಮೊಬಲಗನ್ನು ಕೊಡುವುದಾಗಿ ಸಹ ಇಂಡಿಯಾ ಸರ್ಕಾರದವರು ಒಪ್ಪಿಕೊಂಡಿರುತ್ತಾರೆ. ಇಂಡಿಯಾ ಸರ್ಕಾರದವರು ತಮ್ಮ ಕಾರ್ಯನೀತಿಯಲ್ಲಿ ವಿಹಿತವಾದ ಈ ಬದಲಾವಣೆಯನ್ನು ಮಾಡಿರುವುದಕ್ಕಾಗಿ ಅವರಿಗೆ ನಮ್ಮ ಕೃತಜ್ಞತಾಪೂರ್ವಕವಾದ ವಂದನೆಗಳನ್ನು ವ್ಯಕ್ತಪಡಿಸಲಿಚ್ಛಿಸುತ್ತೇನೆ.

ಬರ್ಮಾ ದೇಶದಿಂದ ಆಹಾರ ಧಾನ್ಯಗಳು ಒದಗುವುದಕ್ಕೆ ತೊಂದರೆಯುಂಟಾಗುವುದರಿಂದ, ಇಂಡಿಯಾ ಸರ್ಕಾರದವರು ನಮ್ಮ ಸಂಸ್ಥಾನಕ್ಕೆ ಒದಗಿಸುವುದಾಗಿ ವಾಗ್ದಾಮಾಡಿದ್ದ ಪರಿಣಾಮವನ್ನು ಕಡಿಮೆ ಮಾಡಬೇಕಾಗಿದೆ ಎಂದು ಕಳೆದ ತಿಂಗಳು ಅವರು ನಮಗೆ ತಿಳಿಸಿದರು. ಇದರಿಂದ ನಮ್ಮ ಸಂಸ್ಥಾನದ ಆಹಾರ ಪರಿಸ್ಥಿತಿಯಲ್ಲಿ ಇದ್ದಕ್ಕಿದ್ದಂತೆ ಹದ ತಪ್ಪಿತು. ಇಂಡಿಯಾ ಸರ್ಕಾರದವರು ನಮಗೆ ಒದಗಿಸುವುದಾಗಿ ಮೊದಲು ವಾಗ್ದಾನ ಮಾಡಿದ್ದ ಪ್ರಕಾರ ಪ್ರಸಕ್ತ ವರ್ಷದಲ್ಲಿ 75 ಸಾವಿರ ಟನ್ ಆಹಾರ ಧಾನ್ಯಗಳನ್ನು ಒದಗಿಸಬೇಕಾಗಿತ್ತು. ಆದರೆ ಅದರಲ್ಲಿ ಒತ್ತಡವೆಗೇ 13 ಸಾವಿರ ಟನ್‌ಗಳಷ್ಟು ಪ್ರಮಾಣವನ್ನು ಅವರು ಖೋತಾ ಮಾಡಬೇಕಾಯಿತು. ಇದರಿಂದ ನಮ್ಮ ಏರ್ಪಾಡುಗಳು ವಿಶೇಷ ವ್ಯತ್ಯಾಸವಾದವು. ಖೋತಾ ಮಾಡಿದ ಪ್ರಮಾಣವನ್ನು ಒದಗಿಸಿ,

ನವೆಂಬರ್ ಮತ್ತು ಡಿಸೆಂಬರ್ ತಿಂಗಳುಗಳಲ್ಲಿ ನಮಗೆ ಉಂಟಾಗತಕ್ಕ ತೊಂದರೆಯನ್ನು ನಿವಾರಣೆ ಮಾಡಲು ಸಹಾಯ ಮಾಡಬೇಕೆಂದು ಇಂಡಿಯಾ ಸರ್ಕಾರವನ್ನು ಒತ್ತಾಯಪಡಿಸಿ ಬಿನ್ನೈಸಲಾಯಿತು ಇಂಡಿಯ ಸರ್ಕಾರದವರು ನಮಗೆ ಇನ್ನೂ 10 ಸಾವಿರ ಟನ್ನುಗಳಷ್ಟು ಧಾನ್ಯಗಳನ್ನು ಒದಗಿಸುವುದಾಗಿ ಇತ್ತೀಚೆಗೆ ನಮಗೆ ತಿಳಿಸಿದ್ದಾರೆ. ಇದರಿಂದ ಈ ವರ್ಷ ಅವರು ಒಟ್ಟು 72 ಸಾವಿರ ಟನ್ನುಗಳಷ್ಟು ಆಹಾರ ಧಾನ್ಯಗಳನ್ನು ಒದಗಿಸಿದಂತಾಗುತ್ತದೆ. ಇದು ಸಂತೋಷಕರವಾದ ವಿಷಯ. ಇದಕ್ಕಾಗಿ ಅವರಿಗೆ ನಾವು ನಮ್ಮ ವಂದನೆಗಳನ್ನು ಸಲ್ಲಿಸಬೇಕಾಗಿದೆ. ಈಗ ಇಂಡಿಯಾ ಸರ್ಕಾರದವರು ಹೆಚ್ಚಾಗಿ ಒದಗಿಸುವುದಾಗಿ ವಾಗ್ದಾನ ಮಾಡಿರತಕ್ಕ ಧಾನ್ಯಗಳು ಬಹುಮಟ್ಟಿಗೆ ಗೋಧಿ ಮತ್ತು ಜೋಳ ಮುಂತಾದ ಧಾನ್ಯಗಳು; ಅಕ್ಕಿಯಲ್ಲ. ಕಳೆದ ತಿಂಗಳು ಸಂಸ್ಥಾನದಲ್ಲಿ ಅಕ್ಕಿಯ ಪಡಿತರ ಪರಿಮಾಣವನ್ನು (ಎಂದರೆ "ರೇಷನ್" ಪರಿಮಾಣವನ್ನು) ಸ್ವಲ್ಪ ಕಡಿಮೆ ಮಾಡಲಾಯಿತಷ್ಟೆ. ಹಾಗೆ ಮಾಡಿದುದಕ್ಕೆ ಸಂಪೂರ್ಣವಾಗಿಯೂ ನ್ಯಾಯವಾದ ಕಾರಣವಿದೆ. ಆ ಖೋತಾವನ್ನು ತಪ್ಪಿಸಿ ಪುನಃ ಮೊದಲಿನ ಪಡಿತರದ ಪ್ರಮಾಣವನ್ನೇ (ಎಂದರೆ ಮೊದಲಿನ "ರೇಷನ್" ಪ್ರಮಾಣವನ್ನೇ) ಆಚರಣೆಗೆ ತರುವುದಕ್ಕೆ ಶಕ್ಯವಾಗುವುದೆಂದು ಸರ್ಕಾರದವರು ತೀವ್ರಾಸಕ್ತಿಯಿಂದ ನಿರೀಕ್ಷಿಸಿದ್ದರು. ಅದಾಗ್ಯೂ ಈಗ ಇರತಕ್ಕ ಅಕ್ಕಿಯ ದಾಸ್ತಾನಿನ ಪರಿಸ್ಥಿತಿಯನ್ನು ನೋಡಿದರೆ, ಅದಕ್ಕೆ ಅವಕಾಶವೇ ಇಲ್ಲವೆಂದು ಸೂಚಿಸಲು ವಿಷಾದಿಸುತ್ತೇನೆ. ಅದಾಗ್ಯೂ ಪಡಿತರದಲ್ಲಿ ಗೋಧಿಯ ಪ್ರಮಾಣವನ್ನು ಹೆಚ್ಚಿಸುವುದಕ್ಕೆ ಮಾತ್ರ ಸಾಧ್ಯವಾಗಿದೆ.

ಆಹಾರ ಪರಿಸ್ಥಿತಿಯನ್ನು ಕುರಿತು ಈ ಸಂಕ್ಷೇಪ ವಿಮರ್ಶೆಯನ್ನು ಪೂರೈಸುವುದಕ್ಕೆ ಮುಂಚೆ ಈಗ ಸಂಸ್ಥಾನದಲ್ಲಿ ಮಳೆಗಳು ಸರಿಯಾಗಿ ಬೀಳದೆ ಕಾಲಸ್ಥಿತಿಯು ಆತಂಕಕ್ಕೆ ಆಸ್ಪದ ಕೊಟ್ಟಿರುವ ವಿಚಾರವನ್ನು ನಾನು ಚಿಂತಾಭರಿತವಾದ ಮನಸ್ಸಿನಿಂದ ಪ್ರಸ್ತಾವಿಸಬೇಕಾಗಿದೆ. ಸಂಸ್ಥಾನದ ಕೆಲವು ಭಾಗಗಳಲ್ಲಿ, ಎಂದರೆ ಕೋಲಾರ, ತುಮಕೂರು ಮತ್ತು ಚಿತ್ರದುರ್ಗ ಡಿಸ್ಟ್ರಿಕ್ಟುಗಳಲ್ಲಿ, ಧೀರ್ಘಕಾಲದಿಂದಲೂ ಮಳೆಗಳೆ ಆಗದಿದ್ದ ಪ್ರಯುಕ್ತ, ತೃಪ್ತಿಕರವಾಗಿ ಫಸಲಾಗುವುದೆಂಬ ಹೆಚ್ಚಿನ ಭರವಸೆ ಇಲ್ಲವೆಂಬ ಕೇವಲ ಆತಂಕವನ್ನುಂಟುಮಾಡುವ ವರದಿಗಳು ಬಂದಿದೆ. ಇದರಿಂದ ಸಂಸ್ಥಾನದ ಆಹಾರ ಪರಿಸ್ಥಿತಿಯ ಮೇಲೆ ಗಣನೀಯವಾದ ಪರಿಣಾಮ ಉಂಟಾಗಿ ಆಯತಪ್ಪುವುದು ಮಾತ್ರವೇ ಅಲ್ಲದೆ ಜನಗಳಿಗೆ ಆರ್ಥಿಕ ಕಷ್ಟಗಳೂ ಒದಗುತ್ತವೆ. ಒಟ್ಟಿನಲ್ಲಿ ಇದರ ಪರಿಣಾಮವೇನಾಗುವುದೆಂಬುದನ್ನು ಈಗಾಗಲೇ ಖಚಿತವಾಗಿ ಹೇಳುವುದಕ್ಕಾಗುವುದಿಲ್ಲ. ಏನೇ ಆಗಲಿ, ಪರಿಸ್ಥಿತಿಯು ಮಾರ್ಪಾಡು ಹೊಂದಿದಂತೆಲ್ಲ ವಿವೇಕದಿಂದಲೂ ಮತ್ತು ಧೈರ್ಯದಿಂದಲೂ ಸರ್ಕಾರದವರೂ ಮತ್ತು ಜನಗಳೂ ಅದನ್ನು ಎದುರಿಸುವರೆಂದು ನನಗೆ ನಂಬಿಕೆಯಿದೆ.

ಇಂಡಿಯಾ ಸರ್ಕಾರದವರ ತೀರ್ಮಾನಕ್ಕನುಗುಣವಾಗಿ ನಮ್ಮ ಸಂಸ್ಥಾನದಲ್ಲಿಯೂ ಬಟ್ಟೆಯ ಮೇಲಣ ಹತೋಟಿಯನ್ನು ತೆಗೆದುಬಿಡುವ ಕಾರ್ಯನೀತಿಯನ್ನು ಅನುಸರಿಸುವಂತೆ ನಾವು ತೀರ್ಮಾನಿಸಿದ್ದು ತಮಗೆ ಗೊತ್ತೇ ಇದೆ. ಆದರೆ ಹತೋಟಿಯನ್ನು ತೆಗೆದುಬಿಡುವುದರಿಂದ ಯಾವ ಫಲಿತಾಂಶಗಳನ್ನು ನಿರೀಕ್ಷಿಸಿದ್ದೆವೋ ಆ ಫಲಿತಾಂಶಗಳು ನೆರವೇರಲಿಲ್ಲ. ಬಟ್ಟೆಯ ಧಾರಣೆಗಳು ಬಹಳವಾಗಿ ಏರಿ, ಬಟ್ಟೆಗಳನ್ನು ಕೊಳ್ಳತಕ್ಕವರು ಅನೇಕ ತೊಂದರೆಗಳಿಗೆ ಗುರಿಯಾಗಬೇಕಾಯಿತು. ಕೆಲವರು ಗಿರಣಿ ಮಾಲೀಕರುಗಳ ಮತ್ತು ವರ್ತಕರ ಸ್ವಾರ್ಥಸಾಧನೆಯ ವರ್ತನೆಯೇ ಇದಕ್ಕೆ ಬಹುಮಟ್ಟಿಗೆ ಕಾರಣ. ಬಟ್ಟೆಯ ವಿಚಾರಕ್ಕೆ ಸಂಬಂಧಪಟ್ಟ ಸಮಗ್ರ ಪರಿಸ್ಥಿತಿಯನ್ನು ಇಂಡಿಯಾ

ಸರ್ಕಾರದವರು ಪರಿಶೀಲಿಸಿ ಬಟ್ಟೆಯ ವಿಷಯದಲ್ಲಿ ಮತ್ತಷ್ಟು ಕಟ್ಟುನಿಟ್ಟಾದ ರೀತಿಯಲ್ಲಿ ಹತೋಟಿಯ ಏರ್ಪಾಡನ್ನು ಪುನಃ ಜಾರಿಗೆ ತರುವುದಾಗಿ ಇತ್ತೀಚಿಗೆ ತೀರ್ಮಾನಿಸಬೇಕಾಯಿತು. ನಾವೂ ಸಹ, ಅದೇಕಾರ್ಯ ನೀತಿಯನ್ನೇ ಅನುಸರಿಸುವವರಾಗಿದ್ದೇವೆ. ಬಟ್ಟೆ ಹಂಚಿಕೆಗೆ ತಕ್ಕ ಏರ್ಪಾಡುಗಳು ಮಾಡಲ್ಪಡುತ್ತಿವೆ. ನವೆಂಬರ್ ಒಂದನೆಯ ತಾರೀಖಿನಿಂದ ಲೈಸೆನ್ಸು ಪಡೆದ ಅಂಗಡಿಗಳಲ್ಲಿ, ಹತೋಟಿಗೊಳಿಸಿದ ಬೆಲೆಗಳಿಗೆ ಬಟ್ಟೆಗಳು ಮಾರಾಟವಾಗುತ್ತವೆ.

ವ್ಯವಸಾಯಗಾರರಿಗೂ ಮತ್ತು ಪದಾರ್ಥಗಳನ್ನು ಬಳಸತಕ್ಕ ಇತರರಿಗೂ ಸೀಮೆಯೆಣ್ಣೆ ಕಬ್ಬಿಣ ಮತ್ತು ಉಕ್ಕು, ಸಿಮೆಂಟು, ಗೊಬ್ಬರ ಮುಂತಾದ ಅತ್ಯಾವಶ್ಯಕವಾದ ಇತರ ಕೆಲವು ಪದಾರ್ಥಗಳು ಹತೋಟಿಯ ದರಗಳಲ್ಲಿ (ಎಂದರೆ "ಕಂಟ್ರೋಲ್" ದರಗಳಲ್ಲಿ) ದೊರೆಯುವಂತೆ ಮಾಡುವುದು ಆವಶ್ಯಕವೆಂಬುದು ಇಂಡಿಯಾ ಸರ್ಕಾರದವರಿಗೆ ಚೆನ್ನಾಗಿ ಮನವರಿಕೆಯಾಗಿದೆ. ಆ ರೀತಿ ಏರ್ಪಾಡು ಮಾಡಲು ತಕ್ಕ ಸಾಧನೋಪಾಯಗಳನ್ನು ಕುರಿತು ಅವರು ಮನಃಪೂರ್ವಕವಾಗಿ ಪರ್ಯಾಲೋಚಿಸುತ್ತಿದ್ದಾರೆ. ಪ್ರಾಮುಖ್ಯವಾದ ಈ ವಿಚಾರಕ್ಕೆ ನಾವೂ ಸಹ ಅವಿಚ್ಛಿನ್ನವಾಗಿ ಗಮನಕೊಡುತ್ತಾ ಬಂದಿದ್ದೇವೆ. ಜೀವನಕ್ಕೆ ಅತ್ಯಾವಶ್ಯಕವಾಗಿ ಬೇಕಾದ ಈ ಪದಾರ್ಥಗಳು ಹತೋಟಿಗೊಳಿಸಿದ ದರಗಳಲ್ಲಿ ದೊರೆಯುವಂತೆ ಮತ್ತಷ್ಟು ತೃಪ್ತಿಕರವಾದ ಹಂಚಿಕೆಯ ಏರ್ಪಾಡು ಶೀಘ್ರದಲ್ಲಿಯೇ ಜಾರಿಗೆ ಬರುವುದಾಗಿದೆ. ಈ ಸಂಬಂಧದಲ್ಲಿ ಖಾಸಗಿ ದೊಡ್ಡ ಮನುಷ್ಯರಿಂದ ಕಾರ್ಯಕಾರಿಯಾದ ಸಹಾಯವನ್ನು ಪಡೆಯುವುದಕ್ಕೆ ಸಂಬಂಧಪಟ್ಟ ಸಲಹೆಗಳೂ ಸಹ, ನಮ್ಮ ಪರ್ಯಾಲೋಚನೆಯಲ್ಲಿವೆ.

ಆಹಾರ ಪದಾರ್ಥಗಳ ವಿಷಯದಲ್ಲಾಗಲಿ, ಅಥವಾ ಬಟ್ಟೆಯ ವಿಷಯದಲ್ಲಾಗಲಿ ಅಥವಾ ಜೀವನಕ್ಕೆ ಬೇಕಾದ ಇತರ ಮುಖ್ಯ ವಸ್ತುಗಳ ವಿಷಯದಲ್ಲಾಗಲಿ ಅವುಗಳು ಹೆಚ್ಚು ಹೆಚ್ಚು ಪರಿಮಾಣಗಳಲ್ಲಿ ಒದಗುವಂತೆ ಮಾಡಿಕೊಳ್ಳುವುದು ತೀರಾ ಆಗತ್ಯವೆಂಬುದು ಸ್ವತಸ್ಸಿದ್ಧವಾಗಿಯೇ ಗೊತ್ತಾಗುತ್ತದೆ. ನಮ್ಮ ಸಂಸ್ಥಾನದಲ್ಲಿ ಅವುಗಳು ಇನ್ನೂ ಹೆಚ್ಚು ಹೆಚ್ಚಾಗಿ ಒದಗುವಂತೆ ನಾವು ಏರ್ಪಾಡು ಮಾಡಿಕೊಳ್ಳಬೇಕು, ಅಥವಾ ಸಹಿಸಲಶಕ್ಯವಾದ ಅನುಕೂಲಗಳನ್ನು ಅನುಭವಿಸಲು ನಾವು ಸಿದ್ಧವಾಗಿರಬೇಕು. ಸಂಸ್ಥಾನದಲ್ಲಿ ಆಹಾರ ಧಾನ್ಯಗಳನ್ನು ಹೆಚ್ಚಾಗಿ ಬೆಳೆಯುವಂತೆ ಮಾಡುವುದಕ್ಕಾಗಿ ನಾವು ಏಕ ಪ್ರಕಾರವಾಗಿ ಕೆಲವು ಏರ್ಪಾಡುಗಳನ್ನು ನೆರವೇರಿಸುತ್ತಾ ಬಂದಿದ್ದೇವೆ. ಸಂಸ್ಥಾನದಲ್ಲಿ ಉಪಯೋಗಿಸಲು ಹೆಚ್ಚು ಸಂಖ್ಯೆಯ "ಟ್ರ್ಯಾಕ್ಟರ್" ಯಂತ್ರ ಸಾಧನೆಗಳನ್ನೇನೋ ನಾವು ತಯಾರಿಸುವುದು ಸಾಧ್ಯವಾಯಿತು, ಆದರೆ, ಉಳುಮೆ ಮುಂತಾದ ಕೆಲಸಗಳಿಗೆ ಅವುಗಳನ್ನು ಉಪಯೋಗಿಸಿ ಕೆಲಸ ಮಾಡುವುದಕ್ಕೆ ಅವಶ್ಯವಾದಷ್ಟು ಪೆಟ್ರೋಲ್ ಎಣ್ಣೆಯಾಗಲಿ ಅಥವಾ "ಡೀಸಲ್" ಎಣ್ಣೆಯಾಗಲಿ ದೊರೆಯುವುದಿಲ್ಲ. ನಮಗೆ ಅವಶ್ಯವಾದ ಪರಿಮಾಣಗಳಲ್ಲಿ ಅವುಗಳನ್ನು ನಮಗೆ ಒದಗಿಸಲು ದಯವಿಟ್ಟು ಏರ್ಪಾಡು ಮಾಡುವಂತೆ ಇಂಡಿಯಾ ಸರ್ಕಾರದವರಿಗೆ ಒತ್ತಿ ಹೇಳಿ ಬಿನ್ನೈಸಿಕೊಂಡಿದ್ದೇವೆ.

ವ್ಯವಸಾಯದ ಇಲಾಖೆಯವರು ಬೀಜಗಳನ್ನೂ ಗೊಬ್ಬರವನ್ನು ಮತ್ತು ವ್ಯವಸಾಯದ [illegible]ಟ್ಟುಗಳನ್ನೂ [illegible] ಕೊಂಡು ರೈತರಿಗೆ ರಿಯಾಯಿತಿ ದರಗಳಲ್ಲಿ ಮಾರಾಟ [illegible] ಅವರ ವಶಕ್ಕೆ ಕೊಡಲಾಗುತ್ತಿದೆ. 1946-47ನೆಯ [illegible] ಕೊಳ್ಳಲಾಯಿತು. ಅಂದರೆ

ಅವುಗಳನ್ನು ಅಸಲಿಗಿಂತಲೂ ಕಡಿಮೆಯಾಗಿ ರಿಯಾಯತಿ ಬೆಲೆಗಳಿಗೆ ರೈತರಿಗೆ ಮಾರಿದ ಸಂಬಂಧದ ನಷ್ಟ ಭರ್ತಿಗಾಗಿ ಕೊಟ್ಟ ಮೊಬಲಗು (ಎಂದರೆ "ಸಬ್ಸಿಡಿ"ಮೊಬಲಗು) 9 ಲಕ್ಷ ರೂಪಾಯಿಗಳಿಗಿಂತಲೂ ಹೆಚ್ಚಾಗಿದ್ದಿತು. ರಿಯಾಯಿತಿ ಬೆಲೆಗಳಿಗೆ ಅವುಗಳನ್ನು ಇನ್ನೂ ಹೆಚ್ಚು ಹೆಚ್ಚಾಗಿ ರೈತರಿಗೆ ಮಾರಾಟಮಾಡುವ ಅವಶ್ಯಕತೆಯಿದೆ. ಅದಕ್ಕನುಸಾರವಾಗಿ ಅತ್ಯವಶ್ಯವಾದ ಈ ಕೆಲಸವನ್ನು ನಿರ್ವಹಿಸಲು ವ್ಯವಸಾಯದ ಇಲಾಖೆಯವರು ಪ್ರಯತ್ನಿಸುತ್ತಿದ್ದಾರೆ. ಉತ್ತಮವಾದ ಬೀಜದ ಬತ್ತವನ್ನು ಬೆಳೆದು ಸುಮಾರು 2/1/2 ಲಕ್ಷ ಎಕರೆಗಳಿಗೆ ಎಂದರೆ ಸಂಸ್ಥಾನದಲ್ಲಿ ಬತ್ತ ಬೆಳೆಯುವ ಒಟ್ಟು ವಿಸ್ತೀರ್ಣದಲ್ಲಿ ಸುಮಾರು ಮೂರನೆಯ ಒಂದು ಭಾಗದ ಜಮೀನುಗಳಿಗೆ-ಅಗತ್ಯವಾದಷ್ಟು ಪರಿಣಾಮದಲ್ಲಿ ಹಂಚುವ ಯೋಜನೆಯೊಂದರ ಮೇರೆಗೆ ಕೆಲಸ ನಡೆಯುತ್ತಿದೆ. ಪ್ರತಿಯೊಂದು ತಾಲ್ಲೂಕಿನಲ್ಲಿಯೂ, ರೈತರಿಗೆ ಉತ್ತಮ ವಿಧದಲ್ಲಿ ವ್ಯವಸಾಯ ಮಾಡುವ ಬಗೆಯನ್ನು ತೋರಿಸುವುದಕ್ಕಾಗಿ ಪ್ರದರ್ಶನ ಕ್ಷೇತ್ರಗಳನ್ನೇರ್ಪಡಿಸಬೇಕೆಂದಿದ್ದೇವೆ. ಐದು ವರ್ಷಗಳ ಅವಧಿಯಲ್ಲಿ ಸುಮಾರು 10ಸಾವಿರ ಗ್ರಾಮಗಳಲ್ಲಿ "ಕಾಂಪೋಸ್ಟ್" ಗೊಬ್ಬರವನ್ನು ತಯಾರಿಸುವ ಯೋಜನೆಗೆ ಪ್ರೋತ್ಸಾಹ ಕೊಡಲಾಗುತ್ತಿದೆ. ಮುಂದಿನ ಐದು ವರ್ಷಗಳ ಅವಧಿಯಲ್ಲಿ 88 ಲಕ್ಷ ರೂಪಾಯಿಗಳು ಬೆಲೆ ಬಾಳುವ ಉತ್ತಮ ವಿಧದ ವ್ಯವಸಾಯದ ಮುಟ್ಟುಗಳನ್ನು ರೈತರಿಗೆ ಒದಗಿಸಬೇಕೆಂದು ಆಲೋಚಿಸಿದ್ದೇವೆ. ಮುಂದಿನ ಕೆಲವು ವರ್ಷಗಳಲ್ಲಿ ಸುಮಾರು 150 "ಟ್ರ್ಯಾಕ್ಟರ್" ಯಂತ್ರಗಳು ಕೆಲಸ ಮಾಡುವಂತೆ ಏರ್ಪಾಡಾಗುತ್ತದೆ. ಈ ಯೋಜನೆಗಳನ್ನೆಲ್ಲ ಸರ್ಕಾರದವರು ಈಗಿನ ಸಂದರ್ಭಗಳಲ್ಲಿ ಸಾಧ್ಯವಾದಷ್ಟು ಮಟ್ಟಿಗೂ ಶೀಘ್ರವಾಗಿ ನೆರವೇರಿಸಬೇಕೆಂದು ಸಂಕಲ್ಪಿಸಿದ್ದಾರೆ. ಸಂಸ್ಥಾನದಲ್ಲಿ ದನಗಳ ತಳಿಯನ್ನು ವೃದ್ಧಿಪಡಿಸುವುದಕ್ಕಾಗಿ ಹಲವು ಯೋಜನೆಗಳೂ ಕೂಡ ಮಂಜೂರಾಗಿವೆ. ಅವುಗಳನ್ನು ಕಾರ್ಯರೂಪಕ್ಕೆ ತರುವ ಪ್ರಯತ್ನಗಳು ನಡೆಯುತ್ತಿವೆ. ಅಖಿಲ ಭಾರತದ ಹೈನು ಸಂಶೋಧನ ಸಂಸ್ಥೆಯು (ಎಂದರೆ"ಆಲ್ ಇಂಡಿಯಾ ಡೈರಿ ರಿಸರ್ಚ್ ಇನ್‌ಸ್ಟಿಟ್ಯೂಟ್") ಬೆಂಗಳೂರಿನಲ್ಲಿ ಏರ್ಪಡಿಸಬೇಕೆಂದು ಗೊತ್ತಾಗಿದೆ. ಇದನ್ನು ಕೇಳಿ ತಾವೆಲ್ಲರೂ ಹರ್ಷಿಸುವುದರಲ್ಲಿ ಸಂದೇಹವಿಲ್ಲ.

ಆಹಾರ ಧಾನ್ಯಗಳ ಬೆಳೆಯು ತಪ್ಪದೆ ನಡೆಯುವಂತೆಯೂ ಮತ್ತು ಆಹಾರ ಧಾನ್ಯಗಳ ಬೆಳೆಯು ಹೆಚ್ಚುವಂತೆಯೂ ಮಾಡುವುದಕ್ಕೆ ಅಗತ್ಯವಾಗಿರತಕ್ಕ ಮುಖ್ಯ ಸಾಧನಗಳಲ್ಲಿ, ನೀರಾವರಿ ಸಾಧನಗಳನ್ನು ಉತ್ತಮಸ್ಥಿತಿಯಲ್ಲಿಡುವುದೂ ಮತ್ತು ಹೆಚ್ಚಿಸುವುದೂ ಒಂದು.. ಸರ್ಕಾರದವರು ಇದನ್ನು ಮನಗಂಡು, ಅನೇಕ ಭಾರಿ ಭಾರಿ ನೀರಾವರಿ ಪ್ರಾಜೆಕ್ಟುಗಳನ್ನು ಮಂಜೂರು ಮಾಡಿದ್ದಾರೆ. ತುಂಗಾನದಿಯ ಅಣೆಕಟ್ಟು, ಕಾಗೆಹಳ್ಳದ ಅಣೆಕಟ್ಟು, ನುಗು ಜಲಾಶಯ, ಅಂಜನಾಪುರ ಜಲಾಶಯದ ಬಲದಂಡೆಯ ನಾಲೆಯ ಬಡಾವಣೆ ಮತ್ತು ಲಕ್ಕವಳ್ಳಿ ಜಲಾಶಯ- ಇವುಗಳ ಸಂಬಂಧದ ಕಾಮಗಾರಿಗಳು ಭರದಿಂದ ಸಾಗುತ್ತಿದೆ. ಇನ್ನೂ ಅನೇಕ ಇತರ ನೀರಾವರಿ ಯೋಜನೆಗಳು ಸರ್ಕಾರದವರ ತೀವ್ರಾಲೋಚನೆಯಲ್ಲಿವೆ. ಮೈನರ್ ಕೆರೆಗಳ ಜೀರ್ಣೋದ್ಧಾರಕ್ಕಾಗಿ ಭಾರಿ ಮೊಬಲಗನ್ನು ಬಡ್ಜೆಟ್ಟಿನಲ್ಲಿ ಒದಗಿಸಲಾಗಿದೆ. ಈಗಿರತಕ್ಕ ಬಾವಿಗಳ ಆಳವನ್ನು ಹೆಚ್ಚಿಸುವುದಕ್ಕೂ ಮತ್ತು ಹೊಸಬಾವಿಗಳನ್ನು ತೋಡಿಸುವುದಕ್ಕೂ, ಪ್ರತಿ ಸಂದರ್ಭದಲ್ಲಿಯೂ ಕೊಡಬಹುದಾದ ಪರಮಾವಧಿ ಸಹಾಯದ್ರವ್ಯವು 1,000 ರೂಪಾಯಿಗಳಾಗದಿರುವಂತೆ ಹೆಚ್ಚಿಸಲಾಗಿದೆ. ರೈತರುಗಳು ಈ ಕಾರ್ಯವನ್ನು ಸಂಪೂರ್ಣವಾಗಿ ಉಪಯೋಗಿಸಿಕೊಳ್ಳುತ್ತಾರೆಂದು ಹಾರೈಸಲಾಗಿದೆ. ಕುಮುದ್ವತಿ

ಪೆನ್ನಾರು ಯೋಜನೆಯ ವಿಚಾರದಲ್ಲಿಯೂ ಮತ್ತು ವೇದಾವತಿ ಯೋಜನೆಯ ವಿಚಾರದಲ್ಲಿಯೂ ಮತ್ತು ಮದರಾಸು ಸರ್ಕಾರದವರಿಗೂ ಮತ್ತು ಮೈಸೂರು ಸರ್ಕಾರದವರಿಗೂ ಪರಸ್ಪರವಾಗಿ ಸ್ವಲ್ಪ ಭಿನ್ನಾಭಿಪ್ರಾಯವಿದ್ದುದು ಸರಿಯಷ್ಟೆ ಈಚೆಗೆ ಮದರಾಸಿನಲ್ಲಿ ಚರ್ಚೆ ನಡೆದು ಈ ವಿಷಯ ವ್ಯವಸ್ಥೆಯಾಯಿತು. ಆ ಯೋಜನೆಗಳ ವಿಚಾರ ನಾವು ಹೇಗೆ ಬೇಕಾದರೂ ವ್ಯವಹರಿಸಿ ಕೆಲಸ ನಡೆಯಿಸಬಹುದೆಂದು ಗೊತ್ತಾಗಿದೆ. ಇದನ್ನು ಕೇಳಿಯೂ ತಾವೆಲ್ಲರೂ ಹರ್ಷಿಸುವಿರೆಂದು ನಾನು ನಂಬಿದ್ದೇನೆ.

ಕೈಗಾರಿಕೆಗಳ ಉದ್ಯಮಗಳ ವಿಚಾರದಲ್ಲಿ ಮೈಸೂರು ಸಂಸ್ಥಾನವು ಆದಿಯಿಂದಲೂ ಪ್ರವರ್ತಿಸಿ ಅವುಗಳನ್ನು ಅಭಿವೃದ್ಧಿಗೊಳಿಸುತ್ತಾ ಬಂದಿದೆ. ಹೀಗಿದ್ದೂ ಸಂಸ್ಥಾನದ ಬಳಕೆಗೆ ಅವಶ್ಯವಾದಷ್ಟು ಪದಾರ್ಥಗಳನ್ನು ತಯಾರಿಸಿ ಒದಗಿಸಿಕೊಳ್ಳುವುದು ಕೂಡ, ನಮಗೆ ಸಾಧ್ಯವಿಲ್ಲದೆ ಹೋಗಿದೆ. ಈಗಿರತಕ್ಕ ಕೈಗಾರಿಕೆಗಳನ್ನು ಬಡಾವಣೆಗೊಳಿಸುವುದಕ್ಕೂ ಮತ್ತು ಹೊಸ ಕೈಗಾರಿಕೆಗಳನ್ನು ಏರ್ಪಡಿಸುವುದಕ್ಕೂ ಈಗ ಸರ್ಕಾರದವರು ಭಾರಿ ಕಾರ್ಯಕ್ರಮವನ್ನು ಕೈಗೊಳ್ಳಲು ಉದ್ಯುಕ್ತರಾಗಿದ್ದಾರೆ. ಈ ಸಂಸ್ಥಾನದಲ್ಲಿ ಬೀಡು ಕಬ್ಬಿಣ ಉಕ್ಕಿನ ಸಾಮಾನುಗಳು, ಸಿಮೆಂಟು, "ಫೆರ್‍ರ್ರೋ-ಸಿಲಿಕಾನ್" ಮಿಶ್ರಲೋಹ ಇವುಗಳು ತಯಾರಾಗುತ್ತಿವೆಯಷ್ಟೆ ಇವುಗಳು ಈಗ ತಯಾರಾಗುತ್ತಿರುವ ಪರಿಮಾಣಗಳಿಗಿಂತ ಮೂರರಷ್ಟು ನಾಲ್ಕರಷ್ಟು ಹೆಚ್ಚಾಗಿ ಅವುಗಳನ್ನು ತಯಾರಿಸುವ ಯೋಜನೆಗಳು ಆಗಲೇ ಮಂಜೂರಾಗಿ ಕಾರ್ಯಾರಂಭವಾಗುವುದರಲ್ಲಿರುವ ಸಂಗತಿಯು ಬಹುಶಃ ತಮ್ಮೆಲ್ಲರಿಗೂ ಗೊತ್ತೇ ಇರಬಹುದು. "ಅಸಿಟಿಕ್ ಆಸಿಡ್" ದ್ರಾವಕವನ್ನು ತಯಾರಿಸುವ ಯಂತ್ರ ಜೋಡಣೆ ಕೆಲಸವೂ ನಡೆಯುತ್ತಿದೆ "ಫೆರ್ರೋಸಿಲಿಕಾನ್ ಮಿಶ್ರಲೋಹವನ್ನು ತಯಾರಿಸುವ ಹೊಸ ಯಂತ್ರ ಜೋಡಣೆಗೆ ಯಂತ್ರೋಪಕರಣಗಳು ವಿದೇಶದಿಂದ ಬಂದಿದೆ. ಅವುಗಳನ್ನುಪಯೋಗಿಸಿ ಅದನ್ನು ತಯಾರಿಸುವ ಕೆಲಸವು ಮುಂದಿನ ವರ್ಷದಿಂದ ಆರಂಭವವಾಗುವ ನಿರೀಕ್ಷೆಯಿದೆ. ಉಕ್ಕನ್ನು ತಯಾರಿಸುವುದರಲ್ಲಿ ಅವಶ್ಯವಾದ ಮುಖ್ಯವಸ್ತುವಾಗಿರತಕ್ಕ "ಫೆರ್ರೋಸಿಲಿಕಾನ್" ಮಿಶ್ರಲೋಹವು ಮೈಸೂರು ಸಂಸ್ಥಾನದಲ್ಲಿ ಹೋರತು ಭರತಖಂಡದ ಮತ್ತಾವ ಭಾಗದಲ್ಲಿಯೂ ತಯಾರಾಗುತ್ತಿಲ್ಲ. ಸರ್ಕಾರದ ಸಾಬೂನು ಕಾರ್ಖಾನೆಯಲ್ಲಿ ಈಗ ವರ್ಷಕ್ಕೆ ಸುಮಾರು 650 ಟನ್ನುಗಳ ತೂಕದ ಸಾಬೂನನ್ನು ತಯಾರಿಸುವುದು ಮಾತ್ರವೇ ಸಾಧ್ಯವಿದೆ. ಅದರಲ್ಲಿ ತಯಾರಾಗಬಹುದಾದ ಸಾಬೂನಿನ ಪ್ರಮಾಣವು (ಮೈಗೆ ಉಜ್ಜಿಕೊಳ್ಳುವ ಸಾಬೂನು 3,000 ಟನ್ನುಗಳಂತೆಯೂ ಮತ್ತು ಬಟ್ಟೆಯ ಸಾಬೂನುವಿನ ಪ್ರಮಾಣವು 2,000 ಟನ್ನುಗಳಂತೆಯೂ) ಒಟ್ಟು 5,000 ಟನ್ನುಗಳ ತೂಕಕ್ಕೆ ಏರುವ ಹಾಗೆ ಮಾಡುವ ಯೋಜನೆ ಕಾರ್ಯಾರಂಭವಾಗುವುದಕ್ಕೆ ಕ್ರಮ ಜರುಗುತ್ತಿದೆ ಅಲ್ಲದೆ ಅಲಂಕಾರ ವಸ್ತುಗಳನ್ನು ಮತ್ತು ಸುಗಂಧ ದ್ರವ್ಯವನ್ನು ತಯಾರಿಸುವ ಆಧುನಿಕ ಕಾರ್ಖಾನೆಯೊಂದನ್ನು ಏರ್ಪಡಿಸುವ ಯೋಜನೆಯಂತೆ ಕಾರ್ಯಕ್ರಮವಾಗುವುದಕ್ಕೆ ಕ್ರಮ ಜರುಗುತ್ತಿದೆ ಈಗಿರುವ ಯಂತ್ರಗಳಿಂದ ತಯಾರಾಗುವ ಕಾಗದದ ಮತ್ತು ರಾಸಾಯನಿಕ ಗೊಬ್ಬರಗಳ (ಎಂದರೆ ಫರ್ಟಿಲೈಜರುಗಳ ಪರಿಮಾಣವನ್ನು ದ್ವಿಗುಣವಾಗಿ ಹೆಚ್ಚಿಸುವುದಕ್ಕೂ ಕೂಡಲೆ ಕ್ರಮ ಜರುಗಿಸಬೇಕಾಗಿದೆ. ಎಲೆಕ್ಟ್ರಿಕ್ ಎಂದರೆ ಟ್ರ್ಯಾನ್ಸರ್ಮರುಗಳನ್ನು ಮತ್ತು ಮೋಟಾರುಗಳನ್ನು - ತಯಾರಿಸುವ ಪರಿಮಾಣಗಳನ್ನು ಹೆಚ್ಚಿಸುವ ಕಾರ್ಯಕಲಾಪಗಳು ನಡೆಯುವುದರಲ್ಲಿವೆ; ಮತ್ತು

"ಪ್ಲಾಸ್ಟಿಕ್" ಸಾಮಾನುಗಳನ್ನು ತಯಾರಿಸುವ ಪರಿಮಾಣಗಳನ್ನು ಹೆಚ್ಚಿಸುವ ಕಾರ್ಯಕಲಾಪಗಳೂ ನಡೆಯುವುದರಲ್ಲಿವೆ. ಹಾಸನದಲ್ಲಿರುವ ಹತ್ಯಾರುಗಳ ಕಾರ್ಖಾನೆಯನ್ನು ಬಡಾವಣೆಗೊಳಿಸುವ ಯೋಜನೆಗಳೂ ಪರ್ಯಾಲೋಚನೆಯಲ್ಲಿವೆ.

ಈ ಅಭಿವೃದ್ಧಿ ಯೋಜನೆಗಳ ಜೊತೆಗೆ ಸರ್ಕಾರದವರು ಸಂಸ್ಥಾನದಲ್ಲಿ ಹೊಸ ಕೈಗಾರಿಕೆಗಳನ್ನು ಏರ್ಪಡಿಸುವ ವಿಷಯವನ್ನು ಪರ್ಯಾಲೋಚಿಸುತ್ತಿದ್ದಾರೆ. ದಿನವೊಂದಕ್ಕೆ 5ರಿಂದ 10ಟನ್‌ಗಳಷ್ಟು ಕೃತಕ ರೇಷ್ಮೆಯು (ಎಂದರೆ "ರೆಯಾನ್") ತಯಾರಾಗುವಂತೆ ಕೃತಕ ರೇಷ್ಮೆಯ ಕೈಗಾರಿಕೆಯನ್ನು ಸಂಸ್ಥಾನದಲ್ಲಿ ಸ್ಥಾಪಿಸುವ ವಿಷಯವು ಪರ್ಯಾಲೋಚನೆಯಲ್ಲಿದೆ ಸಂಸ್ಥಾನದ ಎಲ್ಲಾ ಕಡೆಗಳಲ್ಲಿಯೂ ರಸಾಯನಿಕ ಗೊಬ್ಬರಗಳ ಅವಶ್ಯಕತೆಯು ವಿಶೇಷವಾಗಿ ಕಂಡು ಬಂದಿದೆ. ಆದುದರಿಂದ ಸರ್ಕಾರದವರು ಮೊಟ್ಟಮೊದಲು, ವರ್ಷವೊಂದಕ್ಕೆ 50,000 ಟನ್‌ಗಳಷ್ಟು ಸಸಾರಜನಕ ಗೊಬ್ಬರಗಳನ್ನು ತಯಾರಿಸುವುದಕ್ಕೆ ಸಾಧ್ಯವಾಗುವ ರೀತಿಯಲ್ಲಿ ಒಂದು ಯಂತ್ರಸ್ಥಾಪನೆ ಮಾಡಬೇಕೆಂದು ಉದ್ದೇಶಿಸಿರುತ್ತಾರೆ. ಮಲೆನಾಡು ಅಭಿವೃದ್ಧಿಗೆ ಸಂಬಂಧಪಟ್ಟ ಯೋಜನೆಗಳ ಒಂದು ಭಾಗವಾಗಿ ಶಿವಮೊಗ್ಗೆಯಲ್ಲಿ ಮತ್ತೊಂದು ಸಕ್ಕರೆ ಕಾರ್ಖಾನೆಯನ್ನು ಸ್ಥಾಪಿಸಲು ತಕ್ಕ ಕಾರ್ಯಕ್ರಮವನ್ನು ಸಹ ಕೈಗೊಳ್ಳಬೇಕಾಗಿದೆ. ಇವುಗಳಲ್ಲದೆ, "ಕಾಸ್ಟಿಕ್ ಸೋಡಾ" ಎಂಬ ಕ್ಷಾರವಸ್ತು ಅಲ್ಯೂಮಿನಿಯಂ ಮುಂತಾದುವನ್ನು ತಯಾರಿಸುವುದಕ್ಕೆ ಸಂಬಂಧಪಟ್ಟ ಸಲಹೆಗಳು ಇವೆ.

ಯುದ್ಧ ನಡೆಯುತ್ತಿದ್ದ ಕಾಲದಲ್ಲಿಯೂ ಮತ್ತು ಯುದ್ಧಾನಂತರದ ತರುಣದಲ್ಲಿಯೂ, ಯೂನೈಟೆಡ್ ಕಿಂಗ್‌ಡಮ್ ರಾಜ್ಯದಲ್ಲಿ ಮತ್ತು ಅಮೇರಿಕದ ಸಂಯುಕ್ತ ಸಂಸ್ಥಾನಗಳಲ್ಲಿಯೂ ಗಂಧದ ಎಣ್ಣೆಗೆ ವಿಪರೀತ ಗಿರಾಕಿಯಿದ್ದ ಉರುಬಿನ ಪರಿಸ್ಥಿತಿಯು ಈಗ ಕಡಿಮೆಯಾಗಿದೆ. ಅದರ ಪರಿಣಾಮವಾಗಿ ಈಗ ಗಂಧದೆಣ್ಣೆಯ ಗಿರಾಕಿಯು ಕಡಿಮೆಯಾಗಿದೆ. ಸಂಸ್ಥಾನದಲ್ಲಿ ಅಭಿವೃದ್ಧಿ ಕಾರ್ಯಗಳನ್ನು ನಡೆಸುವುದಕ್ಕೆ ಹಣವನ್ನೊದಗಿಸುವುದು ಅತ್ಯಾವಶ್ಯಕವಾಗಿದೆಯಷ್ಟೆ. ಅದಕ್ಕೆ ಹಣದ ವರಮಾನವು ಹೆಚ್ಚಾಗಿ ದೊರೆಯುವುದಕ್ಕೆ ಸಾಧಕವಾದ ಗಂಧದೆಣ್ಣೆಯ ಮಾರಾಟವು ಮೊದಲಿನಂತೆ ಹೆಚ್ಚಿನ ಪ್ರಮಾಮದಲ್ಲಿ ನಡೆಯುತ್ತಿರುವಂತೆ ಮಾಡುವುದಕ್ಕಾಗಿ, ವಿಶೇಷ ರೀತಿಯಲ್ಲಿ ಪತ್ರವ್ಯವಹಾರವನ್ನು ನಡೆಯಿಸಿ ಸಮರ್ಪಕವಾದ ಏರ್ಪಾಡುಗಳನ್ನು ಮಾಡಬೇಕಾಗಿದೆ.

ಸಂಸ್ಥಾನದಲ್ಲಿ ಗೃಹಕೈಗಾರಿಕೆಗಳು ಅಭಿವೃದ್ಧಿಗೆ ಬರುವಂತೆ ಮಾಡುವ ವಿಷಯದಲ್ಲಿ ಸರ್ಕಾರದವರು ತೀವ್ರಾಸಕ್ತಿಯುಳ್ಳವರಾಗಿದ್ದಾರೆ. ಅದಕ್ಕಾಗಿ, ಅವರು, ಯುದ್ಧಾನಂತರ ಅಭಿವೃದ್ಧಿ ಯೋಜನೆಗಳೊಲ್ಲೊಂದಾದ ತ್ರೈವಾರ್ಷಿಕ ಯೋಜನೆಯೊಂದನ್ನು ಮಂಜೂರು ಮಾಡಿರುತ್ತಾರೆ. ಅದಕ್ಕೆ 25,79,721 ರೂಪಾಯಿಗಳ ವೆಚ್ಚ ತಗಲುವುದಾಗಿ ಅಂದಾಜಾಗಿದೆ.

ರೇಡಿಯೋ ಯಂತ್ರಗಳನ್ನು ತಯಾರಿಸುವ ಕೈಗಾರಿಕಾ ಕಂಪನಿಯಲ್ಲಿ ಸರ್ಕಾರದವರು ಮುಖ್ಯ ಪಾಲುಗಾರರಾಗಿದ್ದಾರೆ. ಈ ಕೈಗಾರಿಕೆಗೆ ಸಂಬಂಧಪಟ್ಟ ಕೆಲಸವು ಚುರುಕಾಗಿ ನಡೆಯುತ್ತಿದೆ. ಈ ಕಂಪೆನಿಯ ಕಾರ್ಯಕ್ಕಲಾಪಗಳನ್ನು ಹೆಚ್ಚಿಸುವುದಕ್ಕೆ ಸಂಬಂಧಪಟ್ಟಂತೆ ಹಲವು ಏರ್ಪಾಡುಗಳು ಸೂಚಿತವಾಗಿವೆ. ಇಂಡಿಯಾ ಸರ್ಕಾರದವರು "ಟೆಲಿಫೋನ್" ಯಂತ್ರಗಳನ್ನು ತಯಾರಿಸುವ ಕಾರ್ಖಾನೆಯನ್ನು ಬೆಂಗಳೂರು ಡಿಸ್ಟ್ರಿಕ್ಟು ಕೃಷ್ಣರಾಜಪುರದ ಸಮೀಪದಲ್ಲಿ ಸ್ಥಾಪಿಸಲು ನಿರ್ಧರಿಸಿದ್ದಾರೆ.

ಆ ಕಾರ್ಖಾನೆಯು ಸುಮಾರು 2 ಕೋಟಿ ರೂಪಾಯಿಗಳ ಬಂಡವಾಳದಲ್ಲಿ ಸ್ಥಾಪಿತವಾಗುತ್ತದೆ. ಕಾರ್ಖಾನೆಯನ್ನು ಸ್ಥಾಪಿಸುವುದರ ಸಂಬಂಧದಲ್ಲಿ ಪ್ರಾರಂಭದಲ್ಲಿ ನಡೆಯಬೇಕಾದ ಕೆಲಸಗಳು ತ್ವರಿತವಾಗಿ ನಡೆಯುತ್ತಿವೆ ಕಾರ್ಖಾನೆಯನ್ನು ಸ್ಥಾಪಿಸುವುದಕ್ಕೆ ಬೇಕಾದ ಜಮೀನನ್ನು ಕೊಡುವುದಕ್ಕೂ ಮತ್ತು ವಿದ್ಯುಚ್ಛಕ್ತಿ, ನೀರು ಮುಂತಾದುವುಗಳನ್ನು ಸರಬರಾಯಿ ಮಾಡುವುದಕ್ಕೂ ಮೈಸೂರು ಸಂಸ್ಥಾನದ ಸರ್ಕಾರದವರು ಒಪ್ಪಿರುತ್ತಾರೆ.

ಹಣದ ಆಡಳಿತ ಮತ್ತು ಕೈಗಾರಿಕೆ ಶಾಖೆಯ ಮಾನ್ಯ ಸಚಿವರು ವಿದೇಶಗಳಿಗೆ ಹೋಗಿ ನೋಡಿ, ಸಂಸ್ಥಾನದಲ್ಲಿ ಹೊಸ ಕೈಗಾರಿಕೆಗಳನ್ನು ಏರ್ಪಡಿಸಿರುವ ಮತ್ತು ಈಗಿರುವ ಕೈಗಾರಿಕೆಗಳನ್ನು ಏರ್ಪಡಿಸುವ ಮತ್ತು ಕೈಗಾರಿಕೆಗಳನ್ನು ಶೀಘ್ರವಾಗಿ ಬಡಾವಣೆಗೊಳಿಸುವ ಸಾಧ್ಯತೆಗಳನ್ನು ಪರಿಶೀಲಿಸಿಕೊಂಡು ಬರಲು ಕಳುಹಿಸಲ್ಪಡುತ್ತಾರೆಂಬುದು ತಮ್ಮ ಅವಗಾಹನೆಗೆ ಬಂದಿದೆಯೆಂದು ನಾನು ನಂಬಿದ್ದೇನೆ. ಅವರು ಕೂಡಲೆ ವಿದೇಶ ಪ್ರಯಾಣ ಮಾಡುವವರಾಗಿದ್ದಾರೆ. ಅವರು ಸುಮಾರು ಎರಡು ತಿಂಗಳುಗಳ ಕಾಲದಲ್ಲಿ ಸಂಸ್ಥಾನಕ್ಕೆ ಹಿಂದಕ್ಕೆ ದಯಮಾಡುತ್ತಾರೆ. ಅವರ ವಿದೇಶ ಪ್ರವಾಸವು ಸುಖಕರವಾಗಿರುವಂತೆ ಭಗವಂತನು ಅನುಗ್ರಹಿಸಲೆಂದು ಪ್ರಾರ್ಥನೆ ಮಾಡುವುದರಲ್ಲಿ ತಾವೆಲ್ಲರೂ ನನ್ನೊಡನೆ ಸೇರುವಿರೆಂದು ನಾನು ನಂಬಿದ್ದೇನೆ. ಅವರ ಯೂರೋಪು ಖಂಡದ ಪ್ರವಾಸದಿಂದ ನಮ್ಮ ಸಂಸ್ಥಾನದ ಕೈಗಾರಿಕೆಯ ಪ್ರಗತಿ ಸಾಧನೆಯು ಇತೋಪ್ಯಧಿಕವಾಗಿ ಮುಂದುವರಿಯಲು ಸಹಾಯವಾಗುವುದೆಂದು ಪೂರ್ಣ ಭರವಸೆಯಿಂದ ನಿರೀಕ್ಷಿಸಲಾಗಿದೆ.

ಮೈಸೂರು ಸಂಸ್ಥಾನದ ಆರ್ಥಿಕ ಸಾಧನೆಗಳಲ್ಲಿ ವ್ಯವಸಾಯವನ್ನು ಬಿಟ್ಟರೆ ರೇಷ್ಮೆ ಕೈಗಾರಿಕೆಯೇ ಅತ್ಯಂತ ಪ್ರಾಮುಖ್ಯವಾದುದು. ಅದುದರಿಂದ, ಅದು ಸೂಕ್ತವಾದ ಮತ್ತು ತೃಪ್ತಿಕರವಾದ ತಳಹದಿಯ ಮೇಲೆ ನಿಲ್ಲುವಂತೆ ಮಾಡಲು ತಕ್ಕ ಸಾಧನೋಪಾಯಗಳನ್ನು ಕಂಡು ಹಿಡಿಯುವುದು ಅತ್ಯಾವಶ್ಯಕ. ರೇಷ್ಮೆ ಕೈಗಾರಿಕೆಗೆ ಸಂಬಂಧಪಟ್ಟ ಒಂದು ಸಮ್ಮೇಳನವು ಇದೇ ವರ್ಷ ಜುಲೈ ತಿಂಗಳಿನಲ್ಲಿ ಮೈಸೂರಿನಲ್ಲಿ ಜರುಗಿತು. ರೇಷ್ಮೆ ಕೈಗಾರಿಕೆಯ ಅಭಿವೃದ್ಧಿಗೆ ಸಂಬಂಧಪಟ್ಟ ಮುಖ್ಯವಾದ ವಿಚಾರಗಳು ಆ ಸಮ್ಮೇಳನದಲ್ಲಿ ಚರ್ಚೆಯಾಗಿ ಅನೇಕ ಮುಖ್ಯ ತೀರ್ಮಾನಗಳಾದುವು. ಆ ತೀರ್ಮಾನಗಳನ್ನು ಕ್ರಮ ಕ್ರಮವಾಗಿ ಆಚರಣೆಗೆ ತರಲಾಗುವುದು. ಸೆಪ್ಟೆಂಬರ್ ತಿಂಗಳಿನ ಮೊದಲನೆಯ ವಾರದಲ್ಲಿ "ಟ್ಯಾರಿಫ್ ಬೋರ್ಡ್" ಈ ಮಂಡಲಿಯ ಅಧ್ಯಕ್ಷರೂ ಮತ್ತು ಸದಸ್ಯರುಗಳೂ, ರೇಷ್ಮೆ ಕೈಗಾರಿಕೆಯ ಸ್ಥಿತಿಗತಿಗಳನ್ನು ಖುದ್ದಾಗಿ ಪರಿಶೀಲಿಸುವುದಕ್ಕಾಗಿ ಸಂಸ್ಥಾನಕ್ಕೆ ಬಂದಿದ್ದರು. ಸಂಸ್ಥಾನದಲ್ಲಿ ನಡೆಯತಕ್ಕ ರೇಷ್ಮೆ ಕೈಗಾರಿಕೆಯು ಹೊರಗಡೆಯಿಂದ ಆಮದಾಗಿ ಬರತಕ್ಕ ರೇಷ್ಮೆಯ ಪೈಪೋಟಿಯನ್ನು ಎದುರಿಸಿ ಊರ್ಜಿತವಾಗಬೇಕಾದರೆ, ಆ ಕೈಗಾರಿಕೆಗೆ ಎಷ್ಟರಮಟ್ಟಿಗೆ ರಕ್ಷಣೆಯನ್ನು ಕೊಡಬೇಕೆಂಬುದನ್ನು ಗೊತ್ತು ಮಾಡುವುದೇ ಆ ಬೋರ್ಡ್‌ನವರ ಪರಿಶೀಲನೆಯ ಉದ್ದೇಶ. ಟ್ಯಾರಿಫ್ ಬೋರ್ಡಿನವರು ರೇಷ್ಮೆ ಕೈಗಾರಿಕೆಗೆ ಸಾಕಾದಷ್ಟು ರಕ್ಷಣೆ ಕೊಡುವಂತೆ ಸಲಹೆ ಮಾಡಿ ತಮ್ಮ ವರದಿಯನ್ನು ಶೀಘ್ರವಾಗಿ ಒಪ್ಪಿಸುವರೆಂದೂ ಇಂಡಿಯಾ ಸರ್ಕಾರದವರು ತ್ವರಿತವಾಗಿ ಆ ವಿಷಯದಲ್ಲಿ ಹುಕ್ಕುಂ ಸಾದರ ಮಾಡುವರೆಂದು ಭಾವಿಸಲಾಗಿದೆ.

ಕೈಗಾರಿಕೆಯಿಂದ ತಯಾರಾಗತಕ್ಕ ವಸ್ತುಗಳ ಪರಿಮಾಣವು ಹೆಚ್ಚಾಗಬೇಕಾದರೆ, ಕೈಗಾರಿಕೆ ಕಾರ್ಖಾನೆಗಳಲ್ಲಿ ಕೆಲಸ ಮಾಡತಕ್ಕ ಕಾರ್ಮಿಕರು ತೃಪ್ತಿಯಿಂದಿರುವಂತೆ ನೋಡಿಕೊಳ್ಳಬೇಕಾದುದು ಅವಶ್ಯವೆಂಬುದು ಸಮಸ್ತರಿಗೂ ಚೆನ್ನಾಗಿ ಮನವರಿಕೆಯಾಗಿರತಕ್ಕ ವಿಷಯ. ಕಾರ್ಮಿಕರ ಜೀವನದ ಸ್ಥಿತಿಗತಿಗಳನ್ನು ಮತ್ತು ಕೆಲಸದ ಸನ್ನಿವೇಶಗಳನ್ನು ಉತ್ತಮಗೊಳಿಸುವ ಉದ್ದೇಶದಿಂದ ಪ್ರಸಕ್ತ ವರ್ಷದಲ್ಲಿ ಹಲವು ಕಾನೂನುಗಳನ್ನು ಏರ್ಪಡಿಸಲಾಗಿದೆ. ಆ ಕಾನೂನುಗಳ ಪೈಕಿ ಕೆಲವು ಯಾವುವೆಂದರೆ-ಕೆಲಸಗಾರರ ಕೂಲಿ ಅಥವಾ ಸಂಬಳದ ಪಾವತಿಗೆ ಸಂಬಂಧಪಟ್ಟ ಆ್ಯಕ್ಟು "ಕ್ಯಾಂಟೀನ್" ಗಳೆಂದು ಉಪಹಾರಮಂದಿರಗಳಿಗೆ ಸಂಬಂಧಪಟ್ಟ ಆಕ್ಟೂ ಮತ್ತು ಅಂಗಡಿ ಮತ್ತು ವ್ಯಾಪಾರ ಸಂಸ್ಥೆಗಳಿಗೆ ಸಂಬಂಧಪಟ್ಟ ಆ್ಯಕ್ಟು. ಹಲವು ಮಸೂದಾ ಕಾನೂನುಗಳ ಸಂಬಂಧದಲ್ಲಿ ಅವುಗಳನ್ನು ಕಾನೂನುಗಳಾಗಿ ಏರ್ಪಡಿಸುವುದಕ್ಕೆ ಸಂಬಂಧಪಟ್ಟ ನಾನಾ ಕಾರ್ಯಕ್ರಮಗಳೂ ಜರುಗುತ್ತಿವೆ. ಆ ಮಸೂದಾ ಕಾನೂನುಗಳು ಯಾವುವೆಂದರೆ; ಕೆಲವು ನೌಕರಿಗಳ ಕೂಲಿ ಅಥವಾ ಸಂಬಳ ದರಗಳ ಕನಿಷ್ಠ ಪರಿಮಿತಿಯನ್ನು ಗೊತ್ತುಮಾಡುವುದಕ್ಕೆ ಸಂಬಂಧಪಟ್ಟ ಮಸೂದಾ ಕಾನೂನು, ಕೆಲಸಗಾರರ ವಿಮೆಗೆ ಸಂಬಂಧಪಟ್ಟ ಮಸೂದಾಕಾನೂನು, ಕೆಲಸಗಾರರ ವಾಸದ ಮನೆ ಸೌಕರ್ಯಕ್ಕೆ ಸಂಬಂಧಪಟ್ಟ ಮಸೂದಾಕಾನೂನು ಮತ್ತು ಕೆಲಸಗಾರರ ವಿಚಾರಕ್ಕೆ ಸಂಬಂಧಪಟ್ಟ ಮಸೂದಾಕಾನೂನು, ಕಾರ್ಮಿಕರಿಗೆ ಸಂಬಂಧಪಟ್ಟ ವಿಶೇಷ ಪರಿಣಾಮಕಾರಿಯಾದ ಇತರ ಹಲವು ಮಸೂದಾಕಾನೂನುಗಳು ಸಹ ಈ ಅಧಿವೇಶನದಲ್ಲಿ ತುಂಬ ಪರ್ಯಾಲೋಚನೆಗೆ ಬರುತ್ತವೆ. ಕಾರ್ಮಿಕರ ವಿಚಾರಕ್ಕೆ ಸಂಬಂಧಪಟ್ಟಂತೆ ಕಾರ್ಮಿಕರುಗಳೂ ಮತ್ತು ಕೈಗಾರಿಕೆ ಉದ್ಯಮಗಳ ಯಜಮಾನರುಗಳು ಒಬ್ಬರ ಮನೋಗತವನ್ನು ಮತ್ತೊಬ್ಬರು ಮತ್ತಷ್ಟು ಉತ್ತಮ ರೀತಿಯಲ್ಲಿ ಅರಿಯುವುದಕ್ಕೂ ಮತ್ತು ಅವರಲ್ಲಿ ಪರಸ್ಪರವಾಗಿ ಮತ್ತಷ್ಟು ಹೆಚ್ಚಿನ ಸೌಹಾರ್ದವೇರ್ಪಡುವುದಕ್ಕೂ ಅವಕಾಶವುಂಟಾಯಿತು. ಆ ಸಮ್ಮೇಳನದಲ್ಲಿ ಹಲವು ನಿರ್ಣಯಗಳು ಅಂಗೀಕೃತವಾದುವು. ಅವುಗಳನ್ನು ಕಾರ್ಯರೂಪಕ್ಕೆ ತರುವುದಕ್ಕಾಗಿ ಕೈಗೊಳ್ಳಬೇಕಾದ ಕಾರ್ಯಕ್ರಮಗಳನ್ನು ಸಲಹೆಮಾಡಲು ಉಪಸಮಿತಿಗಳು (ಎಂದರೆ"ಸಬ್ ಕಮಿಟಿ"ಗಳು) ನೇಮಕ ಮಾಡಲ್ಪಟ್ಟಿವೆ. ಆ ಉಪಸಮಿತಿಗಳ ವರದಿಗಳನ್ನು ನಿರೀಕ್ಷಿಸಲಾಗಿದೆ. ಇತ್ತೀಚೆಗೆ ಸ್ಯಾನ್‌ಫ್ರಾನ್ಸಿಸ್ಕೋ ನಗರದಲ್ಲಿ ಜರುಗಿದ ಅಂತರ ರಾಷ್ಟ್ರೀಯ ಕಾರ್ಮಿಕ ಸಮ್ಮೇಳನಕ್ಕೆ ಇಂಡಿಯಾ ದೇಶದಿಂದ ಹೊರಟಿದ್ದ ಪ್ರತಿನಿಧಿಗಳ ("ಡೆಲಿಗೇಷನ್") ಮಂಡಲಿಯಲ್ಲಿ ಭಾರತೀಯ ಸಂಸ್ಥಾನಗಳ ಪರವಾಗಿ ಮೈಸೂರು ಸರ್ಕಾರದ ಕಾರ್ಮಿಕ ಶಾಖೆಯ ಮಾನ್ಯ ಸಚಿವರು ಸದಸ್ಯರಾಗಿ ಹೋಗಿದ್ದರಷ್ಟೆ. ಅವರು ನಾನಾ ದೇಶಗಳಲ್ಲಿ ಕಾರ್ಮಿಕರಿಗೆ ಸಂಬಂದ ಪಟ್ಟ ಸಮಸ್ಯೆಗಳನ್ನೂ ಮತ್ತು ವಿದ್ಯುಚ್ಛಕ್ತಿಯ ಅಭಿವೃದ್ಧಿಗೆ ಸಂಬಂಧಪಟ್ಟ ಏರ್ಪಾಡುಗಳನ್ನೂ ತೀವ್ರವಾಗಿ ಪರಿಶೀಲಿಸಿ ನೋಡಿ ಸಂಸ್ಥಾನಕ್ಕೆ ಹಿಂತಿರುಗಿದ್ದಾರೆ. ಕಾರ್ಮಿಕರಿಗೆ ಸಂಬಂಧಪಟ್ಟ ವಿಚಾರಗಳಲ್ಲಿಯೂ ಮತ್ತು ವಿದ್ಯುಚ್ಛಕ್ತಿಯ ಅಭಿವೃದ್ಧಿಗೆ ಸಂಬಂಧಪಟ್ಟ ವಿಚಾರಗಳಲ್ಲಿಯೂ ಮುಂದೆ ನಮ್ಮ ಸಂಸ್ಥಾನದಲ್ಲಿ ಕೈಗೊಳ್ಳಬೇಕಾಗಿರತಕ್ಕ ಕಾರ್ಯದಲ್ಲಿ ಅವರು ಪರಿಶೀಲನೆಯಿಂದ ಪಡೆದಿರತಕ್ಕ ತಿಳಿವಳಿಕೆ ಮತ್ತು ಅನುಭವಗಳು ಬಹಳ ಮಟ್ಟಿಗೆ ಸಹಾಯವಾಗುವುವೆಂದು ನನ್ನ ನಂಬಿಕೆಯಿದೆ. ನಾನಾ ಕೈಗಾರಿಕೆಗಳ ಪ್ರತಿನಿಧಿಗಳು ಮತ್ತು ಕಾರ್ಮಿಕರ ಪ್ರತಿನಿಧಿಗಳೂ ಕೈಗಾರಿಕಾ

ಪ್ರತಿನಿಧಿಗಳೂ ಕೈಗಾರಿಕೆ ಉದ್ಯಮಗಳಿಂದ ಹೆಚ್ಚು ಹೆಚ್ಚು ಪರಿಮಾಣದಲ್ಲಿ ವಸ್ತುಗಳು ತಯಾರಿಸಲ್ಪಡುವಂತೆ ಮಾಡುವುದಕ್ಕೆ ಸಾಧಕವಾದ ಕಾರ್ಯವಿಧಾನಗಳನ್ನು ಅಳವಡಿಸಲು ಸರ್ವಪ್ರಯತ್ನಗಳನ್ನೂ ಮಾಡಬೇಕಾದುದು ಆವಶ್ಯಕವೆಂಬ ಅಂಶವನ್ನು ನಾನು ವಿಶೇಷವಾಗಿ ಒತ್ತಿ ಹೇಳಿ ಸೂಚಿಸಲಿಚ್ಛಿಸುತ್ತೇನೆ.

ವಿದ್ಯುಚ್ಛಕ್ತಿಯ ಉತ್ಪತ್ತಿಯನ್ನು ಹೆಚ್ಚಿಸುವ ವಿಚಾರದಲ್ಲಿ ಮೈಸೂರು ಸಂಸ್ಥಾನವು ಅಗ್ರಗಾಮಿಯಾಗಿ ಮುಂದುವರಿದು ಪ್ರಾಶಸ್ತ್ಯವನ್ನು ಪಡೆದಿದೆ. ಈ ವಿಚಾರದಲ್ಲಿ ಸರ್ಕಾರದವರು ಸ್ವಲ್ಪವೂ ಅಲಸ್ಯವನ್ನು ತಾಳದೆ ಏಕರೀತಿಯಾದ ತೀವ್ರಾಸಕ್ತಿಯಿಂದ ತಮ್ಮ ಕಾರ್ಯ ನೀತಿಯನ್ನು ಮುಂದುವರೆಸುತ್ತಿದ್ದಾರೆ ಜೋಗ ಜಲಪಾತದ ಬಳಿ ವಿದ್ಯುಚ್ಛಕ್ತಿಯನ್ನು ಉತ್ಪತ್ತಿಮಾಡುವುದಕ್ಕೆ ಸಂಬಂಧಪಟ್ಟ ಯೋಜನೆಯ ಮೊದಲನೆಯ ತಂಡದ ಕಾಮಗಾರಿಗಳು ಶೀಘ್ರವಾಗಿ ಪೂರೈಸಿದುವು. ಪ್ರತಿಯುಕ್ತ ವರ್ಷದಲ್ಲಿ ಆ ಯಂತ್ರ ಸ್ಥಾಪನೆಗಳ ಪ್ರಾರಂಭೋತ್ಸವವನ್ನು ಶ್ರೀಮನ್ಮಹಾರಾಜರವರು ಕೃಪೆ ಮಾಡಿ ನೆರವೇರಿಸಿದರು. ಎರಡನೆ ತಂಡದ ಯಂತ್ರ ಜೋಡಣೆಯ ಕಾಮಗಾರಿಗಳು ಶೀಘ್ರವಾಗಿ ಪೂರೈಸುವುದರಲ್ಲಿವೆ. ಆ ಯಂತ್ರಜೋಡಣೆಗಳಿಂದ 120 ಸಾವಿರ ಕಿಲೋವಾಟ್ ಪ್ರಮಾಣದಷ್ಟು ವಿದ್ಯುಚ್ಛಕ್ತಿಯು ಉತ್ಪತ್ತಿಯಾಗುವ ನಿರೀಕ್ಷೆಯಿದೆ. ಅದರಷ್ಟೇ ಪ್ರಮಾಣದ ವಿದ್ಯುಚ್ಛಕ್ತಿಯನ್ನು ಉತ್ಪತ್ತಿ ಮಾಡುವುದಕ್ಕಾಗಿ ಮತ್ತೊಂದು ಯಂತ್ರಶಾಖೆಯನ್ನು (ಸ್ಟೇಷನನ್ನು) ಏರ್ಪಡಿಸುವ ಯೋಜನೆಯನ್ನು ಮಾಡಲ್ಪಟ್ಟಿದೆ. ಆ ಸಂಬಂಧವಾಗಿ 'ಸರ್ವೆ' ಕೆಲಸಗಳು ನಡೆಯುತ್ತಿವೆ. ಮೈಸೂರು ಸರ್ಕಾರದವರಿಗೂ ಮತ್ತು ಮದರಾಸ್ ಸರ್ಕಾರದವರಿಗೂ ನಡೆದಿರತಕ್ಕ ಒಪ್ಪಂದಕ್ಕನುಸಾರವಾಗಿ ಮೈಸೂರು ಸರ್ಕಾರದವರು ಮೇಕೆದಾಟು ಬಳಿ ವಿದ್ಯುಚ್ಛಕ್ತಿಯನ್ನು ಉತ್ಪತ್ತಿ ಮಾಡಲು ಉದ್ದೇಶಿಸಿರುತ್ತಾರೆ. ಆ ಒಪ್ಪಂದದ ತಪಸೀಲು ವಿವರಗಳ ವಿಚಾರವಾಗಿ ಎರಡು ಸರ್ಕಾರದನರಿಗೂ ಪರಸ್ಪರ ಸಂಧಾನಗಳು ಜರುಗುತ್ತಿವೆ. ಮೈಸೂರು ಸರ್ಕಾರದವರು ಅಕ್ಕಪಕ್ಕದ ಪ್ರಾಂತಗಳಾದ ಮದರಾಸು ಮತ್ತು ಮುಂಬಯ್ ಪ್ರಾಂತಗಳ ಸರ್ಕಾರಗಳವರ ವಿಷಯದಲ್ಲಿ ತಮಗಿರತಕ್ಕ ಸೌಹಾರ್ದ ಮತ್ತು ಸಹಕಾರಭಾವಕ್ಕನುಗುಣವಾಗಿ, ಯುಕ್ತವಾದ ಷರತ್ತುಗಳ ಮೇಲೆ ಮದರಾಸು ಸರ್ಕಾರಕ್ಕೂ ಮತ್ತು ಬೊಂಬಾಯಿ ಸರ್ಕಾರಕ್ಕೂ ವಿದ್ಯುಚ್ಛಕ್ತಿಯನ್ನು ಸರಬರಾಯಿ ಮಾಡುವುದಾಗಿ ಒಪ್ಪಿಕೊಂಡಿರುತ್ತಾರೆ. ಗ್ರಾಮಾಂತರ ಪ್ರದೇಶಗಳಿಗೆ ವಿದ್ಯುಚ್ಛಕ್ತಿಯನ್ನು ಒದಗಿಸುವ ವಿಚಾರದಲ್ಲಿ ಯಂತ್ರಗಳಿಗೆ ವಿದ್ಯುಚ್ಛಕ್ತಿಯನ್ನು ಒದಗಿಸುವ ವಿಚಾರದಲ್ಲಿಯೂ ಸರ್ಕಾರದವರು ವಿಶೇಷ ಆಸಕ್ತಿ ವಹಿಸುತ್ತಾರೆ. ಆದರೆ ಈ ಸಂಬಂಧವಾದ ಕಾರ್ಯಗಳು "ಟ್ರಾನ್ಸ್‌ಫರ್ಮರ್" ಯಂತ್ರಗಳೂ ಮತ್ತು ತಂತಿಗಳು ಎಷ್ಟರಮಟ್ಟಿಗೆ ದೊರೆಯಲು ಸಾಧ್ಯವೋ ಅಷ್ಟಕ್ಕನುಗುಣವಾಗಿ ಮಾತ್ರ ಮುಂದುವರಿಯಲು ಸಾಧ್ಯವಾಗುತ್ತದೆ.

ಇನ್ನು ಸಂಸ್ಥಾನದಲ್ಲಿ ವಿದ್ಯಾಭಿವೃದ್ಧಿಯು ಬಹುಬೇಗ ಬೇಗ ಮುಂದುವರಿಯುತ್ತಿರುವ ವಿಚಾರವನ್ನು ತಮಗೆ ಬಿನ್ನೈಸಲಿಚ್ಛಿಸುತ್ತೇನೆ. 1948-49ನೆಯ ಸಾಲಿಗೆ ವಿದ್ಯಾಭ್ಯಾಸದ ಇಲಾಖೆಯ ಬಡ್ಜೆಟ್ಟಿನಲ್ಲಿ 284 ಲಕ್ಷ ರೂಪಾಯಿಗಳ ವೆಚ್ಚಕ್ಕೆ ಹಣವನ್ನೊದಗಿಸಲಾಗಿದೆ. ಹಿಂದಿನ ಸಾಲಿನ ಬಡ್ಜೆಟ್ಟಿನಲ್ಲಿ ಒದಗಿಸಿದ್ದ ಮೊಬಲಗಿಗಿಂತ ಈ ಮೊಬಲಗು 105 ಲಕ್ಷ ರೂಪಾಯಿಗಳಷ್ಟು ಹೆಚ್ಚಾಗಿದೆ. ವಿದ್ಯಾಭ್ಯಾಸಕ್ಕಾಗಿ ವೆಚ್ಚ ಮಾಡತಕ್ಕ ಮೊಬಲಗು ಸಂಸ್ಥಾನದ ಹುಟ್ಟುವಳಿಯ ನಾಲ್ಕರಲ್ಲೊಂದು ಭಾಗಕ್ಕಿಂತ ಹೆಚ್ಚಾಗಿದೆ.

ಪ್ರೌಢ ವಿದ್ಯಾಭ್ಯಾಸಕ್ಕೆ ಬೆಂಗಳೂರು ಮೈಸೂರು ನಗರಗಳನ್ನು ಬಿಟ್ಟು ಇತರ ಪ್ರದೇಶಗಳಲ್ಲಿ ವಾಸಮಾಡುತ್ತಿರುವ ವಿದ್ಯಾರ್ಥಿಗಳಿಗೆ ಹೆಚ್ಚು ಸೌಕರ್ಯಗಳನ್ನು ಒದಗಿಸಿಕೊಡುವುದಾಗಿ, ಕೋಲಾರ ಚಿಕ್ಕಮಗಳೂರು, ಮಂಡ್ಯ ಮತ್ತು ಚಿತ್ರದುರ್ಗ ಈ ನಾಲ್ಕು ಟೌನುಗಳಲ್ಲೂ ನಾಲ್ಕು ಇಂಟರ್‌ಮಿಡಿಯಟ್ ಕಾಲೇಜುಗಳನ್ನು ಈ ವರ್ಷ ಸ್ಥಾಪಿಸಲಾಗಿದೆ. ಪ್ರೌಢತರಗತಿಗಳಿಗೆ ಪ್ರವೇಶವನ್ನು ಕೋರಿಬಂದ ವಿದ್ಯಾರ್ಥಿಗಳ ಸಂಖ್ಯೆಯು ಗಣನೀಯವಾದಷ್ಟು ಮಟ್ಟಿಗೆ ಹೆಚ್ಚಿದ್ದುದರಿಂದ, ಈ ವರ್ಷದ ಪ್ರಾರಂಭದಲ್ಲಿ ಬಾಲಕರಿಗಾಗಿ ಮೊದಲನೆಯ ದರ್ಜೆಯ ಎರಡು ಕಾಲೇಜುಗಳನ್ನೂ ಮತ್ತು ಬಾಲಕಿಯರಿಗಾಗಿ ಮೊದಲನೆ ದರ್ಜೆಯ ಒಂದು ಕಾಲೇಜನ್ನೂ ಹೊಸದಾಗಿ ಸ್ಥಾಪಿಸಲಾಯಿತು. ಇವುಗಳಲ್ಲಿ ಒಂದನ್ನು ನಗರ ಪ್ರದೇಶವನ್ನು ಬಿಟ್ಟು ಇತರ ಪ್ರದೇಶಗಳ ಕೇಂದ್ರಗಳೊಳಗೊಂದಾದ ತುಮಕೂರಿನಲ್ಲಿ ಸ್ಥಾಪಿಸಲಾಗಿದೆ. "ಆರ್ಟ್ಸ್" ಮತ್ತು "ಸೈನ್ಸ್" ಪಠ್ಯ ವಿಷಯಗಳನ್ನು ಬೋಧಿಸಲಾಗಿದೆ. ಅಲ್ಲದೆ, ಅದರ ಜೊತೆಗೆ ಮೆಡಿಕಲ್ ಕಾಲೇಜು, ಮೆಡಿಕಲ್ ಸ್ಕೂಲು, ಇಂಜಿನಿಯರಿಂಗ್ ಕಾಲೇಜು ಮತ್ತು ಇಂಜಿನಿಯರಿಂಗ್ ಸ್ಕೂಲ್ ಇಂಥ ಪಾರಿಭಾಷಿಕ ವಿದ್ಯಾ ಸಂಸ್ಥೆಗಳಲ್ಲಿ ಮೊದಲಿಗಿಂತಲೂ ಹೆಚ್ಚು ಸಂಖ್ಯೆಗಳ ವಿದ್ಯಾರ್ಥಿ ವಿದ್ಯಾರ್ಥಿನಿಯರನ್ನು ಸೇರಿಸಿಕೊಳ್ಳಲನುಕೂಲಿಸುವಂತೆ ಸ್ಥಳಾವಕಾಶವನ್ನು ಹೆಚ್ಚಿಸಲಾಯಿತು.

ವಿಶ್ವವಿದ್ಯಾನಿಲಯದಲ್ಲಿ 'ಕಾನೂನು ಶಿಕ್ಷಣ ಕೊಡುವುದಕ್ಕೆ ಒಂದು ಶಿಕ್ಷಣ ಶಾಖೆಯನ್ನು ಹೊಸದಾಗಿ ಸೇರಿಸಲಾಗಿದೆ. ಈ ಶಿಕ್ಷಣಕ್ಕಾಗಿ ಒಂದು 'ಲಾ' ಕಾಲೇಜನ್ನು ಸ್ಥಾಪಿಸಲಾಗಿದೆ. ಈ ವರೆಗೂ ಸೆಂಟ್ರಲ್ ಕಾಲೇಜಿನ ಒಂದು ಭಾಗವಾಗಿದ್ದ ವಾಣಿಜ್ಯ ಶಿಕ್ಷಣ ಶಾಖೆಯನ್ನು ಈಗ ಪ್ರತ್ಯೇಕಿಸಿ, ಒಂದು ಪಕ್ಕಾ 'ಕಾಮರ್ಸ್' ಕಾಲೇಜನ್ನಾಗಿ ಮಾರ್ಪಡಿಸಲಾಗಿದೆ. ಅಲ್ಲದೆ ವಿಶ್ವವಿದ್ಯಾನಿಲಯದಲ್ಲಿ ವಿದ್ಯಾರ್ಥಿವೇತನಗಳನ್ನು ಕೊಡುವುದಕ್ಕೆ ಹೆಚ್ಚಿಗೆ ಹಣವನ್ನು ಸಹ ಒದಗಿಸಲಾಗಿದೆ. ನ್ಯಾಷನಲ್ ಕ್ಯಾಡೆಟ್ ಕೋರ್ ದಳದ ಯೋಜನೆಯ ಮೇರೆಗೆ ವಿಶ್ವವಿದ್ಯಾನಿಲಯದಲ್ಲಿ 315 ವಿದ್ಯಾರ್ಥಿಗಳಿಗೆ ಮಿಲಿಟರಿ ಶಿಕ್ಷಣ ಕೊಡುವುದಕ್ಕೆ ಅವಶ್ಯವಾದ ಏರ್ಪಾಡು ಮಾಡಲಾಗಿದೆ; ಮತ್ತು ಆ ದಳವನ್ನು ವ್ಯವಸ್ಥೆಗೊಳಿಸುವ ಸಂಬಂಧದಲ್ಲಿ ತಕ್ಕ ಕಾರ್ಯಕ್ರಮಗಳನ್ನು ಕೈಗೊಳ್ಳಲಾಗಿದೆ. ಸಂಸ್ಥಾನದ ಅನೇಕ ಭಾಗಗಳಲ್ಲಿ ರಕ್ಷಣೆ ದಳಕ್ಕೆ ಸೇರಿದವರಿಗೆ (ಎಂದರೆ ಹೋಂ ಗಾರ್ಡ್, ದಳದವರಿಗೆ) ಶಿಕ್ಷಣ ಕೊಡುವ ಕೆಲಸವೂ ತೀವ್ರ ಆಸಕ್ತಿಯಿಂದ ಮುಂದುವರೆಯುತ್ತಿದೆಯೆಂಬುದನ್ನೂ ಕೂಡ ನಾನು, ಈ ಸಂದರ್ಭದಲ್ಲಿ ಸೂಚಿಸಬಹುದಾಗಿದೆ.

ಮೈಸೂರು ವಿಶ್ವವಿದ್ಯಾನಿಲಯವು ಸ್ಥಾಪಿತವಾಗಿ ಮೂವತ್ತು ವರ್ಷಗಳಾದುವು; ಈ ವರೆಗೆ ಅದು ನಾನಾರೀತಿಗಳಲ್ಲಿ ಅಭಿವೃದ್ಧಿ ಹೊಂದಿದೆ. ವಿಶ್ವವಿದ್ಯಾನಿಲಯವನ್ನು ಯಾವ ರೀತಿ ಮತ್ತಷ್ಟು ವ್ಯವಸ್ಥೆ ಗೊಳಿಸಿ ಮತ್ತಷ್ಟು ಸಮರ್ಪಕವಾದ ಯಾವ ವಿಧಾನಗಳಲ್ಲಿ ನಡೆಯಿಸ ಬಹುದೆಂಬ ವಿಚಾರವನ್ನು ಎಚ್ಚರಿಕೆಯಿಂದ ಪರ್ಯಾಲೋಚಿಸಬೇಕಾಗಿದೆ. ಈ ವಿಷಯವನ್ನು ಪರಿಶೀಲಿಸಿ ವಿಶ್ವವಿದ್ಯಾನಿಲಯದಲ್ಲಿ ಏರ್ಪಡಬೇಕಾದ ಸುಧಾರಣೆಗಳ ಸಂಬಂಧದಲ್ಲಿ ಅವಶ್ಯವಾದ ಸಲಹೆಗಳನ್ನು ಅನುಸರಿಸಲು, ಆಳವಾದ ಪಾಂಡಿತ್ಯವನ್ನೂ ಮತ್ತು ವಿಶೇಷ ಅನುಭವವನ್ನೂ ಪಡೆದು ವಿದ್ಯಾಭ್ಯಾಸ ಕ್ರಮದಲ್ಲಿ ಹೆಚ್ಚು ಪರಿಶ್ರಮವುಳ್ಳವರೆಂದು ಪ್ರಸಿದ್ಧರಾಗಿರುವ ಆಂಧ್ರ ವಿಶ್ವವಿದ್ಯಾನಿಲಯದ ವೈಸ್ ಚಾನ್ಸಲರ್ ವರಾದ ಡಾ॥ ಸಿ. ರಾಮಲಿಂಗಾ ರೆಡ್ಡಿಯವರನ್ನು ಆಹ್ವಾನಿಸಬೇಕೆಂದು ನಿರ್ಧರಿಸಲಾಗಿದೆ.

ಹೈಸ್ಕೂಲು ವಿದ್ಯಾಭ್ಯಾಸ, ಮಿಡ್ಲ್‌ಸ್ಕೂಲು ವಿದ್ಯಾಭ್ಯಾಸ ಮತ್ತು ಪ್ರಾಥಮಿಕ ವಿದ್ಯಾಭ್ಯಾಸ-ಇವು ಮೂರಕ್ಕೂ ಕಲ್ಪಿಸಿರುವ ಸೌಕರ್ಯಗಳನ್ನು ಹೆಚ್ಚು ಮಾಡಲು ಸರ್ಕಾರದವರು ತೀವ್ರಾಸಕ್ತಿಯುಳ್ಳವರಾಗಿದ್ದಾರೆ. ಈ ಸಂಬಂಧದಲ್ಲಿ ಕಾರ್ಯಕ್ರಮಗಳು ಗಣನೀಯವಾಗಿ ಮುಂದುವರೆದಿವೆ. ಚಾಲ್ತಿ ಸಾಲಿನಲ್ಲಿ ಸುಮಾರು 410 ಪ್ರೈಮರಿ ಸ್ಕೂಲ್‌ಗಳನ್ನೂ ("ಪಕ್ಕಾ" ಮಿಡ್ಲ್ ಸ್ಕೂಲುಗಳಾಗಿ ಮಾರ್ಪಟ್ಟ 18 ಸ್ಕೂಲುಗಳನ್ನು ಬಿಟ್ಟು") 86 ಮಿಡ್ಲ್ ಸ್ಕೂಲುಗಳನ್ನು ಮತ್ತು 17 ಹೈ ಸ್ಕೂಲುಗಳನ್ನು ಏರ್ಪಡಿಸಲಾಯಿತು. ಹೈಸ್ಕೂಲುಗಳ ಪೈಕಿ ಅನೇಕ ಹೈಸ್ಕೂಲುಗಳು ಗ್ರಾಮಾಂತರ ಪ್ರದೇಶಗಳಲ್ಲಿಯೇ ಏರ್ಪಟ್ಟಿವೆ; ಇದು ಗಮನಾರ್ಹವಾದ ವಿಚಾರ. ಮಿಡ್ಲ್ ಸ್ಕೂಲ್ ಪರೀಕ್ಷೆಯನ್ನು ತೆಗೆದು ಹಾಕುವ ವಿಷಯವು ಸರ್ಕಾರದವರ ತೀವ್ರವಾದ ಪರ್ಯಾಲೋಚನೆಯಲ್ಲಿದೆ ಹಿಂದಿ ವ್ಯಾಸಂಗವನ್ನು ಖಾಯಂ ಮಾಡುವ ಉದ್ದೇಶದಿಂದ ಸಂಸ್ಥಾನದಲ್ಲಿರುವ ಕೆಲವು ಹೈಸ್ಕೂಲುಗಳಲ್ಲಿಯೂ ಮತ್ತು ಮಿಡ್ಲ್ ಸ್ಕೂಲುಗಳಲ್ಲಿಯೂ ಹಿಂದೀ ಉಪಾಧ್ಯಾಯರುಗಳ ಖಾಯಂ ಹುದ್ದೆಗಳನ್ನು ಮಂಜೂರು ಮಾಡಲಾಗಿದೆ. ಹೈಸ್ಕೂಲು ವ್ಯಾಸಂಗ ಕ್ರಮದಲ್ಲಿ, ಹಿಂದಿ ಭಾಷೆಯು ಪರೀಕ್ಷಾ ವಿಷಯವಾಗಿರುವಂತೆ ಗೊತ್ತು ಮಾಡುವ ಯೋಜನೆಯು ಪರ್ಯಾಲೋಚನೆಯಲ್ಲಿದೆ.

ಶಿಕ್ಷಣ ಪಡೆದ ಉಪಾಧ್ಯಾಯರುಗಳನ್ನು ತಮ್ಮ ಸ್ಕೂಲುಗಳಲ್ಲಿ ನೇಮಿಸಿಕೊಳ್ಳುವ ಅವಶ್ಯಕತೆಯು ಹೆಚ್ಚಾಗಿಯೇ ಕಂಡುಬರುತ್ತಿದೆ. ಆದಕಾರಣ, ಬಾಣ್ಯನಹಳ್ಳಿ ಶಿಬಿರದಲ್ಲಿ 300 [illegible] ಪ್ರೈಮರಿ ಸ್ಕೂಲು ಉಪಾಧ್ಯಾಯರುಗಳಿಂದ ಕೂಡಿದ ಒಂದು ಜರೂರಾತಿ ಶಿಕ್ಷಣ ಶಿಬಿರವನ್ನು (ಎಂದರೆ, "ಎಮರ್ಜೆನ್ಸಿ ಟ್ರೈನಿಂಗ್ ಕ್ಯಾಂಪನ್ನು") ಏರ್ಪಡಿಸಲಾಗಿದೆ. ಇದರ ಜೊತೆಗೆ ಸಂಸ್ಥಾನದಲ್ಲಿ "ಬೇಸಿಕ್ ಎಮರ್ಜೆನ್ಸಿ ಟ್ರೈನಿಂಗ್ ಕ್ಯಾಂಪನ್ನು" ಏರ್ಪಡಿಸಲಾಗಿದೆ. ಇದರ ಜೊತೆಗೆ ಸಂಸ್ಥಾನದಲ್ಲಿ "ಬೇಸಿಕ್ ಶಿಕ್ಷಣ" ಕ್ರಮವನ್ನು ಜಾರಿಗೆ ತರುತ್ತಾ ಹೋಗುವುದಕ್ಕಾಗಿ ಬಹುಮಂದಿ ಉಪಾಧ್ಯಾಯರುಗಳಿಗೆ "ಬೇಸಿಕ್" ವಿದ್ಯಾಭ್ಯಾಸ ಕ್ರಮದಲ್ಲಿ ಶಿಕ್ಷಣ ಕೊಡಿಸುವುದಕ್ಕೆ ಕಾರ್ಯಕ್ರಮಗಳನ್ನು ಕೈಗೊಳ್ಳುತ್ತಿದ್ದೇವೆ.

ತಾವಾಗಿಯೇ "ಪ್ರೈಮರಿ" ಸ್ಕೂಲುಗಳಿಗೆ ತಮ್ಮ ಬಾಲಕ ಬಾಲಕಿಯರನ್ನು ಸೇರಿಸಿದವರು ಅಲ್ಲಿಯ ವ್ಯಾಸಂಗವು ಪೂರೈಸುವವರೆಗೂ ಸ್ಕೂಲುಗಳಿಂದ ಅವರನ್ನು ಬಿಡಿಸಕೂಡದೆಂಬ ನಿಯಮಾನುಸಾರವಾಗಿ, ಒತ್ತಾಯವಾಗಿ ಸ್ಕೂಲುಗಳಲ್ಲಿ ವಿದ್ಯಾರ್ಥಿಗಳು ಹಾಜರಿರಬೇಕಾದ ಯೋಜನೆಯನ್ನು ಸಂಸ್ಥಾನದಲ್ಲಿ ನಾಲ್ಕನೆಯ ತಂಡದ ಒಂಬತ್ತು ತಾಲ್ಲೂಕುಗಳಲ್ಲೂ ಜಾರಿಗೆ ತರಲಾಯಿತು. ಆದರ ಜೊತೆಗೆ ವಿದ್ಯಾಭ್ಯಾಸದಲ್ಲಿ ಸಂಪೂರ್ಣ ನಿರ್ಬಂಧಕ ಕ್ರಮವನ್ನು-ಎಂದರೆ ಸ್ಕೂಲುಗಳಿಗೆ ಹೋಗಬೇಕಾದ ವಯಸ್ಸಿನ ಮಕ್ಕಳನ್ನು ಸ್ಕೂಲುಗಳಿಗೆ ಸೇರಿಸುವುದು ನಿರ್ಬಂಧಕವಾಗಿರುವ ಕ್ರಮವನ್ನು-ಜಾರಿಗೆ ತರುವುದಕ್ಕೆ ಪ್ರತಿ ಡಿಸ್ಟ್ರಿಕ್ಟಿಗೆ ಒಂದು ತಾಲ್ಲೂಕಿನಂತೆ ಒಟ್ಟು 9 ತಾಲ್ಲೂಕುಗಳನ್ನು ಆರಿಸಿಕೊಳ್ಳಲಾಗಿದೆ. ಆಡಳಿತದ ಏರ್ಪಾಡಿಗೂ ಮತ್ತು ವಿದ್ಯಾಭ್ಯಾಸದ ಸಂಸ್ಥೆಗಳನ್ನು ಪರೀಕ್ಷಿಸುವುದಕ್ಕಿರುವ "ಇನ್‌ಸ್ಪೆಕ್ಟಿಂಗ್" ಏರ್ಪಾಡಿಗೂ ಸಂಬಂಧಪಟ್ಟ ಏರ್ಪಾಡುಗಳಿಗಾಗಿ ಈಗಿರತಕ್ಕ "ಯೂನಿಟ್" ವಿಭಾಗಗಳಲ್ಲಿ ಅವಶ್ಯವಾದ ಬದಲಾವಣೆಗಳನ್ನು ಮಾಡುತ್ತಿರಲಾಗಿದೆ. ಸಂಬಂಧಪಟ್ಟ ಗ್ರಾಮ ಪಂಚಾಯತಿಗಳವರ ಮೂಲಕ, ಆಯಾ ಪ್ರದೇಶದಲ್ಲಿ ಸುಲಭವಾಗಿ ದೊರೆಯತಕ್ಕ ಸಾಮಾನುಗಳನ್ನೇ ಉಪಯೋಗಿಸಿಕೊಂಡು, ಪ್ರೈಮರಿ ಸ್ಕೂಲ್

ಕಟ್ಟಡಗಳನ್ನು ಕಟ್ಟಿಸುವ ಯೋಜನೆಯೊಂದನ್ನು ಪ್ರಾರಂಭಿಸಬೇಕೆಂದು ತೀರ್ಮಾನಿಸಲಾಗಿದೆ. ಸಂಸ್ಥಾನದ ವಿದ್ಯಾಭ್ಯಾಸ ಸಂಸ್ಥೆಗಳಿಗೆ ಬೇಕಾದ ಬೆಂಚು, ಕುರ್ಚಿ, ಮೇಜು, ಮುಂತಾದ ಮರದ ಸಾಮಾನುಗಳು ಮತ್ತು ಇತರ ಸಲಕರಣೆಗಳನ್ನು ಒದಗಿಸುವುದಕ್ಕಾಗಿ, ಇವುಗಳನ್ನು ತಯಾರಿಸತಕ್ಕ ಒಂದು ಯಂತ್ರಶಾಲೆಯನ್ನು (ಎಂದರೆ ಒಂದು "ವರ್ಕ್‌ಶಾಪ್‌ಅನ್ನು") ಸ್ಥಾಪಿಸಬೇಕೆಂದೂ ತೀರ್ಮಾನಿಸಲಾಗಿದೆ. ಮುನಿಸಿಪಲ್ ಹೈಸ್ಕೂಲುಗಳಲ್ಲಿ ಕೆಲಸ ಮಾಡುತ್ತಿರುವ ಉಪಧ್ಯಾಯರುಗಳ ಸಂಬಳದ ಸ್ಕೇಲುಗಳನ್ನು ಇತ್ತೀಚೆಗೆ ಪುನಸ್ಸಮರ್ಶಿಸಿ ಬದಲಾಯಿಸಲಾಗಿದೆ- ಈ ವಿಚಾರದಲ್ಲಿ ಇಷ್ಟರಲ್ಲೇ ಸರ್ಕಾರಿ ಹುಕ್ಕುಂ ಸಾದರಾಗುವುದರಲ್ಲಿದೆ. "ನ್ಯಾಷನಲ್ ಕ್ಯಾಡೆಟ್ ಕೋರ್ಸ್" ಸಂಸ್ಥೆಗೆ ಸೇರಿಸಲ್ಪಡತಕ್ಕ ಇತರ ವಿದ್ಯಾರ್ಥಿಗಳಗೂ ನಿರ್ಧಿಷ್ಟವಾದ ಒಂದು ಬಗೆಯ ಸೈನಿಕ ಶಿಸ್ತಿನ ಕವಾಯತನ್ನು (ಎಂದರೆ "ಮಿಲಿಟರಿ ಡ್ರಿಲ್") ಕಲಿಸಬೇಕೆಂದೂ ಉದ್ದೇಶಿಸಲಾಗಿದೆ. ಇದಕ್ಕೆ ಸಂಬಂಧಪಟ್ಟ ತಪಸೀಲುಗಳು ಪರಿಶೀಲನೆಯಲ್ಲಿವೆ.

ಸಂಸ್ಥಾನದ ಬಾಲಕ ಬಾಲಕಿಯರಿಗೆ ಪರಮಾವಧಿ ಪರಿಮಾಣದ ವಿದ್ಯಾಭ್ಯಾಸ ಸೌಕರ‍್ಯಗಳನ್ನು ನಾನಾ ದರ್ಜೆಗಳ ಶಿಕ್ಷಣ ಕ್ರಮಗಳಲ್ಲಿ ಒದಗಿಸಿಕೊಡುವುದಕ್ಕೆ ಕಾರ್ಯಕ್ರಮವನ್ನು ಕೈಗೊಂಡಿದೆ ಎಂಬುದು ಇದರಿಂದ ವ್ಯಕ್ತವಾಗುವುದಾಗಿದೆ. ಮುಂದೆ ವಿದ್ಯಾಭ್ಯಾಸ ಕ್ರಮದಲ್ಲಿ ಮುಖ್ಯವಾಗಿ ಪಾರಿಭಾಷಿಕ ವಿಷಯಗಳ ಶಿಕ್ಷಣವೇ ಹೆಚ್ಚು ಮುಂದುವರಿಯಬೇಕೆಂಬುದು ಸ್ಪಷ್ಟವಾಗಿಯೇ ಇರುವ ಅಂಶ.

ವೈದ್ಯಸಹಾಯದ ಮತ್ತು ಜನಾರೋಗ್ಯರಕ್ಷಣೆಯನ್ನೊದಗಿಸುವುದರಲ್ಲೂ ಜಾಗ್ರತೆಯಾಗಿ ಮೇಲ್ಪಾಟುಗಳು ನಡೆಯುತ್ತಿವೆ. ಗ್ರಾಮಾಂತರ ಪ್ರದೇಶಗಳಲ್ಲಿ ಹಲವೆಡೆಗಳಲ್ಲಿ ಸ್ತ್ರೀಯರಿಗೂ ಮತ್ತು ಪುರುಷರಿಗೂ ಚಿಕಿತ್ಸೆ ಶಾಲೆಗಳನ್ನು ತೆರೆಯಲಾಗಿದೆ. ಬೇಗ ನಡೆಯಬೇಕಾದ ಅಭಿವೃದ್ಧಿ ಯೋಜನೆಗಳೆಂದು ಅಂಗೀಕೃತವಾಗಿರತಕ್ಕ ಕೆಲವು ಯೋಜನೆಗಳಿವೆ; ಆ ಯೋಜನೆಗಳಲ್ಲಿ, ಪ್ರತಿ ತಾಲ್ಲೂಕಿಗೂ ಒಬ್ಬರು ಲೇಡಿ ಡಾಕ್ಟರವರ ನೇಮಕ, ಮತ್ತು ಪ್ರತಿ ತಾಲ್ಲೂಕಿಗೂ ಒಂದು ಹೆರಿಗೆ ವಾರ್ಡು, ಮುಂತಾದವೂ ಮತ್ತು 6 ಜನ ಮಹಿಳೆಯರಿಗೆ ಚಿಕಿತ್ಸೆ ನಡೆಯಲು ಸ್ಥಳಾವಕಾಶವೂ ಇರತಕ್ಕ ಒಂದು ವಾರ್ಡು ಕಟ್ಟಿಸುವುದು- ಇವುಗಳೂ ಸೇರಿವೆ. ಮಲೇರಿಯಾ ಹಾವಳಿಯನ್ನು ಹತೋಟಿಗೆ ತರುವುದಕ್ಕಾಗಿ ಏರ್ಪಟ್ಟ "ಕೃಷ್ಣರಾಜನಗರ ಆರೋಗ್ಯರಕ್ಷಣೆಯ ಯೋಜನೆಯು (ಕೃಷ್ಣರಾಜನಗರ್ ಹೆಲ್ತ್ ಸ್ಕೀಂ) ಆಖೆರಾಗಿ ಸಿದ್ಧಗೊಳಿಸಲ್ಪಟ್ಟಿದು; ಕೃಷ್ಣ ರಾಜನಗರ ತಾಲ್ಲೂಕಿನಲ್ಲಿ ಈ ತಿಂಗಳು 15ನೆಯ ತಾರೀಖು ಭಾರಿ ಪ್ರಮಾಣದ ಮಲೇರಿಯಾ ರೋಗ ನಿವಾರಕ ದ್ರವಗಳನ್ನು ಎರಚುವ ಕಾರ್ಯಕ್ರಮವನ್ನು ಕೈಗೊಳ್ಳಲಾಗುತ್ತದೆ. ಈ ವಿದ್ಯಮಾನವನ್ನು ಅನುಸರಿಸುವುದರಿಂದ, ನೀರಾವರಿ ಪ್ರದೇಶಕ್ಕೆ ಸೇರಿದವರಾಗಿ ಬಹಳ ಕಾಲದಿಂದ ಮಲೇರಿಯಾ ರೋಗದಿಂದ ನರಳುತ್ತಿರುವವರಿಗೆ ಅನುಕೂಲವಾಗುವುದೆಂದು ನಿರೀಕ್ಷಿಸಲಾಗಿದೆ. ಮಲೆನಾಡು ಪ್ರಾಂತ್ಯದಲ್ಲಿ ಸ್ಥಾಪಿಸಬೇಕೆಂದು ಉದ್ದೇಶಿಸಿರತಕ್ಕ 120 ಆರೋಗ್ಯಕೇಂದ್ರಗಳಿಗೆ ಸಂಬಂಧಪಟ್ಟ ಕಾರ್ಯಕ್ರಮವನ್ನೂ ಆ ಪ್ರದೇಶದಲ್ಲಿ ಮಳೆಗಾಲ ಕಳೆದಕೂಡಲೆ ಜಾರಿಗೆ ತರಲಾಗುತ್ತದೆ. ಮಲೆನಾಡು ಪ್ರಾಂತದಲ್ಲಿ ಮಲೇರಿಯಾ ಹಾವಳಿಯನ್ನು ತಡೆಗಟ್ಟುವುದಕ್ಕಾಗಿ ಬಡ್ಜೆಟ್ಟಿನಲ್ಲಿ 12 ಲಕ್ಷ ರೂಪಾಯಿಗಳ ಮೊಬಲಗುಗಳನ್ನು ಒದಗಿಸಲಾಗಿದೆ. ಕ್ಷಯರೋಗದ ವಿಷಯದಲ್ಲಿ, ಬೆಂಗಳೂರಿನಲ್ಲಿರುವ

ಕ್ಷಯರೋಗದ ಆಸ್ಪತ್ರೆಗಳು ಮಾತ್ರವೇ ಅಲ್ಲವೆ, ಸಂಸ್ಥಾನಾದ್ಯಂತ ಇರತಕ್ಕ ಕ್ಷಯರೋಗದ ಎಲ್ಲ ಆಸ್ಪತ್ರೆಗಳ ಕೆಲಸಗಳಲ್ಲಿಯೂ ಪರಸ್ಪರ ಹೊಂದಾಣಿಕೆಯನ್ನುಂಟು ಮಾಡುವುದಕ್ಕಾಗಿ ಕ್ಷಯರೋಗ ನಿವಾರಣ ಡೈರೆಕ್ಟರ್‌ರವರು ತಮ್ಮ ಕಸಬೆಯನ್ನು ಬೆಂಗಳೂರಿಗೆ ವರ್ಗಾಯಿಸಿಕೊಳ್ಳಬೇಕೆಂದು ಅವರನ್ನು ಕೋರಲಾಗಿದೆ. ತುಮಕೂರಿನಲ್ಲಿ ಬಂದ ಕ್ಷಯರೋಗ ಚಿಕಿತ್ಸಾಲಯವನ್ನು ಏರ್ಪಡಿಸುವ ಕೆಲಸವು ಈ ತಿಂಗಳು ನಡೆಯುವುದಾಗಿದೆ. ಅದೇ ರೀತಿ ಮಂಡ್ಯಾದಲ್ಲಿಯೂ ಮತ್ತು ಕೋಲಾರದಲ್ಲಿಯೂ ಸಹ, ಕ್ಷಯರೋಗದ ಚಿಕಿತ್ಸಾಲಯಗಳು ಏರ್ಪಾಡಾಗುವಂತೆ ಗೊತ್ತಾಗಿದೆ. ಬಹು ಮಂದಿಗಳಿಗೆ 'ರೇಡಿಯಾಲಜಿ ಚಿಕಿತ್ಸೆ ದೊರೆಯುವುದಕ್ಕೆ ಏರ್ಪಾಡುಗಳೆಲ್ಲವೂ ಬಹು ಮಟ್ಟಿಗೆ ಪೂರೈಸಿವೆ. ಇದಕ್ಕೆ ಬೇಕಾದ ಸಲಕರಣೆಗಳೆಲ್ಲವನ್ನೂ ಸಿದ್ಧಪಡಿಸಿಕೊಳ್ಳಲಾಗಿದೆ. ಈ ಕೆಲಸವು ಜಾಗ್ರತೆ ಪ್ರಾರಂಭವಾಗುವುದಾಗಿದೆ.

ಇಂಡಿಯಾ ಸರ್ಕಾರದವರ ಪ್ರತಿನಿಧಿ ಮಂಡಲಿಯವರರು (ಎಂದರೆ "ಡೆಲಿಗೇಷನ್" ಮೇಲೆ ಕಳುಹಿಸಲ್ಪಟ್ಟವರು) ಈಚೆಗೆ ಬೆಂಗಳೂರಿಗೆ ಬಂದಿದ್ದರು. ಆಗ ಅವರು ಬೆಂಗಳೂರಿನಲ್ಲಿರುವ ಮೆದುಳುರೋಗದ ಚಿಕಿತ್ಸೆಯ ಆಸ್ಪತ್ರೆಯನ್ನು ಪ್ರಾರಂಭಿಸಿ, ಅಲ್ಲಿನ ಕೆಲಸ ಕಾರ್ಯಗಳನ್ನು ಪರಿಶೀಲಿಸಿ, ತಮ್ಮ ಮೆಚ್ಚಿಗೆಯನ್ನು ಸೂಚಿಸಿದರು ಇಂಡಿಯಾ ಸರ್ಕಾರದವರ ಸಹಾಯವನ್ನು ಪಡೆಯಲು ಈ ಸಂಸ್ಥೆಯ ದರ್ಜೆಯನ್ನು ಹೆಚ್ಚಿಸುವುದಕ್ಕೆ ಸಂಬಂಧಪಟ್ಟ ಸಲಹೆಗಳು ಸರ್ಕಾರದವರ ತೀವ್ರಾಲೋಚನೆಯಲ್ಲಿವೆ.

ಪ್ರಪಂಚದ ಜನಾರೋಗ್ಯ ರಕ್ಷಣೆ ಸಂಸ್ಥೆಯ ಪ್ರದೇಶ ಸಂಬಂಧವಾದ ಸಂಸ್ಥೆಯನ್ನು ಮೈಸೂರು ನಗರದಲ್ಲಿ ಏರ್ಪಡಿಸಬೇಕೆಂದು ಆರಿಸಿಕೊಂಡಿದ್ದ ಅಂಶವನ್ನು ನೀವೆಲ್ಲರೂ ವೃತ್ತಪತ್ರಿಕೆಗಳಲ್ಲಿ ಓದಿರಬಹುದು ಆ ಸಂಸ್ಥೆಯನ್ನು ಮೈಸೂರಿನಲ್ಲೇ ಏರ್ಪಡಿಸಿದ್ದರೆ ಸಂಸ್ಥಾನದ ಪ್ರಜೆಗಳಿಗೆ ಎಷ್ಟೋ ಪ್ರಯೋಜನವಾಗುತ್ತಿದ್ದಿತು. ಆದರ ಅವರು ನಿರ್ಧರಿಸಿದ್ದನ್ನು ಬದಲಾಯಿಸುವ ಉದ್ದೇಶವಿದೆಯೆಂದೂ ಮತ್ತು ಕಸಬೆಯು ಮೈಸೂರು ನಗರಕ್ಕೆ ಬದಲಾಗಿ ದೆಹಲಿಯಲ್ಲಿ ಏರ್ಪಾಡಾಗಬಹುದೆಂದೂ ಇತ್ತೀಚಿನ ವೃತ್ತ ಪತ್ರಿಕೆಗಳಲ್ಲಿ ವರದಿಯಾಗಿದೆ. ಅದಕ್ಕಾಗಿ ನಾನು ವಿಷಾದಿಸುತ್ತೇನೆ. ಈ ವರದಿಯು ಎಷ್ಟರ ಮಟ್ಟಿಗೆ ನಿಜವೆಂಬುದನ್ನು ನಾನು ಹೇಳಲಾರೆ. ಆ ವಿಷಯವು ಹೇಗಾದರೂ ಇರಲಿ. ಮೊದಲಿನ ನಿರ್ಧಾರದಂತೆ ಮೈಸೂರಿನಲ್ಲಿಯೇ ಅದನ್ನು ಏರ್ಪಡಿಸಬೇಕೆಂದು ಇಂಡಿಯಾ ಸರ್ಕಾರದವರನ್ನು ಒತ್ತಾಯಪಡಿಸಿ, ನಾವು ಬಿನ್ನಹ ಮಾಡಿಕೊಂಡಿದ್ದೇವೆ.

ಸಂಸ್ಥಾನದಲ್ಲಿ ವೈದ್ಯಸಹಾಯವನ್ನು ಬಡಾಯಿಸುವುದಕ್ಕೆ, ಸಾಕಾದಷ್ಟು ಸಂಖ್ಯೆಯಲ್ಲಿ ಡಾಕ್ಟರುಗಳು ಮತ್ತು ಇತರ ಸಿಬ್ಬಂದಿಯು ಇಲ್ಲದಿರುವುದರಿಂದ ತೊಂದರೆಯಾಗಿ, ಅದು ಮಟ್ಟುಬಿದ್ದಿದೆ. ಈ ಕೊರತೆಯನ್ನು ಪರಿಹರಿಸಲು ಡಾಕ್ಟರುಗಳ ಸಂಬಳವನ್ನು ಮತ್ತು ಬಡ್ತಿ ಸಂಭವಗಳನ್ನು ಇತ್ತೀಚೆಗೆ ಉತ್ತಮಪಡಿಸಲಾಗಿದೆ. ಈ ವಿಷಯದಲ್ಲಿ ಇನ್ನೂ ಅನುಕೂಲ ಮಾಡಿಕೊಡುವುದಕ್ಕೆ ಸಂಬಂಧಪಟ್ಟ ಹಲವು ಯೋಜನೆಗಳು ಸರ್ಕಾರದವರ ತೀವ್ರಾಲೋಚನೆಯಲ್ಲಿದೆ. ಮತ್ತೊಂದು ಮೆಡಿಕಲ್ ಕಾಲೇಜನ್ನು ಸ್ಥಾಪಿಸುವ ವಿಷಯವನ್ನೂ ಸಹ ಸರ್ಕಾರದವರು ಯೋಚನೆ ಮಾಡುತ್ತಿದ್ದಾರೆ. ತಮಗೆ ದೊರೆಯಬಹುದಾದ ಡಾಕ್ಟರುಗಳನ್ನು ನೇಮಕಮಾಡಿಕೊಂಡು ಪ್ರಯೋಜನ ಪಡೆಯಲನುಕೂಲವಾಗುವಂತೆ ಸೆಂಟ್ರಲ್ ರಿಕ್ರೂಟ್ಮೆಂಟ್ ಬೋರ್ಡಿನ ನಿಬಂಧನೆಗಳನ್ನು ಅನುಸರಿಸಿ ವರ್ತಿಸುವುದನ್ನೂ ಹಂಗಾಮಿಯಾಗಿ ತಪ್ಪಿಸಲಾಗಿದೆ.

ಇನ್ನು ರೈಲ್ವೆಗಳ ವಿಚಾರ. ರೈಲ್ವೆಗಳಿಗೆ ಸಂಬಂಧಪಟ್ಟ ಕೆಲಸಗಳು ಮತ್ತಷ್ಟು ದಕ್ಷತೆಯಿಂದ ನಡೆಯುವಂತೆ ಮಾಡುವದಕ್ಕಾಗಿಯೂ ಮತ್ತು ಜನಗಳಿಗೆ ಅವುಗಳಿಂದ ಹೆಚ್ಚು ಅನುಕೂಲ ದೊರೆಯುವಂತೆ ಮಾಡುವುದಕ್ಕಾಗಿಯೂ ಅವಶ್ಯಕ ಕಂಡ ಎಲ್ಲ ಸುಧಾರಣೆಗಳನ್ನೂ ಜಾರಿಯಲ್ಲಿ ತರಲು ಸರ್ಕಾರದವರು ತೀವ್ರಾಶಕ್ತಿಯಿಂದ ವರ್ತಿಸುತ್ತಿದ್ದಾರೆ. ಕೆಲಸ ಮಾಡುವ ಇಂಜಿನ್ನುಗಳು ತಕ್ಕಷ್ಟು ಇರಲಿಲ್ಲವಾದ್ದರಿಂದ, ಸ್ವಲ್ಪ ಆತಂಕ ಉಂಟಾಗಿದ್ದಿತು. ಹೊಸ ಇಂಜಿನ್ನುಗಳನ್ನು ಕೂಡಲೆ ಒದಗಿಸಿಕೊಳ್ಳಲು ವಿಶೇಷ ರೀತಿಯ ಪ್ರಯತ್ನಗಳು ಜರುಗಿರುವು. ಅದರಿಂದ ಅನುಕೂಲವಾಯಿತು. ನಾವು ಹಾಗೆ ಅದನ್ನು ಪ್ರಯತ್ನ ಮಾಡದೆ ಹೋಗಿದ್ದಲ್ಲಿ ಹೊಸ ಇಂಜಿನ್ನುಗಳನ್ನು ಒದಗಿಸಲು ನಾವು ಬಹು ದೀರ್ಘಕಾಲದವರೆಗೆ ಕಾಯುತ್ತಿರುವುದು ತಪ್ಪುತ್ತಿರಲಿಲ್ಲ. ಬರ್ಮಾ ಸರ್ಕಾರದವರು ಮತ್ತು ಜೋಧ್‌ಪುರ್ ಸರ್ಕಾರದವರು ಇಂಜಿನ್ನುಗಳಿಗಾಗಿ ಮೊದಲೆ ಬರೆದಿದ್ದರು. ಈಗ ಅವರುಗಳಿಗೆ ಬರುವ ಇಂಜಿನ್ನುಗಳ ಪೈಕಿ ಬರ್ಮಾ ಸರ್ಕಾರದವರು 10 ಇಂಜಿನ್ನುಗಳನ್ನು ತಮಗೆ ಒದಗಿಸುವುದಾಗಿ ದೊಡ್ಡ ಮನಸ್ಸಿನಿಂದ ಒಪ್ಪಿರುತ್ತಾರೆ. ಅದಕ್ಕಾಗಿ ಈ ಎರಡೂ ಸರ್ಕಾರದವರಿಗೂ ನಾವು ಕೃತಜ್ಞರಾಗಿದ್ದೇವೆ. ಈ ಇಂಜಿನ್ನುಗಳು ತಮಗೆ ದೊರೆತ ಮೇಲೆ ರೈಲುಗಳು ಹೆಚ್ಚು ವೇಗದಲ್ಲಿ ಸಂಚರಿಸುವಂತೆ ಆಗುತ್ತದೆಂದೂ ಮತ್ತು ಆಗ್ಗೆ ಹೆಚ್ಚು ಹೆಚ್ಚು ಗಾಡಿಗಳನ್ನು ಜೋಡಿಸಲು ಅನುಕೂಲವುಂಟಾಗುವುದರಿಂದ ಪ್ರಯಾಣಿಕರಿಗೆ ಹೆಚ್ಚು ಸ್ಥಳವಸತಿ ದೊರೆಯುವಂತಾಗುತ್ತದೆಂದೂ ನಮಗೆ ಭರವಸೆಯಿದೆ. ಲೋಕ ಪಾವನೀ ನದಿಯ ಮೇಲೆ ಒಂದೇ ಒಂದು ಕಣ್ಣಿನ ಸೇತುವೆಯನ್ನು ಕಟ್ಟಿಸುವ ಕೆಲಸವು ಕೇವಲ ಅಲ್ಪಕಾಲದಲ್ಲಿಯೇ ಪೂರೈಸಿತು. ಮೈಸೂರು ಸಂಸ್ಥಾನದಲ್ಲಿ ಇಂಥ ಸೇತುವೆಯು ನಿರ್ಮಿತವಾಗಿರುವುದು ಇದೇ ಮೊದಲು. ಇದರ ಮೇಲೆ ರೈಲಿನ ಸಂಚಾರವು ನಡೆಯುವ ಪ್ರಾರಂಭ ಮಹೋತ್ಸವವನ್ನು ಶ್ರೀಮನ್ಮಹಾರಾಜರವರು ಈಗ್ಗೆ ಕೆಲವು ದಿನಗಳ ಹಿಂದೆ ನೆರವೇರಿಸಿ ಕೃಪೆಮಾಡಿದರು.

ಸಂಸ್ಥಾನಕ್ಕೆ ಮಾತ್ರವೇ ಅಲ್ಲದೆ, ಒಟ್ಟು ದಕ್ಷಿಣ ಭಾರತಕ್ಕೆ ಅತಿ ಪ್ರಾಮುಖ್ಯವಾಗಿರುವ ಕಾರಣ, ಚಾಮರಾಜನಗರದಿಂದ ಸತ್ಯಮಂಗಲಕ್ಕೆ ರೈಲುಮಾರ್ಗವನ್ನೇರ್ಪಡಿಸಿ ಸಹಾಯಮಾಡಬೇಕೆಂದು ನಾವು ಬಹಳ ಕಾಲದಿಂದಲೂ ಒತ್ತಾಯಪಡಿಸುತ್ತಾ ಬಂದಿದ್ದೇವೆ. ನಾವು ಪದೇ ಪದೇ ಮನವಿಮಾಡಿಕೊಂಡ ನಂತರ ಇಂಡಿಯಾ ಸರ್ಕಾರದವರು ಈ ರೈಲು ಹಾಕುವ ಪ್ರದೇಶದ "ಸರ್ವೆ" ಪರಿಶೀಲನೆಯು ಸೌತ್ ಇಂಡಿಯಾ ರೈಲ್ವೆ ಕಂಪನಿಯವರಿಂದ ನಡೆಯುವುದಕ್ಕೆ ಸಮ್ಮತ್ತಿಸಿದ್ದಾರೆ. ಇದು ಸಂತೋಷಕರವಾದ ವಿಷಯವಾಗಿದೆ. ಈ ಉದ್ದೇಶಕ್ಕೆ ಅವಶ್ಯಕವಾದ ಹಣವನ್ನು ನಮ್ಮ ಸರ್ಕಾರದವರು ಆ ರೈಲ್ವೇ ಲೈನನ್ನು ಹಾಕುವ ಕೆಲಸವು ಶೀಘ್ರವಾಗಿ ನೆರವೇರುತ್ತದೆಂದು ನಾನು ಮನಃಪೂರ್ವಕವಾಗಿ ಹಾರೈಸುತ್ತೇನೆ.

ಸಂಸ್ಥಾನದ ವ್ಯಾಪಾರಕ್ಕೂ ಮತ್ತು ಕೈಗಾರಿಕೆಗಳಿಗೂ ಉತ್ತೇಜನ ದೊರೆಯುವುದಕ್ಕಾಗಿ ಸಂಸ್ಥಾನದ ಸಮೀಪದಲ್ಲಿ ಒಂದು ಬಂದರು ಏರ್ಪಡಿಸಬೇಕಾದುದು ಅವಶ್ಯಕ. ಆದು ಬಹಳ ಕಾಲದಿಂದಲೂ ನೆರವೇರದೆ ಹಾಗೆಯೇ ಉಳಿದಿದೆ. ಇದು ಅತ್ಯಾವಶ್ಯಕವಾಗಿ ಬೇಕಾಗಿದೆ. ಇಂಥ ಬಂದರು ಭಟ್ಕಳದಲ್ಲಿ ಏರ್ಪಡಿಸಲ್ಪಡಬೇಕೆಂಬುದಾಗಿ ಮೈಸೂರು ಸಂಸ್ಥಾನದ ಪರವಾಗಿ ಏಕರೀತಿಯಾಗಿ ಒತ್ತಾಯ ಪಡಿಸಿ ಬಿನ್ನೈಸಲಾಗಿದೆ. ಮರ್ಮಾಗೋವಾ ಮತ್ತು ಕೊಚ್ಚಿ ಬಂದರುಗಳಿಗೆ ಮಧ್ಯ ದಾರಿಯಲ್ಲಿ ಒಂದು ದೊಡ್ಡ (ಮೇಜರ್) ಬಂದರನ್ನು ಸ್ಥಾಪಿಸುವುದಕ್ಕೆ ಅತ್ಯಂತ ಸೂಕ್ತವಾದ

ಪ್ರದೇಶವು ಯಾವುದೆಂದು ವಿಚಾರಣೆ ನಡೆಸಿ ಪರಿಶೀಲಿಸಿ ಆ ವಿಷಯವಾಗಿ ವರದಿಯೊಂದನ್ನೊಪ್ಪಿಸುವುದಕ್ಕಾಗಿ ಇಂಡಿಯಾ ಸರ್ಕಾರದವರಿಂದ ನೇಮಕವಾಗಿದ್ದ ಪಾರಿಭಾಷಿಕ ("ಟೆಕ್ನಿಕಲ್") ಸಮಿತಿಯವರು ಮೈಸೂರು ಸಂಸ್ಥಾನಕ್ಕೂ ಭೇಟಿಕೊಟ್ಟಿದ್ದರು. ಭಟ್ಕಳ ಬಂದರಿನ ಗುಣಾಂಶಗಳನ್ನು ಆ ಸಮಿತಿಯವರಿಗೆ ಒತ್ತಿ ಹೇಳಿ ಬಿನ್ನಹ ಮಾಡಿಕೊಳ್ಳುವುದಕ್ಕೆ ಮೈಸೂರು ಸರ್ಕಾರದವರು ಆ ಸದವಕಾಶವನ್ನು ಉಪಯೋಗಿಸಿಕೊಂಡರು. ಸರ್ ಎಂ. ವಿಶ್ವೇಶ್ವರಯ್ಯನವರು ಭಟ್ಕಳದ ಉಪಯುಕ್ತತೆಯ ವಿಚಾರವಾಗಿ ಆ ಸಮಿತಿಯವರ ಮುಂದೆ ಬೊಂಬಾಯಿ ನಗರದಲ್ಲಿ ಸಾಕ್ಷ್ಯವನ್ನೀಯುವುದಕ್ಕೆ ನಮ್ಮ ಪ್ರಾರ್ಥನೆಯನ್ನು ಅಂಗೀಕರಿಸಿ ದಯವಿಟ್ಟು ಸಮ್ಮತಿಸಿದರು. ಸಮಿತಿಯವರ ವರದಿ ಇನ್ನೂ ದೊರೆತಿಲ್ಲ. ಕಾಂಡ್ಲದಲ್ಲಿ ಕಟ್ಟುತ್ತಿರುವ ಬಂದರಿನ ಕೆಲಸವು ಪೂರೈಸುವವರೆಗೆ ದ್ರವ್ಯಸಂಬಂಧವಾದ ಮತ್ತು ಇತರ ಕಾರಣಗಳ ದೆಸೆಯಿಂದ ಪಶ್ಚಿಮ ಸಮುದ್ರತೀರ ದಡದಲ್ಲಿ ಇನ್ನೊಂದು ಬಂದರನ್ನು ಏರ್ಪಡಿಸುವ ಕೆಲಸವನ್ನು ಸದ್ಯದಲ್ಲಿ ತಡೆದಿಡಬಹುದೆಂದು ತೋರುತ್ತದೆ. ಅದೇನೇ ಇರಲಿ, ಮೈಸೂರು ಸಂಸ್ಥಾನಕ್ಕೊಂದು ಬಂದರನ್ನು ಏರ್ಪಡಿಸಿಕೊಡಬೇಕೆಂದು ತಮಗಿರುವ ಅವಶ್ಯಕತೆಯನ್ನು ಒತ್ತಿ ಹೇಳಿ ಇಂಡಿಯಾ ಸರ್ಕಾರದವರಿಗೆ ತಿಳಿಯಪಡಿಸುತ್ತಲೇ ಇರುತ್ತೇವೆ. ಮತ್ತು ಅದನ್ನು ಜಾಗ್ರತೆಯಾಗಿ ನೆರವೇರಿಸಿ ಕೊಡಬೇಕೆಂದು ಬಿನ್ನೈಸುತ್ತಲೇ ಇರುತ್ತೇವೆ.

ರೈಲ್ವೆ ಸಂಚಾರದ ವ್ಯವಸ್ಥೆಯು ಮಾತ್ರವಲ್ಲದೆ ಅದರ ಜೊತೆಗೆ ಸಂಸ್ಥಾನದಲ್ಲಿ ಬಸ್ಸು ಸಂಚಾರದ ವ್ಯವಸ್ಥೆಯನ್ನೂ ಉತ್ತಮಗೊಳಿಸುವುದು ಜರೂರಾಗಿ ಕೈಕೊಳ್ಳಬೇಕಾದ ಅವಶ್ಯಕಾರ್ಯವೆಂಬುದು ಬಹಳ ಕಾಲದಿಂದಲೂ ಮನವರಿಕೆಯಾಗಿದ್ದ ವಿಷಯ. ಇತ್ತೀಚಿನವರೆಗೂ ಬಸ್ಸುಗಳ ಸಂಚಾರ ವ್ಯವಸ್ಥೆಯು ಖಾಸಗಿ ಜನಗಳ ಕೈಯಲ್ಲಿಯೇ ಇದ್ದಿತು. ಈ ವ್ಯವಸ್ಥೆಯ ವಿಚಾರವನ್ನು ಕೂಲಕುಂಷವಾಗಿ ಪರ್ಯಾಲೋಚಿಸಿ ಸಂಸ್ಥಾನದ ಎಲ್ಲ ಭಾಗಗಳಲ್ಲಿಯೂ ನಡೆಯುತ್ತಿರುವ ಮೋಟಾರು ಬಸ್ಸುಗಳ ಸಂಚಾರ ವ್ಯವಸ್ಥೆಗಳನ್ನು ಸರ್ಕಾರದವರೇ ವಹಿಸಿಕೊಂಡು ಅವರು ಒಂದು ಕೇಂದ್ರ ಸಂಸ್ಥೆಯನ್ನು ಏರ್ಪಡಿಸಬೇಕೆಂದು ಎಕನಾಮಿಕ್ ಕಾನ್‌ಫೆರೆನ್‌ಸಿನ" ಸಮಿತಿಗಳಲ್ಲಿ ಈ ವಿಚಾರಕ್ಕೆ ಸಂಬಂಧಪಟ್ಟ ಕಾರ್ಯನೀತಿಯ ಸಮಿತಿಯವರು (ಎಂದರೆ "ಪಾಲಿಸಿ ಕಮಿಟಿ" ಯವರು) ನಿರ್ಣಯ ಮಾಡಿದರು. ಸಂಸ್ಥಾನದಲ್ಲಿ ರಸ್ತೆ ಸಂಚಾರವನ್ನು ರಾಷ್ಟ್ರೀಕರಣ ಮಾಡುವುದಕ್ಕೆ ಸಂಬಂಧಪಟ್ಟ ಕಾರ್ಯನೀತಿಯನ್ನು ಸರ್ಕಾರದವರು ಅಂಗೀಕರಿಸಿದರು. ಮತ್ತು ಬೆಂಗಳೂರಿನಿಂದ ಸಂಸ್ಥಾನದ ಇತರ ಸ್ಥಳಗಳಿಗೆ ಹೋಗಿಬರುವ ಬಸ್ಸು ಸರ್ವಿಸುಗಳನ್ನೆಲ್ಲವನ್ನೂ ಆಗಲಿ ಇಲ್ಲವೇ ಅವುಗಳಲ್ಲಿ ಕೆಲವು ಸರ್ವಿಸುಗಳನ್ನಾದರೂ ಆಗಲಿ ಈ ಸಂಬಂಧದಲ್ಲಿಷ್ಟೆ ಪ್ರಥಮಕಾರ್ಯ ಕ್ರಮವಾಗಿ ಸರ್ಕಾರದವರು ನಡೆಯಿಸಬೇಕೆಂದು ತೀರ್ಮಾನಿಸಲಾಯಿತು. ಅದರಂತೆ, ಈಗ ಸಂಸ್ಥಾನದಲ್ಲಿ ಸರ್ಕಾರಿ ಬಸ್ಸುಗಳು 15 ಮಾರ್ಗಗಳಲ್ಲಿ ಸಂಚರಿಸುತ್ತಿವೆ. ಈ ವರೆಗೂ ಬಂದಿರುವ ವರದಿಗಳನ್ನು ಪರಿಶೀಲಿಸುವುದಾದರೆ, ಸಾರ್ವಜನಿಕರು ಸರ್ಕಾರಿ ಬಸ್ಸು ಸರ್ವಿಸುಗಳ ಈ ವ್ಯವಸ್ಥೆಯು ಚೆನ್ನಾಗಿರುವುದೆಂದು ತೃಪ್ತಿಪಟ್ಟಿರುವುದಾಗಿ ಕಂಡುಬರುತ್ತದೆ. ಬಹು ಕಾಲದಿಂದಲೂ ಇದ್ದ ಕೊರತೆಯು ಬಸ್ಸುಗಳ ರಾಷ್ಟ್ರೀಕರಣದ ಮೂಲಕ ಈ ರೀತಿ ಪರಿಹಾರವಾಯಿತು. ಆದಷ್ಟು ಬೇಗ ಸಂಸ್ಥಾನಕ್ಕೆಲ್ಲ ಪೂರ್ತಿಯಾಗಿ ಹರಡುವಂತೆ ರಸ್ತೆ ಸಂಚಾರ ಯೋಜನೆಯನ್ನು ರಾಷ್ಟ್ರೀಕರಣ ಮಾಡುವ ಯೋಜನೆಯನ್ನು ಸರ್ಕಾರದವರು ಶೀಘ್ರವಾಗಿ ಆಚರಣೆಗೆ ತರುತ್ತಾರೆ.

ಮೈಸೂರು-ಬೆಂಗಳೂರು ಶಾಖೆಯ ರೈಲುಗಳು ವಿದ್ಯುಚ್ಛಕ್ತಿಯಿಂದ ನಡೆಯುವಂತೆ ಏರ್ಪಡಿಸುವ ವಿಚಾರವೂ ಸರ್ಕಾರದವರ ತೀವ್ರಾಲೋಚನೆಯಲ್ಲಿದೆ. ಬೆಂಗಳೂರು ನಗರದಿಂದ ಓಡಾಡುವ ಶಾಖಾ ರೈಲ್ವೆಗಳೂ ವಿದ್ಯುಚ್ಛಕ್ತಿಯಿಂದಲೇ ನಡೆಯುವಂತೆ ಮಾಡುವ ವಿಚಾರವೂ ಮತ್ತು ಬೆಂಗಳೂರು ಸಿಟಿಯಲ್ಲಿ "ಟ್ರಾಲಿ" ಬಸ್ಸುಗಳ ಸಂಚಾರ ಸೌಕರ್ಯವನ್ನೇರ್ಪಡಿಸುವ ವಿಚಾರವೂ ಸರ್ಕಾರದವರ ಗಮನದಲ್ಲಿದೆ.

ಪ್ರಸಕ್ತ ವರ್ಷದಲ್ಲಿ, ಟವನುಗಳ ಮತ್ತು ಮುನಿಸಿಪಾಲಿಟಿಗಳ ಮೇಲ್ಪಾಟಿಗಾಗಿ ಅನೇಕ ಯೋಜನೆಗಳನ್ನು ತ್ವರೆಯಾಗಿ ನೆರವೇರಿಸಲಾಯಿತು. ಅವುಗಳಲ್ಲಿ ಒಳಚರಂಡಿ ಯೋಜನೆಗಳೂ ಮತ್ತು ನೀರುಸರಬರಾಯಿ ಯೋಜನೆಗಳೂ ಮುಖ್ಯವಾಗಿದ್ದುವು.

ಗ್ರಾಮಗಳೂ ಅವುಗಳ ನಿವಾಸಿಗಳೂ ದೇಶದ ಬೆನ್ನು ಮೂಳೆಯಂತಿರುವ ಸಂಗತಿಯನ್ನು ಎಲ್ಲರೂ ಒಪ್ಪುತ್ತಾರೆ. ಗ್ರಾಮಾಂತರ ಪ್ರದೇಶಗಳು ಎಲ್ಲ ವಿಧಗಳಲ್ಲೂ ಅಭಿವೃದ್ಧಿಯಾಗುವಂತೆ ಮಾಡುವುದಕ್ಕೆ ಹಲವು ಪ್ರಯತ್ನಗಳು ನಡೆಯುತ್ತಲೂ ಇವೆ. ಇದಕ್ಕಾಗಿ ಆಗಿಂದಾಗ್ಗೆ ಬೇರೆ ಬೇರೆ ಯೋಜನೆಗಳು ತಯಾರಿಸಲ್ಪಟ್ಟು, ಜನಜೀವನ ಸಂಬಂಧವಾಗಿ ಅತಿ ಮುಖ್ಯವಾಗಿರುವ ಈ ಸಮಸ್ಯೆಯನ್ನು ತೃಪ್ತಿಕರವಾಗಿ ಬಗೆಹರಿಸುವುದಕ್ಕಾಗಿ ಆ ಯೋಜನೆಗಳಂತೆ ಕಾರ್ಯಾರಂಭವು ನಡೆದಿದೆ. ಅದಾಗ್ಯೂ ಒಂದಲ್ಲ ಒಂದು ಕಾರಣದಿಂದ ನಿರೀಕ್ಷಿಸಿದ ಫಲಿತಾಂಶಗಳು ಮಾತ್ರ ಗಣನೀಯವಾದ ಪರಿಣಾಮದಲ್ಲಿ ದೊರೆಯದೆ ಹೋಗಿವೆ. ಗ್ರಾಮಾಂತರ ಪ್ರದೇಶಗಳಲ್ಲಿ ಸುಧಾರಣೆಗಳೂ, ಅಭಿವೃದ್ಧಿ ಕಾರ್ಯಗಳೂ ಇನ್ನೂ ಅನೇಕ ಬಾಬುಗಳ ಸಂಬಂಧದಲ್ಲಿ ನಡೆಯಬೇಕಾಗಿ ಹಾಗೆಯೇ ಉಳಿದಿದೆ. ಎಷ್ಟೋ ಗ್ರಾಮಗಳಿಗೆ ಕುಡಿಯುವ ನೀರಿನ ಬಾವಿಗಳನ್ನು ತೋಡಿಸಬೇಕಾಗಿದೆ. ಎಲ್ಲ ಗ್ರಾಮಗಳಲ್ಲೂ ಚರಂಡಿ ಕಾಮಗಾರಿ ಯೋಜನೆಯನ್ನು ಕೈಗೊಳ್ಳಬೇಕಾಗಿದೆ, ಗ್ರಾಮಗಳಲ್ಲಿ ಅದರಲ್ಲೂ ಅವುಗಳ ಪೈಕಿ ಬಡಸ್ಥಿತಿಯಲ್ಲಿರುವುಗಳಲ್ಲಿ ಸರಿಯಾದ ವಾಸದ ಮನೆಗಳನ್ನು ಕಟ್ಟಿಸುವ ಕೆಲಸವು ಕೂಡಲೆ ಗಮನಕ್ಕೆ ತೆಗೆದುಕೊಳ್ಳಬೇಕಾದ ವಿಷಯ. ಗ್ರಾಮ ರಸ್ತೆಗಳು, ಕೆರೆಗಳ ಜೀರ್ಣೋದ್ಧಾರ, ಗ್ರಾಮ ಜಂಗಲುಗಳನ್ನು ಏರ್ಪಡಿಸಿ ಅಭಿವೃದ್ಧಿಪಡಿಸುವುದು, ಸ್ಕೂಲುಗಳಿಗೆ ಸರಿಯಾದ ಕಟ್ಟಡಗಳನ್ನೊದಗಿಸುವುದರ ಜೊತೆಗೆ ವಿದ್ಯಾಭ್ಯಾಸಕ್ಕೆ ತಕ್ಕ ಸೌಕರ್ಯಗಳನ್ನು ಕಲ್ಪಿಸುವುದು, ಹಲವಾರು ಗೃಹ ಕೈಗಾರಿಕೆಗಳನ್ನು ಪುನರುಜ್ಜೀವನಗೊಳಿಸುವುದು ಮತ್ತು ಅಭಿವೃದ್ಧಿಪಡಿಸುವುದು- ಮುಂತಾದ ಇನ್ನೂ ಎಷ್ಟೋ ಸಮಸ್ಯೆಗಳನ್ನು ಶ್ರದ್ಧಾಸಕ್ತಿಗಳಿಂದ ಬಗೆಹರಿಸಬೇಕಾಗಿದೆ. ಈ ಅಂಶಗಳನ್ನೆಲ್ಲಾ ಗಮನದಲ್ಲಿಟ್ಟುಕೊಂಡು ಗ್ರಾಮಾಭಿವೃದ್ಧಿಗೆ ಸರ್ಕಾರದವರು ಒಂದು ಹೊಸ ಯೋಜನೆಯನ್ನು ಸಿದ್ಧಪಡಿಸುತ್ತಾರೆ. ಈ ಯೋಜನೆಯನ್ನು ಬಹುಮಟ್ಟಿಗೆ ಸರ್ ಎಂ. ವಿಶ್ವೇಶ್ವರಯ್ಯನವರು ರಚಿಸಿದ್ದ "ಡಿಸ್ಟ್ರಿಕ್ಟು ಅಭಿವೃದ್ಧಿಯ ಯೋಜನೆ"ಯ ಮಾದರಿಯಲ್ಲೇ ರಚಿಸಲಾಗಿದೆ. ಪ್ರತಿಯೊಂದು ಪ್ರದೇಶದ ಜನರೂ ತಮ್ಮ ಶಕ್ತಿ ಸಾಮರ್ಥ್ಯಗಳನ್ನು ಉತ್ಸಾಹದಿಂದ ಕಾರ್ಯರೂಪಕ್ಕೆ ತರುವುದಕ್ಕೆ ಸಾಧಕವಾಗುವಂತೆ, ಅವರಿಗೆ ಪ್ರಾತಿನಿಧ್ಯ ಗ್ರಾಮವೃದ್ಧಿ ಸಮಿತಿಗಳು ಬಹಳ ಶೀಘ್ರದಲ್ಲೇ ನೇಮಕವಾಗಲಿವೆ ಅಲ್ಲದೆ ನಾನಾ ಬಾಬುಗಳಲ್ಲಿಯು ಗ್ರಾಮ ಸುಧಾರಣೆಯೂ, ಮತ್ತು ಗ್ರಾಮಾಭಿವೃದ್ಧಿಯು ನಡೆಯುವುದಕ್ಕೆ ಬೇಕಾದ ಕಾರ್ಯಕ್ರಮಗಳನ್ನು ಕೈಗೊಳ್ಳುವುದಕ್ಕೆ ಒಂದು ಸಾಧನವೂ (ಎಂದರೆ ಏಜೆನ್ಸಿಯೂ) ಸಹ, ಏರ್ಪಡುವುದರಲ್ಲಿದೆ. ಆಹಾರ, ಬಟ್ಟೆ, ಸೀಮೆಎಣ್ಣೆ, ಕಬ್ಬಿಣ, ಉಕ್ಕು, ಗೊಬ್ಬರ, ವ್ಯವಸಾಯದ

ಉಪಕರಣಗಳು, ಬಿತ್ತನೆ ಬೀಜ, ಮೊದಲಾದ ಮುಖ್ಯವಾದ ವಸ್ತುಗಳ ಸರಬರಾಯಿ ವಿಚಾರಗಳಿಗೆ ಸರ್ಕಾರದವರಿಗೆ ಸಲಹೆ ಹೇಳುವ ಕೆಲಸವನ್ನೂ ಗ್ರಾಮಾಭಿವೃದ್ಧಿ ಸಮಿತಿಗಳಿಗೆ ವಹಿಸಿಕೊಡಲಾಗುತ್ತದೆ. ಈಗ ಹೊಸ ಸಾಧನವು ಏರ್ಪಟ್ಟ ಮೇಲೆ, ಗ್ರಾಮಸ್ಥರ ಸ್ಥಿತಿಯನ್ನು ಉತ್ತಮಗೊಳಿಸುವ ನಾನಾ ಉದ್ದೇಶಗಳಿಗಾಗಿ ಈ ಕೊಡುತ್ತಿರುವ ಹಣದ ಸಹಾಯದಿಂದ, ಗ್ರಾಮಾಭಿವೃದ್ಧಿಯು ಬಹಳ ಶೀಘ್ರವಾಗಿ ನಡೆಯುವ ಭರವಸೆಯಿದೆ.

ಇನ್ನು, ಆಯವ್ಯಯದ ವಿಷಯದಲ್ಲಿ ಕೆಲವು ಅಂಶಗಳನ್ನು ಸೂಚಿಸಲಿಚ್ಛಿಸುತ್ತೇನೆ. ಪುರೋಭಿವೃದ್ಧಿಗೆ ಸಂಬಂಧಪಟ್ಟ ಯೋಜನೆಗಳೆಲ್ಲವೂ, ಅವುಗಳಿಗೆ ಬೇಕಾಗುವ ಹಣವು ಎಷ್ಟರಮಟ್ಟಿಗೆ ದೊರೆಯುತ್ತದೊ ಅಷ್ಟರಮಟ್ಟಿಗೆ ಮಾತ್ರವೇ ನೆರವೇರುತ್ತವೆಂಬುದು ಸ್ವತಸ್ಸಿದ್ಧವಾಗಿಯೇ ಇದೆ. 1947-48ನೆಯ ಸಾಲಿಗೆ ಸಂಬಂಧಪಟ್ಟಂತೆ ತಯಾರಿಸಿದ ಕಚ್ಚಾ ಲೆಕ್ಕಗಳ ಪಟ್ಟಿಯನ್ನು ನೋಡಿದರೆ, ಹುಟ್ಟುವಳಿಯು ಬಡ್ಜೆಟ್ಟನ್ನು ನಿರೀಕ್ಷಿಸಿದ್ದುದಕ್ಕಿಂತಲೂ 10.68 ಲಕ್ಷಗಳಷ್ಟು ಕಡಿಮೆ ಬೀಳುವಂತೆಯು ಕಂಡುಬಂದಿದೆ. ಮತ್ತು ವೆಚ್ಚವು ಬಡ್ಜೆಟ್ಟಿನಲ್ಲಿ ನಿರೀಕ್ಷಿಸಿದ್ದುದಕ್ಕಿಂತಲೂ 60.66 ಲಕ್ಷಗಳಷ್ಟು ಕಡಿಮೆ ಬೀಳುವುದಾಗಿಯೂ ಇದೆ. ಪ್ರಸಕ್ತ ವರ್ಷದ ಹುಟ್ಟುವಳಿಯಲ್ಲಿ ವೆಚ್ಚವು ಕಳೆದು ಒಟ್ಟಿನ ಮೇಲೆ 28.75 ಲಕ್ಷ ರೂಪಾಯಿಗಳಷ್ಟು ಹಚ್ಚಿನ ಉಳಿತಾಯವಾಗುವುದು ಕಂಡುಬರುತ್ತದೆ. ಈ ಪೈಕಿ ಸುಮಾರು 2 ಲಕ್ಷ ರೂಪಾಯಿಗಳನ್ನು ಉಳಿತಾಯವಾಗಿಟ್ಟುಕೊಂಡು, ಉಳಿದುದನ್ನು ವಿಶೇಷ ಸ್ವಭಾವದ ನಿಧಿಗೆ (ಎಂದರೆ ಸ್ಪಷಲ್ "ರಿಜರ್ವ್" ನಿಧಿಗೆ) ವರ್ಗಾಯಿಸಲಾಗುವುದು. ಒಟ್ಟಿನಲ್ಲಿ ಆಯವ್ಯಯದ ಈಗಿನ ಪರಿಸ್ಥಿತಿಯನ್ನು ಮತ್ತು ಮುಂದಿನ ಪರಿಸ್ಥಿತಿಯನ್ನು ಎಚ್ಚರಿಕೆಯಿಂದ ಪರಿಶೀಲಿಸಿ ನೋಡಬೇಕಾಗಿದೆ. ನಾನಾ ಬಾಬುಗಳ ಸಂಬಂಧದಲ್ಲಿ ಮಾಡಬೇಕಾಗುವ ವೆಚ್ಚಗಳನ್ನು, ಪೂರ್ವಭಾವಿಯಾಗಿಯೇ ಚೆನ್ನಾಗಿ ಪರಿಶೀಲಿಸಿ ನೋಡಿದ ಮೇಲೆ ಜಾರಿಗೆ ತರಬೇಕೆಂದು ಸರ್ಕಾರದವರು ಸಂಕಲ್ಪ ಮಾಡಿದ್ದಾರೆ. ಇದರ ದೆಸೆಯಿಂದ ಪರಿಣಾಮದಲ್ಲಿ ಸುಮಾರು 2 ಕೋಟಿ ರೂಪಾಯಿಗಳ ಹುಟ್ಟುವಳಿಯು ಕಡಿಮೆಯಾಗುವುದು. ಸರ್ಕಾರಿ ನೌಕರರ ಸಂಬಳಗಳ ಪುನರ್ವಿಮರ್ಶೆಗೆ ಸಂಬಂಧಪಟ್ಟ ಸಮಿತಿಯವರು ಮಾಡಿದ ವರದಿಯ ಮೇಲೆ ಅವರ ಸಂಬಳದ ಸ್ಕೇಲುಗಳನ್ನು ಉತ್ತಮಗೊಳಿಸಲಾಯಿತು. ಇದನ್ನು ಹಿಂದಿನ ತಾರೀಖಿನಿಂದ ಎಂದರೆ 1947ನೆಯ ಇಸವಿ ಜನವರಿ 1ನೇ ತಾರೀಖಿನಿಂದ ಜಾರಿಗೆ ತರಲಾಯಿತು. ಇದರ ಪರಿಣಾಮವಾಗಿ ಸರ್ಕಾರದವರು ಗಣನೀಯವಾಗಿ ಹೆಚ್ಚು ವೆಚ್ಚವನ್ನು ವಹಿಸಿಕೊಳ್ಳಬೇಕಾಯಿತು. ಜಮೀನು ಕಂದಾಯದ ನೀತಿಯನ್ನು ಪರಿಶೀಲಿಸಲು ಒಂದು ಸಮಿತಿಯನ್ನು ಏರ್ಪಡಿಸಲಾಗಿದೆಯಷ್ಟೆ. ಅವರು ಸಂಸ್ಥಾನದ ಜಮೀನು ಕಂದಾಯದ ಪದ್ಧತಿಯನ್ನು ವಿಶದವಾಗಿಯೂ ಮತ್ತು ಕೂಲಂಕುಷವಾಗಿಯೂ ಪರಿಶೀಲಿಸುವವರಿದ್ದಾರೆ. ಮುಂದಿನ ಸಾಲಿನ ಆಯವ್ಯಯದ ಪಟ್ಟಿಯು (ಎಂದರೆ ಬಡ್ಜೆಟ್ಟು) ತಯಾರಾಗುವುದರೊಳಗಾಗಿ ಅವರು ತಮ್ಮ ವರದಿಯನ್ನು ಒಪ್ಪಿಸುತ್ತಾರೆಂದು ನಂಬಿದ್ದೇನೆ. ಅದರ ಮೇರೆಗೆ ಜಮೀನು ಕಂದಾಯದ ಬಾಬಿನಲ್ಲಿಯೂ ಹುಟ್ಟುವಳಿಯು ಕಡಿಮೆಯಾಗಲು ಕಾರಣವಾಗಬಹುದು. ಈ ಸಾಲಿನಿಂದ ಸರಕುಗಳ ಮಾರಾಟದ ಮೇಲೆ "ಸೇಲ್ಸ್ ಟ್ಯಾಕ್ಸ್" ತೆರಿಗೆಯನ್ನು ವಸೂಲು ಮಾಡುತ್ತಿರುವುದೇನೋ ನಿಜ. ಆದರೆ ಮೇಲೆ ಹೇಳಿದಂತೆ ಹುಟ್ಟುವಳಿ ಕಡಿಮೆಯಾಗುವ ಸಂಬಂಧವಾಗಿ ನಷ್ಟ ಭರ್ತಿ ಮಾಡಲು ಸಾಕಾಗುವಷ್ಟು ಹಣವು, ಈ ತೆರಿಗೆಯಿಂದ ಬರುವುದೂ ಸಹ, ಅಸಂಭವ. ಆದ್ದರಿಂದ ವರಮಾನವು ಬರುವ

ಇತರ ಮಟ್ಟಿಗೆ ಬಾಬುಗಳು ಯಾವುದೆಂಬುದನ್ನು ನೋಡಬೇಕು. ಮತ್ತು ಅವುಗಳಿಂದ ವರಮಾನವು ಹಾಗೆ ಮಾಡದೆ ಹೋದರೆ ನಮ್ಮ ಆಯವ್ಯವಯಗಳ ಪರಿಸ್ಥಿತಿಯು ಸ್ಥಿಮಿತವಾಗಿದ್ದುಕೊಂಡು ಬರುವಂತೆ ಮಾಡಲು ನಮಗೆ ದೊರೆಯುವ ಹುಟ್ಟುವಳಿಗೆ ತಕ್ಕಂತೆಯೇ ವೆಚ್ಚವನ್ನೂ ಅಳವಡಿಸಿ ಸರಿದೂಗಿಸಬೇಕಾಗುತ್ತದೆ.

ಕೇಂದ್ರ ಸರ್ಕಾರದವರ ಮತ್ತು ಪ್ರಾಂತೀಯ ಸರ್ಕಾರಗಳವರ ಹಣಕಾಸಿನ ವಿಚಾರಗಳ ಸಂಬಂಧದಲ್ಲಿಯೂ ಮತ್ತು ಹಣದ ಉಬ್ಬರವನ್ನು ತಡೆಗಟ್ಟಲು ಕೈಗೊಳ್ಳಬೇಕಾದ ಕಾರ್ಯಕ್ರಮಗಳ ಸಂಬಂಧದಲ್ಲಿಯೂ ಇಂಡಿಯಾ ಸರ್ಕಾರದವರ ತೀರ್ಮಾನಗಳು ಈಗಾಗಲೇ ಪತ್ರಿಕೆಗಳಲ್ಲಿ ಪ್ರಕಟವಾಗಿವೆ. ನಿರ್ದಿಷ್ಟವಾಗಿ ಸೂಚಿತವಾಗಿರುವ ನಾನಾ ಸಲಹೆಗಳ ವಿಚಾರವನ್ನು ವಿವರವಾಗಿ ತಿಳಿಸಲು ನನಗೆ ಅಪೇಕ್ಷೆಯಿಲ್ಲ. ಅದಾಗ್ಯೂ ಈಗ ಸೂಚಿತವಾಗಿರುವ ಸಲಹೆಗಳು ನಾವೂ ಕೂಡ ಜರೂರಾಗಿಯೂ ಮತ್ತು ಹೃತ್ಪೂರ್ವಕವಾಗಿಯೂ ಪರಿಶೀಲಿಸಲು ಯೋಗ್ಯವಾಗಿಯೆಂದು ಮಾತ್ರ ನಾನು ಹೇಳಲೇಬೇಕಾಗಿದೆ. ಆಹಾರ, ಬಟ್ಟೆ ಮತ್ತು ಸಿವಿಲ್ ಸರಬರಾಯಿಗಳ ವಿಚಾರವಾಗಿ ತಿಳಿಸುವಾಗ ಭಾಷಣದ ಮತ್ತೊಂದು ಭಾಗದಲ್ಲಿ ನಮ್ಮ ಕಾರ್ಯ ನೀತಿಗಳು ಸಾಧ್ಯವಾದಮಟ್ಟಿಗೂ ಅಖಿಲ ಭಾರತದ ಕಾರ್ಯನೀತಿಗಳನ್ನೇ ಹೋಲುವಂತಿರಬೇಕೆಂದು ನಾನು ಸೂಚಿಸಿರುತ್ತೇನೆ. ಹಣದ ಆಡಳಿತಕ್ಕೂ ಮತ್ತು ಆರ್ಥಿಕ ವಿಚಾರಗಳಿಗೂ ಸಂಬಂಧಪಟ್ಟ ಕಾರ್ಯನೀತಿಗಳ ವಿಷಯಗಳಲ್ಲಿಯೂ ಸಹ ಇಂಡಿಯಾ ಸರ್ಕಾರದವರ ತೀರ್ಮಾನಗಳನ್ನು ನಾವು ಸದಾ ಗಮನದಲ್ಲಿಟ್ಟುಕೊಂಡು ಅವುಗಳಿಗನುಸಾರವಾಗಿ ನಮ್ಮ ಕಾರ್ಯನೀತಿಗಳನ್ನು ರೂಪಿಸಿಕೊಳ್ಳಬೇಕಾಗಿದೆ. ನಮ್ಮ ಬಡ್ಜೆಟ್ ಅಧಿವೇಶನ ಕಾಲದಲ್ಲಿ ಇದನ್ನು ವಿಚಾರಮಾಡುವುದೇ ಹೆಚ್ಚು ಸೂಕ್ತವಾಗಿರುವ ಕಾರಣ, ಈ ಸಂದರ್ಭದಲ್ಲಿ ಮತ್ತಷ್ಟು ವಿವರಿಸಿ ಹೇಳಲು ನನಗೆ ಇಷ್ಟವಿಲ್ಲ.

ಮೈಸೂರು ರಾಜ್ಯಾಂಗ ರಚನಾ ಸಭೆಗೆ ಸಂಬಂಧಪಟ್ಟ ಕೆಲಸಗಳ ಸಂಬಂಧದಲ್ಲಿ ಈಗ ಕೆಲವು ವಿಷಯಗಳನ್ನು ನಾನು ಸೂಚಿಸಲಿಚ್ಛಿಸುತ್ತೇನೆ. ಧ್ಯೇಯಗಳು ಮತ್ತು ಉದ್ದೇಶಗಳಿಗೆ ಸಂಬಂಧಪಟ್ಟ ನಿರ್ಣಯವನ್ನು ರಾಜ್ಯಾಂಗ ರಚನಾ ಸಭೆಯವರು ಅಂಗೀಕರಿಸಿದ ಮೇಲೆ ಅವರು ಮೂರು ಸಮಿತಿಗಳನ್ನು ಏರ್ಪಡಿಸಿದರು. ಎಂದರೆ, ರಾಜ್ಯಾಂಗ ರಚನೆಯಲ್ಲಿ ಸೇರಿಸಲ್ಪಡಬೇಕಾದ ಮೂಲ ಹಕ್ಕುಗಳ ವಿಚಾರದಲ್ಲಿ ವರದಿಯನ್ನೊಪ್ಪಿಸುವುದಕ್ಕೂ ಅಲ್ಪಸಂಖ್ಯಾತರು ಮತ್ತು ಹಿಂದುಳಿದ ತರಗತಿಗಳವರ ಪ್ರಯೋಜನಾಂಶಗಳ ಸಂಬಂಧದಲ್ಲಿ ರಕ್ಷಣೆಗಳನ್ನೂ ಮತ್ತು ನಿಯಮಗಳನ್ನೂ ಏರ್ಪಡಿಸುವ ವಿಚಾರದಲ್ಲಿ ವರದಿಯನ್ನೊಪ್ಪಿಸುವುದಕ್ಕೂ ಮತ್ತು ರಾಜ್ಯಾಂಗ ರಚನೆಯಲ್ಲಿ ಅಡಕ ಮಾಡಬೇಕಾದ ಮುಖ್ಯ ಮೂರು ಸಮಿತಿಗಳನ್ನು ಏರ್ಪಡಿಸಿದರು. ಅಲ್ಪ ಸಂಖ್ಯಾತ ಪಂಗಡದವರಿಗೆ ಸಂಬಂಧಪಟ್ಟ ಸಮಿತಿಯವರ (ಎಂದರೆ, "ಮೈನಾರಿಟೀಸ್ ಕಮಿಟಿ"ಯವರ) ಪ್ರಾಥಮಿಕ ವರದಿಯನ್ನೂ ಮತ್ತು ಮೂಲ ಹಕ್ಕುಗಳಿಗೆ ಸಂಬಂಧಪಟ್ಟ ಸಮಿತಿಯವರ (ಎಂದರೆ ಫಂಡಮೆಂಟ್ಲ್ ರೈಟ್ಸ್ ಕಮಿಟಿ" ಯವರ) ವರದಿಯನ್ನೂ ಇತ್ತೀಚೆಗೆ ರಾಜ್ಯಾಂಗ ರಚನಾ ಸಭೆಯವರ ಮುಂದಿಡಲಾಯಿತು. ಮತ್ತು ಸಭೆಯಲ್ಲಿ ಆ ವರದಿಗಳ ಸಂಬಂಧದಲ್ಲಿ ಸಾಮನ್ಯ ಚರ್ಚೆ ನಡೆಯಿತು. ನವೆಂಬರ್ ತಿಂಗಳ ಮಧ್ಯದೊಳಗಾಗಿ ಈ ಸಮಿತಿಗಳ ಅಖೈರು ವರದಿಗಳು ಬರಬಹುದೆಂದು

ನಿರೀಕ್ಷಿಸಲಾಗಿದೆ. ಆ ತರುವಾಯ ರಾಜ್ಯಾಂಗ ರಚನಾ ಸಭೆಯ ಸದಸ್ಯರು ಕೂಡಲೆ ಸಭೆ ಸೇರಿ, ಶ್ರೀ ಮನ್ಮಹಾರಾಜರವರು ಅನುಮೋದಿಸಿ ಕೃಪೆ ಮಾಡಲು ಅವರಿಗೆ ಒಪ್ಪಿಸುವುದಕ್ಕಾಗಿ ರಾಜ್ಯಾಂಗದ ಮಸೂದೆಯನ್ನು ರಚಿಸಲು ಆ ಸಭೆಯವರಿಗೆ ಸಾಧ್ಯವಾಗಬಹುದೆಂದು ತೋರುತ್ತದೆ. ರಾಜ್ಯಾಂಗ ರಚನಾ ಸಭೆಯು ಇಷ್ಟು ಹೊತ್ತಿಗಾಗಲೇ ಪೂರೈಸುವುದೆಂಬುದಾಗಿ ಹಿಂದೆ ಒಂದು ಸಮಯದಲ್ಲಿ ನಿರೀಕ್ಷಿಸಲಾಗಿದ್ದಿತು. ಆದರೆ ಆ ಕಾರ್ಯವು ಪೂರೈಸುವುದಕ್ಕೆ ಅನಿವಾರ್ಯವಾದ ಕಾರಣಗಳ ದೆಸೆಯಿಂದ ಇನ್ನೂ ಸ್ವಲ್ಪ ಕಾಲ ಹಿಡಿಯುವುದಾಗಿದೆ. ನಮ್ಮ ಸಂಸ್ಥಾನದ ರಾಜ್ಯಾಂಗವು ಸಾಮಾನ್ಯವಾಗಿ ಭಾರತ ರಾಜ್ಯಾಂಗಕ್ಕನುಗುಣವಾಗಿರಬೇಕಾದುದರಿಂದ, ಭಾರತ ರಾಜ್ಯಾಂಗದ ನಿಯಮಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ನಮ್ಮ ಸಂಸ್ಥಾನದ ರಾಜ್ಯಾಂಗವನ್ನು ಆಖೈರಾಗಿ ರೂಪಿಸುವುದು ಸೂಕ್ತವೆಂಬುದು ಭಾವಿಸಲಾಗಿದ್ದಿತು. ಆದರೆ ಸಂಸ್ಥಾನದ ರಾಜ್ಯಾಂಗವನ್ನು ಆಖೈರಾಗಿ ಅಳವಡಿಸುವುದಕ್ಕಾಗಿ ಭಾರತ ರಾಜ್ಯಾಂಗದ ರಚನೆಯು ಪೂರೈಸುವವರೆಗೂ ನಾವು ಕಾದಿರಬೇಕಾದುದು ಆಗತ್ಯವಿಲ್ಲವೆಂದು ಈಗ ತೋರಿಬಂದಿದೆ. ನಮ್ಮ ರಾಜ್ಯಾಂಗವು ಕ್ರಮಬದ್ಧವಾಗಿ ವಿಧಾಯಕ ಮಾಡಲ್ಪಟ್ಟ ನಂತರ, ಆ ಹೊಸ ರಾಜ್ಯಾಂಗದ ಏರ್ಪಾಡಿನ ಮೇರೆಗೆ ಮುಂದಿನ ವರ್ಷದ ಆದಿಭಾಗದಲ್ಲಿಯೇ ಸಾರ್ವತ್ರಿಕವಾಗಿ ಚುನಾವಣೆಗಳನ್ನು ನಡೆಸಲು ಸಾಧ್ಯವಾಗುವುದೆಂದು ನಾನು ನಿರೀಕ್ಷಿಸಿದ್ದೇನೆ.

ಮಿತ್ರರೇ, ಬಹಳ ಕಠಿಣವಾದ ಮತ್ತು ಜರೂರಾಗಿ ಬಗೆಹರಿಸಬೇಕಾದ ಸಮಸ್ಯೆಗಳು ನಮ್ಮ ಮುಂದಿವೆ. ಭರತಖಂಡಕ್ಕೆ ಸ್ವಾತಂತ್ರ್ಯವು ಲಭಿಸಿದುದರ ಪರಿಣಾಮವಾಗಿ ಮತ್ತು ನಮ್ಮ ಸಂಸ್ಥಾನದಲ್ಲಿ ಪ್ರಜಾ ಸರ್ಕಾರವು ಸ್ಥಾಪಿತವಾದುದರ ಪರಿಣಾಮವಾಗಿ ನಾವು ನೆರವೇರಿಸಬೇಕಾದ ಕರ್ತವ್ಯಗಳೂ ಮತ್ತು ನಿರ್ವಹಿಸಬೇಕಾದ ಜವಾಬ್ದಾರಿಗಳು ಎರಡೂ ಇವೆ ಎಂಬುದನ್ನು ನಮ್ಮಲ್ಲಿ ಪ್ರತಿಯೊಬ್ಬರು ಹೆಚ್ಚು ಹೆಚ್ಚಾಗಿ ಅರಿಯುತ್ತ ಬರಬೇಕು. ದೇಶಾಭ್ಯುದಯ ಸಾಧನೆಗೆ ಸಂಬಂಧಪಟ್ಟ ನಾನಾ ಬಗೆಯ ನಮ್ಮ ಪ್ರಯತ್ನಗಳು ಎಷ್ಟರ ಮಟ್ಟಿಗೆ ಯಶಸ್ವಿಯಾಗಿ ನೆರವೇರಿ ನಾವು ಕೃತಜ್ಞತರಾಗುವುದೆಂಬುದು, ನಾವು ಪ್ರತ್ಯೇಕ ಪ್ರತ್ಯೇಕವಾಗಿಯೂ ಮತ್ತು ಸಮಷ್ಟಿಯಾಗಿಯೂ ಎಷ್ಟರ ಮಟ್ಟಿಗೆ ಶ್ರಮಿಸಿ ಕೆಲಸ ಮಾಡುತ್ತೇವೆಯೋ ಮತ್ತು ಎಷ್ಟರ ಮಟ್ಟಿಗಿನ ತೀವ್ರಾಸಕ್ತಿಯನ್ನೂ ಮತ್ತು ಉತ್ಸಾಹವನ್ನೂ ವ್ಯಕ್ತಪಡಿಸುತ್ತೇವೆಯೋ ಅದಕ್ಕನುಗುಣವಾಗಿ ಅವುಗಳನ್ನು ಅವಲಂಬಿಸಿರುತ್ತದೆ.

ಭರತಖಂಡವು ಮಹತ್ತರವಾದ ಪ್ರಾಚೀನ ಸಂಸ್ಕೃತಿ ಭಂಡಾರವನ್ನು ಪಡೆದಿರುವ ದೇಶ. ಅಂತರ ರಾಷ್ಟ್ರೀಯ ವ್ಯವಹಾರಗಳಲ್ಲಿ ಭರತಖಂಡವು ಬಹು ಮುಖ್ಯವಾದ ಪಾತ್ರವನ್ನು ವಹಿಸಬೇಕಾಗಿದೆ. ಭರತಖಂಡವು ಯಾವಾಗಲೂ ಶಾಂತಿ ಮಾರ್ಗವನ್ನು ಹಿಡಿದು ಧರ್ಮವನ್ನು ಅವಲಂಭಿಸಿರುತ್ತಲೇ ಬಂದಿದೆ. ಭಾರತೀಯರು ತಮ್ಮಲ್ಲಿ ಅನೂಚಾನವಾಗಿ ನಡೆದು ಬಂದಿರುವ ಸತ್ಸಂಪ್ರದಾಯಗಳಿಗೂ ಮತ್ತು ಧ್ಯೇಯ ತತ್ವಗಳಿಗೂ ಅನುಸಾರವಾಗಿ ಪೂರೋಭಿವೃದ್ಧಿ ಸಾಧನೆ ಮಾಡುವುದು ಮಾತ್ರವೇ ಅಲ್ಲದೆ, ಇಡೀ ಪ್ರಪಂಚದಲ್ಲಿ ಶಾಂತಿಯನ್ನೂ ಮತ್ತು ಸೋದರ ಭಾವವನ್ನೂ ನೆಲೆಗೊಳಿಸಬೇಕಾದ ಅವಕಾಶವು ಈಗ ಲಭಿಸಿದೆ. ಇದು ಮಹತ್ತರವಾದ ಪವಿತ್ರಕಾರ್ಯ. ಇದನ್ನು ನೆರವೇರಿಸುವುದಕ್ಕೆ ನಮ್ಮ ಜನಾಂಗದ ತಂದೆಯಂತಿದ್ದ ಮಹಾತ್ಮಾ

ಗಾಂಧಿಯವರ ಪ್ರಮಾದ ರಹಿತವಾದ ಮತ್ತು ಪೂರ್ಣ ವಿವೇಕಮಯವಾದ ಮಾರ್ಗದರ್ಶನವು ಈಗ ನಮಗಿಲ್ಲವಾಗಿದೆ. ಮಹಾತ್ಮಗಾಂಧಿಯವರು ಕಣ್ಮರೆಯಾದ ಕಾರಣ ಅವರ ಆ ಬಗೆಯ ಪ್ರತ್ಯಕ್ಷವಾದ ಮಾರ್ಗದರ್ಶನವು ಈಗ ನಮಗೆ ಲಭಿಸದಂತಾಗಿದೆ. ಆದರೆ ಅವರ ಉದಾತ್ತವಾದ ಉಪದೇಶಗಳು ಬೆಳಗುವ ದೀವಿಗೆಯಂತೆ ತಮಗೆ ಮಾರ್ಗದರ್ಶನ ಮಾಡುತ್ತವೆ. ಅಲ್ಲದೆ ಕ್ರಿಯಾಶಕ್ತಿ ಸಂಪನ್ನರೂ ಮತ್ತು ಅದ್ಭುತವಾದ ಸಾಮರ್ಥ್ಯವುಳ್ಳ ಪ್ರಥಮ ಶ್ರೇಣಿಯ ರಾಜನೀತಿ ಕೋವಿದರೂ ಆದ ಪಂಡಿತ್ ಜವಹರಲಾಲ ನೆಹರೂ ಅವರು ನಮ್ಮ ನಾಯಕರಾಗಿದ್ದಾರೆ. ಭರತ ಖಂಡಕ್ಕೆ ಮಹತ್ತರ ವೈಭವದ ನಿಯತಿ ಸಾಧನೆಯಾಗಬೇಕಾಗಿದೆ. ಅದನ್ನು ಸಾಧಿಸುವುದರಲ್ಲಿ ನಾವೆಲ್ಲರೂ ಹೃತ್ಪೂರ್ವಕವಾಗಿಯೂ ಮತ್ತು ನಿಶ್ಚಲವಾಗಿಯೂ ಪ್ರಯತ್ನಿಸಿ ಶ್ರಮಿಸೋಣ. ಭವ್ಯವಾದ ಈ ಮಹತ್ತರ ಕಾರ್ಯಸಾಧನೆಯಲ್ಲಿ ಮೈಸೂರು ಸಂಸ್ಥಾನವೂ ಕೂಡ ಉಚಿತ ರೀತಿಯಲ್ಲಿ ಶ್ರೇಷ್ಠ ಪಾತ್ರವಹಿಸುವಂತಾಗಲೆಂದು ನಾವೆಲ್ಲರೂ ಹಾರೈಸೋಣ.

## 3. ಬೆಂಗಳೂರು ನಗರದ ಸರ್ ಕೆ.ಪಿ. ಪುಟ್ಟಣ್ಣಚೆಟ್ಟಿಯವರ ಪುರಭವನದ ಸಭಾಂಗಣದಲ್ಲಿ ಮದ್ಯಾಹ್ನ 12 ಗಂಟೆಗೆ ದಿವಾನ್ ಬಹದ್ದೂರ್ ಸರ್ ಎಂ. ರಾಮಸ್ವಾಮಿ ಮೊದಲಿಯಾರ್ ಅವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿ ಪ್ರಧಾನ ಸಚಿವರಾದ ಶ್ರೀ ಕೆ. ಚೆಂಗಲರಾಯರೆಡ್ಡಿಯವರು ಮಾಡಿದ ಅಭಿನಂದನ ಭಾಷಣ:- (ಮೇ 31. 1949)

ಶ್ರೀ ಕೆ. ಚೆಂಗಲರಾಯರೆಡ್ಡಿಯವರು (ಪ್ರಧಾನ ಸಚಿವರು):- ಮಾನ್ಯ ಅಧ್ಯಕ್ಷರೇ, ಮೈಸೂರಿನ ರಾಜಕೀಯ ಇತಿಹಾಸದಲ್ಲಿ ಒಂದು ಹೊಸ ಅಧ್ಯಾಯ ಪ್ರಾರಂಭವಾಗಿರುವ ಈ ಸಮಯದಲ್ಲಿ ಅಭಿನಂದನಾ ಭಾಷಣವನ್ನು ಮಾಡತಕ್ಕ ಸುಯೋಗ ನನಗೆ ಲಭಿಸಿದೆ. ಇದಕ್ಕಾಗಿ ನಾನು ಬಹಳ ಹರ್ಷಚಿತ್ತನಾಗಿದ್ದೇನೆ. ಮತ್ತು ಈ ಕೆಲಸವನ್ನು ಬಹಳ ಸಂತೋಷದಿಂದ ನೆರವೇರಿಸಲು ಉದ್ಯುಕ್ತನಾಗಿದ್ದೇನೆ. ಮೈಸರು ಪ್ರಜಾಪ್ರತಿನಿಧಿ ಸಭೆಯು 1881ನೆಯ ಇಸವಿಯಲ್ಲಿ ದಿವಾನ್ ರಂಗಾ ಚಾರ್ಲುರವರಿಂದ ಸ್ಥಾಪಿತವಾಯಿತು. ಭಾರತದಲ್ಲಿ ಬೇರೆ ಕಡೆ ಇಂಥಾ ಸಭೆ ಇಲ್ಲದೆ ಇರುವ ಕಾಲದಲ್ಲಿ ಈ ಸಭೆಯನ್ನು ಸ್ಥಾಪಿಸಿ ಪ್ರಜೆಗಳ ಹಕ್ಕು ಬಾಧ್ಯತೆಗಳನ್ನು ಸ್ಥಾಪಿಸುವುದಕ್ಕೆ ಪ್ರಯತ್ನ ಪಟ್ಟ ದಿವಾನ್ ಸಾಹೇಬರಾದ ರಂಗಾಚಾರ್ಲುರವರನ್ನು ಸ್ಮರಿಸಬೇಕಾದುದು ನಮ್ಮ ಕರ್ತವ್ಯ. ಅಂದಿನಿಂದಲೂ ಈ ಸಭೆ ಏಕಪ್ರಕಾರವಾಗಿ ಪ್ರಗತಿ ಹೊಂದುತ್ತಾ ಪ್ರಜಾ ಸೇವೆಯನ್ನು ಉತ್ತಮ ರೀತಿಯಲ್ಲಿ ನಡೆಸಿಕೊಂಡು ಬಂದಿದೆಯೆಂದರೆ ಅತಿಶಯೋಕ್ತಿಯಾಗಲಾರದು. ಈ ಸಭೆಯು ಕಾಲ ಕಾಲಕ್ಕೆ ಮಾರ್ಪಾಟು ಹೊಂದುತ್ತಾ ಬಂದಿದೆ ಮತ್ತು ಕಾಲಕ್ಕನುಗುಣವಾಗಿ ಇದರ ರೂಪರೇಖೆಗಳಲ್ಲಿ ಅನೇಕ ವಿಧವಾದ ಬದಲಾವಣೆಗಳಾಗಿವೆ. ಅನೇಕ ವರ್ಷಗಳಿಂದಲೂ ಈ ಸಭೆಗೆ ದಿವಾನರವರೇ ಅಧ್ಯಕ್ಷರಾಗಿದ್ದು ಈ ಸಭೆಯ ಕಾರ್ಯ ಕಲಾಪಗಳನ್ನು ನಡೆಸಿಕೊಂಡು ಬರುತ್ತಿದ್ದುದೂ ತಮ್ಮೆಲ್ಲರಿಗೂ ಗೊತ್ತಿರುವ ವಿಷಯ. ಆ ರೀತಿಯ ವ್ಯವಸ್ಥೆಯಿಂದ ಕೆಲವು ಅನುಕೂಲಗಳಿದ್ದುವು ಎಂದು ಆಗ ಇದ್ದ ಸ್ಥಿತಿಗತಿಗಳಿಗನುಸಾರವಾಗಿ ಅಭಿಪ್ರಾಯ ಪಡುತ್ತಿದ್ದುದರಲ್ಲಿ ಯಾವ ಸಂಶಯವೂ ಇಲ್ಲ. ಆದರೆ ಇತ್ತೀಚೆಗೆ ಪ್ರಜಾಸತ್ತಾತ್ಮಕವಾದ ಪದ್ಧತಿಗನುಗುಣವಾಗಿ ಮಾರ್ಪಾಟಾಗಬೇಕು. ಇದು ಇನ್ನೂ ಚೆನ್ನಾಗಿ ಸ್ಥಾಪನೆ ಆಗಬೇಕೆಂಬ ಅಭಿಪ್ರಾಯ ಬಂದ ಮೇಲೆ ಈ ಸಭೆಗೆ ಆಡಳಿತಾಂಗದ ಮುಖ್ಯಧಿಕಾರಿಗಳಾದ ದಿವಾನ್‌ರವರು ಅಧ್ಯಕ್ಷರಾಗಿರುವುದಕ್ಕಿಂತ ಈ ಸಭೆಗೆ ಚುನಾಯಿತ ಅಧ್ಯಕ್ಷರಿದ್ದರೆ ಸೂಕ್ತವೆಂಬ ಅಭಿಪ್ರಾಯವನ್ನು ಕೆಲವು ವರ್ಷಗಳಿಂದ ಪ್ರತಿಪಾದಿಸುತ್ತಾ ಬರುತ್ತಿರುವುದು ಮಾನ್ಯ ಸದಸ್ಯರಿಗೆ ಚೆನ್ನಾಗಿ ಗೊತ್ತಿದೆ. ನಾನು ಒಂದು ಕಾಲದಲ್ಲಿ ಈ ವಿಷಯವನ್ನು ಪ್ರಾಮುಖ್ಯವಾಗಿ ಈ ಸಭೆಯ ಮುಂದಿಟ್ಟು ವಾದಿಸಿದ್ದು ತಮ್ಮಲ್ಲಿ ಅನೇಕರ ನೆನಪಿನಲ್ಲಿರಬಹುದು. ಇದು ಮುಖ್ಯವಾದ ತತ್ವವೆಂದು ಆ ದಿವಸ ಹೇಳಿದ್ದೆ, ಈ ದಿನವೂ ಹೇಳುತ್ತೇನೆ. ಆ ಒಂದು ಚೌಕಟ್ಟಿನಲ್ಲಿದ್ದ ಬಿಕ್ಕಟ್ಟು, ಕಷ್ಟ ಮತ್ತು ಅನಾನುಕೂಲ ಪೂರೈಸುತ್ತಾ ಬಂದಿದೆ. ಪ್ರಜಾಸತ್ತೆಯಲ್ಲಿ ಕಾರ್ಯಾಂಗದ ಆಡಳಿತದಲ್ಲಿ ಮುಖ್ಯಾಧಿಕಾರಿಯಾಗಿರುವವರು ಈ ಅಧ್ಯಕ್ಷ ಸ್ಥಾನದಲ್ಲಿದ್ದರೆ ಅದರಿಂದ ಕೆಲವು ಸಂದರ್ಭದಲ್ಲಿ ಅಸಮಧಾನವುಂಟಾಗುತ್ತದೆಯೆಂದು ಹೇಳಿದರೆ ಅದರಲ್ಲಿ ಯಾವ ಆಕ್ಷೇಪಣೆಯೂ ಇಲ್ಲವೆಂದು ನಂಬಿದ್ದೇನೆ. ನಮ್ಮ ಸಂಸ್ಥಾನದಲ್ಲಿ ಜವಾಬ್ದಾರಿ ಸರ್ಕಾರ ಪದ್ಧತಿ ಸ್ಥಾಪನೆಯಾಗಬೇಕೆಂದು ಆ ಪ್ರಯತ್ನದಲ್ಲಿ ಪ್ರಜೆಗಳು ಉದ್ಯುಕ್ತರಾದ ಮೇಲೆ ಅದಷ್ಟು ಬೇಗ ಈ ಸಭೆಗೆ ಚುನಾಯಿತ ಅಧ್ಯಕ್ಷರನ್ನು ಪಡೆಯುವ ಹಕ್ಕನ್ನು ಕೊಡುವುದು

ಸೂಕ್ತವಾಗಿತ್ತೆಂದು ನನ್ನ ಅಭಿಪ್ರಾಯ. 1947ನೆಯ ಇಸವಿ ಅಕ್ಟೋಬರ್ ಅಧಿವೇಶನದಲ್ಲಿ ಈ ಕೆಲಸವನ್ನು ಮಾಡಲೇಬೇಕೆಂದು ಯೋಚನೆಯಿತ್ತು. ಆದರೆ ಬಹು ಬೇಗನೆ ರಾಜ್ಯಾಂಗರಚನಾ ಸಭೆ ತನ್ನ ಕಾರ್ಯದಲ್ಲಿ ಉದ್ಯುಕ್ತವಾಗಿ, ಹೊಸರಾಜ್ಯಾಂಗ ನಿರ್ಮಾಣಕ್ಕೆ ಹೆಚ್ಚು ಕಾಲ ಹಿಡಿಯುವುದಿಲ್ಲ ಕೇವಲ ಕೆಲವೇ ತಿಂಗಳಲ್ಲಿ ಆಗಬಹುದೆಂದು ಇದನ್ನು ಮುಂದಕ್ಕೆ ಹಾಕಿದ್ದೇವೇ ಹೊರತು ಬೇರೆಕಾರಣದಿಂದಲ್ಲ. ಆದರೆ ನಮ್ಮ ಹತೋಟಿಯಲ್ಲಿಲ್ಲದ ಕೆಲವು ವಿಶೇಷ ಕಾರಣಗಳಿಂದ ಹೊಸ ರಾಜ್ಯಾಂಗ ಪದ್ಧತಿ ಜಾರಿಗೆ ಬರುವುದು ತಡವಾಗಿದೆ. ಈಗಿನ ಸನ್ನಿವೇಶದಲ್ಲಿ ಇದು ಬೇಗ ಬರುತ್ತದೆ ಎಂದು. ಹೇಳುವುದಕ್ಕಾಗುವುದಿಲ್ಲ. ಕೇಂದ್ರದಲ್ಲಿ ಆಗತಕ್ಕ ಸಮಾಲೋಚನೆಗೆ ಇದು ಸಂಬಂಧಪಟ್ಟದ್ದು ಆದುದರಿಂದ ಈ ಸಭೆಗೆ ಚುನಾಯಿತ ಅಧ್ಯಕ್ಷರನ್ನು ಪಡೆಯುವ ಹಕ್ಕನ್ನು ಕೊಡಲು ತಡಮಾಡುವುದು ಇನ್ನೂ ಸೂಕ್ತವಲ್ಲ ಎಂಬ ಅಭಿಪ್ರಾಯದಿಂದ ಈಗ ಶ್ರೀ ಮನ್ಮಹರಾಜರವರು ಕೃಪೆಮಾಡಿ ಈ ಸಭೆಗೆ ಚುನಾಯಿತ ಅಧ್ಯಕ್ಷರನ್ನು ದಯಪಾಲಿಸಿದರು. ಅದಕ್ಕನುಗುಣವಾಗಿ ನೆನ್ನೆಯ ದಿವಸ ಅಧ್ಯಕ್ಷರನ್ನು ಚುನಾಯಿಸಿದ್ದೇವೆ. ಈಗ ಅವರನ್ನು ಆ ಸ್ಥಾನದಲ್ಲಿ ಪ್ರತಿಷ್ಠಾಪನೆ ಮಾಡುವ ಪವಿತ್ರ ಕರ್ತವ್ಯದಲ್ಲಿ ತೊಡಗಿದ್ದೇವೆ.

ಇದುವರೆಗೆ ಈ ಸಭೆಯ ಮಾನ್ಯ ಅದ್ಯಕ್ಷರಾಗಿದ್ದು ಈಗ ನಿವೃತ್ತರಾಗತಕ್ಕಂಥಾ ಸರ್ ಎ. ರಾಮಸ್ವಾಮಿ ಮೊದಲಿಯಾರ್‌ರವರ ವಿಷಯದಲ್ಲಿಯೂ ನೂತನ ಅಧ್ಯಕ್ಷರಾದ ಶ್ರೀ ವೆಂಕಟಪ್ಪನವರ ವಿಷಯದಲ್ಲಿಯೂ ಕೆಲವು ಮಾತುಗಳನ್ನು ಹೇಳಬೇಕೆಂದು ಅಪೇಕ್ಷಿಸುತ್ತೇನೆ ಈ ಸಭೆಗೆ ದಿವಾನ್ ಅಧ್ಯಕ್ಷರಾಗಿ ಹಲವಾರು ಮಂದಿ ಬಂದರು, ನಿವೃತ್ತರಾದರು. ಆಖೈರಾಗಿ ಸರ್ ರಾಮಸ್ವಾಮಿ ಮೊದಲಿಯಾರ್‌ರವರು ಅಧ್ಯಕ್ಷರಾಗಿ ಈ ದಿವಸ ನಿವೃತ್ತರಾಗಿದ್ದಾರೆ. ಹಿಂದೆ ದಿವಾನ್ ಅಧ್ಯಕ್ಷರಾಗಿದ್ದ ಎಲ್ಲರನ್ನೂ ಸ್ಮರಿಸಿಕೊಳ್ಳುತ್ತಾ ಅವರು ದೇಶಕ್ಕೆ ಮಾಡಿರತಕ್ಕ ಸೇವೆಯನ್ನು ಪ್ರಸ್ತಾಪಿಸಿ ಆಖೈರಾಗಿ ತಮ್ಮ ವಿಷಯದಲ್ಲಿ ಒಂದೆರಡು ಮಾತುಗಳನ್ನು ಹೇಳ ಬಯಸುತ್ತೇನೆ ತಾವು ಮೂರು ವರ್ಷಗಳ ಹಿಂದೆ ಮೈಸೂರಿಗೆ ಪ್ರಭುಗಳ ಆಹ್ವಾನದ ಮೇಲೆ ಬಂದು ಜವಾಬ್ದಾರಿಯುತವಾದ ದಿವಾನ್ ಪದವಿಯನ್ನು ಸ್ವೀಕರಿಸಿದಿರಿ. ತಮ್ಮ ಆಡಳಿತ ನಿರ್ವಹಣಾ ಕಾಲದಲ್ಲಿ ದೈವೇಚ್ಛೆಯಿಂದ ಕೆಲವು ಘರ್ಷಣೆಗಳಿಗೆ ಕಾರಣವಾಯಿತು. ನಾನು ಆ ವಿಚಾರವನ್ನು ಪ್ರಸ್ತಾಪಮಾಡಿರುವುದಿಲ್ಲ. ಅದು ಅನವಶ್ಯಕ. ತಾವು ಮೈಸೂರು ಸಂಸ್ಥಾನದಲ್ಲಿ ಜವಾಬ್ದಾರಿ ಸರ್ಕಾರ ಪದ್ಧತಿ ಸ್ಥಾಪನೆಯ ಬಗ್ಗೆ ಬಹುವಾಗಿ ಸಹಾಯ ಮಾಡಿದ್ದೀರೆಂಬುದನ್ನು ನಾನು ಈ ಸಂದರ್ಭದಲ್ಲಿ ಹೇಳಿ ತಮ್ಮನ್ನು ಅಭಿನಂದಿಸುತ್ತೇನೆ ತಾವು ಈ ಸಭೆಯಲ್ಲಿ ದಿವಾನ್ ಅಧ್ಯಕ್ಷರಾಗಿ ಎಷ್ಟು ದಕ್ಷತೆಯಿಂದ ಎಷ್ಟು ಗಾಂಭೀರ್ಯದಿಂದ ಎಷ್ಟು ಚಾಕಚಕ್ಯತೆಯಿಂದ ಕಾರ್ಯಕಲಾಪಗಳನ್ನು ನಡೆಸಿದಿರಿ ಎಂಬುದನ್ನು ನಾನು ಹೇಳಬೇಕಾದುದೇ ಇಲ್ಲ. ಅದು ಎಲ್ಲರ ಅನುಭವಕ್ಕೂ ಬಂದಿದೆ. ಈದಿನ ನಾವು ಇಷ್ಟು ಇಷ್ಟು ಚಾಕಚಕ್ಯತೆಯಿಂದ ಕೆಲಸ ನಡೆಸತಕ್ಕ ಅಧ್ಯಕ್ಷರನ್ನು ಕಳೆದುಕೊಳ್ಳಲು ಒಂದು ಕಡೆ ಅಸಮಧಾನವಾಗಿದೆಯೆಂದು ಹೇಳಿದರೆ ಅನುಚಿತವಾಗಲಾರದು. ನೆನ್ನೆ ತಾವು ಮೊದಲೇ ಅಪ್ಪಣೆ ಕೊಡಿಸಿದಂತೆ ತಮ್ಮ ಕಾಲಾವಧಿ ಮೂರು ವರ್ಷ ಮುಗಿದ ತರುಣದಲ್ಲಿ ತಾವು ನಿವೃತ್ತರಾಗಿರುವುದಾಗಿ ಅಭಿಪ್ರಾಯಪಟ್ಟುದಾಗಿಯೂ, ಶ್ರೀಮನ್ಮಹಾರಾಜರು ಸಂಪೂರ್ಣವಾಗಿ ತಮ್ಮ ಅಭಿಪ್ರಾಯಕ್ಕೆ ಮನ್ನಣೆಕೊಟ್ಟರೆಂದೂ ಆ ಪ್ರಕಾರ ತಾವು ಈ ವರ್ಷ ಆಗಸ್ಟ್ ತಿಂಗಳ 6ನೇಯ ತಾರೀಕಿನಿಂದ ನಿವೃತ್ತರಾಗಲು ಸಿದ್ದರಾಗಿರುವುದಾಗಿಯೂ ಅಪ್ಪಣೆ ಕೊಡಿಸಿದಿರಿ. ಇದು

ಪ್ರಜಾಭಿಪ್ರಾಯಕ್ಕನುಗುಣವಾಗಿದೆ. ಕಾಲಧರ್ಮಕ್ಕನುಸಾರವಾಗಿದೆ, ಯಾವ ಆಕ್ಷೇಪಣೆ ಅಥವಾ ಟೀಕೆ ಅಥವಾ ಬೇರೆ ಭಾವನೆಗೂ ಅವಕಾಶವಿಲ್ಲ, ಮತ್ತು ಇದು ಒಂದು ತತ್ವದ ವಿಷಯ, ಹೊಸ ಪರಿಸ್ಥಿತಿಯ ದೃಷ್ಟಿಯಿಂದ ಸೂಕ್ತವಾಗಿದೆಯೆಂದು ಮಾತ್ರ ಹೇಳುತ್ತೇನೆ. ಆಡಳಿತದ ವಿಷಯದಲ್ಲಿಯೂ ಸಹ ತಾವು ನಮಗೆ ಹೆಚ್ಚು ಸಹಕಾರರಾಗಿದ್ದೀರಿ ಎಂಬುದನ್ನು ಈ ದಿನ ಬಹಳ ಸಂತೋಷದಿಂದ ಹೇಳಲು ನನಗೆ ಅವಕಾಶ ದೊರೆತಿದೆ. ಈಗ ಸನ್ನಿವೇಶ ಹೇಗಿದೆಯೆಂದರೆ, ತಮ್ಮನ್ನು ಈ ದಿವಸ ಬೀಳ್ಕೊಡತಕ್ಕ ಸಮಾರಂಭದಲ್ಲಿ ತಂದೆತಾಯಿಗಳು ಮಗಳನ್ನು ಮದುವೆ ಮಾಡಿ ಗಂಡನ ಮನೆಗೆ ಕಳುಹಿಸತಕ್ಕ ಕಾಲದಲ್ಲಿ ಅವರ ಮನಸ್ಸಿನಲ್ಲಿ ಯಾವ ಭಾವನೆಯಿರುತ್ತದೆಯೋ ಅದೇ ಭಾವನೆ ನಮ್ಮಲ್ಲಿದೆಯೆಂದು ಹೇಳಿದರೆ ತಪ್ಪಾಗಲಾರದು. ತಮ್ಮ ಶಕ್ತಿ ಸಾಮರ್ಥ್ಯಗಳ ವಿಚಾರದಲ್ಲಿ ನಾನು ಹೆಚ್ಚಾಗಿ ಹೇಳಬೇಕಾಗಿಲ್ಲ ತಮ್ಮ ಅಂತರರಾಷ್ಟ್ರೀಯ ಪ್ರಖ್ಯಾತಿ, ತಮ್ಮ ದಕ್ಷತೆ ಜನಜನಿತವಾಗಿದೆ. ತಮ್ಮ ಮುಂದಿರತಕ್ಕ ವಿಶಾಲ ಕ್ಷೇತ್ರದಲ್ಲಿ ತಮ್ಮ ಸೇವೆ ನಮ್ಮ ನಾಡಿಗೂ ಲಭ್ಯವಾಗಲೆಂದು ಈ ಸಮಯದಲ್ಲಿ ನಾನು ಹೃತ್ಪೂರ್ವಕವಾಗಿ ಆಶಿಸುತ್ತೇನೆ.

ಚುನಾಯಿತರಾಗಿರತಕ್ಕ ಮಾನ್ಯ ಅಧ್ಯಕ್ಷರೇ, ತಮ್ಮ ವಿಚಾರದಲ್ಲಿ ನಾನು ಬಹಳ ಹೆಚ್ಚಾಗಿ ಹೇಳಬೇಕಾಗಿಲ್ಲ. ತಾವು ಈ ದಿವಸ ಈ ಸಭೆಯಿಂದ ಚುನಾಯಿಸಲ್ಪಟ್ಟು ಈ ಪವಿತ್ರಸ್ಥಾನಕ್ಕೇರಿಸಲ್ಪಟ್ಟಿದ್ದೀರಿ. ಇದರಿಂದ ಈ ಸಭೆಯ ಹಕ್ಕು ಬಾಧ್ಯತೆಗಳು ಇನ್ನೂ ಹೆಚ್ಚಾಗುತ್ತವೆಂಬುದರಲ್ಲಿ ಏನೂ ಸಂದೇಹವಿಲ್ಲ. ತಮ್ಮ ಗುಣ ಮತ್ತು ವ್ಯಕ್ತಿತ್ವದ ವಿಚಾರವಾಗಿ ಹೆಚ್ಚು ಹೇಳಲು ನನಗೆ ಸಂಕೋಚವಾಗುತ್ತದೆ. ಅನೇಕ ವರ್ಷಗಳಿಂದಲೂ ನಾವು ಆಪ್ತ ಮಿತ್ರರಾಗಿದ್ದೇವೆ. 1930ನೆಯ ಇಸವಿಯಲ್ಲಿ ನಾನು ರಾಜಕೀಯಕ್ಕೆ ಕಾಲಿಡುವುದಕ್ಕಿಂತ ಮುಂಚೆಯೇ ತಾವು ರಾಜಕೀಯಕ್ಕೆ ಪ್ರವೇಶ ಮಾಡಿ ಉನ್ನತವಾದ ಸ್ಥಾನವನ್ನು ಗಳಿಸಿದ್ದೀರಿ. ತಾವು ಯುವಕರಾಗಿದ್ದಾಗಿನಿಂದಲೂ ಸಾರ್ವಜನಿಕ ಕೆಲಸಕಾರ್ಯಗಳಲ್ಲಿ ಉತ್ಸಾಹ ತೋರಿಸುತ್ತಾ ದೇಶಸೇವೆ ಮಾಡುತ್ತಾ ಬಂದಿದ್ದೀರಿ. ಯುವಕ ಸಂಘಕ್ಕೆ ಅಧ್ಯಕ್ಷರಾಗಿದ್ದುಕೊಂಡು ಅನೇಕ ಹಾಸ್ಟೆಲುಗಳಿಗೂ ಉನ್ನತ ಸೇವೆ ಸಲ್ಲಿಸಿದ್ದು ಈಗ ನನ್ನ ನೆನಪಿಗೆ ಬರುತ್ತಿದೆ. 1927ನೆಯ ಇಸವಿಯಿಂದಲೂ ಈ ಸಭೆ ಮತ್ತು ನ್ಯಾಯ ವಿಧಾಯಕ ಸಭೆಗೆ ಸದಸ್ಯರಾಗಿದ್ದುಕ್ಕೊಂಡು ತಾವು ವಹಿಸಿರತಕ್ಕ ಪಾತ್ರ ಮತ್ತು ಮಾಡಿರತಕ್ಕ ಸೇವೆ ಇತಿಹಾಸಾರ್ಹ ವಿಚಾರವಾಗಿದೆಯೆಂದು ಹೇಳುತ್ತೇನೆ ಅಷ್ಟೇ ಅಲ್ಲದೆ, ಬೆಂಗಳೂರು ಡಿಸ್ಟ್ರಿಕ್ಟ್ ಬೋರ್ಡ್ ಪ್ರೆಸಿಡೆಂಟರಾಗಿ ಎರಡು ಅವಧಿಗಳಲ್ಲಿ ಕೆಲಸ ಮಾಡಿ ಮಹತ್ತರವಾದ ಸೇವೆಯನ್ನು ಸಲ್ಲಿಸಿದ್ದೀರಿ. ಅಲ್ಲದೆ ಅನೇಕ ಸಮಿತಿಗಳಲ್ಲಿಯೂ ಸಾರ್ವಜನಿಕ ಸಂಸ್ಥೆಗಳಲ್ಲಿಯೂ ಆಸಕ್ತಿ ವಹಿಸಿ ತಮ್ಮ ಕೆಲಸವನ್ನು ದಕ್ಷತೆಯಿಂದ ನಿರ್ವಹಿಸಿದ್ದೀರಿ. ತಮ್ಮ ಸದ್ಗುಣಗಳ ವಿಚಾರದಲ್ಲಿ, ತಮ್ಮ ಸೌಜನ್ಯ ದೇಶಪ್ರೇಮ, ಪ್ರಜಾವಾತ್ಸಲ್ಯ-ಇವುಗಳ ವಿಚಾರದಲ್ಲಿ ಯಾರೂ ಎಳ್ಳಷ್ಟು ತಮ್ಮ ಕೈಬೆರಳನ್ನು ತೋರಿಸುವ ಹಾಗಿಲ್ಲವೆಂದು ಹೇಳಬಲ್ಲೆ. ಇಂಥವರು ಉನ್ನತ ಪದವಿಗೆ ಬಂದಿರುವುದು ನಮ್ಮೆಲ್ಲರಿಗೂ ಮಹದಾನಂದವನ್ನುಂಟುಮಾಡಿದೆ. ಚುನಾವಣೆ ನಡೆದಿದೆ. ಪ್ರತಿಸ್ಪರ್ಧೆಯಿಲ್ಲದೆಯೇ ಬಂದಿದ್ದರೂ ಇನ್ನೂ ಚೆನ್ನಾಗಿತ್ತೆಂದು ಕೆಲವರು ಅಭಿಪ್ರಾಯ ಪಡಬಹುದು. ಚುನಾವಣೆ ಆಗುವುದು ತಪ್ಪಲ್ಲ. ಚುನಾವಣೆ ಆಗಿದ್ದರೂ ಸಹ ತಮ್ಮ ವಿಷಯದಲ್ಲಿ ಮೆಚ್ಚಿಗೆಯುಳ್ಳವರಾಗಿದ್ದಾರೆ. ಎಲ್ಲರೂ ತಮಗೆ ಸಂಪೂರ್ಣ ಸಹಕಾರ ಕೊಡಲು ಸಿದ್ಧರಾಗಿದ್ದಾರೆಂದು ಭಾವಿಸುತ್ತೇವೆ. ಮುಂದೆ ಆಗತಕ್ಕ ಭಾಷಣಗಳಿಂದ ಇದು ಚೆನ್ನಾಗಿ ವ್ಯಕ್ತವಾಗುತ್ತದೆ ಎಂದು ನಂಬಿದ್ದೇನೆ.

ಈಗ ತಾವು ಈ ಸಭೆಗೆ ಅಧ್ಯಕ್ಷರಾಗಿ ಚುನಾಯಿತರಾಗಿದ್ದೀರಿ; ಪ್ರಭುಗಳು ಕೃಪೆಯಿಂದ ಒಪ್ಪಿದ್ದಾರೆ. ಹಿಂದೆ ಸಭೆಯ ಕೆಲಸ ಕಾರ್ಯಗಳಲ್ಲಿ ಮಾರ್ಗದರ್ಶಕವಾಗಿದ್ದುಕೊಂಡು ಈ ಸಭೆಯ ಹಕ್ಕುಬಾದ್ಯತೆಗಳನ್ನು ಏರ್ಪಾಟು ಮಾಡುತ್ತೀರಿ ಎಂದು ನಮಗೆ ಪೂರ್ಣ ಭರವಸೆ ಇದೆ. ಅನೇಕ ಕ್ಲಿಷ್ಟವಾದ ಸಮಸ್ಯೆಗಳು ಮುಂದೆ ಒದಗಬಹುದು ಅಂಥ ಕಾಲದಲ್ಲಿಯೂ ನಹ ಸದಸ್ಯರೆಲ್ಲರೂ ಸಂಪೂರ್ಣ ಸಹಕಾರವನ್ನು ಕೊಡುತ್ತೇವೆಂಬ ಭರವಸೆ ಕೊಡಲು ಸಂತೋಷಿಸುತ್ತೇನೆ.

ಈ ರೀತಿಯ ಒಂದು ಬದಲಾವಣೆಯಿಂದ ನಾವು ರಾಜಕೀಯದಲ್ಲಿ ಒಂದು ಪ್ರಗತಿಯ ಹೆಜ್ಜೆಯನ್ನಿಟ್ಟಿದ್ದೇವೆ ಹೀಗೆಯೇ ನಾವು ಇನ್ನೂ ಅನೇಕ ಹೆಜ್ಜೆಗಳನ್ನು ಇಡಬೇಕಾಗಿದೆ. ಆದಷ್ಟು ಜಾಗ್ರತೆ ಹೊಸ ರಾಜ್ಯಾಂಗ ಆಚರಣೆಗೆ ಬಂದು ಸಂಪೂರ್ಣ ಜವಾಬ್ದಾರಿ ಸರ್ಕಾರ ನಮ್ಮ ದೇಶದಲ್ಲಿ ಪ್ರತಿಷ್ಠಾಪನೆಯಾಗುತ್ತದೆ. ನಾನು ಮೊದಲೇ ಹೇಳಿದಂತೆ ಕೇಂದ್ರದಲ್ಲಿ ನಡೆಯುವ ಕಾರ್ಯಕ್ರಮಗಳ ಮೇಲೆ ಆಧಾರಪಟ್ಟಿದೆ ಇದು ಸದ್ಯದಲ್ಲೇ ಬೇಗನೇ ಆಗುತ್ತದೆ ಎಂದು ನಾನು ಹಾರೈಸುತ್ತೇನೆ.

ಇನ್ನು ಮೈಸೂರು ಇದುವರೆಗೂ ಭಾರತದಲ್ಲಿ ಯಾವುದೊಂದು ಗಣ್ಯಸ್ಥಾನವನ್ನು ಪಡೆದಿದೆಯೋ ಆ ಗಣ್ಯಸ್ಥಾನವನ್ನು ಕಾಪಾಡಿಕೊಂಡು ಬರುವುದಕ್ಕೆ ತಾವೂ ನಾವೂ ಎಲ್ಲರೂ ಸೇರಿ ಮೈಸೂರಿನ ಭವಿಷ್ಯವನ್ನು ಉಜ್ವಲವಾಗಿ ಮಾಡೋಣ. ಮತ್ತು ಪ್ರಭುಗಳು ನಮ್ಮಿಂದ ಏನೂ ನಿರೀಕ್ಷಿಸುತ್ತಾರೋ ಹಾಗೆಯೇ ಪ್ರಜೆಗಳು ಏನು ನಿರೀಕ್ಷಿಸುತ್ತಿದಾರೋ ಅವೆಲ್ಲವನ್ನೂ ಮನಸ್ಸಿನಲ್ಲಿಟ್ಟುಕೊಂಡು ನಮ್ಮ ಕರ್ತವ್ಯವನ್ನು ಮಾಡೋಣ. ಆ ಕೆಲಸದಲ್ಲಿ ನಮ್ಮೆಲ್ಲರ ಸಂಪೂರ್ಣ ಸಹಕಾರವಿದೆಯೆಂದು ನಾನು ಮೊದಲೇ ಹೇಳಿದ್ದೇನೆ. ಕೊನೆಯದಾಗಿ ಈರ್ವರಿಗೂ ಭಗವಂತನು ಸಕಲ ಸನ್ಮಂಗಳಗಳನ್ನು ಕೊಡಲೆಂದು ಅನನ್ಯ ಭಕ್ತಿಯಿಂದ ಪ್ರಾರ್ಥಿಸಿ ಸಂತೋಷದ ಕಾಲದಲ್ಲಿ ನಾವೆಲ್ಲರೂ ನಿಮ್ಮೊಡನೆ ಪೂರ್ಣ ಸಹಕರಿಸುತ್ತೇವೆ ಎಂಬ ಭರವಸೆ ನೀಡುತ್ತೇನೆ.

## 4. ಬಜೆಟ್ ಮೇಲಿನ ಚರ್ಚೆ

## (ಪ್ರಜಾಪ್ರತಿನಿಧಿ ಸಭೆಯ ನಡವಳಿಕೆಗಳು-6ನೇ ಜೂನ್ 1949)

ಶ್ರೀ ಕೆ. ಚೆಂಗಲರಾಯರೆಡ್ಡಿಯವರು: (ಪ್ರಧಾನ ಸಚಿವರು) -

ಮಾನ್ಯ ಅಧ್ಯಕ್ಷರೇ, ಈಗಾಗಲೇ ವೇಳೆಯಾಗಿರುವುದರಿಂದ ಹೆಚ್ಚುಕಾಲ ತೆಗೆದುಕೊಂಡು ಈ ಸಭೆಯ ಸಹನೆಯನ್ನು ಪರೀಕ್ಷೆ ಮಾಡುವುದಕ್ಕೆ ನನಗೆ ಇಷ್ಟವಿಲ್ಲ. ಮೂರು ದಿವಸಗಳಿಂದ ಈಗಿನ ಮಂತ್ರಿಮಂಡಲದವರು ಈ ಸಭೆಯ ಮುಂದಿಟ್ಟಿರುವ ಬಜೆಟ್ ಅಂದಾಜಿನ ಮೇಲೆ ಸಾಮಾನ್ಯ ಚರ್ಚೆ ಬಹಳ ಸ್ವಾರಸ್ಯಕರವಾಗಿ ಮುಂದುವರೆದಿದೆ. ಅನೇಕ ಮಾನ್ಯ ಸದಸ್ಯರು ವಿಧವಿಧವಾಗಿ ಟೀಕೆಗಳನ್ನು ಮಾಡಿದ್ದಾರೆ. ಇದರಲ್ಲಿರುವ ಕೆಲವು ಲೋಪದೋಷಗಳನ್ನು ಎತ್ತಿತೋರಿಸಿದ್ದಾರೆ. ಹಾಗೂ ಅನೇಕರು ಬಜೆಟನ್ನು ಸ್ವಾಗತ ಮಾಡಿದ್ದಾರೆ. ಸಾಧಾರಣವಾಗಿ ಬಹಳ ವಿಷಯಗಳಿಗೆ ಇದುವರೆಗೆ ಮಾತನಾಡಿದ ಮಾನ್ಯ ಸಹೋದ್ಯೋಗಿಗಳು ವಿವರವಾಗಿ ಉತ್ತರ ಕೊಟ್ಟಿದ್ದಾರೆಂದು ಹೇಳಿದರೆ ತಪ್ಪಾಗಲಾರದು. ಈಗ ಕೆಲವು ಮುಖ್ಯ ವಿಷಯಗಳನ್ನು ಪ್ರಸ್ತಾವಿಸಿ ಕಡೆಯದಾಗಿ ಈ ಸಭೆಯನ್ನು ವಂದಿಸುವುದಕ್ಕಾಗಿ ನಾನು ನಿಂತಿದ್ದೇನೆ. ಈ ಬಜೆಟ್ ವಿಚಾರದಲ್ಲಿ ಒಂದು ಅನುಮಾನವಿರುವ ಹಾಗೆ ಕಾಣುತ್ತದೆ. ಹಿಂದಿನ ವರ್ಷ ಈ ವರ್ಷ ಬಹಳ ಹೆಚ್ಚಾಗಿ ಹಣವನ್ನು ನಾವು ಖರ್ಚು ಮಾಡಿರುವುದರಿಂದ ಈ ದಿವಸ ನಮ್ಮ ದೇಶದ ಹಣಕಾಸಿನ ಪರಿಸ್ಥಿತಿ ಶೋಚನೀಯ ಪರಿಸ್ಥಿತಿಗೆ ಬಂದಿದೆ ಎಂಬ ಒಂದು ಅನುಮಾನವಿರಬಹುದು. ಈ ಬಜೆಟ್‌ನಲ್ಲಿ ಒಂದು ಸಂದೇಹ, ಅನುಮಾನವಿರುವುದು, ದೇಶವು ಮುಂದುವರಿಯುವುದಕ್ಕೆ ಯಾವ ದೃಷ್ಟಿಯಿಂದಲೂ ಕ್ಷೇಮವಲ್ಲ ಎಂದು ಈ ದಿವಸ ನಮ್ಮ ಹಣಕಾಸಿನ ಮಂತ್ರಿಗಳು ಹೇಳಿರುವುದನ್ನು ಪುಷ್ಟೀಕರಿಸಿ ಹಣಕಾಸಿನ ಪರಿಸ್ಥಿತಿಯು ಯಾವ ದೃಷ್ಟಿಯಿಂದಲೂ ಅಸಮರ್ಪಕವಾಗಿಲ್ಲ ಎಂದು ಒತ್ತಿ ಹೇಳಲು ಅನುಮತಿ ಬೇಡುತ್ತೇನೆ. ರಿಸರ್ವ್ ಕಮ್ಮಿಯಾಗಿದೆ. ಅದನ್ನು ಇಲ್ಲವೆಂದು ಹೇಳುವುದಿಲ್ಲ ಯಾವ ಸಂದರ್ಭದಲ್ಲಿ ಕಡಿಮೆಯಾಗಿದೆ ಎಂದು ವಿವರ ಹೇಳಬೇಕಾಗಿಲ್ಲ. ಒಂದು ಡೆವಲಪ್‌ಮೆಂಟ್ ಪ್ರೋಗ್ರಾಮನ್ನು ಮುಂದುವರೆಸಿಕೊಂಡು ಹೋಗಬೇಕಾದರೆ ಅದಕ್ಕೆ ತಕ್ಕಷ್ಟು ಹಣ ಖರ್ಚು ಮಾಡಲೇಬೇಕು. ಎರಡು ವರ್ಷದಲ್ಲಿ ವಿದ್ಯಾಭ್ಯಾಸ ಎಷ್ಟು ಮುಂದುವರೆದಿದೆ ಎಂದು ಹೇಳಬೇಕಾಗಿಯೇ ಇಲ್ಲ. ವೈದ್ಯಕೀಯ ಸೌಲಭ್ಯ, ಗ್ರಾಮಾಭಿವೃದ್ಧಿ ಕಾರ್ಯ, ವಿದ್ಯುಚ್ಛಕ್ತಿ ಇತ್ಯಾದಿ.ಇವುಗಳಿಗೆ ಹೆಚ್ಚಾಗಿ ಖರ್ಚು ಮಾಡಬೇಕಾಗಿ ಬಂದಿದೆ. ಖರ್ಚು ಮಾಡಿದ್ದೇವೆ. ತ್ವರಿತವಾಗಿ ಯೋಜನೆಗಳನ್ನು ಮುಂದುವರೆಸಬೇಕೆಂದು ಪ್ರಯತ್ನ ಮಾಡಿ, ಅವಶ್ಯಕವಾದ ಕಾರ್ಯಕ್ರಮಗಳನ್ನು ಫಲದಾಯಕವಾಗುವಂತೆ ಕ್ರಮ ಕೈಗೊಂಡಿದ್ದೇವೆ. ಇದರ ಜೊತೆಗೆ ಕ್ಯಾಪಿಟಲ್ ವರ್ಕ್ಸ್‌ಗೆ ಸಂಬಂಧಪಟ್ಟ ಪ್ರೋಗ್ರಾಮನ್ನು ಮುಂದುವರೆಸಲು ಶ್ರೀ ಎಲ್. ಸಿದ್ದಪ್ಪನವರು ಹೇಳಿದ ಹಾಗೆ ಹಿಂದಿನ ಸರ್ಕಾರ ಯಾವುದಕ್ಕೆ ಪ್ರಯತ್ನ ಮಾಡಿತ್ತು, ಇದರಲ್ಲಿ ಯಾವುದು ಪೂರ್ಣವಾಗಿಲ್ಲ ಎಂಬುದನ್ನು ನೊಡಬೇಕಾಗಿದೆ. ಹಾಗೆಯೇ ಇನ್ನೂ ಕೆಲವು ಮುಖ್ಯ ಯೋಜನೆಗಳನ್ನು ತೆಗೆದುಕೊಳ್ಳಬೇಕೆಂದು ತೀರ್ಮಾನವಾಗಿದೆ. ಇದಕ್ಕೂ ಹಣ ಬೇಕಾಗಿದೆ. ಇದರ ಜೊತೆಗೆ 1947ನೆಯ ಇಸವಿ ಜನವರಿ ಒಂದರಿಂದ ಸಂಬಳ ಜಾಸ್ತಿ ಮಾಡಿರುವುದರಿಂದ ಅದಕ್ಕೂ ಹೆಚ್ಚು ದುಡ್ಡು ಖರ್ಚಾಗುತ್ತಿದೆ. ಅದನ್ನೂ ಈಗ ನಾವು ಕೊಡಲೇಬೇಕಾಗಿ ಬಂದಿದೆ. ನಮ್ಮ

ದುರ್ದೈವದಿಂದ ಈ ವರ್ಷ ಮಳೆ ಸರಿಯಾಗಿ ಆಗದೆ ಬೆಳೆ ಕಡಿಮೆಯಾಗಿ ಹೊರದೇಶದಿಂದ ಹೆಚ್ಚಾಗಿ ದವಸಧಾನ್ಯಗಳನ್ನು ತರಿಸಬೇಕಾದ ಸಂದರ್ಭ ಬಂದು ಸಬ್ಸಿಡಿ ಹೆಚ್ಚಾಗಿ ಕೊಡಬೇಕಾಗಿ ಬಂತು. ಈ ಕಾರಣಗಳಿಂದ ನಾವು ಹಣವನ್ನು ಹೆಚ್ಚಾಗಿ ನಿಧಿಗಳಿಂದ ಖರ್ಚು ಮಾಡಬೇಕಾಗಿ ಬಂತು. ಹಳ್ಳಿಗಾಡಿನಲ್ಲಿ ನಡೆಯಬೇಕಾದ ಕೆಲಸಗಳನ್ನು ಕಾರ್ಯಕ್ರಮದಂತೆ ಮುಂದುವರೆಸಬೇಕಾದರೆ ರೆವಿನ್ಯೂ ಸರ್‌ಪ್ಲಸ್‌ನಿಂದ ಖರ್ಚು ಮಾಡಬೇಕು. ಇಲ್ಲವೇ ರಿಸರ್ವ್‌ನಿಂದ ಮಾಡಬೇಕು ಅಥವಾ ಸಾಲ ಮಾಡಬೇಕು. ರೆವಿನ್ಯೂ ಸರ್‌ಪ್ಲಸ್‌ನಿಂದ ಮಾಡುವುದಕ್ಕೆ ಸಾಧ್ಯವೇ ಇಲ್ಲ. ಏಕೆಂದರೆ ವಿದ್ಯಾಭ್ಯಾಸ, ವ್ಯವಸಾಯ, ವೈದ್ಯ ಸಹಾಯ, ಆರೋಗ್ಯ, ಗ್ರಾಮಾಭಿವೃದ್ಧಿ, ಈ ಎಲ್ಲ ಕಾರ್ಯಗಳಿಗೂ ಸಹ ರೆವಿನ್ಯೂನಿಂದ ಎಷ್ಟು ಖರ್ಚು ಮಾಡುವುದಕ್ಕೆ ಸಾಧ್ಯವೋ ಅಷ್ಟನ್ನೂ ಮಾಡುವ ನೀತಿಯನ್ನು ಅನುಸರಿಸುತ್ತಿದ್ದೇವೆ. ಆದ್ದರಿಂದ ರೆವಿನ್ಯೂ ಸರ್‌ಪ್ಲಸ್‌ನಿಂದ ಕ್ಯಾಪಿಟಲ್ ವರ್ಕ್ಸ್ ಮುಂದುವರೆಸುವುದಕ್ಕೆ ಈ ದಿವಸ ಸಾಧ್ಯವಿಲ್ಲ. ಮುಂದಕ್ಕೂ ಸಾಧ್ಯವಿಲ್ಲ ಎಂದು ಹೇಳಬೇಕಾಗಿದೆ. ಕ್ಯಾಪಿಟಲ್ ವರ್ಕ್ಸ್ ಮುಂದುವರೆಸುವುದಕ್ಕೆ ಆಗಬೇಕಾದ ಅಸಾಧಾರಣವಾದ ಖರ್ಚನ್ನು ನಾವು ತೂಗಿಸಬೇಕಾದರೆ ಎಲ್ಲ ಹಣವನ್ನೂ ರಿಸರ್ವ್‌ನಿಂದಲೇ ತೆಗೆದುಕೊಳ್ಳಬೇಕು. ಆ ದೃಷ್ಟಿಯಿಂದ ಹಾಗೆ ಮಾಡಿದ್ದೇವೆ. ಹಾಗೆ ಮಾಡದೆ ಇದ್ದರೆ ಬೇರೆ ದಾರಿಯೇ ಇರಲಿಲ್ಲ ಎಂದು ಹೇಳಿದರೆ ಯಾರೂ ಭಿನ್ನಭಿಪ್ರಾಯ ಪಡಲಾರರೆಂದು ಭಾವಿಸಿದ್ದೇನೆ. ಈಗ ನಮ್ಮ ಮುಂದಿರುವ ನಾನಾ ರೀತಿಯ ಅಭಿವೃದ್ಧಿ ಕೆಲಸಗಳನ್ನು ಮುಂದುವರೆಸಲಾಗುತ್ತಿದೆ ಎಂದು ತಿಳಿಸಬಹುದು. ಈಗ ಆಡಳಿತ ನಡೆಸುತ್ತಿರುವವರೇ ಮುಂದೆ ಬರತಕ್ಕವರಿಗೆ ಒಂದು ಅನಾನುಕೂಲವನ್ನು ಈ ವಿಧವಾಗಿ ಮಾಡಬೇಕೆಂಬ ಒಂದು ಸಂಕುಚಿತ ಮನೋಭಾವನೆಯಿಂದ ಕೆಲಸಗಳನ್ನು ನಾವು ಖಂಡಿತ ಮಾಡುತ್ತಿಲ್ಲ. ಈಗ ನಮ್ಮಲ್ಲಿರುವ ನಾರ್ಮಲ್ ರೆವಿನ್ಯೂ ಉತ್ಪತ್ತಿಗನುಸಾರವಾಗಿ ಅದರ ಖರ್ಚು ಸಹ ಸಾಧಾರಣ ರೀತಿಯಲ್ಲಿರುವಂತೆಯೇ ನೋಡಿಕೊಂಡು ಈ ಕ್ಯಾಪಿಟಲ್ ವರ್ಕ್ಸ್‌ಗಳನ್ನು ಕೈಗೊಳ್ಳಲಾಗಿದೆ. ನಮಗಿರತಕ್ಕ ಈ ಅಲ್ಪ ಕಾಲಾವಧಿಯಲ್ಲಿಯೇ ನಮ್ಮ ದೇಶಕ್ಕೆ ಅಗತ್ಯವಾಗಿ ಬೇಕಾದ ಎಲ್ಲ ಕಾರ್ಯಗಳಿಗೂ ನಾವು ಶ್ರದ್ಧೆಯಿಂದ ಕೆಲಸ ನಡೆಸಲು ಪ್ರಯತ್ನಪಡುತ್ತೇವೆ. ಇಂಡಿಯಾ ಸರ್ಕಾರ ದೊಡ್ಡದೊಡ್ಡ ಯೋಜನೆಗಳಿಗೆ ಕೈಹಾಕಲಾಗಿರುತ್ತಾ, ಹಾಗೆ ಒಂದು ವೇಳೆ ಅದಕ್ಕೆ ಹಣದ ಕೊರತೆ ಉಂಟಾದರೆ ಸಾಲದ ರೂಪವಾಗಿಯಾದರೂ ಹಣವನ್ನು ಒದಗಿಸಿಕೊಂಡು ಈ ಕೆಲಸಗಳನ್ನು ಮುಂದುವರೆಸುವ ನೀತಿಯನ್ನು ನಾವು ಅನುಸರಿಸುತ್ತಿದ್ದೇವೆ. ಇದು ಕೇಂದ್ರದವರ ನೀತಿಗನುಗುಣವಾಗಿ ನಡೆಯುತ್ತಿದೆ. ಇದರಂತೆಯೇ ಪ್ರೊಡಕ್ಷನ್ ಕೆಲಸಕಾರ್ಯಗಳನ್ನೂ ಸಹ ಅವರ ಮುಂದಿಟ್ಟಿದ್ದೇವೆ. ಭಾರತ ಸರ್ಕಾರದವರು ಅನೇಕ ಪ್ರಾಂತ ಸರ್ಕಾರಗಳಿಗೆ ಅನೇಕ ರೀತಿಯಲ್ಲಿ ಸಹಾಯಗಳನ್ನು ನೀಡುತ್ತಿದ್ದಾರೆ. ಅದರಂತೆಯೇ ಕೇಂದ್ರದವರಿಂದ ನಮಗೂ ಸಹ ಒಂದಲ್ಲ ಒಂದು ರೀತಿಯಲ್ಲಿ ಅವರ ಸಹಾಯ ದೊರೆಯುವ ನಿರೀಕ್ಷೆಯಿದೆ.

ಶ್ರೀ ಶಂಕರಲಿಂಗೇಗೌಡರು (ನಾಗಮಂಗಲ): ಹಾಗೆ ಒಟ್ಟಿಗೆ ಎಷ್ಟು ಕೋಟಿ ರೂಪಾಯಿಗಳ ಯೋಜನೆಗಳನ್ನು ಅವರ ಮುಂದಿಟ್ಟಿದ್ದೀರಿ.

**ಶ್ರೀ ಕೆ. ಚೆಂಗಲರಾಯರೆಡ್ಡಿಯವರು:** ಹಾಗೆ 150 ಕೋಟಿ ರೂಪಾಯಿಗಳ ಯೋಜನೆಗಳನ್ನು ಅವರ ಮುಂದೆ ಇಟ್ಟಿದೆ. ಈ ರೀತಿ ನಡೆಯತಕ್ಕ ಕೆಲಸಕಾರ್ಯಗಳಲ್ಲಿ ನಾವು ದೂರಾಲೋಚನೆ ಮಾಡಿ ಕೈಹಾಕುತ್ತೇವೆಯೇ ಹೊರತು ಹಾಗೆ ದುಡುಕಿ ಏಕಾಏಕಿ ಕೈಹಾಕುತ್ತೇವೆಂಬ ಭಾವನೆಯನ್ನು ಯಾರೂ ಇಟ್ಟುಕೊಳ್ಳಬಾರದು.

ಎರಡನೆಯದಾಗಿ, ಇಂಥಾ ಮುಖ್ಯ ವಿಚಾರಗಳಲ್ಲಿ ಮೈಸೂರು ಸರ್ಕಾರ ಮತ್ತು ಭಾರತ ಸರ್ಕಾರ ಎರಡೂ ಒಂದಾಗಿ ಹೊಂದಿಕೊಂಡು ಕೆಲಸ ಕಾರ್ಯಗಳನ್ನು ನಡೆಸಲಾಗುತ್ತದೆ. ಹೀಗೆ ಎರಡೂ ಸರ್ಕಾರಗಳೂ ಹೊಂದಿಕೊಂಡು ತಾಯಿ ಮಕ್ಕಳೋಪಾದಿಯಲ್ಲಿ ಕೆಲಸ ನಡೆಸುತ್ತಿರುವಾಗ ತಾವು ಈ ರೀತಿ ಅಭಿಪ್ರಾಯಗಳನ್ನು ಸೂಚಿಸುವುದು ತಪ್ಪೆಂದು ಹೇಳಬೇಕಾಗಿದೆ.

**ಶ್ರೀ ಎಂ. ಶಂಕರಲಿಂಗೇಗೌಡರು:-** ಇನ್ನು ಆ ವಿಲಿನೀಕರಣ ಪ್ರಶ್ನೆಯ ವಿಚಾರವೇನು?

**ಶ್ರೀ ಚೆಂಗಲರಾಯರೆಡ್ಡಿಯವರು:-** ನಾವೆಲ್ಲರೂ ಈಗ ಬಾರತೀಯರು, ಭಾರತದಲ್ಲಿ ನಾವಿರುವುದು ಒಂದು ಭಾಗವಾಗಿದೆ. ಇಡೀ ಭಾರತ ದೇಶವು ತಾಯಿಯೋಪಾದಿಯಲ್ಲಿದ್ದು ನಾವೆಲ್ಲರೂ ಆಕೆಯ ಮಕ್ಕಳೋಪಾದಿಯಲ್ಲಿರುತ್ತೇವೆ. ಇದನ್ನು ನಮ್ಮ ಪ್ರತಿನಿದಿಗಳು ಮನಗಾಣಬೇಕು. ಇದರಿಂದ ಆ ವಿಲಿನೀಕರಣದ ಪ್ರಶ್ನೆ ಅಷ್ಟು ಮಹತ್ವದ್ದೆಂದು ಭಾವಿಸಲಾಗುವುದಿಲ್ಲ.

**ಶ್ರೀ ಎಂ. ಶಂಕರಲಿಂಗೇಗೌಡರು:-** ಹಾಗಾದರೆ ನಮ್ಮ ಮೈಸೂರು ಸಂಸ್ಥಾನ ಅದರಲ್ಲಿ ವಿಲೀನವಾಗಬಹುದೆಂದು ತಿಳಿಸಿದ ಹಾಗಾಯಿತಲ್ಲವೆ?

**ಶ್ರೀ ಕೆ. ಚೆಂಗಲರಾಯರೆಡ್ಡಿಯವರು:-** ಮೂರು ಭಾಗ ಸೇರಿದಂತೆಯೇ ಆಗಿದೆ. ಹೊಸ ರಾಜ್ಯಾಂಗ ಬರುವ ವೇಳೆಗೆ ಸರಿಯಾಗಿ ಭಾರತದಲ್ಲಿರುವ ಎಲ್ಲಾ ಭಾಗಗಳವರೂ, ಪ್ರಾಂತ್ಯಗಳವರೂ ಕೂಡ ಎಲ್ಲರ ಹಾಗೆ ಇರಬೇಕೆಂದು ಪ್ರಯತ್ನ ಮಾಡುತ್ತಿದ್ದೇವೆ ಎಂದರೆ ಅದು ತಪ್ಪಾಗಲಾರದು. ಭಾರತದ ನೀತಿಯನ್ನು ನಾವು ಅನುಸರಿಸಿಕೊಂಡು ಹೋಗಬೇಕಾಗಿದೆ. ಆ ರೀತಿ ನಾವು ಅನುಸರಿಸಿಕೊಂಡು ಹೋಗಬೇಕಾದ ಬಾಬುಗಳ ಪೈಕಿ ಹೇಳುವುದಾದರೆ ಆಹಾರ, ಬಟ್ಟೆ, ಉಪ್ಪು, ವೈದ್ಯಕೀಯ, ಕಬ್ಬಿಣ, ಗೊಬ್ಬರ, ಸಿಮೆಂಟ್, ಇತ್ಯಾದಿ ಅನೇಕ ಬಾಬುಗಳಲ್ಲಿ ಅವರ ಸಲಹೆಗಳಿಗನುಸಾರವಾಗಿ ನಡೆಯಬೇಕಾಗಿದೆ. ಈ ರೀತಿಯಲ್ಲಿ ನಾವು ಅನೇಕ ಬಾಬುಗಳಲ್ಲಿ ಭಾರತ ಸರ್ಕಾರದವರ ಸಲಹೆ ಮತ್ತು ತೀರ್ಮಾನಗಳಿಗೆ ತಲೆಬಾಗಬೇಕಾಗಿರುತ್ತೆ.

ಈಗ ನಾವು ಆಹಾರದ ಪ್ರಶ್ನೆಯನ್ನೇ ತೆಗೆದುಕೊಳ್ಳೋಣ. ನಾವು ಹಿಂದೆ ಅದನ್ನು ಡಿ ಕಂಟ್ರೋಲ್ ಮಾಡಿದಾಗ ಅದರಿಂದ ಬಹಳ ಸಹಾಯವಾಗಬಹುದೆಂದು ಆಸೆ ಇಟ್ಟುಕೊಂಡಿದ್ದೆವು. ಅದರಿಂದ ನಮಗೆ ಖರ್ಚು ಆಗುತಿದ್ದ 1 ಕೋಟಿ ರೂಪಾಯಿಗಳ ಸಬ್ಸಿಡಿ ಸಹ ಉಳಿದಂತಾಯಿತೆಂದು ಸಂತೋಷಭರಿತರಾಗಿದ್ದೆವು. ಆದರೆ ಇತ್ತೀಚೆಗೆ ಭಾರತ ಸರ್ಕಾರದವರು ಮತ್ತೆ ಆಹಾರ ಸಾಮಗ್ರಿಗಳ ಹತೋಟಿಯನ್ನು ಜಾರಿಗೆ ತಂದುದರ ಪರಿಣಾಮವಾಗಿ ನಾವೂ ಸಹ ಅದನ್ನು ಇಲ್ಲಿಯೂ ಜಾರಿಗೆ ತರಲೇಬೇಕಾಯಿತು. ಇದರಿಂದ ಕೆಲವರಿಗೆ ಅಸಮಾಧಾನ ಕೂಡ ಉಂಟಾಯಿತು ಆದರೆ ಹಿಂದೆ ಇದನ್ನು ಡಿ ಕಂಟ್ರೋಲ್ ಮಾಡಿದ್ದ ಕಾರಣದಿಂದ ಇದಕ್ಕಾಗಿ ಬಡ್ಜೆಟ್ಟಿನಲ್ಲಿ ಹಣವನ್ನು ಒದಗಿಸಿರಲಿಲ್ಲ ಈಗ ಅದಕ್ಕಾಗಿ ಹಣವನ್ನು ಖರ್ಚುಮಾಡಬೇಕಾಗಿ ಬಂದಿತು. ಆಹಾರ, ಬಟ್ಟೆ,

ಸೀಮೆಣ್ಣೆ, ಉಪ್ಪು, ಗೊಬ್ಬರ, ಕಬ್ಬಿಣ, ಸಿಮೆಂಟ್ ಇತ್ಯಾದಿ ವಸ್ತುಗಳಿಗೆಲ್ಲ ನಾವು ಈ ದಿವಸ ಭಾರತ ಸರ್ಕಾರದವರ ನೀತಿಯನ್ನು ಅನುಸರಿಸಿಕೊಂಡು ಹೋಗಬೇಕಾಗಿ ಬಂದಿದೆ. ಈ ಬಗ್ಗೆ ಮಾಡಿರತಕ್ಕ ಎಲ್ಲ ಆಕ್ಷೇಪಣೆಗಳನ್ನು ಸರ್ಕಾರದ ಮೇಲೆ ಹೇರಲಾಗುವುದಿಲ್ಲ.ದೇಶಕ್ಕೆ ಬೇಕಾಗುವ ಎಲ್ಲ ವಸ್ತುಗಳ ಸ್ವಪರಿಪೂರ್ಣತೆಯನ್ನುಂಟುಮಾಡುವುದು ನಿಮ್ಮಂತೆಯೇ ಜನ ಸಾಮಾನ್ಯರಾದ ನಮ್ಮಗಳಿಂದ ಸಾಧ್ಯವಾಗದ ಕೆಲಸ. ಆದರೂ ಈ ಬಗ್ಗೆ ಎಲ್ಲ ಪ್ರಯತ್ನಗಳನ್ನು ಸತತವಾಗಿ ಮಾಡುತ್ತಿದ್ದೇವೆ. ಆದರೆ ಜನರೆಲ್ಲರು ಈ ಮಧ್ಯೆ ಯುದ್ಧ ಸಮಯದ ಬದುಕಿನಲ್ಲಿ ನೆರವಾಗಿದ್ದುದರಿಂದ ಈ ಬಾಬಿಗೆ ಹೆಚ್ಚಿನ ಉತ್ತೇಜನ ದೊರೆಯಲು ಕಷ್ಟವಾಯಿತು.

ಇನ್ನು ನಮ್ಮ ಆರ್ಥಿಕ ವಿಲೀನಿಕರಣದ ಬಗ್ಗೆ ಕೇಂದ್ರದವರೊಡನೆ ವಿಶೇಷ ಚರ್ಚೆ ಮಾಡಿದ್ದರೆ ಪರಿಣಾಮವಾಗಿ ನಮ್ಮ ಸಂಸ್ಥಾನಕ್ಕೆ ಖರ್ಚಾಗುತ್ತಿದ್ದ ಅರ್ಧ ಭಾಗದ ಸಬ್‌ಸಿಡಿಯನ್ನು ಈಗ ಕೇಂದ್ರದವರೇ ವಹಿಸಿಕೊಂಡು ಕೆಲಸ ನಡೆಸಲು ಒಪ್ಪಿಕೊಂಡಿದ್ದಾರೆ. ಇನ್ನು ಹೆಚ್ಚು ಆಹಾರ ಬೆಳೆಸುವ ಯೋಜನೆ ಮತ್ತು ನೀರಾವರಿ ಕಾಮಗಾರಿಕೆಗಳ ಬಗ್ಗೆ ಭಾರತ ಸರ್ಕಾರ ನೆರವು ನೀಡಲು ಸಿದ್ಧವಾಗಿದೆ. ಬಾಕಿ ನೆರೆರಾಷ್ಟ್ರಗಳಂತೆ ನಾವೂ ಸಹ ನಮ್ಮ ಸಂಸ್ಥಾನದಲ್ಲಿ ಪರಿಪೂರ್ಣತೆಯಿಂದಿರಲು, ಬಹಳ ತೀವ್ರಶಕ್ತಿಯಿಂದಲೂ ದಕ್ಷತೆಯಿಂದಲೂ ಆ ಕೆಲಸವನ್ನು ಸಾಧಿಸಬೇಕೆಂದು ನಾವು ಸರ್ವಪ್ರಯತ್ನಗಳನ್ನೂ ಮಾಡುತ್ತಿದ್ದೇವೆಂದು ನಾನು ತಮಗೆಲ್ಲರಿಗೂ ತಿಳಿಸಬೇಕಾಗಿದೆ.

ಶ್ರೀ ಎಂ. ಶಂಕರಲಿಂಗೇಗೌಡರು:- ಪ್ರೊವಿನ್‌ಷಿಯಲ್ ರೆವಿನ್ಯೂ ಎಷ್ಟು ಮತ್ತು ಸ್ಟೇಟ್ ರೆವಿನ್ಯೂ ಎಷ್ಟು? ದೇಶದ ಉತ್ಪತ್ತಿ ಮತ್ತು ರೆವಿನ್ಯೂ ಈ ವಿಚಾರಗಳನ್ನೆಲ್ಲ ನಮಗೆ ತಿಳಿಸದೆ ಹಾಗೇನೇ ನೀವು ಗೋಪ್ಯವಾಗಿ ಮಾಡಿಕೊಳ್ಳಬಹುದೋ?

**ಶ್ರೀ ಚೆಂಗಲರಾಯರೆಡ್ಡಿಯವರು:-** ನಮ್ಮ ಮಾನ್ಯ ಆರ್ಥಿಕ ಸಚಿವರು ಈಗಾಗಲೇ ತಿಳಿಸಿರುವಂತೆ ಆ ವಿಚಾರ ಇನ್ನೂ ತೀರ್ಮಾನವಾಗದೆ ಇರುವುದರಿಂದ ಅದನ್ನೆಲ್ಲ ಬಹಿರಂಗಪಡಿಸಿದರೆ ಅದರಿಂದ ಬೇರೆ ಸಂಸ್ಥಾನಗಳವರಿಗೆ ಕೆಲವು ಅನುಕೂಲ ಸ್ಥಾನಗಳು ಉಂಟಾಗಬಹುದಾದ ಸಂದರ್ಭಗಳಿರುವುದರಿಂದ ಆ ಬಾಬನ್ನು ಈಗ ಅಷ್ಟು ಬಹಿರಂಗಪಡಿಸುವುದು ಅನುಚಿತವೆಂದು ಕಾಣುತ್ತದೆ.

**ಶ್ರೀ ಕೆ. ಚಿಕ್ಕಲಿಂಗಯ್ಯನವರು (ಮಂಡ್ಯ ತಾಲ್ಲೂಕು):-** ಅದಕ್ಕಾಗಿ ಒಂದು ಗೋಪ್ಯ ಅಧಿವೇಶನವನ್ನು ತಾವು ಕರೆಯಬಹುದಲ್ಲ?

**ಶ್ರೀ ಕೆ. ಚೆಂಗಲರಾಯರೆಡ್ಡಿಯವರು:-** ಈಗ ಭಾರತ ಸರ್ಕಾರದವರು ನೇಮಕ ಮಾಡಿರುವಂಥ ಫೈನಾನ್‌ಷಿಯಲ್ ವಿಲಿನೀಕರಣ ಸಮಿತಿಯವರು ನಮ್ಮ ಸರ್ಕಾರದವರೊಡನೆ ಚರ್ಚೆ ನಡೆಸಿ ತರುವಾಯ ಅವರು ಭಾರತ ಸರ್ಕಾರಕ್ಕೆ ಒಂದು ವರದಿಯನ್ನು ಒಪ್ಪಿಸಿರುತ್ತಾರೆ. ಭಾರತ ಸರ್ಕಾರದ ಒಪ್ಪಂದಕ್ಕೆ ಮುಂಚೆ ಅದು ಭಾರತ ರಾಜ್ಯಾಂಗ ಸಭೆಯ ಮುಂದೆ ಬರಬೇಕು ಆದುದರಿಂದ ಈ ಬಗ್ಗೆ ಇನ್ನೂ ಯಾವ ಅಂತ್ಯ ನಿರ್ಧಾರಕ್ಕೂ ಬರದೇ ಇರುವುದರಿಂದ ಈ ವಿಚಾರಗಳನ್ನೆಲ್ಲಾ ಈಗ ಈ ಸಭೆಯ ಮುಂದೆ ಬಹಿರಂಗಪಡಿಸುವುದು ಸರಿಯಾದುದಲ್ಲ. ಆದರೆ ಆ ವಿಷಯಗಳೆಲ್ಲ ಕ್ರಮೇಣ ಗೊತ್ತಾಗುತ್ತೆಂದು ಮಾತ್ರ ತಿಳಿಸಬಲ್ಲೆ.

ಇನ್ನು ಡೆವಲಪ್‌ಮೆಂಟ್ ವಿಚಾರವಾಗಿ ಕೆಲವು ವಿಷಯಗಳನ್ನು ತಿಳಿಸಬಹುದಾಗಿತ್ತು. ಆದರೆ ಈಗಾಗಲೇ ಬಹಳ ಕಾಲವಾಗಿದೆ. ತಮಗೆ ಹೆಚ್ಚಿನ ತೊಂದರೆ ಕೊಡುವುದಕ್ಕೆ ನಾನು ಇಷ್ಟಪಡುವುದಿಲ್ಲ. ಆದ್ದರಿಂದ ಜಾಗ್ರತೆ ನನ್ನ ಭಾಷಣ ಮುಗಿಸಲು ಪ್ರಯತ್ನಪಡುತ್ತೇನೆ.

**ಶ್ರೀ ಧರ್ಮಪ್ಪ (ಮಂಜರಾಬಾದ್ ಗ್ರಾಮೀಣ):-** We are anxious to hear everything, sir. you may take some more time.

**ಶ್ರೀ ಕೆ. ಚೆಂಗಲರಾಯರೆಡ್ಡಿಯವರು:-** ಇಂಡಿಯಾ ಸರ್ಕಾರದವರ ನೀತಿಗನುಗುಣವಾಗಿ ಈಗ ನಾವು ನಮ್ಮ ಅಭಿವೃದ್ಧಿ ಕಾರ್ಯಗಳನ್ನು ಮುಂದುವರೆಸಿಕೊಂಡು ಹೋಗಬೇಕಾಗಿದೆ. ನಮ್ಮ ಅಭಿವೃದ್ಧಿ ಕಾರ್ಯಗಳಿಗೆಲ್ಲ ನಮ್ಮ ಬಜೆಟ್‌ನಲ್ಲಿ ಹಣ ಒದಗಿಸುವುದಕ್ಕೆ ಒಂದಲ್ಲ ಒಂದು ರೀತಿಯಲ್ಲಿ ಶಂಕೆ ಬರುತ್ತೆ. ಇದರಂತೆಯೇ ವಿದ್ಯಾಭ್ಯಾಸದ ವಿಷಯದಲ್ಲಿಯೂ ಮಾನ್ಯ ಸಚಿವರು ಎಲ್ಲ ವಿಷಯಗಳನ್ನೂ ಆಮೂಲಾಗ್ರವಾಗಿ ತಿಳಿಸಿದ್ದಾರೆ. ಈ ಬಾಬಿನಲ್ಲಿ ಖರ್ಚು ಮಾಡಲು ಸರ್ಕಾರ ಈಗ 3 ಕೋಟಿ ರೂಪಾಯಿಗಳನ್ನು ಒದಗಿಸಿದ್ದಾರೆ. ಇದರಿಂದ ಸ್ಕೂಲುಗಳ ಸಂಖ್ಯೆಯೇನೋ ಹೆಚ್ಚಾದಂತಾಯಿತು. ಇಷ್ಟಾದ ಮಾತ್ರಕ್ಕೆ ಸಾಲದು, ಈ ಶಾಲೆಗಳಲ್ಲಿ ಪಾಠಪ್ರವಚನಗಳೂ ಸಹ ಮೇಲ್ಮಟ್ಟದಲ್ಲಿಯೇ ಇರುವಂತೆ ನೋಡಿಕೊಳ್ಳುವುದು ಅತ್ಯಂತ ಮುಖ್ಯವಾದ ವಿಚಾರ. ಈಗಾಗಲೇ ಅನೇಕ ಮಾಧ್ಯಮಿಕ ಶಾಲೆಗಳೂ, ಹೈಸ್ಕೂಲು ಇಂಟರ್ ಕಾಲೇಜುಗಳು ಮತ್ತು ಫಸ್ಟ್‌ಗ್ರೇಡ್ ಕಾಲೇಜುಗಳನ್ನು ಹೆಚ್ಚಿಸಿರುವುದರಿಂದ ಜನರಿಗೆಲ್ಲ ವಿದ್ಯಾಭ್ಯಾಸದಲ್ಲಿ ಹೆಚ್ಚಿನ ಆಸಕ್ತಿ ಉಂಟಾಗಿದೆಯೆಂದು ಗೊತ್ತಾಗುತ್ತದೆ. ಈಗ ಒಂದೆರಡು ವರ್ಷಗಳಲ್ಲಿ ಬೇಕಾದಷ್ಟು ಶಾಲಾ ಕಾಲೇಜುಗಳನ್ನು ತೆರೆಯಲಾಗಿದೆ. ಆದರೆ ಅವುಗಳ ಗುಣಮಟ್ಟವನ್ನು ಉತ್ತಮಪಡಿಸುವುದು ಮತ್ತು ಅವುಗಳಿಗೆ ಬೇಕಾಗಿರುವ ಸಲಕರಣೆಗಳನ್ನು ಒದಗಿಸುವುದು ಇತ್ಯಾದಿ ಕಾರ್ಯಗಳಿಗೆಲ್ಲ ಪ್ರಾರಂಭದಿಂದಲೂ ವ್ಯವಸ್ಥೆ ಮಾಡಬೇಕಾಗಿದೆ. ಇದನ್ನು ಸಂಪೂರ್ಣಗೊಳಿಸಿದ ನಂತರ ಈ ಶಾಲಾಕಾಲೇಜುಗಳ ಸಂಖ್ಯೆಯನ್ನು ಹೆಚ್ಚು ಮಾಡಿದರೆ ಅನುಕೂಲವೆಂದು ಸೂಚಿಸುತ್ತೇನೆ. ಈಗ ಪ್ರಾಥಮಿಕ ಮತ್ತು ಮಾಧ್ಯಮಿಕ ಶಾಲೆಗಳ ವಿಚಾರವಾಗಿ ಅವುಗಳಲ್ಲಿ ಪ್ರಗತಿಮಾರ್ಗವಾದ ಬದಲಾವಣೆಗಳನ್ನು ಮಾಡಬೇಕೆಂದು ಉದ್ದೇಶಿಸಲಾಗಿದೆ. ಇದು ಬಹಳ ಮುಖ್ಯವಾದ ವಿಷಯ.

**ಶ್ರೀಮತಿ ಗಂಗಮ್ಮನವರು (ತುಮಕೂರು ಸ್ತ್ರೀಯರು):-** ಹೆಣ್ಣುಮಕ್ಕಳ ಮಾಧ್ಯಮಿಕ ಮತ್ತು ಹೈಸ್ಕೂಲುಗಳ ವಿಚಾರವಾಗಿ ತಾವೇನು ಮಾಡಿದ್ದೀರಿ?

**ಶ್ರೀ ಕೆ. ಚೆಂಗಲರಾಯರೆಡ್ಡಿಯವರು:-**ಈಗ ಗಂಡಸರೂ ಹೆಂಗಸರೂ ಸರಿಸಮಾನವಾದ ತಮ್ಮ ಹಕ್ಕುಗಳಿಗೆ ಹೊಡೆದಾಡುವ ಕಾಲವೇ ಬಂದಿದೆ. ಎಲ್ಲೆಲ್ಲಿಯೂ ಈಗ ಹೆಂಗಸರು ಗಂಡಸರೆಂಬ ಭೇದಭಾವವಿಲ್ಲದೆ ಎಲ್ಲ ಅನುಕೂಲಗಳೂ ವ್ಯತ್ಯಾಸವಿಲ್ಲದೆ ಒದಗುತ್ತಿರುವಾಗ ಇನ್ನು ಹಾಗೆ ಪ್ರತ್ಯೇಕ ಪಾಠಶಾಲೆಗಳಿಗೆ ಅಷ್ಟಾಗಿ ಅವಶ್ಯಕತೆ ಇರುವುದಿಲ್ಲವೆಂದು ಭಾವಿಸುತ್ತೇನೆ.

**ಶ್ರೀಮತಿ ಗಂಗಮ್ಮನವರು:** ಪರಿಸ್ಥಿತಿ ಆ ಮಟ್ಟಕ್ಕೆ ಬಂದ ಮೇಲೆ ತಾವು ಇದನ್ನೆಲ್ಲ ಯೋಚಿಸಬಹುದಲ್ಲವೆ?

ಶ್ರೀ ಕೆ. ಚೆಂಗಲರಾಯರೆಡ್ಡಿಯವರು:– ಓಟು ಮಾಡತಕ್ಕ ಅರ್ಹತೆಯುಳ್ಳ ಒಟ್ಟು ಪ್ರಜೆಗಳಲ್ಲಿ 40 ಲಕ್ಷ ಗಂಡಸರಿದ್ದರೆ 25 ಲಕ್ಷ ಹೆಣ್ಣು ಮಕ್ಕಳು ಸಹ ಈಗ ಓಟು ಕೊಡುವ ಅವಕಾಶ ಉಂಟಾಗಿದೆ. ಆದರೆ ತಾವು ತಿಳಿಸಿದ ಪ್ರಕಾರ ಮಾಡುವುದಿಲ್ಲವೆಂದು ನಾನು ತಿಳಿಸಲಿಲ್ಲ. ಮುಂದೆ ಏನು ಆಗಬಹುದೆಂಬುದನ್ನು ಸೂಚಿಸಿದೆ. ಈಗ ಇರತಕ್ಕ ಸನ್ನಿವೇಶದಲ್ಲಿ ವರ್ತಿಸುವುದಕ್ಕೆ ಯಾರೂ ಅಭ್ಯಂತರಪಡಬಾರದು.

ಇನ್ನು ಮರಾಮತ್ ಶಾಖಾ ಮಾನ್ಯ ಸಚಿವರು ವ್ಯವಸಾಯದ ವಿಚಾರದಲ್ಲಿ ಅಪ್ಪಣೆ ಕೊಡಿಸಿರುವಂತೆ ನಾವು ಒಂದು ಸಮಿತಿಯನ್ನು ಅನುಸರಿಸಿಕೊಂಡು ಕಾರ್ಯಾಚರಣೆಗಳನ್ನು ನಡೆಸುತ್ತಿದ್ದೇವೆ. ಒಟ್ಟಿನಲ್ಲಿ ಈಗಾಗಲೇ ಮಾನ್ಯ ಸಚಿವರು ತಿಳಿಸಿರುವ ಪ್ರಕಾರ ತಾವು ಕೊಟ್ಟಿರುವ ಎಲ್ಲರ ಸಲಹೆಗಳನ್ನು ಗಮನದಲ್ಲಿಟ್ಟುಕೊಂಡು ಅದಕ್ಕೆ ಅನುಸಾರವಾಗಿ ಕಾರ್ಯಾಚರಣೆ ನಡೆಸಲಾಗುವುದೆಂದು ತಿಳಿಸುತ್ತೇವೆ. ಇನ್ನು ರೂರಲ್ ಡೆವಲಪ್‌ಮೆಂಟಿನ ಯೋಜನೆ, ಇದರ ಸದುದ್ದೇಶದ ಬಗ್ಗೆ ಸಭೆಯಲ್ಲಿ ಎಲ್ಲ ಸದಸ್ಯರು ಅದನ್ನು ಒಮ್ಮತವಾಗಿ ಒಪ್ಪಿಕೊಳ್ಳುವುದರಲ್ಲಿ ಯಾವ ಸಂದೇಹವೂ ಇಲ್ಲ. ಆದರೆ ಯಾವುದೋ ಒಂದು ಪಾರ್ಟಿಯವರು ಒಂದು ಶಕ್ತಿ ಸಂಘಟನೆಯಾಗಿ ಇದನ್ನು ಮಾಡಿಕೊಂಡಿರುವುದರಿಂದ ಸಮಗ್ರ ಗ್ರಾಮಾಭಿವೃದ್ಧಿ ಯೋಜನೆಯಲ್ಲಿ ಇದು ಗೋಮುಖ ವ್ಯಾಘ್ರ ಯೋಜನೆಯೆಂದು ತಿಳಿಸಿದರು. ಆದರೆ ಖಂಡಿತವಾಗಿಯೂ ಇದು ಆ ರೀತಿಯಲ್ಲಿಲ್ಲ. ಗ್ರಾಮಾಭಿವೃದ್ಧಿ ಯೋಜನೆಯು ಸಮಗ್ರವಾಗಿದೆಯೇ ಹೊರತು ಗೋಮುಖ ವ್ಯಾಘ್ರವಾಗಿಲ್ಲವೆಂದು ಹೇಳಿದರೆ ತಾವೆಲ್ಲರೂ ಅದನ್ನು ದೊಡ್ಡ ಮನಸ್ಸು ಮಾಡಿ ಒಪ್ಪಿಕೊಳ್ಳಬೇಕೆಂದು ಹೇಳುತ್ತೇನೆ.

ಶ್ರೀ ವೈ. ಧರ್ಮಪ್ಪನವರು: (ಮಂಜರಾಬಾದ್ ತಾ. ಗ್ರಾಮೀಣ):– ಆ ಸಂಸ್ಥೆಯಲ್ಲಿ ಎಲ್ಲರ ಮನಸ್ಸಿಗೆ ಒಪ್ಪುವಂತೆ ಪ್ರಾತಿನಿಧ್ಯ ಕೊಡದಿರಲು ಕಾರಣವೇನು?

ಶ್ರೀ ಕೆ. ಚಂಗಲರಾಯರೆಡ್ಡಿಯವರು:– ಆದರೆ ಇದು ಹಿಂದೆಯೇ ನಾನು ಅನೇಕ ಕಡೆಗಳಲ್ಲಿ ತಿಳಿಸಿರುವಂತೆ ಈ ಗ್ರಾಮಾಭಿವೃದ್ಧಿ ಯೋಜನೆಯು ಅನೇಕ ದಿವಾನರುಗಳ ಕಾಲದಿಂದಲೂ ನಡೆದುಕೊಂಡು ಬಂದಿರುತ್ತದೆ. ಹಿಂದೆ ಸರ್.ಎಂ. ವಿಶ್ವೇಶ್ವರಯ್ಯನವರ ಕಾಲದಲ್ಲಿ ಒಂದು ತರಹ ಇತ್ತು. ಹೀಗೆ ಒಬ್ಬರ ಕಾಲದಲ್ಲಿ ಒಂದೊಂದು ತರಹ ನಡೆದುಕೊಂಡು ಬಂದಿರುತ್ತದೆ. ಆಗ ನಾವು ಹಿಂದೆ ಆ ಯೋಜನೆಗಳು ಯಾವ ರೀತಿ ಫಲಕಾರಿಯಾಗಿದ್ದವೆಂಬ ವಿಷಯಗಳನ್ನೆಲ್ಲ ಕೂಲಂಕಷವಾಗಿ ವಿಮರ್ಶೆ ಮಾಡಿ ಎಲ್ಲದಕ್ಕೂ ಮಿಗಿಲಾಗಿ ಹೆಚ್ಚು ಯಶಸ್ವಿಯಾಗುವಂಥ ಎಲ್ಲರ ಮನ್ನಣೆಗೆ ಪಾತ್ರವಾಗುವಂಥ ಯೋಜನೆಯನ್ನು ಈಗ ತಯಾರು ಮಾಡಿದ್ದೇವೆ. ಇನ್ನು ಈ ಜಿಲ್ಲಾ ಬೋರ್ಡ್‌ಗಳ ಮತ್ತು ರೂರಲ್ ಡೆವಲಪ್‌ಮೆಂಟುಗಳ ವಿಚಾರದಲ್ಲಿ ಹಲವಾರು ಪ್ರಶ್ನೆಗಳನ್ನು ಹಾಕಿರುತ್ತಾರೆ. ಆದರೆ ಆ ವಿಚಾರವಾಗಿ ಸರ್ಕಾರದವರು ಇನ್ನೂ ಯಾವ ಆಖೈರು ತೀರ್ಮಾನಕ್ಕೆ ಬಂದಿರುವುದಿಲ್ಲ.

ಶ್ರೀ ಎಲ್. ಸಿದ್ದಪ್ಪನವರು:– ಬರೀ ಅರ್ಥ ವಿವರಣೆಯಿಂದ ಏನು ಪ್ರಯೋಜನ?

**ಶ್ರೀ ಕೆ. ಚೆಂಗಲರಾಯರೆಡ್ಡಿಯವರು:-** ಈ ರೂರಲ್ ಡೆವಲಪ್‌ಮೆಂಟ್ ಯೋಜನೆಯಿಂದ ಏನು ಕೆಲಸ ಕಾರ್ಯಗಳು ನಡೆಯುತ್ತವೆಯೋ ಅದೇ ಕೆಲಸ ಕಾರ್ಯಗಳು ಈ ಜಿಲ್ಲಾ ಬೋರ್ಡ್‌ಗಳಿಂದಲೂ ನಡೆಯುತ್ತಿದೆ. ಆದರೆ ಇವೆರಡರಲ್ಲಿ ಯಾವುದನ್ನು ಉಳಿಸಬೇಕು ಯಾವುದನ್ನು ತೆಗೆಯಬೇಕು ಎಂಬ ವಿಚಾರದಲ್ಲಿ ಸರ್ಕಾರದವರು ಬಹಳ ಕೂಲಂಕಷವಾಗಿ ಆಲೋಚನೆ ಮಾಡುತ್ತಿದ್ದಾರೆ. ಈ ಸಂಬಂಧವಾಗಿ ಒಂದು ಸಮಗ್ರವಾದ ತಕ್ಕ ಬದಲಾವಣೆಯನ್ನು(overhaul) ಮಾಡಬೇಕೆಂಬ ಉದ್ದೇಶ ಸರ್ಕಾರದವರ ಗಮನದಲ್ಲಿದೆ. ಈ ಬಗ್ಗೆ ಕೆಲಸ ಕಾರ್ಯಗಳನ್ನು ನಡೆಸುತ್ತಿರುವ ಮೂರು ಏಜೆನ್ಸಿಗಳನ್ನು ಒಟ್ಟುಗೂಡಿಸಿ, ಕೋ-ಆರ್ಡಿನೇಟ್ ಮಾಡಿ ಅವರೆಲ್ಲರೂ ಒಂದು ತೀರ್ಮಾನಕ್ಕೆ ಬಂದ ಮೇಲೆ ಅವರ ವರದಿಗಳಿಗನುಗುಣವಾಗಿ ಸರ್ಕಾರದವರು ಆಲೋಚನೆ ಮಾಡತಕ್ಕವರಾಗಿದ್ದಾರೆ. ಬಹುಶಃ ಮುಂದಿನ ಅಕ್ಟೋಬರ್ ಅಧಿವೇಶನದ ಹೊತ್ತಿಗೆ ವೇಳಾಪಟ್ಟಿಯಲ್ಲಿ ಈ ಬಗ್ಗೆ ಒಂದು ಮಸೂದೆಯು ಸಹ ಸಭೆಯ ಮುಂದೆ ಬರಬಹುದೆಂದು ನಾನು ಸೂಚಿಸಲಿಚ್ಛಿಸುತ್ತೇನೆ. ಹಾಗೆ ಆ ಮಸೂದೆಯು ತಮ್ಮ ಮುಂದೆ ಬಂದ ಕಾಲದಲ್ಲಿ ರೀತಿ ನೀತಿಗಳ ವಿಷಯಗಳಲ್ಲಿ ಏನು ಆಕ್ಷೇಪಣೆಗಳು ಬರುತ್ತವೊ ನೋಡಿಕೊಂಡು ಮತ್ತು ನೆರೆಹೊರೆಯ ಪ್ರಾಂತ್ಯಗಳಲ್ಲಿ ಈಗಾಗಲೇ ಯಾವ ರೀತಿ ಕಾರ್ಪೊರೇಷನ್‌ಗಳನ್ನು ಏರ್ಪಡಿಸಿಕೊಂಡಿದ್ದಾರೋ ಅವುಗಳನ್ನೆಲ್ಲ ಪರಿಶೀಲಿಸಿ ಯಾವ ಆಕ್ಷೇಪಣೆಗಳಿಗೂ ಅವಕಾಶವಿಲ್ಲದೆ ಎಲ್ಲರೂ ಅನುಮೋದಿಸಿ ಸಹಕರಿಸುವುದಕ್ಕೆ ಅನುಕೂಲವಾಗುವಂತೆ ಮಸೂದೆಯನ್ನು ರಚಿಸಲಾಗುವುದು ಎಂದು ಹೇಳುತ್ತೇನೆ. ಆದರೆ ಅನೇಕ ಮಾನ್ಯ ಸದಸ್ಯರು ಈ ಸಂಸ್ಥೆಗಳಲ್ಲೆಲ್ಲ ಬರೀ ಕಾಂಗ್ರೆಸ್ ಪಕ್ಷದವರೇ ಸೇರಿಕೊಂಡಿದ್ದಾರೆ. ಅದರಲ್ಲಿ ಬೇರೆಯವರು ಇರುವುದೇ ಬೇಡವೇ ಎಂಬ ಒಂದು ಪ್ರಶ್ನೆಯನ್ನು ಎತ್ತಿದ್ದಾರೆ. ಆದರೆ ಅದಕ್ಕೆ ಉತ್ತರವನ್ನು ಮಾನ್ಯ ಗೃಹ ಸಚಿವರು ತಮ್ಮ ಉತ್ತರದಲ್ಲಿ ತಿಳಿಸಿರುವಂತೆ ಈ ಸಂಸ್ಥೆಗಳಲ್ಲಿ ಪ್ರತಿನಿಧಿ ಸಭೆ, ಶಾಸನ ಸಭೆ, ಜಿಲ್ಲಾ ಬೋರ್ಡ್ ಇವುಗಳ ಇತರ ಪಕ್ಷಗಳಿಗೆ ಸೇರಿದ ಸದಸ್ಯರುಗಳನ್ನೂ ಸಹ ಇದರಲ್ಲಿ ಸೇರಿಸಲಾಗಿದೆ.

**ಶ್ರೀ ಎಂ. ಶಂಕರಲಿಂಗೇಗೌಡರು:** ಪಾಠಶಾಲೆಯ ಜವಾನರುಗಳನ್ನು ಮತ್ತು ಡಿಪೋ ಪಿವನ್‌ಗಳನ್ನು ಸಹ ಸೇರಿಸಿದ್ದಾರೆ.

**ಶ್ರೀ ಕೆ. ಚೆಂಗಲರಾಯರೆಡ್ಡಿಯವರು:-** ಈ ವಿಷಯದಲ್ಲಿ ಸರ್ಕಾರದವರ ಖಚಿತವಾದ ನೀತಿ ಏನಿದೆಯೆಂದರೆ ಈ ಆಹಾರ ಸಮಿತಿ, ಬಟ್ಟೆ ಕಂಟ್ರೋಲ್ ಸಮಿತಿ, ಸಿಮೆಂಟ್ ಹಂಚಿಕೆಯ ಸಮಿತಿಗಳ ಪರವಾಗಿ ಚುನಾವಣೆ ನಡೆಸುತ್ತಿರುವುದು ಕೇವಲ ಅವುಗಳನ್ನೆಲ್ಲಾ ಕಾಂಗ್ರೆಸ್ ಅವರೇ ಆಕ್ರಮಿಸಿಕೊಳ್ಳಬೇಕೆಂಬ ಮನೋಭಾವದಿಂದಾಗಲಿ ಹಾಗೂ ಒಂದು ಅಧಿಕಾರ ಹೊಂದಬೇಕೆಂಬ ಉದ್ದೇಶದಿಂದಾಗಲೀ ನಡೆಸುವುದಿಲ್ಲ ಎಂಬುದನ್ನು ಮಾನ್ಯ ಸದಸ್ಯರೆಲ್ಲರೂ ಮನಗಾಣಬೇಕಾಗಿದೆ. ಅಲ್ಲದೆ ಯಾವ ಸಮಿತಿಯಲ್ಲಾಗಲಿ ಸರಿಯಾದ ಪ್ರತಿ ಸ್ಪರ್ಧೆ ಹೂಡತಕ್ಕ ಒಂದು ಪಂಗಡವಿರಬೇಕೆಂಬುದು ನಮ್ಮ ಅಭಿಮತ.

**ಶ್ರೀ ಬಿ. ಹುಚ್ಚೇಗೌಡರು:-** ಸಾಧಾರಣವಾಗಿ ಹಾಗೆ ಅವಕಾಶವಿರುವ ಸಾವಿರಾರು ಸ್ಥಾನಗಳಿಗೆ ನಿಮ್ಮ ಪೈಕಿ 100 ಜನಕ್ಕೆ ಕಾಂಗ್ರೆಸಿನವರಿಗೆ ಅವಕಾಶ ಸಿಕ್ಕಿದ್ದರೂ ಸಹ ನಮ್ಮ ಪಾರ್ಟಿಗಳಿಗೆ 10 ಜನರಿಗಾದರೂ ಸಿಕ್ಕೇ ಸಿಕ್ಕುತ್ತದೆ.

ಶ್ರೀ ಕೆ. ಚೆಂಗಲರಾಯರೆಡ್ಡಿಯವರು:- ಸರ್ಕಲ್ ಸಮಿತಿಗಳನ್ನು ನೋಡಬೇಕೆಂದಿದೆ. ಅದನ್ನು ಮಾಡುತ್ತೇವೆ. ಇನ್ನು ಆರೇಳು ತಿಂಗಳುಗಳಲ್ಲಿ ಹೊಸ ಕಾನೂನು ಜಾರಿಗೆ ಬಂದ ಮೇಲೆ ಎಲ್ಲವೂ ಸರಿಹೋಗಬಹುದೆಂಬ ನಂಬಿಕೆ ಇದೆ.

ಶ್ರೀ ಎಂ. ಶಂಕರಲಿಂಗೇಗೌಡರು:- ಆ ಬಿಲ್ಲಿನ ಪ್ರಕಾರ ಜಿಲ್ಲಾ ಬೋರ್ಡ್‌ಗಳು ವಜಾವಾಗುತ್ತವೆಯೇ?

ಶ್ರೀ ಚೆಂಗಲರಾಯರೆಡ್ಡಿಯವರು:- ಅದನ್ನು ನಾನು ಈಗಾಗಲೇ ಹೇಳಲಾರೆ. ಇನ್ನು ಎರಡು ವಿಚಾರಗಳನ್ನು ಹೇಳಿ ಮುಗಿಸುತ್ತೇನೆ. ಪಬ್ಲಿಕ್ ಸರ್ವಿಸ್ ಕಮಿಷನ್ ಮಾಡಲಿಲ್ಲವೆಂದು ಸರ್ಕಾರದ ಮೇಲೆ ಒಂದು ಮುಖ್ಯವಾದ ಟೀಕೆ ಬಂತು. ಅದು ಸಕಾರಣವಾಗಿದೆ. ಅನೇಕ ಜನರು ಮಂತ್ರಿಗಳಲ್ಲಿಗೆ ಬಂದು ಅವರಿಗೆ ಕೆಲಸಕೊಡಿಸಿ ಇವರಿಗೆ ಕೆಲಸಕೊಡಿಸಿ ಎಂದು ನೂರಾರು ಜನರು ಸಿಫಾರಸ್ಸು ಮಾಡುವರು. ಒಬ್ಬರಿಗೆ ಕೆಲಸ ಕೊಟ್ಟರೆ ಮಿಕ್ಕ 99 ಜನರಿಗೆ ಅಸಮಾಧಾನವಾಗುವುದು ಈ ಕಷ್ಟವೆಲ್ಲ ತಪ್ಪುತ್ತದೆ. ಆದರೆ ನಾವು ಅಧಿಕಾರವನ್ನು ದುರುಪಯೋಗಪಡಿಸುವುದಕ್ಕಾಗಲಿ ಅಥವಾ ಅಧಿಕಾರ ಚಲಾಯಿಸುವುದಕ್ಕಾಗಲಿ ಪಬ್ಲಿಕ್ ಸರ್ವಿಸ್ ಕಮಿಷನ್ ಮಾಡುವುದನ್ನು ತಡೆದಿದ್ದೇವೆಂದು ಹೇಳುತ್ತಾರೆ ಇದು ಖಂಡಿತವಾಗಿಯೂ ಸರಿಯಿಲ್ಲ. ಈ ದೃಷ್ಟಿಯಿಂದ ನಾನು ಪುನಃ ಪೂರ್ವಕವಾಗಿ ಹೇಳುವುದೇನೆಂದರೆ ಅಧಿಕಾರವನ್ನು ಈ ರೀತಿ ದುರುಪಯೋಗ ಪಡಿಸಲು ತಡೆಮಾಡಿಲ್ಲ. ಈ ಪಬ್ಲಿಕ್ ಸರ್ವಿಸ್ ಕಮಿಷನ್ ಆಗಿ ಈ ಕೆಲಸವನ್ನು ನಿರ್ವಹಿಸುವ ಈ ದಿವಸ ಎಷ್ಟು ಬೇಗ ಬರುತ್ತದೆಯೋ ಅಷ್ಟು ನಮಗೆ ಅನುಕೂಲ. ಅದು ಬಂದ ದಿವಸ ಮಂತ್ರಿಗಳಿಗೆ ಸಮಾಧಾನವಾಗುತ್ತದೆ. ಕೀರ್ತಿ ಬರುತ್ತದೆ. ಅವರ ಕೆಲಸ ಕಾರ್ಯಗಳೆಲ್ಲವೂ ಸರಿಯಾಗಿ ಆಗುತ್ತದೆ.

ಶ್ರೀ ಎಸ್. ಸಿ . ಮಲ್ಲಯ್ಯನವರು:- ತಾವು ಅಧಿಕಾರದಿಂದ ಹೋಗುವಾಗ ಇದನ್ನು ಕೊಡುತ್ತೀರಾ.

ಶ್ರೀ ಚೆಂಗಲರಾಯರೆಡ್ಡಿಯವರು:- ಪ್ರಜಾಪ್ರತಿನಿಧಿ ಸಭೆಗೆ ಹೆಚ್ಚಿನ ಅಧಿಕಾರ ಕೊಡುವ ವಿಚಾರ ಈ ಸಭೆಯಸದಸ್ಯರಿಗೆ ಹೆಚ್ಚಿನ ಅಧಿಕಾರ ಕೊಡುವ ವಿಚಾರ ಪಬ್ಲಿಕ್ ಸರ್ವಿಸ್ ಕಮಿಷನ್ ನೇಮಕ ಮಾಡುವ ವಿಚಾರ,ಬಜೆಟ್ ವಿಷಯದಲ್ಲಿ ಈ ಸಭೆಗೆ ಹೆಚ್ಚಿನ ಅಧಿಕಾರ ಕೊಡುವ ವಿಚಾರ ಇವೆಲ್ಲವೂ ಪ್ರಜಾಸತ್ತಾತ್ಮಕ ಸರ್ಕಾರಕ್ಕೆ ತೋಚದೆ ಇಲ್ಲ. ಇವುಗಳನ್ನು ಉದ್ದೇಶಪೂರ್ವಕವಾಗಿ ತಡೆ ಮಾಡಿಲ್ಲ. ಈ ರೀತಿ ಮಾಡತಕ್ಕ ಅಭಿಪ್ರಾಯವೂ ಇಲ್ಲವೆಂದು ಖಚಿತವಾಗಿ ಹೇಳುತ್ತೇನೆ.

ಶ್ರೀ ಎಫ್. ಸಿ. ದೇವರಾಜ ಅರಸ್:- What about the Seperation of Judiciary and Executive?

ಶ್ರೀ ಕೆ. ಚೆಂಗಲರಾಯರೆಡ್ಡಿಯವರು:- ಅದು ವಿವಾದಾಸ್ಪದವಾದ ವಿಚಾರ. ಈಗಲೇ ಹೇಳುವುದಕ್ಕಾಗುವುದಿಲ್ಲ.

ಶ್ರೀ ಭೂಪಾಳಂ ಆರ್. ಚಂದ್ರಶೇಖರಯ್ಯನವರು:- ಹೈಕೋರ್ಟಿಗೆ ಸಂಪೂರ್ಣ ಸ್ವಾತಂತ್ರ್ಯ ಕೊಡುವ ವಿಚಾರ

ಶ್ರೀ ಕೆ. ಚೆಂಗಲರಾಯರೆಡ್ಡಿ:- ಪ್ರಜಾಸತ್ತಾತ್ಮಕ ಸರ್ಕಾರಕ್ಕೆ ಏನೇನು ಬೇಕೋ ಅದೆಲ್ಲವೂ ಯೋಚನೆಯಲ್ಲಿದೆ.

ಒಟ್ಟಿನಲ್ಲಿ ಜಾಗ್ರತೆಯಾಗಿ ಹೊಸ ರಾಜ್ಯಾಂಗ ರಚನೆಯಾಗಿ ಜಾರಿಗೆ ಬಂದು ಜವಾಬ್ದಾರಿ ಸರ್ಕಾರಕ್ಕೆ ಏನೇನು ಅಧಿಕಾರ ಬೇಕೋ, ಪ್ರಜೆಗಳಿಗೆ ಏನೇನು ಅಧಿಕಾರ ಬರಬೇಕೋ ಅವೆಲ್ಲ ಜಾಗ್ರತೆ ಬಂದಿದ್ದರೆ ಅನುಕೂಲವಾಗುತ್ತಿತ್ತು. ಈ ಕಾರ್ಯ ತಡವಾದುದರಿಂದ ನಮ್ಮ ಮೇಲೆ ಹೆಚ್ಚು ಟೀಕೆಗಳು ಬರುವುದಕ್ಕೆ ಕಾರಣವಾಗಿದೆ. ಕೆಲವರು ನೀವು ಏಕೆ ಮುಂದುವರೆಯಬಾರದಾಗಿತ್ತೆಂದು ಕೇಳಬಹುದು. ರಾಜ್ಯಾಂಗ ರಚನೆಯಾಗಿ ಇನ್ನೂ ಕೇವಲ 6 ತಿಂಗಳಲ್ಲಿ ಅಥವಾ 9 ತಿಂಗಳಲ್ಲಿ ಬರುತ್ತದೆಂಬ ನಿರೀಕ್ಷಣೆಯಿಂದ ಈ ಮುಖ್ಯ ಕೆಲಸ ಕಾರ್ಯಗಳಿಗೆ ಕೈಹಾಕಲಿಲ್ಲವೆಂದು ನಾನು ಹೇಳಿದರೆ ಸುಮ್ಮನೆ ಕೋರ್ಟಿನಲ್ಲಿ Defence ಗಾಗಿ ಹೇಳತಕ್ಕಂತೆ ಹೇಳುವ ಮಾತು ಎಂದು ಖಂಡಿತವಾಗಿ ತಿಳಿದುಕೊಳ್ಳಬಾರದು. ನಾವು 1948ನೇ ಇಸವಿ ಆಗಸ್ಟಿನಲ್ಲಿ ಅಥವಾ ಇನ್ನೂ ಜಾಗ್ರತೆ ಈ ರಾಜ್ಯಾಂಗ ರಚನೆಯ ಕೆಲಸವನ್ನು ಮುಗಿಸಬೇಕೆಂದು ಏರ್ಪಾಡು ಮಾಡಿದ್ದೆವು. ಅದರಂತೆ ಭರದಿಂದ ಮಾಡುತ್ತಿದ್ದೆವು. ಆದರೆ ಇನ್ನೂ ಅರ್ಧ ಕೆಲಸ ಮುಗಿಯುವುದರೊಳಗಾಗಿ ಭಾರತ ಸರ್ಕಾರದಿಂದ ಒಂದು ವಿನಂತಿ ಬಂದಿತು. ನಿಮ್ಮ ರಾಜ್ಯಾಂಗ ರಚನೆಯನ್ನು ತಡಮಾಡಿ ನಿಲ್ಲಿಸಿ ಸಂಸ್ಥಾನಗಳಿಗೆ ಅನ್ವಯಿಸುವ ರಾಜ್ಯಾಂಗವನ್ನು ಪರ್ಯಾಲೋಚಿಸಲು ಒಂದು ಸಮಿತಿಯನ್ನು ಮಾಡಿದ್ದೇವೆ. ಅವರು ಒಂದು ಕರಡು ರಾಜ್ಯಾಂಗವನ್ನು ತಯಾರು ಮಾಡುವವರೆಗೆ ನೀವು ನಿಮ್ಮ ಕೆಲಸ ನಿಲ್ಲಿಸಿ ಎಂದು ಹೇಳಿದರು. ಅದರಂತೆ ನಾವು ಈ ಕಾರ್ಯವನ್ನು ನಿಲ್ಲಿಸಬೇಕಾಯಿತು. ನಮಗೆ ಖಾಸಗಿಯಾಗಿ ಬಂದಿರುವ ವರ್ತಮಾನದ ಪ್ರಕಾರ ಆ ಜುಲೈ ತಿಂಗಳ ಮಧ್ಯದಲ್ಲಿ ಪ್ರಾಂತ್ಯಗಳ ಮತ್ತು ಸಂಸ್ಥಾನಗಳ ಪ್ರತಿನಿಧಿಗಳನ್ನು ದೆಹಲಿಗೆ ಕರೆಸಿಕೊಂಡು ಅಲ್ಲೇ ಸಭೆ ಸೇರಿಸಿ, ತಯಾರು ಮಾಡಿರತಕ್ಕ ರಾಜ್ಯಂಗವನ್ನು ಆ ಸಭೆಯ ಮುಂದಿಟ್ಟು ಅಖೈರು ತೀರ್ಮಾನ ಮಾಡುವುದೋ ಅಥವಾ ನಮ್ಮ ರಾಜ್ಯಾಂಗ ಸಭೆಗೇ ತೆಗೆದುಕೊಂಡು ಹೋಗಬೇಕೋ ಎಂಬುದಕ್ಕೆ ಒಂದು ಮೀಟಿಂಗ್ ಏರ್ಪಾಡು ಮಾಡುತ್ತಿದ್ದಾರೆಂದು ವದಂತಿ ಇದೆ. ಅದು ಇನ್ನೂ 15 ಅಥವಾ 20 ದಿನಗಳಲ್ಲಿ ಖಚಿತವಾಗಿ ಗೊತ್ತಾಗುತ್ತದೆ. ಆದ ಕಾರಣ ನಮ್ಮ ರಾಜ್ಯಾಂಗ ಸಭೆಯಲ್ಲಿಟ್ಟು ಒಪ್ಪಿಗೆ ಪಡೆಯುವಂತಿದೆಯೋ ಏನೋ ಎಂದು ನಮ್ಮ ರಾಜ್ಯಾಂಗ ಸಭೆಯನ್ನು ವಜಾ ಮಾಡಿಲ್ಲ. ರಾಜ್ಯಾಂಗ ಸಭೆಯ ಸಿಬ್ಬಂದಿಯನ್ನೇಕೆ ಇಟ್ಟುಕೊಂಡಿರುವುದು, ಪ್ರಸಿಡೆಂಟರನ್ನೇಕೆ ಇಟ್ಟುಕೊಂಡಿರುವುದು ಎಂದು ಕೆಲವು ಸದಸ್ಯರು ಕೇಳಿದರು. ಸಿಬ್ಬಂದಿಯನ್ನು ಎಷ್ಟು ಕಡಿಮೆ ಮಾಡಬಹುದೋ ಅಷ್ಟನ್ನೂ ಮಾಡಿದೆ. ಅಲ್ಲದೆ ಪ್ರಸಿಡೆಂಟರ ಮತ್ತು ಡೆಪ್ಯುಟಿ ಪ್ರಸಿಡೆಂಟರ ಸಂಬಳಗಳನ್ನು ಡ್ರಾ ಮಾಡಿಲ್ಲವೆಂದು ಕೇಳಿದ್ದೇನೆ.

**ಶ್ರೀ ಎಲ್. ಸಿದ್ದಪ್ಪನವರು:–** ಪ್ರೆಸಿಡೆಂಟರು ಡ್ರಾ ಮಾಡುತ್ತಿಲ್ಲವೆ?

**ಶ್ರೀ ಕೆ. ಚೆಂಗಲರಾಯರೆಡ್ಡಿಯವರು:–** ಅವರು ಗೋಪಾಲರಾವ್ ವಿಚಾರಣಾ ಸಮಿತಿಯ ಕೆಲಸವನ್ನು ಮಾಡುತ್ತಿದ್ದಾರೆ. ಅದಕ್ಕೆ ದಿನಕ್ಕೆ 25 ರೂಪಾಯಿ ಟಿ.ಎ. ಗೊತ್ತು ಮಾಡಿದೆ. ಅದನ್ನು ಅವರು ತೆಗೆದುಕೊಳ್ಳುತ್ತಿಲ್ಲ. ಅದು ಉಳಿತಾಯವಾಗುತ್ತಿದೆ. ಆದುದರಿಂದ ಒಟ್ಟಿನಲ್ಲಿ ಅವರ ಮೇಲೆ ನಿವ್ವಳ ಖರ್ಚು ಹೆಚ್ಚಾದಂತಾಗಲಿಲ್ಲ. ಇದರಿಂದ ಸಮಾಧಾನವಾಗಬಹುದೆಂದು ನಂಬಿದ್ದೇನೆ.

ಹೀಗೆ ರಾಜ್ಯಾಂಗ ರಚಿಸಿ ಪರಿಪೂರ್ಣವಾಗಿ ಜಾರಿಗೆ ಬರದೇ ಇರುವುದರಿಂದ ಪಬ್ಲಿಕ್ ಸರ್ವೀಸ್ ಕಮೀಷನ್ ನೇಮಕ ಮಾಡುವುದು ತಡವಾಯಿತು ಅನಿಶ್ಚಿತ ವಾತಾವರಣವಿರುವುದರಿಂದ ಹೊಸ ರಾಜ್ಯಾಂಗ 1950ಕ್ಕೆ ಬರುತ್ತದೆಯೋ ಅಥವಾ ವಿಶೇಷ ಕಾರಣಗಳಿಂದ ಅಥವಾ ಭಾರತದ ಪರಿಸ್ಥಿತಿಯ ಒತ್ತಡಕ್ಕೆ ಸಿಕ್ಕಿ 1951ಕ್ಕೆ ಬರುತ್ತದೆಯೋ ಹೇಳುವುದಕ್ಕಾಗುವುದಿಲ್ಲ. ಆದುದರಿಂದ ಇನ್ನೂ ಮುಂದೆ ತಡಮಾಡಬಾರದೆಂಬ ತೀರ್ಮಾನಕ್ಕೆ ಸರ್ಕಾರದವರು ಬಂದಿದ್ದಾರೆ.

ಚುನಾವಣೆಗಳ ವಿಚಾರವಾಗಿ ಶ್ರೀಮಾನ್ ಹುಚ್ಚೇಗೌಡರು ಚುನಾವಣೆಗಳನ್ನಿಡಿ ನೋಡೋಣ ಎಂದರು. ಅವರಿಗೆ ಹೇಳುವುದಿಷ್ಟೆ, ಅದಕ್ಕೆ ನಾವೂ ಸಿದ್ಧರಾಗಿದ್ದೇವೆ. ತಾವೂ ಸಿದ್ಧವಾಗಿದ್ದೀರಿ. ಏಪ್ರಿಲ್ ತಿಂಗಳಲ್ಲಿ ತಾವು ಸಿದ್ಧವಾಗಿದ್ದಿರಿ, ನಾವೂ ಸಿದ್ಧವಾಗಿದ್ದೆವು. ಆಗ ರಾಜ್ಯಾಂಗ ಸಭೆಯ ಚುನಾವಣೆ ನಡೆಯಿತು. ಅದರ ಫಲಿತಾಂಶ ಎಲ್ಲರಿಗೂ ಗೊತ್ತಿದೆ. ನಾವು ಹೆದರುವುದಿಲ್ಲ, ನೀವೂ ಹೆದರುವುದಿಲ್ಲ ಎಂದು ಹೇಳುವುದನ್ನು ಒಪ್ಪುತ್ತೇವೆ. ಈ ಸಭೆಗೆ ಮುಂದೆ ನಡೆಯತಕ್ಕ ಚುನಾವಣೆ ಹಿಂದೆ ನಡೆದಿರತಕ್ಕ ಚುನಾವಣೆಯಂತಿಲ್ಲ. ಅದರ ರೀತಿ ಅದರ ವೈಶಿಷ್ಟವೇ ಬೇರೆಯಾಗುತ್ತದೆಂಬುದನ್ನು ಮಾನ್ಯ ಸದಸ್ಯರು ಗಮನಿಸಬೇಕು. ಯಾರ ಯಾರ ತೂಕ ಬಣ್ಣ ಏನೇನಾಗುತ್ತದೆಯೋ ಹೇಳುವುದಕ್ಕಾಗುವುದಿಲ್ಲ. ಒಟ್ಟಿನಲ್ಲಿ ಚುನಾವಣೆಗೆ ನಾವು ಸಿದ್ಧರಾಗಿದ್ದೇವೆ. ತಾವೂ ಸಿದ್ಧವಾಗಿದ್ದೀರಿ.

ಶ್ರೀ ಬಿ. **ಹುಚ್ಚೇಗೌಡರು:**- ಪಬ್ಲಿಕ್ ಸರ್ವೀಸ್ ಕಮೀಷನ್ ಮಾಡುವುದು 1940ನೆಯ ಇಸವಿಯ ಆಕ್ಟಿನಲ್ಲಿ ನಮೂದಾಗಿಲ್ಲವೆ?

ಶ್ರೀ ಎಚ್.ಸಿ. ದಾಸಪ್ಪನವರು: ಅದರಲ್ಲಿ ಪಬ್ಲೀಕ್ ಸರ್ವೀಸ್ ಕಮೀಷನ್ ಅಥವಾ ಕಮೀಷನರ್ ಎಂದಿದೆ.

ಶ್ರೀ ಎಲ್. ಸಿದ್ದಪ್ಪನವರು:- ಮೈಸೂರು ಸರ್ಕಾರದ ಆ್ಯಕ್ಟಿನಲ್ಲಿ ಪಬ್ಲಿಕ್ ಸರ್ವೀಸ್ ಕಮೀಷನ್ ಮಾಡಲು ಅವಕಾಶವಿದೆ.

ಶ್ರೀ ಕೆ. **ಚೆಂಗಲರಾಯರೆಡ್ಡಿಯವರು:**- ಚುನಾವಣೆಗೆ ತಯಾರಾಗಿರೋಣ. ಇದರಲ್ಲಿ ಇನ್ನೊಂದು ವಿಷಯವಿದೆ. ನಾವು ಹೋರಾಟ ನಡೆಸಿ ಜವಾಬ್ದಾರಿ ಸರ್ಕಾರ ಬಂದ ಹೊಸದರಲ್ಲೇ ಚುನಾವಣೆಗಳು ನಡೆದಿದ್ದರೆ ಏನು ಪರಿಣಾಮವಾಗುತ್ತಿತ್ತೋ ಗೊತ್ತಿಲ್ಲ. ನಮ್ಮಲ್ಲಿ ತಪ್ಪಿದ್ದರೆ ತೋರಿಸುವುದಕ್ಕೆ ಕಾಲಾವಕಾಶವನ್ನು ಕೊಟ್ಟಿದ್ದೇವೆ. ಯಾವ ಸರ್ಕಾರವಾದರೂ ಅಧಿಕಾರಕ್ಕೆ ಬಂದ ಎರಡು ಮೂರು ವರ್ಷಗಳು ಕಳೆದ ಮೇಲೆ ಅದರ ಶಕ್ತಿ ಸ್ವಲ್ಪ ಕಡಿಮೆಯಾಗುತ್ತದೆಂಬುದು ರಾಜಕೀಯದಲ್ಲಿ ಗೊತ್ತಿರುವ ವಿಚಾರ. ನಿಜವಾಗಿಯೂ ಕಾಂಗ್ರೆಸ್ಸಿನವರಾದ ನಾವು ಮುಂದುವರೆಸಿಕೊಂಡು ಹೋಗಬೇಕೆಂಬ ಉದ್ದೇಶವಿದ್ದಿದ್ದರೆ ನಾವು ಮೊದಲೇ ಚುನಾವಣೆ ಏರ್ಪಡಿಸುತ್ತಿದ್ದೆವು. ಹೋದ ವರ್ಷ ನಡೆಸಿದ್ದರೆ ಆಗ ಇದ್ದ ವಾತಾವರಣದಲ್ಲಿ ಶೇ. 80-85 ಅಥವಾ 90ರಷ್ಟು ಜನ ಕಾಂಗ್ರೆಸ್ಸಿನವರೇ ಜಯಶೀಲರಾಗಿ ಚುನಾಯಿತರಾಗಿ ಬರುತ್ತಿದ್ದರು ಎಂದು ಹೇಳಿದರೆ ಯಾರೂ ಭಿನ್ನಾಭಿಪ್ರಾಯ ಪಡಲಾರರು. ಆದುದರಿಂದ ಅಧಿಕಾರವನ್ನು ಮುಂದುವರೆಸಿಕೊಂಡು ಹೋಗುವುದಕ್ಕಾಗಿ ಚುನಾವಣೆಯನ್ನಿಟ್ಟುಕೊಳ್ಳಲಿಲ್ಲವೆಂದು ಹೇಳುವುದು ಸರಿಯಲ್ಲ.

ಶ್ರೀ ವೈ. ಧರ್ಮಪ್ಪ:- We all know that you are not responsible for postponing Elections.

ಶ್ರೀ ಕೆ. ಚಂಗಲರಾಯರೆಡ್ಡಿಯವರು:- ಮುಂದೆ ವಯಸ್ಕ ಮತದಾನ ಪದ್ಧತಿ ಬರುತ್ತದೆ. ದೇಶದಲ್ಲಿ ಯಾವ ಪಕ್ಷ ಪ್ರತಿ ಪಕ್ಷಗಳೇ ಬರಲಿ ಚುನಾವಣೆ ನಡೆಯುತ್ತದೆ. ಮುಖ್ಯವಾಗಿ ನಮ್ಮೆಲ್ಲರಿಗೂ ಬೇಕಾದುದೇ ದೇಶದ ಹಿತ. ಪ್ರಜೆಗಳ ಅಭ್ಯುದಯ. ಈಗಿರುವ ಸ್ಥಾನಗಳಲ್ಲಿ ನಾವೇ ಭದ್ರವಾಗಿ ಕುಳಿತುಕೊಂಡಿರಬೇಕೆಂಬ ಉದ್ದೇಶವೇ ಇಲ್ಲ. ಒಂದು ಉದಾತ್ತ ಧ್ಯೇಯದಿಂದ ಮುಂದುವರೆಯೋಣವೆಂಬ ಅಕ್ಕರೆಯಿಂದ ಪ್ರಾರ್ಥಿಸುತ್ತೇನೆ. ಯಾವ ಸರ್ಕಾರವೇ ಆಗಲಿ ಪರಿಪೂರ್ಣತೆಯಿಂದ ಕೆಲಸ ಮಾಡಲು ಸಾಧ್ಯವಿಲ್ಲ. ಚಂದ್ರನಲ್ಲಿ ಕಳಂಕವಿದೆ. ಹೀಗಿರುವಾಗ ನಮ್ಮ ಮಂತ್ರಿಮಂಡಲದಲ್ಲಿ ಕಳಂಕವಿಲ್ಲ, ದೋಷವಿಲ್ಲ, ನಮ್ಮ ಆಡಳಿತದಲ್ಲಿ ಲೋಪದೋಷಗಳಿಲ್ಲ ಎಂದು ಹೇಳುವುದಕ್ಕಾಗುವುದಿಲ್ಲ. ಲೋಪದೋಷಗಳಿರುತ್ತವೆ. ಅವುಗಳನ್ನು ಮಾನ್ಯ ಸದಸ್ಯರು ತೋರಿಸಿದರೆ ಸ್ವಾಗತಿಸಿ ತಪ್ಪುಗಳನ್ನು ತಿದ್ದಿಕೊಳ್ಳುತ್ತೇವೆ. ನಮ್ಮ ನಿಮ್ಮ ಧ್ಯೇಯ ಒಂದೇ. ಪ್ರಜಾಸತ್ತಾತ್ಮಕ ಸರ್ಕಾರ ಪದ್ಧತಿ ನೂತನವಾಗಿ ಜಾರಿಗೆ ಬಂದು ಅದನ್ನು ನಾವುಗಳು ಸಾರ್ಥಕಪಡಿಸಿ ಭದ್ರವಾದ ತಳಹದಿಯ ಮೇಲೆ ಕಟ್ಟಬೇಕು. ಹೊಸದಾಗಿ ಪ್ರಜೆಗಳ ಕೈಲಿ ಕೊಟ್ಟಿರತಕ್ಕ ಈ ಅಧಿಕಾರ ಕೋತಿಯ ಕೈಯಲ್ಲಿ ಮಾಣಿಕ್ಯವನ್ನು ಕೊಟ್ಟಂತಾಯಿತು. ಜನಗಳಿಗೆ ಆಡಳಿತ ನಡೆಸುವುದಕ್ಕೆ ಆಗದೇ ಹೋಯಿತು ಎಂಬ ಕೆಟ್ಟ ಹೆಸರು ಮೈಸೂರಿನ ಜನರಿಗೆ ಬರಬಾರದು. ನಮಗೆ ಬಂದಿರತಕ್ಕ ಈ ಸ್ವಾತಂತ್ರ್ಯವನ್ನು ಶಾಶ್ವತಗೊಳಿಸುವುದು ನಮ್ಮ ಕರ್ತವ್ಯ. ಈ ಸಭೆಯು ಮೊದಲಿನಿಂದಲೂ ಒಳ್ಳೆಯ ಸಂಪ್ರದಾಯಗಳನ್ನು ಹಾಕಿಕೊಂಡು ಬಂದಿದೆ. ಈಗ ಎರಡು ವರ್ಷಗಳ ಹಿಂದೆ ಈ ಅಧಿಕಾರ ಬರುತ್ತದೆಂಬ ಭರವಸೆ ಇದ್ದಿದ್ದರೆ ನಾನು ಅಲ್ಲಿ ಕುಳಿತಿದ್ದಾಗ ಯಾವ ರೀತಿ ಮಾತನಾಡುತ್ತಿದ್ದೇನೋ ಆ ರೀತಿ ಮಾತನಾಡುತ್ತಿರಲಿಲ್ಲ. ಈಗ ಮತ್ತೆ ಅಲ್ಲಿಗೆ ಬಂದು ಕುಳಿತರೆ ಹಿಂದೆ ಯಾವ ರೀತಿ ಮಾತನಾಡುತ್ತಿದ್ದೆನೋ ಆ ರೀತಿ ಮಾತನಾಡುವುದಕ್ಕೆ ಸಾಧ್ಯವಿಲ್ಲ.

ಶ್ರೀ ಬಿ. ಹುಚ್ಚೇಗೌಡರು: ಈಗತಾನೆ ಮಾನ್ಯ ಒಳ ಆಡಳಿತ ಸಚಿವರು ನಮಗೆ ಬೇರೆ ಮಾಡುವುದಕ್ಕೆ ಅಧಿಕಾರವಿಲ್ಲ ಎಂದು.

ಶ್ರೀ ಟಿ. ಮರಿಯಪ್ಪನವರು: ಹಾಗೆ ಹೇಳಲಿಲ್ಲ.

ಶ್ರೀ ಬಿ. ಹುಚ್ಚೇಗೌಡರು: ಅವರು ಭಾಷಣ ಮಾಡುತ್ತಾ ಹಾಗೆಯೇ ಹೇಳಿದರು. ಸ್ವಾತಂತ್ರ್ಯಕ್ಕೆ ವಿರೋಧವಾಗಿ ಕೆಲಸ ಮಾಡುತ್ತಿದ್ದಾರೆಂದು ಹೇಳಿದ್ದಾರೆ ಎಂಬುದು ಯಾರಿಗೆ ಅನ್ವಯಿಸುತ್ತದೆ?

ಅಧ್ಯಕ್ಷರು: ಆಗಲೇ ತಾವು ನನ್ನ ಗಮನಕ್ಕೆ ತರಬಹುದಾಗಿತ್ತಲ್ಲವೆ?

ಶ್ರೀ ಟಿ. ಮರಿಯಪ್ಪನವರು: ನಾನು ಹೇಳಿದ್ದನ್ನು ಪ್ರಾಯಶಃ ತಪ್ಪಾಗಿ ಅರ್ಥಮಾಡಿಕೊಂಡಂತಿದೆ. ನಾನು ಟೀಕೆಗಳನ್ನು ಮೂರು ತೆರನಾಗಿ ವಿಂಗಡಿಸಿ ಉತ್ತರ ಹೇಳಿದೆ ಅಷ್ಟೆ.

ಶ್ರೀ ಎಲ್ ಸಿದ್ದಪ್ಪನವರು: ಪ್ರಾಯಶಃ ಒಬ್ಬೊಬ್ಬರು ಮಾಡಿದ ಭಾಷಣಕ್ಕೆ ಪ್ರತ್ಯುತ್ತರವಾಗಿ ಆ ರೀತಿಯಾಗಿ ಮಾಡಿದರೆಂದು ಕಾಣುತ್ತದೆ. ಅವರು ಹೇಳಿದ್ದನ್ನು ಅವರೇ ನಾಳೆ ಸರಿಪಡಿಸಿಕೊಳ್ಳುತ್ತಾರೆಂದು ತಿಳಿದಿದ್ದೇನೆ.

It is well-known that democracy is a Government by discussion, Government by criticism, Government by mutual give and take of position. When that is so, whoever could say that in the democratic system of Governement, there ought to be no criticism? But there should be no exaggerated crticism and there should not be abuse on the name of criticism.

ಆದಕ್ಕಾಗಿ ನಾನು ಹೇಳುವುದಿಷ್ಟೆ. ಯಾವ ವೈಯಕ್ತಿಕ ದೃಷ್ಟಿಯೂ ನನ್ನ ಮನಸ್ಸಿನಲ್ಲಿಲ್ಲ. ಟೀಕೆ ಮಾಡುವುದರಲ್ಲಿ ಹಿಂದೆ ಕೆಲವು ಸಂದರ್ಭಗಳು ಯಾವ ರೀತಿ ಮಾಡುತ್ತಿದ್ದೇನೋ ಈಗ ಆ ರೀತಿ, ಖಂಡಿತವಾಗಿಯೂ ಮಾಡಲಾರೆ.

ಶ್ರೀ ಎಸ್.ಸಿ. ಮಲ್ಲಯ್ಯನವರು:- ಮಾನ್ಯ ಒಳಾಡಳಿತ ಸಚಿವರು ಹೇಳಿದರು. ಇವತ್ತಿನ ದಿವಸ ಟೀಕೆ ಮಾಡಿದವರೆಲ್ಲ ಬಹುವಾಗಿ ಪೆಟ್ರೋಲ್ ಕೂಪನ್ನಿಗೆ ಬಂದವರು ಬಸ್ ಮಾಲೀಕರು ಬಸ್ ಲೈಸೆನ್ಸ್‌ಗಳು ಮತ್ತಿತರ ಪರ್ಮಿಟ್ ಕೊಡಬೇಕೆಂದು ಕೇಳುತ್ತಿದ್ದವರು ಆ ದರ್ಜೆಗೆ (Category) ಸೇರಿದವರೆಂದು ಹೇಳಿದರು.

ಶ್ರೀ ಟಿ. ಮರಿಯಪ್ಪನವರು: ಎಲ್ಲರೂ ಎಂದು ನಾನು ಹೇಳಲಿಲ್ಲ.

ಶ್ರೀ ಕೆ. ಚಿಕ್ಕಲಿಂಗಯ್ಯನವರು:- ಒಂದು ಜವಾಬ್ದಾರಿಯುತವಾದ ಸ್ಥಾನಮಾನವನ್ನು ವಹಿಸಿ ಟೀಕೆ ಮಾಡುವುದರಲ್ಲಿ ಇಷ್ಟೊಂದು ಅಧೋಗತಿಗೆ ಇಳಿದರೆ ಹೇಗೆ? Is it his monopoly to talk like that?

ಅಧ್ಯಕ್ಷರು: ಇದನ್ನು ಆಗಲೇ ಹೇಳಬೇಕಿತ್ತು.

ಶ್ರೀ ಕೆ. ಚಿಕ್ಕಲಿಂಗಯ್ಯನವರು:- ನಾನು ಆಗಲೇ ಪ್ರತಿಭಟಿಸಿದೆ. ಅಲ್ಲದೆ ಅವರು ಇನ್ನೊಂದೂ ಕೂಡ ಹೇಳಿದರು ಸ್ವಾತಂತ್ರ್ಯವನ್ನು ನಾವು ಗಳಿಸಿದ್ದೇವೆ ಎಂದು.

ಅಧ್ಯಕ್ಷರು:- ತಾವು ಟೀಕೆ ಮಾಡುವುದಕ್ಕೆ ಅಧಿಕಾರವಿಲ್ಲವೆಂದು ಹೇಳುವುದಕ್ಕೆ ಅವರಿಗೆ ಅಧಿಕಾರವಿಲ್ಲ ಹಾಗೆ ಹೇಳಿದ್ದರೆ ಅದು ಸರಿಯಲ್ಲ.

ಶ್ರೀ ಕೆ. ಚಿಕ್ಕಲಿಂಗಯ್ಯನವರು:- He did not stop there. ಇವರು ಬಸ್ಸಿನ ಲೈಸೆನ್ಸ್‌ಗೆ ಬಂದಿದ್ದವರು ಪರ್ಮಿಟ್ಟಿಗೆ ಬಂದಿದ್ದವರು ಎಂದೆಲ್ಲಾ ಹೇಳಿದ್ದಾರೆ.

ಶ್ರೀ ವೈ ಧರ್ಮಪ್ಪನವರು: ನಾನು ಎಲ್ಲಕ್ಕಿಂತ ಮುಖ್ಯವಾಗಿ ಅವರು ಉಪಯೋಗಿಸಿದ ಒಂದು ಪದವನ್ನು ಮಾತ್ರ ಒಪ್ಪಲಾರೆ. ದ್ವೇಷಾಸೂಯೆಗಳಿಂದ ಕೂಡಿದ ಟೀಕೆಗಳನ್ನು ಮಾಡಿದ್ದಾರೆಂದು ಹೇಳಿದರು 'ದ್ವೇಷ' ಎಂದು ಹೇಳುವುದೇನೋ ಪರವಾಗಿಲ್ಲ. ಏಕೆಂದರೆ ಕಾರ್ಯರಂಗದಲ್ಲಿ ಒಬ್ಬರಿಗೊಬ್ಬರಿಗೆ ದ್ವೇಷ ಬರಬಹುದು. ಆದರೆ ಅಸೂಯೆ ಎಂದು ಹೇಳಿದ್ದಾರೆ ಅದು ಖಂಡಿತವಾಗಿಯೂ un parliamentary

ಶ್ರೀ ಬಿ. ಎನ್. ಗುಪ್ತರವರು: On a point of order, Sir. ಕೋಪ ಮುಂತಾದವುಗಳೇನಿದ್ದರೂ ಅವಕ್ಕೆ ಕಾರಣವಾದ ಪದಗಳನ್ನು ಆಡಿದ ತಕ್ಷಣ ಬರುವುದಿದ್ದರೆ ಬರಬೇಕೇ ವಿನಾ ಎರಡು ಗಂಟೆಯಾದ ಮೇಲೆ ಬರತಕ್ಕಂಥದ್ದು ಸಹಜವಾದುದಲ್ಲ.

ಶ್ರೀ ಕೆ. ಚಿಕ್ಕಲಿಂಗಯ್ಯನವರು:- ಅಧ್ಯಕ್ಷರ ಗಮನಕ್ಕೆ ಯಾವಾಗ ಬರುತ್ತದೆಯೋ ಆಗ ಇದು ಬರುತ್ತದೆ.

ಶ್ರೀ ಟಿ. ಮರಿಯಪ್ಪನವರು:- On a point of personal explanation, ಸರ್, ನಾನು ಸದಸ್ಯರುಗಳು ಮಾಡಿದ ಟೀಕೆಗಳನ್ನು ಮೂರು ತೆರನಾಗಿ ವಿಂಗಡಿಸಿದೆ. ಕೆಲವು ಟೀಕೆಗಳು ದ್ವೇಷಾಸೂಯೆಗಳಿಂದ ಕೂಡಿದವುಗಳಾಗಿತ್ತು. ಕೆಲವು ರಚನಾತ್ಮಕ ಟೀಕೆಗಳಾಗಿತ್ತು. ಇನ್ನು ಕೆಲವು ವಿವೇಕರಹಿತವಾದ ಟೀಕೆಗಳಾಗಿತ್ತು ಎಂದು ಹೇಳಿದೆನೇ ಹೊರತು ಯಾವೊಬ್ಬ ವ್ಯಕ್ತಿಯನ್ನು ಉದ್ದೇಶಿಸಿ ನಾನು ಹೇಳಿಲ್ಲ. ನಾನಾಗಲೇ ಹೇಳಿದಂತೆ, ಇದೆಲ್ಲಾ ನಾನು ವಹಿಸಿರತಕ್ಕ ಪೋರ್ಟ್‌ಫೋಲಿಯೋಗಳ ದೆಶೆಯಿಂದ ಆಗಿರತಕ್ಕದು. ದಿನಕ್ಕೆ ಒಬ್ಬ doubtful friend ಆದರೆ 10 ಜನ ಅಪೊನೆಂಟ್ಸ್ ಆಗಿರುತ್ತಾರೆ. ಜನರನ್ನು ಬರೀ ನಿಷ್ಠುರಕ್ಕೆ ಗುರಿಮಾಡುವ ಖಾತೆಗಳು ನನ್ನ ಪಾಲಿಗೆ ಬಿದ್ದಿದೆ. ಮಾನ್ಯ ಸದಸ್ಯರು ದಯವಿಟ್ಟು ನನ್ನ ಭಾಷಣವನ್ನು ಈ ಹಿನ್ನೆಲೆಯಿಂದ ನೋಡಬೇಕೆಂದು ಹೇಳುತ್ತೇನೆ. ಯಾವ ವ್ಯಕ್ತಿಯನ್ನೇ ಆಗಲಿ ಉದ್ದೇಶಿಸಿ ಮಾತಾಡಿದ್ದೇನೆ ಎಂದು ತಾವು ಭಾವಿಸಕೂಡದು.

ಶ್ರೀ ಎಂ. ಶಂಕರಲಿಂಗೇಗೌಡರು:- ಪೆಟ್ರೋಲಿಗೆ ಬಂದವರು, ಬಸ್ ಲೈಸೆನ್ಸಿಗೆ ಬಂದವರು ಎಂದೆಲ್ಲಾ ಹೇಳಿದ್ದು.

ಶ್ರೀ ಕೆ. ಚೆಂಗಲರಾಯರೆಡ್ಡಿಯವರು:-ಮಾನ್ಯ ಅಧ್ಯಕ್ಷರೇ, ನನ್ನ ಸಹೋದ್ಯೋಗಿಗಳಾದ ಶ್ರೀಮಾನ್ ಮರಿಯಪ್ಪನವರು ಹೇಳಿಕೆ ಕೊಟ್ಟ ಮೇಲೆಯೂ ಸಹ ಈ ರೀತಿಯಾಗಿ ಇದೇ ಪ್ರಸಂಗವನ್ನು ಮುಂದುವರೆಸಿಕೊಂಡು ಹೋಗುವುದನ್ನು ನೋಡಿದರೆ ವಿಷಾದವಾಗುತ್ತಿದೆ. ಯಾರೊಬ್ಬರನ್ನೂ ವೈಯಕ್ತಿಕವಾಗಿ ಉದ್ದೇಶಿಸಿ ಮಾತಾಡಲಿಲ್ಲವೆಂದು ಅವರೇ ಹೇಳಿದ್ದಾರೆ. ಟೀಕೆಗಳನ್ನು ಮೂರು ರೀತಿಯಲ್ಲಿ ವಿಂಗಡಿಸಿ ಹೇಳಿದೆನೆಂದು ತಿಳಿಸಿದರೆ ಎಲ್ಲರೂ ಎದ್ದುನಿಂತು ಅದು ನಮಗೇ ಅನ್ವಯಿಸುತ್ತದೆ ಎಂದು ಹೇಳಿದರೆ ಹೇಗೆ? ಒಟ್ಟಿನಲ್ಲಿ ಈ ಪ್ರಸಂಗವನ್ನು ಇಲ್ಲಿಗೆ ಮರೆಯೋಣ. ನಮ್ಮಲ್ಲಿ ಯಾರೊಬ್ಬರೂ ಈ ಮಹಾಸಭೆಯಲ್ಲಿ ದುರುದ್ದೇಶದಿಂದ ಟೀಕೆಗಳನ್ನು ಮಾಡಬೇಕೆಂದಿಲ್ಲ.

ಇದುವರೆಗೂ ಹೇಳುತ್ತಿದ್ದುದು ಪ್ರಜಾಸತ್ತಾತ್ಮಕವಾದ ಯಾವ ಏರ್ಪಾಡು ಈಗ ನಮ್ಮ ದೇಶದಲ್ಲಿ ಏನು ಪ್ರಾರಂಭ ಮಾಡುತ್ತಿದ್ದೇವೋ ಅದನ್ನು ಯಶಸ್ವಿಯಾಗಿ ನಡೆಸಿಕೊಂಡು ಹೋಗಲು ನಾವೆಲ್ಲರೂ ಪ್ರಯತ್ನ ಮಾಡಬೇಕು. ಇವತ್ತು ವಿರೋಧ ಪಕ್ಷದಲ್ಲಿರುವವರು ನಾಳೆ ಇಲ್ಲಿಗೆ ಬಂದು ತಮ್ಮದೇ ಸರ್ಕಾರ ನಡೆಸಬಹುದು. ಯಾರೇ ಇರಲಿ ಎಲ್ಲರೂ ಈ ವಿಷಯದಲ್ಲಿ ಸಹಕರಿಸಬೇಕಾದ್ದು ಅವರ ಕರ್ತವ್ಯ. ಆದ್ದರಿಂದ ನಾವು ಮಾಡಬೇಕಾದ ಟೀಕೆಗಳು ಯಾವ ಮಟ್ಟದಲ್ಲಿರಬೇಕು, ಹೇಗಿರಬೇಕು ಎಂಬುದನ್ನು ಮಾನ್ಯ ಸದಸ್ಯರು ತಿಳಿದುಕೊಂಡರೆ ಸಾಕು. ಇವತ್ತಿನ ದಿವಸ ನಾನೇನು ಹೇಳುತ್ತಿದ್ದೆನೋ ಅದನ್ನು ನಾಳೆ ತಾನೇ ಜಾರಿಗೆ ಕೊಡಬೇಕಾದ ಪ್ರಮೇಯ ಬರಬಹುದೆಂಬುದನ್ನು ತಿಳಿದಕೊಂಡರೆ ಸಾಕು. ಆದುದರಿಂದಲೇ ಎಷ್ಟು ವಿವೇಚನೆ, ಹತೋಟಿ, ಬಿಗಿಯುಂಟಾಗುತ್ತದೆ. ಅಂಥ ರೀತಿ ನೀತಿಯನ್ನು ಅಭಿವೃದ್ಧಿಪಡಿಸಿಕೊಂಡು ಹೋಗೋಣ. ಪ್ರಜಾಸತ್ತಾತ್ಮಕ ಪದ್ಧತಿ ಯಶಸ್ವಿಯಾಗಿ ನಡೆದುಕೊಂಡು ಮೈಸೂರು ದೇಶದಲ್ಲಿ ಅದೊಂದು ಮೇಲ್ಪಟ್ಟದಲ್ಲಿದ್ದು ಇತರರಿಗೆ ಮಾರ್ಗದರ್ಶಿಯಾಗಿರಬೇಕೆಂದು ಅರಿಕೆ ಮಾಡಿಕೊಳ್ಳುತ್ತೇನೆ.

ಚುನಾವಣೆಗಳು ಬೇಗ ಬರಬೇಕೆಂಬುದೇ ನಮ್ಮ ಉದ್ದೇಶವಾಗಿದೆ. ಆದರೆ ಅದು ತಡವಾಗಿದೆ. ಕಾರಣಾಂತರಗಳಿಂದ ಈ ಪಬ್ಲಿಕ್ ಸರ್ವೀಸ್ ಕಮಿಷನ್ನಿನ ಏರ್ಪಾಡು ಮಾಡುವುದಕ್ಕೆ ಸರ್ಕಾರದವರು ತೀವ್ರವಾಗಿ ಕಾರ್ಯಕ್ರಮ ತೆಗೆದುಕೊಳ್ಳುವವರಾಗಿದ್ದಾರೆ. ಇದೂ ಇಲ್ಲದೆ ಇನ್ನೂ ಅನೇಕ ಕಾರ್ಯಕ್ರಮಗಳಿವೆ. ಅವುಗಳನ್ನು ಕೈಗೊಳ್ಳುವುದಕ್ಕೆ ಪ್ರಯತ್ನ ಮಾಡುತ್ತೇವೆ. ದೇಶದಲ್ಲಿ ಎಲ್ಲರಿಗೂ ಕ್ಷೇಮ ಶಾಂತಿಯನ್ನು ಒದಗಿಸುವ ಕೆಲಸ ಕಾರ್ಯಗಳಲ್ಲಿ ತಮ್ಮೆಲ್ಲರ ಸಹಕಾರವೂ ಇದೆ. ಇದೇ ಸಹಕಾರ ಮುಂದೆಯೂ ಇರುತ್ತದೆಂದು ನಾನು ನಂಬಿದ್ದೇನೆ. ನಾನು ಮೊದಲೇ ಹೇಳಿದಂತೆ ಯಾವ ಬಜೆಟ್ಟೆ ಆಗಲಿ ಸರ್ವ ವಿಧದಲ್ಲೂ ಸಮರ್ಪಕವಾಗಿದೆಯೆಂದು ಯಾವ ಸರ್ಕಾರವೂ ಹೇಳುವುದಿಲ್ಲ. ಈಗ ಮಾನ್ಯ ಸದಸ್ಯರುಗಳು ಕೊಟ್ಟ ಸಲಹೆಗಳನ್ನು ಗಮನದಲ್ಲಿಟ್ಟುಕೊಂಡು ಕೆಲವುಗಳನ್ನು ಸರಿಪಡಿಸಿಕೊಳ್ಳಬಹುದು. ಒಟ್ಟಿನಲ್ಲಿ ಈ ಬಡ್ಜೆಟ್ಟು ಹೆಚ್ಚಿನ ಭದ್ರತೆಯಿಂದ ಕೂಡಿದ್ದಾಗಿದೆ. ಹಣಕಾಸಿನ ಸ್ಥಿತಿಯಲ್ಲಿ ಯಾರೂ ಸಂದೇಹಪಡಬೇಕಾದ್ದಿಲ್ಲ. ಬಹಳಮಟ್ಟಿಗೆ ಚೆನ್ನಾಗಿದೆ ಎಂಬುದನ್ನು ದೇಶದಲ್ಲಿ ಹರಡುವುದಕ್ಕೆ ಸಕಾರಣಗಳಿವೆಯೆಂದು ಹೇಳಬಲ್ಲೆ. ಅದಕ್ಕೆ ಯಾವ ಧಕ್ಕೆಯಾಗಲೀ ಬರದಂತೆ ಎಲ್ಲರೂ ಸಹಕರಿಸುತ್ತೀರೆಂದು ನಂಬಿ, ಇಷ್ಟೊಂದು ಸಾವಧಾನದಿಂದ ನನ್ನ ಭಾಷಣವನ್ನು ಕೇಳಿದ್ದಕ್ಕಾಗಿ ಈ ಸಭೆಯವರಿಗೆ ನನ್ನ ವಂದನೆಗಳನ್ನು ಸಲ್ಲಿಸುತ್ತೇನೆ.

## 5. ಮೈಸೂರು ಸಂಸ್ಥಾನವನ್ನು ಕರ್ನಾಟಕದಲ್ಲಿ ವಿಲೀನ ಮಾಡುವ ಕುರಿತು

## (ಪ್ರಜಾಪ್ರತಿನಿಧಿ ಸಭೆಯ ನಡೆವಳಿಗಳು - 10ನೇ ಜೂನ್ 1949)

ಶ್ರೀಮಾನ್ ಎಸ್. ಶಿವಪ್ಪನವರು (ಚನ್ನರಾಯಪಟ್ಟಣ ತಾಲ್ಲೂಕು):-

ಪ್ರಶ್ನೆ 8: ಈ ಕೆಳಗೆ ಹೇಳಿರುವ ಸಂಗತಿಗಳನ್ನು ಸರ್ಕಾರದವರು ದಯೆಯಿಟ್ಟು ತಿಳಿಸಬೇಕೆಂದು ಪ್ರಾರ್ಥನೆ:-

(ಎ) ಮೈಸೂರು ಸಂಸ್ಥಾನವು ಕರ್ನಾಟಕದಲ್ಲಿ ವಿಲೀನವಾಗಬೇಕೇ ಅಥವಾ ಬೇಡವೇ ಎಂಬ ವಿಷಯದಲ್ಲಿ ಪ್ರಜೆಗಳ ಅಭಿಪ್ರಾಯವನ್ನು ತಿಳಿಯಲು ಸಂಸ್ಥಾನದಲ್ಲಿ ಪ್ರಜಾಭಿಮತವನ್ನು ('ಪ್ಲೆಬಿಸೈಟ್') ಪಡೆಯುವ ಏರ್ಪಾಡನ್ನು ಮಾಡಲು ಸರ್ಕಾರದವರು ಯೋಚಿಸಿದ್ದಾರೆಯೆ?

(ಬಿ) ಹಾಗಿದ್ದ ಪಕ್ಷದಲ್ಲಿ ಅದನ್ನು ಯಾವಾಗ ಮತ್ತು ಯಾವ ರೀತಿಯಲ್ಲಿ ನಡೆಯಿಸಬೇಕೆಂದಿದ್ದಾರೆ?

ಶ್ರೀ ಕೆ. ಶ್ರೀನಿವಾಸನ್‌ರವರು (ಸರ್ಕಾರದ ಚೀಫ್ ಸೆಕ್ರೆಟರಿಯವರು):-

ಉತ್ತರ 8: (ಎ) ಅಂಥ ಕಾರ್ಯಕ್ರಮವನ್ನು ಕೈಗೊಳ್ಳಬೇಕೆಂದು ಇಲ್ಲಿಯವರೆಗೂ ಯಾವ ಯೋಜನೆಯನ್ನೂ ಮಾಡಿಲ್ಲ.

(ಬಿ) II ಮೇಲಿನ (ಎ) ಭಾಗಕ್ಕೆ ಕೊಟ್ಟಿರುವ ಉತ್ತರವನ್ನು ನೋಡಿದರೆ ಈ ಪ್ರಶ್ನೆಗೆ ಅವಕಾಶವಿಲ್ಲ.

ಶ್ರೀ ಎಸ್. ಶಿವಪ್ಪನವರು: ಮೈಸೂರು ಸಂಸ್ಥಾನವು ಕರ್ನಾಟಕದಲ್ಲಿ ಸೇರಬೇಕೆ-ಬೇಡವೆ ಎಂಬ ವಿಚಾರದಲ್ಲಿ ಏನಾದರೂ ಯೋಚನೆ ಮಾಡಿದ್ದೀರಾ ಎಂದು ಕೇಳಿರುವುದಕ್ಕೆ "ಅಂಥ ಕಾರ್ಯಕ್ರಮವನ್ನು ಕೈಗೊಳ್ಳಬೇಕೆಂದು ಇಲ್ಲಿಯವರೆಗೂ ಯಾವ ಯೋಜನೆಯನ್ನೂ ಮಾಡಿಲ್ಲ" ಎಂದು ಹೇಳಿದ್ದಾರೆ. ಹಾಗಾದರೆ ಮೈಸೂರು ಸಂಸ್ಥಾನದಲ್ಲಿ ಕರ್ನಾಟಕ ಏಕೀಕರಣವಾಗುವ ಮಹತ್ವದ ವಿಚಾರದಲ್ಲಿ ಚಳುವಳಿ ನಡೆಯುತ್ತಿರುವುದು ಸರ್ಕಾರಕ್ಕೆ ಗೊತ್ತಿದೆಯೇ?

ಶ್ರೀ ಕೆ. ಚೆಂಗಲರಾಯರೆಡ್ಡಿಯವರು (ಪ್ರಧಾನ ಸಚಿವರು): ದೇಶದಲ್ಲಿ ಹಲವಾರು ಜನರು ಹಲವಾರು ವಿಚಾರ ವ್ಯಕ್ತಪಡಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆ.

ಶ್ರೀ ಎಸ್. ಶಿವಪ್ಪನವರು: ಈ ಒಂದು ಚಳುವಳಿಯು ಮೈಸೂರು ದೇಶದ ಒಂದು ಉಲ್ಬಣ ಸಮಸ್ಯೆಯಲ್ಲವೆ?

ಶ್ರೀ ಕೆ. ಚೆಂಗಲರಾಯರೆಡ್ಡಿಯವರು: ಅದು ತಮ್ಮ ಅಭಿಪ್ರಾಯ.

ಶ್ರೀ ಎಸ್ ಶಿವಪ್ಪನವರು: ಮೈಸೂರು ಸಂಸ್ಥಾನವು ಒಂದು ನೆರೆ ಪ್ರಾಂತ್ಯದೊಡನೆ ಮಿಳಿತವಾಗುವ ವಿಚಾರವು ಮೈಸೂರು ದೇಶದ ಪ್ರತಿಯೊಬ್ಬ ಪ್ರಜೆಗೂ ಸಂಬಂಧಪಟ್ಟಿಲ್ಲವೆ?

ಶ್ರೀ ಕೆ. ಚೆಂಗಲರಾಯರೆಡ್ಡಿಯವರು: ಆ ಪ್ರಶ್ನೆಗೆ ಉತ್ತರ ಕೊಡುವುದಕ್ಕಾಗುವುದಿಲ್ಲ.

ಶ್ರೀ ಎಸ್ ಶಿವಪ್ಪನವರು: ಏಕೆಂದರೆ ಈಗ ಕರ್ನಾಟಕ.......

ಅಧ್ಯಕ್ಷರು: ಪ್ರಶ್ನೆ ಕೇಳಿ; ಅಭಿಪ್ರಾಯ ಕೇಳಬಾರದು.

ಶ್ರೀ ಎಸ್ ಶಿವಪ್ಪನವರು:- ಈಗ ದೇಶದಲ್ಲಿ ಈ ಬಗ್ಗೆ ಕೆಲವು ದೊಡ್ಡ ದೊಡ್ಡ ವ್ಯಕ್ತಿಗಳು ಪ್ರಚಾರ ನಡೆಸುತ್ತಿರುವುದು ಗೊತ್ತೆ?

ಶ್ರೀ ಕೆ. ಚೆಂಗಲರಾಯರೆಡ್ಡಿಯವರು:- ಕೆಲವರು ನಡೆಸುತ್ತಾರೆಂದು ಒಪ್ಪಿಕೊಂಡಿದ್ದೇನೆ ಮತ್ತು ಇದು ಸರ್ಕಾರದ ಗಮನಕ್ಕೆ ಬಂದಿಲ್ಲವೆಂದು ಹೇಳಿದೆ.

ಶ್ರೀ ಎಸ್ ಶಿವಪ್ಪನವರು:- ಈ ರೀತಿಯಲ್ಲಿ ಕೆಲವು ವ್ಯಕ್ತಿಗಳಿಗೆ ಪ್ರಚಾರಕ್ಕೆ ಅವಕಾಶ ಕೊಡದೆ ಜನರ ಅಭಿಪ್ರಾಯ ಪಡೆಯುವುದು ಸರ್ಕಾರದ ಕರ್ತವ್ಯವಲ್ಲವೇ?

ಶ್ರೀ ಕೆ. ಚೆಂಗಲರಾಯರೆಡ್ಡಿಯವರು: -ಸರ್ಕಾರದವರು ಅವರ ಕರ್ತವ್ಯವನ್ನು ನೆರವೇರಿಸಿದ್ದಾರೆ.

ಶ್ರೀ ಎಸ್ ಶಿವಪ್ಪನವರು:- ಈ ವಿಚಾರದಲ್ಲಿ ಸರ್ಕಾರದ ಕರ್ತವ್ಯವೇನೆಂಬುದನ್ನು ತಿಳಿಸಿಲ್ಲ. ಸ್ಪಷ್ಟವಾಗಿ ದಯವಿಟ್ಟು ತಿಳಿಸುತ್ತೀರಾ?

ಶ್ರೀ ಕೆ. ಚೆಂಗಲರಾಯರೆಡ್ಡಿಯವರು:- ಸಮಸ್ಯೆ ಉದ್ಭವಿಸಿದಾಗ ಅದಕ್ಕೆ ತಕ್ಕ ಕಾರ್ಯಕ್ರಮ ತೆಗೆದುಕೊಳ್ಳುವುದು ಸರ್ಕಾರದ ಕರ್ತವ್ಯ.

ಶ್ರೀ ಎಸ್ ಶಿವಪ್ಪನವರು:- ಈ ವಿಚಾರದಲ್ಲಿ ಸಂಸ್ಥಾನದ ಪ್ರತಿ ಪ್ರಜೆಯ ಅಭಿಪ್ರಾಯವನ್ನೂ ತೆಗೆದುಕೊಂಡು ಅದರ ತಳಹದಿ ಮೇಲೆ ಮುಂದುವರೆದು ಕಾರ್ಯಕ್ರಮ ತೆಗೆದುಕೊಳ್ಳುವುದಾಗಿ ಭರವಸೆ ಕೊಡುತ್ತೀರ?

ಶ್ರೀ ಕೆ. ಚೆಂಗಲರಾಯರೆಡ್ಡಿಯವರು: ಅದಕ್ಕೆ ಉತ್ತರ ಕೊಟ್ಟಿದೆ. "Whether they contemplate holding a plebiscite in the State to know the opinion of the people whether Mysore should merge with Karnataka or not".ಎಂದು ಕೇಳಿರುವ ಪ್ರಶ್ನೆಯ (a) ಭಾಗಕ್ಕೆ "No such step has been contempleted so far" ಎಂದು ಉತ್ತರ ಹೇಳಿದೆ.

ಶ್ರೀ ಎಸ್ ಶಿವಪ್ಪನವರು:- ಮುಂದೆ ಈ ಸಂಭವ ಬಂದರೆ ಮಾಡುತ್ತೀರಾ?

**Sri k. Chengalarya reddy:** We cannot now say what we will do in future.

ಶ್ರೀ ಭೂಪಾಳಂ ಆರ್. ಚಂದ್ರಶೇಖರಯ್ಯ (ವ್ಯಾಪಾರ ಮತ್ತು ವಾಣಿಜ್ಯ ):-

ಜನಮತ ಗಣನೆಗೆ ತೆಗೆದುಕೊಳ್ಳದೆ ಕರ್ನಾಟಕದಲ್ಲಿ ಮೈಸೂರನ್ನು ವಿಲೀನ ಮಾಡಬೇಕೆಂದು ಯೋಚನೆ ಮಾಡಿದ್ದೀರಾ?

ಶ್ರೀ ಕೆ. ಚೆಂಗಲರಾಯರೆಡ್ಡಿಯವರು: ಸರ್ಕಾರದವರು ಈ ವಿಚಾರ ಯೋಚನೆ ಮಾಡಿಲ್ಲವೆಂದು ಹೇಳಿದೆ.

ಶ್ರೀ ಭೂಪಾಳಂ ಆರ್. ಚಂದ್ರಶೇಖರಯ್ಯನವರು: ಈಗ ಜನಮತ ಗಣನೆಗೆ ತೆಗೆದುಕೊಳ್ಳಬೇಕೆಂಬ ಒತ್ತಾಯ, ಅಭಿಪ್ರಾಯ ದೇಶದಲ್ಲಿ ಮೂಡುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೆ?

ಶ್ರೀ ಕೆ. ಚೆಂಗಲರಾಯರೆಡ್ಡಿಯವರು:- ಈ ರೀತಿ ಜನರ ಅಭಿಪ್ರಾಯ ತೆಗೆದುಕೊಂಡು ಸರ್ಕಾರದವರು ಅಖೈರು ಕಾರ್ಯಕ್ರಮ ತೆಗೆದುಕೊಳ್ಳಬೇಕೆಂದು ಕೆಲವು ಕಡೆ ಅಭಿಪ್ರಾಯ ವ್ಯಕ್ತಪಡಿಸುತ್ತಿರುವುದು ಸರ್ಕಾರದವರ ಗಮನಕ್ಕೆ ಬಂದಿದೆ.

ಶ್ರೀ ಭೂಪಾಳಂ ಆರ್. ಚಂದ್ರಶೇಖರಯ್ಯನವರು:- ಇಂಡಿಯಾ ಸರ್ಕಾರದವರು ರಚಿಸಿದ ಮೂರು ಜನರ ಸಮಿತಿಯವರು ಈ ರೀತಿ ಒತ್ತಾಯ ಮಾಡಿ ಜನಾಭಿಪ್ರಾಯ ತೆಗೆದುಕೊಂಡು ನಿರ್ಧಾರ ಮಾಡಬೇಕೆಂದು ಅಭಿಪ್ರಾಯ ಕೊಟ್ಟಿರುವುದು ಸರ್ಕಾರದವರಿಗೆ ಗೊತ್ತೆ?

ಶ್ರೀ ಕೆ. ಚೆಂಗಲರಾಯರೆಡ್ಡಿಯವರು: ಈಗ ಮಾನ್ಯ ಸದಸ್ಯರಿಂದ ಗೊತ್ತಾಗಿದೆ.ನಿರ್ಧಿಷ್ಟವಾಗಿ ಈಗ ನಾವು ಜವಾಬ್ದಾರಿಯಿಂದ ಒಪ್ಪಿಕೊಳ್ಳುವುದಕ್ಕಾಗುವುದಿಲ್ಲ.

ಶ್ರೀ ಚನ್ನಬೈರೇಗೌಡರು (ಹೊಸಕೋಟೆ ತಾಲ್ಲೂಕು):- ಕೆಲವು ದೊಡ್ಡ ಮನುಷ್ಯರು ವಿಲೀನದ ಪ್ರಚಾರ ಮಾಡುತ್ತಿದ್ದಾರೆಂದು ಹೇಳುತ್ತಾರೆ. ಅವರು ಯಾರ್‍ಯಾರೆಂದು ಹೇಳುವುದಕ್ಕೆ ಸಾಧ್ಯವೇ?

ಶ್ರೀ ಕೆ. ಚೆಂಗಲರಾಯರೆಡ್ಡಿಯವರು: ಹೇಳುವುದಕ್ಕೆ ಸಾಧ್ಯವಿಲ್ಲ. ಹಲವಾರು ವ್ಯಕ್ತಿಗಳು ಸಂಸ್ಥಾನದಲ್ಲಿ ಪ್ರಚಾರ ನಡೆಸುತ್ತಿದ್ದಾರೆ. ಇಂಥವರೇ ಪ್ರಚಾರ ಮಾಡುತ್ತಿದ್ದಾರೆಂದು ಹೇಳುವುದಕ್ಕಾಗುವುದಿಲ್ಲ.

ಶ್ರೀ ಚನ್ನಬೈರೇಗೌಡರು: ಸರ್ಕಾರದ ಆಲೋಚನೆಯಲ್ಲಿಲ್ಲದೇ ಇರುವ ವಿಷಯವನ್ನು ಅಪಪ್ರಚಾರ ಮಾಡುವವರ ಮೇಲೆ ಕ್ರಮ ತೆಗೆದುಕೊಂಡಿದೆಯೆ?

ಶ್ರೀ ಕೆ. ಚೆಂಗಲರಾಯರೆಡ್ಡಿಯವರು:- ಅದಕ್ಕೆ ಕ್ರಮ ತೆಗೆದುಕೊಳ್ಳುವ ಹಾಗಿಲ್ಲ.

ಶ್ರೀ ಚನ್ನಬೈರೇಗೌಡರು: ಅದು ಅಪಪ್ರಚಾರವೆಂದು ಭಾವಿಸಬಹುದೆ?

ಶ್ರೀ ಕೆ. ಚೆಂಗಲರಾಯರೆಡ್ಡಿಯವರು:- ಕೆಲವರ ದೃಷ್ಟಿಯಿಂದ ಹೇಳಬಹುದು. ಇನ್ನು ಕೆಲವರ ದೃಷ್ಟಿಯಿಂದ ಸರಿಯಾದ ಪ್ರಚಾರ ಎಂದು ಹೇಳಬಹುದು.

ಶ್ರೀ ಚನ್ನಬೈರೇಗೌಡರು: ಅಪಪ್ರಚಾರವೆಂದು ಕಂಡುಬಂದಾಗ ಕ್ರಮ ನಡೆಸುವುದು ಒಳ್ಳೆಯದಲ್ಲವೆ?

ಶ್ರೀ ಕೆ. ಚೆಂಗಲರಾಯರೆಡ್ಡಿಯವರು:- ಆ ರೀತಿ ಬಂದಾಗ ತೀರ್ಮಾನ ಮಾಡಬೇಕು.

ಶ್ರೀ ಎಂ. ಶಂಕರ ಲಿಂಗೇಗೌಡರು (ನಾಗಮಂಗಲ ತಾಲ್ಲೂಕು): ಕರ್ನಾಟಕ ಏಕೀಕರಣದ ಸಂಘವೆಂಬುದು ಸ್ಥಾಪನೆಯಾಗಿದೆಯೆ?

ಶ್ರೀ ಕೆ. ಚೆಂಗಲರಾಯರೆಡ್ಡಿಯವರು: ನೋಟೀಸು ಬೇಕು.

ಶ್ರೀ ಎಂ. ಶಂಕರ ಲಿಂಗೇಗೌಡರು:- ಬೆಂಗಳೂರು ಅರಳೇಪೇಟೆ ದಾರಿಯಲ್ಲಿ ಇಲ್ಲವೆ?

ಶ್ರೀ ಕೆ. ಚೆಂಗಲರಾಯರೆಡ್ಡಿಯವರು:- ನೋಟೀಸು ಬೇಕು.

## 6. ಬಟೆಜ್ ಮೇಲಿನ ನಿರ್ಣಯಗಳು:- ಮೈಸೂರು ದೇಶದಲ್ಲಿರುವ ಗೆಜೆಟೆಡ್ ಅಧಿಕಾರಿಗಳು ಮತ್ತು ಸಿವಿಲ್ ಸರ್ವೀಸ್ ಅಧಿಕಾರಿಗಳ ದಕ್ಷತೆಯನ್ನು ಹೆಚ್ಚಿಸಲು 10 ಲಕ್ಷ ರೂ. ಒದಗಿಸಿಕೊಡಬೇಕೆಂಬ ನಿರ್ಣಯದ ಸಂದರ್ಭದಲ್ಲಿ:

## (ಪ್ರಜಾಪ್ರತಿನಿಧಿ ಸಭೆಯ ನಡೆವಳಿಗಳು - 11 ಜೂನ್ 1949)

ಶ್ರೀ ಚೆಂಗಲರಾಯರೆಡ್ಡಿಯವರು (ಮುಖ್ಯಮಂತ್ರಿಗಳು):- ಮಾನ್ಯ ಅಧ್ಯಕ್ಷರೇ ಶ್ರೀಮಾನ್ ಜಿ. ರಾಮಯ್ಯನವರು ನಮ್ಮ ಸಂಸ್ಥಾನದಲ್ಲಿ ಸಿವಿಲ್ ಸರ್ವಿಸಿನವರ ದಕ್ಷತೆಯ ವಿಚಾರದಲ್ಲಿ ಈಗ ಏನು ಅನಾನುಕೂಲಗಳನ್ನು ಕಂಡುಹಿಡಿದಿದ್ದಾರೆಂಬುದನ್ನು ಅವರು ನಿರ್ಣಯವನ್ನು ಸಮರ್ಥಿಸುವಾಗ ತಿಳಿಸಿರುವುದಿಲ್ಲ. ಅವರ ನಿರ್ಣಯದಲ್ಲಿಯೂ ಸಹ ಅದನ್ನು ವ್ಯಕ್ತಪಡಿಸಿಲ್ಲ. ಆದರೆ ಅವರ ನಿರ್ಣಯದಲ್ಲಿ ಏನು ಕೇಳಿದ್ದಾರೆಂದರೆ ಸಿವಿಲ್ ಸರ್ವಿಸಿನವರು ಹೆಚ್ಚು ದಕ್ಷತೆಯಿಂದ ಮತ್ತು ಹೆಚ್ಚು ಸಾಮರ್ಥ್ಯದಿಂದ ಕೆಲಸ ಮಾಡುವಂತೆ ಮಾಡುವುದಕ್ಕೆ 10 ಲಕ್ಷ ರೂಪಾಯಿಗಳನ್ನು ಒದಗಿಸಬೇಕೆಂದು ಸೂಚಿಸಿದ್ದಾರೆ. ನಮ್ಮ ದೇಶದಲ್ಲಿ ಅಂದರೆ ಮೈಸೂರು ಸಂಸ್ಥಾನದಲ್ಲಿ ಈ ಸಿವಿಲ್ ಸರ್ವಿಸ್ ಅಧಿಕಾರಿಗಳು ಬಹಳ ಕಾಲದಿಂದಲೂ ದೇಶಕ್ಕೆ ಅತ್ಯುತ್ತಮವಾದ ಸೇವೆಯನ್ನು ಸಲ್ಲಿಸಿಕೊಂಡು ಬರುತ್ತಿದ್ದಾರೆ. ಹಾಗೆ ಅವರು ಬಹಳ ಮೆಲ್ಮಟ್ಟದ ರೀತಿಯಲ್ಲಿ ಸೇವೆಯನ್ನು ಸಲ್ಲಿಸುತ್ತಿದ್ದಾರೆಂದು ಹೇಳಿದರೆ ನಾವೆಲ್ಲರೂ ಬಹಳ ಸಂತೋಷಪಡಬೇಕಾದ ವಿಷಯ. ಇದರ ಬಗ್ಗೆ ಅಷ್ಟೇನೂ ಹೆಚ್ಚಿನ ವಿವರಣೆ ಬೇಕಾಗಿಲ್ಲ. ಮೊನ್ನೆ ತಾನೆ ನಮ್ಮ ದಿವಾನ್ ಅಧ್ಯಕ್ಷರು ನಮ್ಮ ಸಂಸ್ಥಾನದ ಸಿವಿಲ್ ಸರ್ವಿಸ್‌ನವರ ಹಾಗೂ ಇತರ ಎಲ್ಲ ಸರ್ಕಾರೀ ಅಧಿಕಾರಿಗಳ ವಿಚಾರದಲ್ಲಿ ಏನು ಅಭಿಪ್ರಾಯಗಳನ್ನು ವ್ಯಕ್ತಪಡಿಸಿದ್ದಾರೋ ಅವುಗಳನ್ನೆಲ್ಲ ನಾನು ಹೃತ್ಪೂರ್ವಕವಾಗಿ ಅನುಮೋದಿಸುತ್ತೇನೆ. ಪ್ರಕೃತ ಸಂದರ್ಭದಲ್ಲಿ ನಮ್ಮ ದೇಶದಲ್ಲಿ ಪ್ರಜಾಸತ್ತಾತ್ಮಕ ಸರ್ಕಾರ ರಾಜ್ಯಾಡಳಿತವನ್ನು ನಡೆಸುತ್ತಿರುವ ಈ ಕಾಲದಲ್ಲಿ ಸಿವಿಲ್ ಸರ್ವಿಸಿನವರ ಸಹಕಾರ ನಮಗೆ ಹಿಂದೆಂದಿಗಿಂತಲೂ ಹೆಚ್ಚಾಗಿ ಬೇಕಾಗಿದೆಯೆಂದು ಈ ಸಂದರ್ಭದಲ್ಲಿ ಹೇಳಬಯಸುತ್ತೇನೆ. ನಮ್ಮ ಒಂದು ಆಜ್ಞಾ ಕಟ್ಟಿನೊಳಗೆ ಬಂದು ಹೋಗತಕ್ಕಂಥ ಆ ಒಂದು ಎಲ್ಲೆಯಲ್ಲಿರುವ ಯಾವ ನೀತಿಯನ್ನೇ ಆಗಲಿ ನಾವು ಅನುಸರಿಸುವುದಕ್ಕೆ ಯಾವಾಗಲೂ ಬದ್ಧರಾಗಿದ್ದೇವೆ. ಇದೇ ನಮ್ಮ ನೀತಿ. ಯಾವ ಲೋಪದೋಷಗಳೂ ಇಲ್ಲದೆ ಹೆಚ್ಚು ದಕ್ಷತೆಯಿಂದ ಕೆಲಸ ಮಾಡತಕ್ಕ ಪ್ರಮೇಯವಿದೆಯೆಂದು ಹೇಳುತ್ತೇನೆ. ಕೇಂದ್ರ ಸರ್ಕಾರದವರು ನಮಗೆ ಅವಕಾಶ ಕೊಟ್ಟಿರತಕ್ಕ ಒಂದು ಚೌಕಟ್ಟಿನಲ್ಲಿ ಕೆಲಸ ಮಾಡಲು ನಾವೀಗ ಉದ್ಯುಕ್ತರಾಗಿದ್ದೇವೆ.

ಎರಡನೆಯದಾಗಿ ಈಗ ಸಭೆಯ ಮುಂದೆ ಇರತಕ್ಕ ನಿರ್ಣಯದಲ್ಲಿ ಬಂದಿರಕ್ಕದ್ದು 10 ಲಕ್ಷ ರೂಪಾಯಿಗಳನ್ನು ಸಹಾಯ ಮಾಡಬೇಕು ಎಂದು. ನನಗಂತೂ ಇದರ ಅವಶ್ಯಕತೆ ಅಷ್ಟಾಗಿ ಏನಿತ್ತೋ ಅಥವಾ ಇಷ್ಟು ಹಣವನ್ನು ಕೊಡಬೇಕಾಗಿರುವುದಾದರೂ ಏತಕ್ಕೆಂದು ನಾನು ಆಲೋಚನೆ ಮಾಡಿನೋಡಿದೆ. ಆದರೆ ನನಗೆ ಒಂದೂ ಅದರಲ್ಲಿ ಅರ್ಥವಾಗಲಿಲ್ಲ. ಇಷ್ಟೆಲ್ಲ ಚರ್ಚೆ ನಡೆದಿದ್ದರಲ್ಲಿ ಏನು ಲೋಪದೋಷಗಳಿವೆ ಎಂಬುದನ್ನು ತಿಳಿಸದೆ ಹೋದಾಗ್ಯೂ ಎರಡು ಮುಖ್ಯ ಸಲಹೆಗಳನ್ನು ಮಾತ್ರ ಕೊಟ್ಟಿದ್ದಾರೆ. ಈ ಸಿವಿಲ್ ಸರ್ವಿಸ್ ಅಧಿಕಾರಿಗಳ ಕೊರತೆ ಬಿದ್ದಂತೆಲ್ಲ ಒಂದು ಕಾಂಪಿಟೆಟಿವ್ ಎಕ್ಸಾಮಿನೇಷನನ್ನು ಮಾಡಿ ಅದರಲ್ಲಿ ಅರ್ಹತೆ ಪಡೆದುಕೊಂಡವರಿಗೆ ಮಾತ್ರ

ಅವಕಾಶ ಕೊಡಬೇಕೇ ಹೊರತು ನೇರವಾಗಿ ಜನರನ್ನು ಅಧಿಕಾರಕ್ಕೆ ತೆಗೆದುಕೊಳ್ಳುವುದು ಸರಿಯಲ್ಲ. ಆದುದರಿಂದ ಸಿವಿಲ್ ಸರ್ವಿಸ್ ಪರೀಕ್ಷೆಯನ್ನು ಅಗತ್ಯಬಿದ್ದಂತೆಲ್ಲ ನಡೆಸಬೇಕಾಗುತ್ತದೆ. ಅದಕ್ಕೋಸ್ಕರ ಹಣ ಒದಗಿಸಲು 10 ಲಕ್ಷ ರೂಪಾಯಿಗಳು ಬೇಕಾಗಿದೆ ಎಂದು ಸಲಹೆ ಬಂದಿದೆ. ಮತ್ತೊಂದು, ಸರ್ಕಾರದವರು ಅಧಿಕಾರಿಗಳನ್ನು ರಿಕ್ರೂಟ್ ಮಾಡಿಕೊಳ್ಳತಕ್ಕ ಕಾಲದಲ್ಲಿ ಏನು ನೀತಿಯನ್ನು ಅನುಸರಿಸುತ್ತಿದ್ದಾರೆ ಎಂಬುದು. ಈ ಕಾಂಪಿಟೆಟಿವ್ ಎಕ್ಸಾಮಿನೇಷನ್ ಮೂಲಕ ಅಧಿಕಾರಿಗಳನ್ನು ಸಿವಿಲ್ ಸರ್ವಿಸ್‌ಗೆ ತೆಗೆದುಕೊಳ್ಳುತ್ತಿದ್ದ ಪದ್ಧತಿ ಮೊದಲಿನಿಂದಲೂ ನಡೆದುಕೊಂಡು ಬಂದಿದೆ. ಈಗಲೂ ಸಹ ಅದೇ ರೀತಿ ಜಾರಿಯಲ್ಲಿದೆ. ಈ ರೀತಿ ಒಂದು ಎಕ್ಸಾಮಿನೇಷನ್ 1948ನೇ ಇಸವಿಯಲ್ಲಿ ನಡೆಯಿತು. ಅದು ಮತ್ತೆ ಯಾವಾಗ ನಡೆಸಬೇಕೆಂಬ ವಿಚಾರ ಈಗಲೂ ಸರ್ಕಾರದವರ ತೀವ್ರ ಆಲೋಚನೆಯಲ್ಲಿದೆ. ಈ ಕಾರಣದಿಂದ ನಾವು ಅಂಥ ನೀತಿಯನ್ನೇನೂ ಬಿಟ್ಟುಹೋಗಿಲ್ಲ. ಇನ್ನು ಈ ಬಾಬಿಗೆ ಅಷ್ಟೊಂದು ಖರ್ಚಾಗತಕ್ಕ ಸಂಭವವಿದೆಯೆಂಬುದಕ್ಕೆ ಮಾನ್ಯ ಸೂಚಕರು ತಕ್ಕ ಅಂಕಿ ಅಂಶಗಳಿಂದ ಅದನ್ನು ವ್ಯಕ್ತಪಡಿಸಿಲ್ಲ. ಈ ಸಿವಿಲ್ ಸರ್ವಿಸ್ ಪರೀಕ್ಷೆಗಾದರೂ ಕೇವಲ 10-20 ಸಾವಿರ ರೂಪಾಯಿಗಳಾದರೆ ಸಾಕು. ಲಕ್ಷಗಟ್ಟಲೆ ಏನೂ ಬೇಕಾಗುವುದಿಲ್ಲ. ಈ ಕಾರಣದಿಂದ ಈಗ ನಿರ್ಣಯದಲ್ಲಿ ಸೂಚಿಸಿರುವಂತೆ 10 ಲಕ್ಷ ರೂಪಾಯಿಗಳನ್ನು ಅದಕ್ಕೆ ಕೇಳಿರುವುದು ಸಕಾರಣವಾಗಿಲ್ಲವೆಂದು ನಾನು ಹೇಳಬೇಕಾಗಿದೆ.

ಈಗ ನಮ್ಮ ಸಂಸ್ಥಾನದಲ್ಲಿ ಈ ಸಿವಿಲ್ ಸರ್ವಿಸ್ ಅಧಿಕಾರಿಗಳಿಗೆ ಕೊಡುತ್ತಿರುವ ಸಂಬಳ ಸಾಲದು. ಅದಕ್ಕೋಸ್ಕರವಾಗಿ ಅವರು ಇಲ್ಲಿ ಕೆಲಸವನ್ನು ಬಿಟ್ಟು ಬೇರೆ ಸ್ಥಳಗಳಿಗೆ ಹೋಗುತ್ತಿದ್ದಾರೆ. ಅವರ ದಕ್ಷತೆಗೆ ಸರಿಯಾದ ಸಂಬಳ ಕೊಡದಿದ್ದರೆ ಅವರ ದಕ್ಷತೆ ಕಡಿಮೆಯಾಗುತ್ತದೆಂಬ ಭಯ ಉಂಟಾಗಿದೆಯೆಂದು ಕೆಲವು ಮಾನ್ಯ ಸದಸ್ಯರು ತಿಳಿಸಿದರು. ಆದರೆ ಹಾಗೆ ಅವರ ಸಂಬಳಗಳನ್ನು ಜಾಸ್ತಿ ಮಾಡುವ ಬಗ್ಗೆ 10 ಲಕ್ಷ ರೂಪಾಯಿಗಳು ಬೇಕೆಂದು ತಿಳಿಸಿಲ್ಲ. ಅದಾಗ್ಯೂ ಈ ಒಂದು ಕಾರಣಕ್ಕಾಗಿಯೇ ಹಾಗೆ ಕೇಳಿರುವುದು ಎಂಬ ಅಭಿಪ್ರಾಯ ಬರುವಂತೆ ಕೆಲವರು ಮಾತನಾಡಿಕೊಂಡಿದ್ದಾರೆ. ಕಮ್ಮಿ ದರ್ಜೆಯ ಹತ್ತಾರು ನೌಕರರಿಗಿಂತ ದಕ್ಷರಾದ ಎರಡು ಮೂರು ಜನ ಅಧಿಕಾರಿಗಳಿದ್ದರೆ ಸಾಕೆಂದೂ ಹೀಗೆ ಮಾಡುವುದರಿಂದ ಖರ್ಚು ಸಹ ಕಡಿಮೆಯಾಗುತ್ತದೆಂದೂ ವಾದ ಮಾಡಿರುವವರೇ ಹೀಗೆ 10 ಲಕ್ಷ ರೂಪಾಯಿಗಳು ಬೇಕಾಗಿದೆ ಎಂದು ಹೇಳುವುದರ ಅರ್ಥ ನನಗೆ ಗೊತ್ತಾಗುತ್ತಿಲ್ಲ.

ಇನ್ನೊಂದು ವಿಚಾರವೇನೆಂದರೆ ಇವರಿಗೆ ಸಂಬಳಗಳನ್ನು ಜಾಸ್ತಿ ಮಾಡಬೇಕೆಂಬುದು. ಇಷ್ಟರಲ್ಲೆಲ್ಲ ಇದೇ ಬಹಳ ಮುಖ್ಯವಾದ ವಿಚಾರ. ಆದರೆ ಈ ಸಂದರ್ಭದಲ್ಲಿ ಇದರ ಸಾಧಕ ಬಾಧಕಗಳನ್ನು ಚರ್ಚೆ ಮಾಡಲಿಕ್ಕೆ ಸಾಧ್ಯವಿಲ್ಲ. ಇದರಲ್ಲಿ ನನ್ನ ಆಶಯವೇನೆಂದರೆ ಪ್ರಾಂತೀಯ ಸರ್ಕಾರಗಳೆಲ್ಲ ಈ ವಿಚಾರದಲ್ಲಿ ಒಂದು ಯೂನಿಫಾರಂ ಪದ್ಧತಿಯನ್ನು ಅನುಸರಿಸುವುದು ಸೂಕ್ತವಾಗಿದೆಯೆಂದು, ಈ ಮಧ್ಯೆ ನಮ್ಮ ಹಣಕಾಸಿನ ಚೌಕಟ್ಟನ್ನು ಗಮನದಲ್ಲಿಟ್ಟುಕೊಂಡು ಜಾಗರೂಕತೆಯಿಂದ ನಾವು ಹೆಜ್ಜೆ ಇಡಬೇಕೇ ಹೊರತು ಏಕೆಂದರೆ ಇದಕ್ಕೆಲ್ಲ ಕೈಹಾಕುವುದು ಅಷ್ಟು ಸಾದುವಾದುದಲ್ಲ. ಹೀಗೆ ಮಾಡುವುದರಿಂದ ಮುಂದೆ ನಮ್ಮ ಬಜೆಟ್ಟಿನ ಸ್ಥಿತಿಗಳೇನಾಗಬಹುದು ಎಂಬುದನ್ನು ನಾವು ಆಲೋಚನೆ ಮಾಡಬೇಕಾಗಿದೆ. ಸಂಬಳ ಕಡಿಮೆಯಾದರೆ ದಕ್ಷತೆ

ಕಡಿಮೆಯಾಗುತ್ತದೆಂಬುದನ್ನು ನಾವು ಒಪ್ಪುವುದಿಲ್ಲ. ಇಷ್ಟಾದರೂ ಸಂಬಳಗಳನ್ನು ಜಾಸ್ತಿ ಮಾಡಿದ್ದೇವೆಂದು ಮಾನ್ಯ ಸದಸ್ಯರಿಗೂ ಸಹ ಗೊತ್ತಿದೆಯೆಂದು ಭಾವಿಸಿದ್ದೇನೆ. ಇನ್ನು ಲೋಯರ್ ಸಬಾರ್ಡಿನೇಟ್ ಅಧಿಕಾರಿಗಳ ಸಂಬಳಗಳನ್ನು ಈಗಾಗಲೇ ಹೆಚ್ಚು ಮಾಡಲಾಗಿದೆ. ಅದು ತಮಗೆಲ್ಲ ಗೊತ್ತೇ ಇದೆ. ಇನ್ನೂ ಹೆಚ್ಚು ಸಂಬಳ ಕೊಡತಕ್ಕ ಬಗ್ಗೆ ಈ ಅಸೆಂಬ್ಲಿಯಲ್ಲಿ ವಾದಿಸಿ ಯಾವುದಾದರೂ ಒಂದು ಖಚಿತಾಭಿಪ್ರಾಯಕ್ಕೆ ಬಂದರೆ ಮುಂದೆ ಅದನ್ನು ಸರ್ಕಾರದವರು ವಿಮರ್ಶೆ ಮಾಡಿ ಎಷ್ಟು ಹೆಚ್ಚು ಹಣ ಬೇಕಾಗುತ್ತದೆ ಎಂಬುದನ್ನು ಆಲೋಚನೆ ಮಾಡಬಹುದು. ಹಾಗಿಲ್ಲದೆ ಈ ರೀತಿ ಸುಮ್ಮನೆ 10 ಲಕ್ಷ ರೂಪಾಯಿಗಳನ್ನು ಬೇಕೆಂದು ಕೇಳುತ್ತಿರುವುದರ ಅರ್ಥ ನನಗೆ ಗೊತ್ತಾಗುತ್ತಿಲ್ಲ. ಕೆಲವರು ಏನೋ ಒಂದು ಮನೋಭಾವನೆಯಿಂದ ಚರ್ಚೆ ಮಾಡಬೇಕೆಂದು ಹೀಗೆಲ್ಲ ಟೀಕೆ ಮಾಡಿದ್ದಾರೆ.

ಇನ್ನು ಸರ್ಕಾರದವರ ನೀತಿಯ ಮೇಲೆ ಒಂದು ಆಕ್ಷೇಪಣೆಯನ್ನೆತ್ತಿದ್ದಾರೆ. ಈ ಪಬ್ಲಿಕ್ ಸರ್ವಿಸ್ ಕಮಿಷನ್ನನ್ನು ನೇಮಕ ಮಾಡಲಿಲ್ಲವೆಂಬ ಒಂದು ಕಾರಣದ ದೆಸೆಯಿಂದ ಅದನ್ನೇ ಒಂದು ದೊಡ್ಡದಾಗಿ ಮಾಡಿ ಬಹಳ ಕಟುವಾಗಿ ಟೀಕೆ ಮಾಡಿದ್ದಾರೆ. ಈ ವಿಚಾರದಲ್ಲಿ ನಾನು ಇಷ್ಟು ಮಾತ್ರ ಹೇಳಬಯಸುತ್ತೇನೆ. ಈ ಆಕ್ಷೇಪಣೆಗಳಿಗೆ ಯಾವ ಬುಡವೂ ಇಲ್ಲ. ಅವುಗಳನ್ನೆಲ್ಲ ನಾವು ಪ್ರತಿಭಟಿಸಬೇಕಾಗಿದೆ. ಇದಕ್ಕೆ ಕಾರಣಗಳೇನೆಂಬುದನ್ನು ಈ ಸಂದರ್ಭದಲ್ಲಿ ನಾನು ತಿಳಿಸಲಿಚ್ಚಿಸುವುದಿಲ್ಲವಾದ ಕಾರಣ ಈ ಪ್ರಸ್ತಾವವನ್ನು ನಾನು ಇಲ್ಲಿಗೇ ಬಿಡುತ್ತೇನೆ.

ಇದೇ ಸಂದರ್ಭದಲ್ಲಿ ಮತ್ತೊಂದು ವಿಷಯವನ್ನು ಸಭೆಯ ಗಮನಕ್ಕೆ ತರಬೇಕಾಗಿದೆ. ಅದೇನೆಂದರೆ ಈ ಬಜೆಟ್ ನಿರ್ಣಯಗಳ ವ್ಯಾಪ್ತಿಯೇನು, ಇದನ್ನು ನಾವು ಒಪ್ಪಿಕೊಂಡ ಪಕ್ಷದಲ್ಲಿ ಅದರ ಪರಿಣಾಮವೇನಾಗುತ್ತದೆ ಎಂಬ ಬಗ್ಗೆ ಒಂದೆರಡು ಮಾತುಗಳನ್ನು ತಿಳಿಸಬೇಕೆಂದು ನನ್ನ ಅಭಿಪ್ರಾಯ. ಈಗ ಬಂದಿರುವ ಬಜೆಟ್ ನಿರ್ಣಯಗಳನ್ನೆಲ್ಲ ನಾನು ನೋಡಿದೆ. ಅವುಗಳಲ್ಲಿ ಅನೇಕ ಬಾಬುಗಳಿಗೆ ಹೆಚ್ಚು ಹೆಚ್ಚು ಹಣವನ್ನು ಒದಗಿಸಬೇಕೆಂದು ಸೂಚಿಸಿದ್ದಾರೆ. ಅವುಗಳನ್ನು ನಾವೀಗ ಅನುಮೋದಿಸಿದರೆ 13 ಕೋಟಿ ರೂಪಾಯಿಗಳನ್ನು ಒದಗಿಸುವುದಕ್ಕೆ ನಾವು ತಯಾರಿರಬೇಕಾಗಿದೆ. ಇದಕ್ಕಾಗಿ ನಾವು ಎಲ್ಲರೂ ಸ್ವಲ್ಪ ಹಿಂಜರಿಯಬೇಕಾಗಿದೆ. ಮಾನ್ಯ ಸದಸ್ಯರುಗಳಿಗೆ ಇಂಥ ವಿಚಾರಗಳನ್ನು ಕೇಳತಕ್ಕ ಹಕ್ಕು ಅವರಿಗಿದೆ. ಅದನ್ನು ಸರ್ಕಾರದವರು ಒಪ್ಪಿಕೊಂಡೇ ಇದ್ದಾರೆ. ಅದನ್ನು ಹಾಗೆ ತಳ್ಳಿಹಾಕಬೇಕೆಂಬ ಮನೋಭಾವ ಸರ್ಕಾರಕ್ಕಿಲ್ಲ. ಪ್ರಜಾಪ್ರಭುತ್ವ ಸರ್ಕಾರಗಳು ಎಲ್ಲೆಲ್ಲಿ ಕೆಲಸ ಮಾಡುತ್ತಿವೆಯೋ ಅಲ್ಲೆಲ್ಲ ಪ್ರಜಾಮುಖಂಡರ ಮಾತಿಗೆ ಹೆಚ್ಚಿನ ಮಾನ್ಯತೆಯಿದೆ ಪೂಜ್ಯತೆಯಿದೆ ಎಂಬುದನ್ನು ನಾನು ಒಪ್ಪುತ್ತೇನೆ. ಇದೂ ಅಲ್ಲದೆ ಈ ಮಾನ್ಯ ಸಭೆಯ ಘನತೆ ಗೌರವಗಳನ್ನು ನವೀನ ಪದ್ಧತಿಗಳಿಗನುಗುಣವಾಗಿ ಇನ್ನೂ ಹೆಚ್ಚಿನ ಮಟ್ಟಕ್ಕೇರಿಸಬೇಕೆಂದು ನಾವು ಇಷ್ಟಪಡುತ್ತಿರುವಾಗ ಮಾನ್ಯ ಸದಸ್ಯರ ಅಭಿಪ್ರಾಯಗಳಿಗೆ ನಾವು ಎಷ್ಟರಮಟ್ಟಿನ ಮನ್ನಣೆ ಕೊಡಬೇಕಾಗಿದೆ ಎಂಬುದನ್ನು ನಾವು ಮನಗಂಡವರಾಗಿದ್ದೇವೆ. ಹೀಗೆ ತಮ್ಮ ಅಭಿಪ್ರಾಯಗಳಿಗೆ ಮನ್ನಣೆ ಕೊಡಬೇಕೆಂಬ ತತ್ವಕ್ಕೆ ನಾವು ಕಟ್ಟುಬೀಳವಂಥ ಸನ್ನಿವೇಶಗಳೊದಗುವ ಸಂದರ್ಭದಲ್ಲಿ ತಮ್ಮ ನಿರ್ಣಯಗಳನ್ನು ಒಪ್ಪಿಕೊಂಡರೆ ಅದರ ಪರಿಣಾಮವು ಯಾವ ರೀತಿಯಾಗಬಹುದೆಂಬುದನ್ನು ನಾವೇ ಯೋಚಿಸಬೇಕು. ಇಂಥಾದ್ದರಲ್ಲಿ ಇದಕ್ಕೆ 30 ಸಾವಿರ ಅದಕ್ಕೆ 5 ಲಕ್ಷ ಮತ್ತೊಂದಕ್ಕೆ 10 ಲಕ್ಷ, ಇನ್ನೊಂದಕ್ಕೆ 50 ಲಕ್ಷ ಎಂಬುದಾಗಿ ತಾವು ಈಗ

ಕೇಳಿರುವ ನಿರ್ಣಯಗಳ ಒಟ್ಟು ಮೊಬಲಗು 13 ಕೋಟಿ ರೂಪಾಯಿಗಳ ಮೇಲಾಗುತ್ತದೆ. ಈಗ ನಾವೇನಾದರೂ ಇದನ್ನೆಲ್ಲ ಒಪ್ಪಿಕೊಂಡರೆ ನಮ್ಮ ಹಣಕಾಸಿನ ಸ್ಥಿತಿಗಳೇನಾಗಬಹುದು? ಈ ಭೀತಿಯಿಂದ ನಾವು ಅವುಗಳನ್ನು ತಳ್ಳಿಹಾಕಲೇಬೇಕಾಗುತ್ತದೆ.

ಶ್ರೀ **ಭೂಪಾಳಂ ಚಂದ್ರಶೇಖರಯ್ಯನವರು:-** ನಮಗೆ ಈ ಕಷ್ಟಗಳೆಲ್ಲ ಇರುವುದರಿಂದಲೇ ಕಟ್‌ಮೋಷನ್ ತರುವ ಅವಕಾಶ ಮಾಡಿಕೊಡಿ ಎಂದು ಕೇಳುತ್ತಿದ್ದೇವೆ.

ಶ್ರೀ **ಕೆ. ಚೆಂಗಲರಾಯರೆಡ್ಡಿಯವರು:-** ನಾವು ತತ್ವಗಳನ್ನು ಒಪ್ಪಿಕೊಳ್ಳುತ್ತೇವೆಂದು ಹೇಳಿದ ಮೇಲೂ ನೀವು ಈ ನಿರ್ಣಯಗಳನ್ನು ಒಪ್ಪಿಕೊಳದೆ ಅದನ್ನು ಓಟಿಗೆ ಒಳಪಡಿಸಬೇಕೆಂದು ಒತ್ತಾಯಪಡಿಸತಕ್ಕ ನೀತಿಯನ್ನು ಅನುಸರಿಸುವ ಪಕ್ಷಕ್ಕೆ ನಾವು ವಿಧಿಯಿಲ್ಲದೆ ಅದನ್ನು ವಿರೋಧಿಸಬೇಕಾಗುತ್ತದೆ. ಈ ಒಂದು ನಿರ್ಣಯದಲ್ಲೇನೋ ಆದಿಚುಂಚನಗಿರಿ ಮಠಕ್ಕೆ 30 ಸಾವಿರ ರೂ.ಗಳ ಗ್ರಾಂಟ್ ಕೊಡಿ ಎಂದು ಕೇಳಲಾಗಿದೆ. ನಾವೀಗ ಇದನ್ನು ಒಪ್ಪಿಕೊಂಡ ಭಾಗದಲ್ಲಿ ಸರ್ವರಿಗೂ ಒಂದೇ ವಿಧವಾದ ಸರಿಸಮಾನತೆಗಳಿವೆಯೆಂದು ಹೇಳುವ ಕಾಲದಲ್ಲಿ ಮತ್ತು ಎಲ್ಲರನ್ನೂ ಒಂದೇ ನೀತಿಯಿಂದ ನೋಡಬೇಕೆಂದು ಹೇಳುತ್ತಿರುವಾಗ ನಾಳೆ ಲಿಂಗಾಯಿತರು ಮತ್ತು ಬ್ರಾಹ್ಮಣರು ಅವರಿಗೂ ಕೂಡ ಇದೇ ರೀತಿ 50 ಸಾವಿರ ಕೊಡಿ, 1 ಲಕ್ಷ ಕೊಡಿ, 2 ಲಕ್ಷ ಕೊಡಿ ಎಂದು ನಿರ್ಣಯಗಳನ್ನು ತಂದು ಪಾಸ್ ಮಾಡಿಸಲು ಒತ್ತಾಯಪಡಿಸುತ್ತಾ ಹೋದರೆ ಇದಕ್ಕೆ ಪಾರು ಇದೆಯೆ? ಈ ಎಲ್ಲ ಕಾರಣಗಳಿಂದ ನಾವು ತತ್ವವನ್ನು ಮಾತ್ರ ಒಪ್ಪಿಕೊಳ್ಳಬಹುದೇ ಹೊರತು ಈ ನಿರ್ಣಯದಲ್ಲಿ ಕೇಳಿರುವ ರೀತಿ ಸರ್ಕಾರದವರು ಹಣವನ್ನು ಒದಗಿಸಬೇಕೆಂದರೆ ನಮ್ಮ ದೇಶದ ಬಜೆಟ್ಟಿನ ಪರಿಣಾಮವೇನಾಗಬಹುದು ಎಂಬುದನ್ನು ತಾವೇ ಆಲೋಚನೆ ಮಾಡಬಹುದು. ಆದರೆ ಈಗ ಕೇಳಿರತಕ್ಕ 30 ಸಾವಿರ ರೂಪಾಯಿಗಳ ಗ್ರಾಂಟನ್ನು ಕೊಡಬೇಕೆಂದು ಶಿಫಾರಸ್ಸು ಮಾಡುವುದಕ್ಕೆ ಪ್ರತಿಯಾಗಿ ಅದನ್ನು ವಿರೋಧಿಸಿದ ಮಾತ್ರದಿಂದಲೇ ಸರ್ಕಾರಕ್ಕೆ ಆ ಮಠದ ವಿಷಯದಲ್ಲಾಗಲೀ ಒಕ್ಕಲಿಗರ ಜನಾಂಗದ ವಿಚಾರದಲ್ಲಾಗಲೀ ವಿರೋಧ ಭಾವನೆಯಿಂದ ಇದ್ದಾರೆಂದು ಯಾರೂ ಅಪಾರ್ಥ ಮಾಡಿಕೊಳ್ಳಬಾರದು. ಈ ಮಠಕ್ಕೆ 30 ಸಾವಿರ ರೂಪಾಯಿಗಳ ಗ್ರಾಂಟನ್ನು ಕೊಡಬೇಕೆಂದು ಯಾರು ಓಟ್ ಮಾಡಿದ್ದೀರೋ ಆ ಮಹನೀಯರಿಗೆಲ್ಲ ಈ ಒಕ್ಕಲಿಗರ ಜನಾಂಗದ ಮೇಲೆ ಮತ್ತು ಅವರ ಶ್ರೆಯೋಭಿವೃದ್ಧಿಯ ಬಗ್ಗೆ ಎಷ್ಟು ಅಭಿಮಾನವಿದೆಯೋ ಅದಕ್ಕಿಂತಲೂ ಹೆಚ್ಚಿನ ಅಭಿಮಾನ ಈ ಸಂದರ್ಭದಲ್ಲಿ ಓಟು ಮಾಡದ ಮಹನೀಯರುಗಳಿಗೆಲ್ಲರಿಗೂ ಇದೆಯೆಂದರೆ ಅದೇನೂ ಒಂದು ಅತಿಶಯೋಕ್ತಿಯಾಗಲಾರದು.

ಶ್ರೀ **ಎಸ್.ಸಿ. ಮಲ್ಲಯ್ಯ:-** What is the proof of it?

ಶ್ರೀ **ಕೆ. ಚೆಂಗಲರಾಯರೆಡ್ಡಿಯವರು:-** ಆದುದರಿಂದ ಬಜೆಟ್ ನಿರ್ಣಯಗಳು ಈ ರೀತಿ ಇರುವಾಗ ಅವು ಹೇಗೆ ಇರುತ್ತವೆಯೋ ಹಾಗೆಯೇ ಅವುಗಳನ್ನು ಅನುಮೋದಿಸಿ, ಒತ್ತಾಯಪಡಿಸಿ, ಓಟಿಗೆ ಒಳಪಡಿಸತಕ್ಕ ಭಾಗ ಬೇಕಾದಲ್ಲಿ ನಾವು ಅವುಗಳನ್ನೆಲ್ಲ ಬಹಳ ಮಟ್ಟಿಗೆ ವಿರೋಧಿಸಬೇಕಾಗಿ ಬರುತ್ತದೆ. ಅದರ ತತ್ವಗಳನ್ನು ಒಪ್ಪಿಕೊಳ್ಳುವುದಕ್ಕೆ ನಾವು ಸಿದ್ಧರಾಗಿದ್ದೇವೆ. ಶ್ರೀಮಾನ್

ಜಿ. ರಾಮಯ್ಯನವರು ಹೇಳಿರತಕ್ಕ ರೀತಿಯಲ್ಲಿ ದಕ್ಷತೆಯಿಂದ ಕೆಲಸ ಮಾಡಬೇಕೆಂಬ ತತ್ವವನ್ನು ನಾವು ಒಪ್ಪಿಕೊಳ್ಳುತ್ತೇವೆ. ಇನ್ನೂ ಹೆಚ್ಚಿನ ದಕ್ಷತೆಯಿಂದ ಕೆಲಸ ಮಾಡುವುದಕ್ಕೆ ಯಾವ ರೀತಿ ಮಾಡಬೇಕೆಂಬುದನ್ನು ತಿಳಿಸಿದರೆ ಆ ರೀತಿ ಮಾಡುವುದಕ್ಕೆ ನಾವು ಸಹ ಅವಶ್ಯಕವಾದ ಎಲ್ಲ ಏರ್ಪಾಡುಗಳನ್ನು ಮಾಡುವುದಕ್ಕೆ ಸಿದ್ಧರಾಗಿದ್ದೇವೆ. ಇಲ್ಲಿ ಅವರು ಕೇಳಿರತಕ್ಕ 10 ಲಕ್ಷ ರೂಪಾಯಿಗಳಿಗೆ ಸಾಕಷ್ಟು ಕಾರಣಗಳನ್ನು ಅವರು ತಿಳಿಸಿಲ್ಲ. ಅದನ್ನು ಯಾವ ರೀತಿ ವಿನಿಯೋಗ ಮಾಡಬೇಕೆಂಬುದೂ ಸಹ ಇದರಲ್ಲಿ ನಮೂದಾಗಿಲ್ಲ. ಈ ನಿರ್ಣಯವನ್ನು ಈಗಿರತಕ್ಕ ರೀತಿಯಲ್ಲಿ ಒಪ್ಪಿಕೊಳ್ಳುವುದು ಕಷ್ಟವಾಗಿದೆ. ಆದುದರಿಂದ ಮಾನ್ಯ ಸೂಚಕರು ಈ ನಿರ್ಣಯವನ್ನು ವಾಪಸ್ಸು ತೆಗೆದುಕೊಳ್ಳುವುದು ಉತ್ತಮವಾಗಿ ಕಾಣುತ್ತೆ. ಇಲ್ಲವಾದರೆ ನಾವು ಅದನ್ನು ಈಗಿರತಕ್ಕ ರೀತಿಯಲ್ಲಿ ವಿರೋಧಿಸಬೇಕಾಗುತ್ತದೆ.

## 7. ಬಜೆಟ್ ಮೇಲಿನ ನಿರ್ಣಯಗಳು

### (ಪ್ರಜಾಪ್ರತಿನಿಧಿ ಸಭೆಯ ನಡವಳಿಗಳು - 11, ಜೂನ್ 1949)

ಶ್ರೀ ಕೆ. ಚೆಂಗಲರಾಯರೆಡ್ಡಿಯವರು ಮುಖ್ಯಮಂತ್ರಿಗಳು: ಮಾನ್ಯ ಅಧ್ಯಕ್ಷರೇ, ಶ್ರೀ ಬಿ.ವಿ. ಶಿವಲಿಂಗಪ್ಪನವರು ಈ ನಿರ್ಣಯವನ್ನು ತಮ್ಮ ಒಂದು ಒಳ್ಳೆಯ ಶೈಲಿಯಲ್ಲಿ ಸುಂದರವಾದ ಭಾಷಣವನ್ನು ಈ ಸಭೆಯ ಮುಂದೆ ಇಟ್ಟಿದ್ದಾರೆ. ಅವರ ಭಾಷಣವನ್ನು ಇನ್ನೂ ಕೇಳಬೇಕೆಂಬ ಕುತೂಹಲವಾಗಿದ್ದರೂ ಕೂಡ ಈ ಸಭೆಯ ಕಾಲವು ಕಡಿಮೆಯಾಗಿರುವುದರಿಂದ ವಿಷಾದಿಸುತ್ತೇನೆ. ಮೊದಲು ನಾನು ನಿರ್ಣಯವನ್ನು ಓದಿದಾಗ ಅದರ ಅರ್ಥವು ಸರಿಯಾಗಿ ಆಗಲಿಲ್ಲ. ಈಗ ಅವರು ಯಾವ ಉದ್ದೇಶಕ್ಕಾಗಿ 5 ಲಕ್ಷ ರೂಪಾಯಿಗಳ ದ್ರವ್ಯವನ್ನು ಕೇಳಿದೆ ಎಂಬುದನ್ನು ವಿವರಿಸಿದ ಮೇಲೆ ನಿರ್ಣಯದ ಅರ್ಥವು ಸರಿಯಾಗಿ ಗೊತ್ತಾಯಿತು. ಆದರೆ ಅವರು ತಿಳಿಸಿದ ಕೆಲಸಗಳಿಗೆ ಈ 5 ಲಕ್ಷ ರೂಪಾಯಿಗಳು ಸಾಕಾಗುವುದಿಲ್ಲ ಎಂದು ಅವರು ಅರಿತಿದ್ದಾರೆಂದು ನಂಬಿದ್ದೇನೆ. ಈಗಾಗಲೇ ಬಜೆಟ್ಟಿನಲ್ಲಿ ಈ ಬಾಬುಗಳಿಗೆ ಅನೇಕ ಲಕ್ಷ ರೂಪಾಯಿಗಳನ್ನು ಒದಗಿಸಿಕೊಡಲಾಗಿದೆ ಎಂದು ಪುನಃ ಹೇಳಬೇಕಾಗಿಲ್ಲ. ಕೋಮುವಾರು ಸೌಹಾರ್ದ, ಅಸ್ಪೃಶ್ಯತಾ ನಿವಾರಣೆ ಮತ್ತು ವ್ಯವಸಾಯಾಭಿವೃದ್ಧಿ, ಸಹಕಾರ ಪದ್ಧತಿಯ ಮೂಲಕ ವ್ಯವಸಾಯ ಮಾಡುವುದು, ಗೃಹ ಕೈಗಾರಿಕೆಗಳ ಅಭಿವೃದ್ಧಿ ಮೊದಲಾದ ಬಾಬುಗಳಿಗೆ ಎಷ್ಟೋ ಹಣವನ್ನು ಖರ್ಚು ಮಾಡುತ್ತಿದ್ದೇವೆ ಮತ್ತು ಬಜೆಟ್ಟಿನಲ್ಲಿ ಸಹ ಹೆಚ್ಚು ಹಣವನ್ನು ಒದಗಿಸಬೇಕಾಗಿದೆ. ಇದಕ್ಕಾಗಿ ಇನ್ನೂ 5 ಲಕ್ಷ ರೂಪಾಯಿಗಳನ್ನು ಕೊಡಬೇಕೆಂದು ನಿರ್ಣಯದಲ್ಲಿ ಕೇಳಿದ್ದಾರೆ. ಈ ಮೇಲ್ಕಂಡ ಬಾಬುಗಳ ಬಗ್ಗೆ ಪ್ರಚಾರ ಕಾರ್ಯವನ್ನು ನಡೆಸಲು ಇನ್ನೂ 5 ಲಕ್ಷ ರೂಪಾಯಿಗಳನ್ನು ಒದಗಿಸಬೇಕೆಂದು ಶ್ರೀ ಬಿ. ಶಿವಲಿಂಗಪ್ಪವರ ಆಸೆ ಇದ್ದ ಹಾಗೆ ಕಾಣುತ್ತದೆ. ನಿರ್ಣಯದಲ್ಲಿ ಸೂಚಿಸಿರುವ ಅಂಶಗಳ ಪೈಕಿ ಪಾನನಿರೋಧ ವಿಚಾರವನ್ನು ತೆಗೆದುಕೊಂಡು ನೋಡುವುದಾದರೆ ಈ ಬಗ್ಗೆ ಖಾಸಗಿ ಸಂಸ್ಥೆಗಳು ಬಹಳ ಕೆಲಸ ಮಾಡಬಹುದು ಮತ್ತು ಈಗಾಗಲೇ ಕೆಲವು ಸಂಸ್ಥೆಗಳು ಕೆಲಸ ಮಾಡುತ್ತಿವೆ. ಸೇವಾದಳ, ಟೆಂಪರೆನ್ಸ್ ಫೆಡರೇಶನ್ ಮುಂತಾದ ಸಂಸ್ಥೆಗಳಿಗೆ ಸಹಾಯ ಮಾಡಲು ಸರ್ಕಾರದವರು ತೀರ್ಮಾನ ಮಾಡಿದ್ದಾರೆ. ಟೆಂಪರೆನ್ಸ್ ಫೆಡರೇಶನ್‌ಗೆ 3000 ರೂಪಾಯಿಗಳ ಗ್ರಾಂಟನ್ನು ಕೊಡಲಾಗುತ್ತಿತ್ತು ಮತ್ತು ಇದನ್ನು ಮುಂದುವರೆಸಿಕೊಂಡು ಬರುತ್ತಿದ್ದೇವೆ. ಇದೇ ರೀತಿ ಇತರ ಖಾಸಗೀ ಸಂಸ್ಥೆಗಳು ಪ್ರಚಾರ ಕಾರ್ಯ ನಡೆಸಲು ಮುಂದೆ ಬಂದರೆ ಅವುಗಳಿಗೆ ಸಹಾಯ ಮಾಡುವುದಕ್ಕೆ ಸರ್ಕಾರದವರು ಸಿದ್ಧರಾಗಿದ್ದಾರೆ.

**ಶ್ರೀ ಭೂಪಾಳಂ ಆರ್. ಚಂದ್ರಶೇಖರಯ್ಯ:-** What about RSS?

**ಶ್ರೀ ಕೆ. ಚೆಂಗಲರಾಯರೆಡ್ಡಿ:-** It is a banned organisation.

**ಶ್ರೀ ಭೂಪಾಳ್ ಚಂದ್ರಶೇಖರಯ್ಯ:-** I Protest, sir.

**ಶ್ರೀ ಕೆ. ಚೆಂಗಲರಾಯರೆಡ್ಡಿ:-** I said "banned" organisation ಕೆಲ ಪ್ರಚಾರ ಕಾರ್ಯವನ್ನು ನಡೆಸುವ ಬಗ್ಗೆ ನಾವು ಒಂದು ರೀತಿಯ ನೀತಿಯನ್ನು ಅನುಸರಿಸಿಕೊಂಡು ಬರುತ್ತಿದ್ದೇವೆ ಎಂದು ಮಾತ್ರ ಹೇಳಬೇಕಾಗಿದೆ. ಈ ಬಗ್ಗೆ ಪ್ರಚಾರ ಕಾರ್ಯವನ್ನು ಈ ಸಭೆಯ ಮಾನ್ಯ ಸದಸ್ಯರು,

ಪಕ್ಷಗಳ ಮುಖಂಡರು ಮತ್ತು ಇತರ ಖಾಸಗೀ ಮನುಷ್ಯರು, ಯಾವ ರೀತಿಯ ಸಂಭಾವನೆಯನ್ನೂ ಅಪೇಕ್ಷಿಸದೆ ಮಾಡಬಹುದೆಂಬ ಅಂಶವನ್ನು ನಾನು ಮಾನ್ಯ ಸದಸ್ಯರಾದ ಶ್ರೀ ಬಿ.ವಿ. ಶಿವಲಿಂಗಪ್ಪನವರಿಗೆ ತಿಳಿಸಬಹುದಾಗಿದೆ. ಈ ರೀತಿಯ ಕೆಲಸವನ್ನು ಬಹಳ ಸುಲಭವಾಗಿ ಮಾಡಬಹುದೆಂಬ ಅಂಶವನ್ನು ಎಲ್ಲರೂ ಒಪ್ಪುತ್ತಾರೆಂದು ನಂಬಿದ್ದೇನೆ. ತಮಗೆಲ್ಲರಿಗೂ ತಿಳಿದಿರುವಂತೆ ಕಾಂಗ್ರೆಸ್ ಸಂಸ್ಥೆಯು 1938ನೆಯ ಇಸವಿಯಿಂದಲೂ ದೇಶೋದ್ಧಾರದ ಒಂದು ಘನ ಉದ್ದೇಶದಿಂದ ಆಗಿನ ಸರ್ಕಾರವನ್ನು ಎದುರಿಸುವ ಬಗ್ಗೆ ಯಾವ ಸಂಭಾವನೆಯನ್ನೂ ನಿರೀಕ್ಷಿಸದೇ ಕೆಲಸ ಮಾಡಿಕೊಂಡು ಬಂದಿದೆ. ಅದೇ ರೀತಿಯಾಗಿ ಈಗಲೂ ಸಹ ಖಾಸಗೀ ಮಹನೀಯರು ಮತ್ತು ಸಂಸ್ಥೆಗಳ ಪ್ರಚಾರ ಕಾರ್ಯವನ್ನು ಮಾಡಬಹುದೆಂದು ಹೇಳಿರೆ ಎಲ್ಲರೂ ಒಪ್ಪುತ್ತಾರೆಂದು ನಂಬಿದ್ದೇನೆ. ಪೂಜ್ಯ ಬಾಪೂಜಿಯವರು ರಚನಾತ್ಮಕ ಕಾರ್ಯದ ಬಗ್ಗೆ ಯಾವ ಒಂದು 18 ವಿಷಯಗಳನ್ನೊಳಗೊಂಡ ಕಾರ್ಯಕ್ರಮವನ್ನು ಗೊತ್ತುಮಾಡಿದರೋ ಅದನ್ನು ಅನುಸರಿಸಿಕೊಂಡು ಬರಲು ಸಹಾಯವಾಗುವಂತೆ ಪ್ರಚಾರ ಕಾರ್ಯ ನಡೆಸುವ ಸಂದರ್ಭದಲ್ಲಿ ಸರ್ಕಾರಕ್ಕೆ ಎಲ್ಲಾ ಪಕ್ಷದ ಸದಸ್ಯರು ನೆರವಾಗಬೇಕೆಂದು ವಿನಂತಿ ಮಾಡಿಕೊಳ್ಳುತ್ತೇನೆ. ಹೀಗೆ ಕೆಲಸ ಮಾಡುವಾಗ ಯಾವ ಒಂದು ಸಂಭಾವನೆಯನ್ನೂ ಅಪೇಕ್ಷಿಸದೆ ಮಾಡಬಹುದು ಮತ್ತು ಹಾಗೆ ಮಾಡುವುದರಲ್ಲಿ ಯಾವ ಅಭ್ಯಂತರವೂ ಇಲ್ಲ. ಮಾನ್ಯ ಶ್ರೀ ಎಸ್.ಸಿ. ಮಲ್ಲಯ್ಯನವರ ಭಾಷಣ ಕೇಳಿ ನನಗೆ ಆಶ್ಚರ್ಯವಾಯಿತು. ಅವರ ವಾದ ಹೇಗಿತ್ತೆಂದರೆ "ಮೂಗಿನ ಮೇಲೆ ಕೋಪಿಸಿಕೊಂಡು ಮೂಗನ್ನೇ ಕತ್ತರಿಸಿಕೊಂಡ" ಎಂಬ ಗಾದೆಯಂತಿತ್ತು. ಕಾಂಗ್ರೆಸ್ ಸರ್ಕಾರಕ್ಕೆ ನಿರ್ಣಯವನ್ನು ಸೂಚಿಸಿರುವಂತೆ ಹಣವನ್ನು ಕೊಟ್ಟರೆ ಅದನ್ನೇ ಅವರು ದುರುಪಯೋಗಪಡಿಸಿಕೊಳ್ಳುತ್ತಾರೆಂಬ ಒಂದು ಸಂಶಯವನ್ನು ಅವರು ವ್ಯಕ್ತಪಡಿಸಿದರು. ನಮ್ಮ ಒಂದು ಪಕ್ಷದ ಅನುಕೂಲಕ್ಕಾಗಿ ಹಣವನ್ನು ದುರ್ವಿನಿಯೋಗ ಮಾಡುತ್ತೇವೆ ಎಂಬ ವಾದವನ್ನು ನಾನು ಒಪ್ಪುವುದಿಲ್ಲ ಮತ್ತು ಯಾರೂ ಸಹ ಒಪ್ಪುವುದಿಲ್ಲ ಎಂದು ಭಾವಿಸುತ್ತೇನೆ. ಅವರು ಈ ಒಂದು ಸಂದರ್ಭವನ್ನು ಉಪಯೋಗಿಸಿಕೊಂಡು ನಮ್ಮ ಮೇಲೆ ಟೀಕೆ ಮತ್ತು ಆರೋಪಣೆಯನ್ನು ಮಾಡಿದ್ದಾರೆ ಆ ಹಣವನ್ನು ನಾವು ಒಂದು ಪಕ್ಷವನ್ನು ಬಲಪಡಿಸಿಕೊಳ್ಳುವುದಕ್ಕೆ ಅಥವಾ ಸ್ವಪ್ರತಿಷ್ಠೆಗಾಗಿ ಉಪಯೋಗಿಸಿಕೊಳ್ಳುತ್ತೇವೆ ಎಂದು ಹೇಳುವುದಕ್ಕಾಗಿ ಯಾವ ಆಧಾರವೂ ಇಲ್ಲ. ಅಂಥಾ ಪ್ರಚಾರವೂ ಇಲ್ಲದೆ ಇದ್ದ ಕಾಲದಲ್ಲಿಯೇ ನಾವು ಒಂದು ಪಕ್ಷವನ್ನು ಬಲಪಡಿಸಿಕೊಂಡಿರುವುವಾಗ ಮತ್ತು ದೇಶಕ್ಕೆ ಅನುಕೂಲವಾಗುವ ರೀತಿಯಲ್ಲಿ ಕೆಲಸ ಮಾಡಿಕೊಂಡು ಬರುತ್ತಿರುವಾಗ ಸರ್ಕಾರದ ಹಣವನ್ನು ತೆಗೆದುಕೊಂಡು ನಮ್ಮ ಪ್ರಚಾರ ಕಾರ್ಯವನ್ನು ಮಾಡಿಕೊಂಡು ಒಂದು ಪಕ್ಷವನ್ನು ಬಲಪಡಿಸಿಕೊಳ್ಳಬೇಕೆಂಬ ಮನೋಭಾವ ಉಳ್ಳವರಲ್ಲವೆಂದು ಖಡಾಖಂಡಿತರಾಗಿ ಹೇಳುತ್ತೇನೆ.

ಶ್ರೀ ಎಂ. ಶಂಕರಲಿಂಗೇಗೌಡರು (ನಾಗಮಂಗಲ ತಾಲ್ಲೂಕು): ಈಗ ಕಾಂಗ್ರೆಸ್ ನಿಧಿ ಎಷ್ಟಿದೆ?

ಶ್ರೀ ಕೆ. ಚೆಂಗಲರಾಯರೆಡ್ಡಿಯವರು: ನಮ್ಮ ಒಂದು ನೈತಿಕ ಬಲವೇ ಅದರ ನಿಧಿಯೇ ಹೊರತು ರೂಪಾಯಿ, ಆಣೆ, ಹಣಕಾಸು ಮುಖ್ಯವಲ್ಲ. ದೇಶದ ಏಳಿಗೆಗೆ ಸಂಬಂಧಪಟ್ಟ ಮತ್ತು ರೈತರಿಗೆ ಸಹಾಯವಾಗುವಂತಹ ಪ್ರಚಾರ ಕಾರ್ಯವನ್ನು ಮುಂದುವರೆಸಿಕೊಂಡು ಹೋಗಲು ಸರ್ಕಾರದವರು ತಯಾರಾಗಿದ್ದಾರೆಂದು ಹೇಳಬಯಸುತ್ತೇನೆ. ತಮಗೆ ಗೊತ್ತಿರುವ ಹಾಗೆ ಪಬ್ಲಿಸಿಟಿ ಆಫೀಸರಿಗೆ

ಸಂಬಂಧಪಟ್ಟಂತೆ ಬಜೆಟ್ಟಿನಲ್ಲಿ ಒಂದೂವರೆ ಲಕ್ಷ ರೂಪಾಯಿಗಳನ್ನು ಲಂಪ್‌ಸಂ ಗ್ರಾಂಟನ್ನು ಮಂಜೂರು ಮಾಡಿದ್ದೇವೆ. ಈ ಪ್ರಕಟಣಾ ಇಲಾಖೆಯನ್ನು ಉತ್ತಮಪಡಿಸಲು ಮತ್ತು ಅದರಲ್ಲಿ ಇನ್ನೂ ನಾನಾ ಶಾಖೆಗಳನ್ನು ಅಂದರೆ ಫೋಟೋ, ಸಿನಿಮಾ ಮೊದಲಾದ ಶಾಖೆಗಳನ್ನು ತೆಗೆಯುವ ಯೋಜನೆಯೂ ಸಹ ಸರ್ಕಾರದವರ ಪರ್ಯಾಲೋಚನೆಯಲ್ಲಿದೆ. ಈ ರೀತಿ ನಾನಾ ಶಾಖೆಗಳನ್ನು ಏರ್ಪಡಿಸಿ ಇನ್ನೂ ಸುವ್ಯವಸ್ಥಿತವಾದ ರೀತಿಯಲ್ಲಿ ಪ್ರಚಾರ ಕಾರ್ಯವನ್ನು ನಡೆಸಿಕೊಂಡು ಬರುವಂತೆ ಮಾಡಬೇಕೆಂಬ ಯೋಚನೆ ಇದೆ. ಈ ಕಾರಣಗಳಿಂದ ಸೂಚಕರು ನಿರ್ಣಯವನ್ನು ವಾಪಸ್ಸು ತೆಗೆದುಕೊಳ್ಳಬೇಕೆಂದು ಪ್ರಾರ್ಥಿಸುತ್ತೇನೆ.

ಶ್ರೀ ಬಿ.ವಿ. ಶಿವಲಿಂಗಪ್ಪನವರು: ಮಾನ್ಯ ಮಂತ್ರಿಗಳು ಸಂಭಾವನೆ ಇಲ್ಲದೆ ಪ್ರಚಾರ ಕಾರ್ಯಗಳನ್ನು ನಾವು ಮಾಡಬೇಕೆಂದು ಹೇಳಿದ ಮೇಲೆ ನಾನು ನನ್ನ ಕೈಲಾದ ಸೇವೆಯನ್ನು ಮಾಡುವುದಕ್ಕೆ ಸಿದ್ಧವಾಗಿದ್ದೇವೆ ಎಂದು ಹೇಳಬೇಕಾಗಿದೆ. ಸಂಭಾವನೆ ಇಲ್ಲದೆ ಕೆಲಸ ಮಾಡಬೇಕೆಂಬ ಮಾತು ಮಂತ್ರಿಗಳ ಬಾಯಿಂದ ಖಚಿತವಾಗಿ ಬರಲಿ ಎಂಬ ಉದ್ದೇಶದಿಂದ ಈ ನಿರ್ಣಯವನ್ನು ತಂದಿದ್ದೆ. ಈಗ ಅವರಿಂದ ಭರವಸೆ ಬಂದಿರುವುದರಿಂದ ನಾನು ನಿರ್ಣಯವನ್ನು ವಾಪಸ್ಸು ತೆಗೆದುಕೊಳ್ಳುವುದರಲ್ಲಿ ಯಾವ ಅಭ್ಯಂತರವಿದೆ ಮತ್ತು ಅದಕ್ಕೆ ತಾವು ಅನುಮತಿ ಕೊಡುವುದರಲ್ಲಿ ಆಶ್ಚರ್ಯವೇನಿದೆ?

(ಸೂಚಕರು ಸಭೆಯ ಅನುಮತಿಯಿಂದ ನಿರ್ಣಯವನ್ನು ವಾಪಸ್ಸು ತೆಗೆದುಕೊಂಡರು)

## 8. ಸಭೆಯ ಅಧ್ಯಕ್ಷರಿಗೆ ಸಂಬಳ ಮತ್ತು ವಾಹನ ಭತ್ಯೆ ಗೊತ್ತು ಮಾಡುವ ವಿಷಯದಲ್ಲಿ ವಿಶೇಷ ನಿರ್ಣಯ

### (ಪ್ರಜಾ ಪ್ರತಿನಿಧಿ ಸಭೆಯ ನಡೆವಳಿಗಳು - 13, ಜೂನ್ 1948)

**ಶ್ರೀ ಕೆ. ಚೆಂಗಲರಾಯರೆಡ್ಡಿಯವರು (ಮುಖ್ಯಮಂತ್ರಿಗಳು):-** ಮಾನ್ಯ ಅಧ್ಯಕ್ಷರೇ, ಈ ನಿರ್ಣಯದ ಮೇಲೆ ಭಾಷಣ ಮಾಡುತ್ತ ಮುಖ್ಯವಾದ ಎರಡು ಅಂಶಗಳನ್ನು ಎಂದರೆ ನ್ಯಾಯವಿಧಾಯಕ ಸಭಾಧ್ಯಕ್ಷರ ಸ್ಥಾನಕ್ಕೂ ಪ್ರಜಾಪ್ರತಿನಿಧಿ ಸಭೆಯ ಅಧ್ಯಕ್ಷರ ಸ್ಥಾನಮಾನಕ್ಕೂ ವ್ಯತ್ಯಾಸ ಇರಬಾರದು ಎಂಬುದನ್ನು ಹೇಳಿದ್ದಾರೆ. ನಮ್ಮ ಸಭಾಧ್ಯಕ್ಷರಿಗೆ 800 ರೂಪಾಯಿ ಸಂಬಳ ಗೊತ್ತುಮಾಡಿದ್ದೀರಿ. ಹೀಗಿರುವಾಗ ನ್ಯಾಯವಿಧಾಯಕ ಸಭಾಧ್ಯಕ್ಷರಿಗೆ 1,250 ರೂಪಾಯಿಗಳ ಸಂಬಳ ಏಕೆ ಇರಬೇಕು ಎಂದು ಪ್ರಶ್ನಿಸಿ ಇದನ್ನೂ ಆ ಮಟ್ಟಕ್ಕೆ ಏರಿಸಬೇಕೆಂದು ಸಲಹೆ ಮಾಡಿದ್ದಾರೆ. ಅವರು ಏನೊಂದು ಅಭಿಪ್ರಾಯವನ್ನೂ ಸ್ಪಷ್ಟವಾಗಿ ಹೇಳದೇ ಇದ್ದರೂ ಒಂದು ಸೂಚನೆ ಮಾತ್ರ ವ್ಯಕ್ತಪಟ್ಟಿತು. ನಮ್ಮ ಸಭಾಧ್ಯಕ್ಷರಿಗೆ ಕಮ್ಮಿ ಸಂಬಳ ಗೊತ್ತು ಮಾಡಿಲ್ಲ. ಇವರಿಗೆ ಕೊಡತಕ್ಕ ಅಲೋಯನ್ಸ್, ವಾಹನ ಭತ್ಯ ಇವೆಲ್ಲ ಸೇರಿಸಿ ನೋಡಿದರೆ ಒಂದು ದೃಷ್ಟಿಯಿಂದ ಅದಕ್ಕಿಂತಲೂ ಇದೇ ಜಾಸ್ತಿ ಆಗುತ್ತದೆ. ಅದು ಕಮ್ಮಿ ಆಗುವುದಿಲ್ಲವೆಂದು ಹೇಳುತ್ತೇನೆ. ನ್ಯಾಯವಿಧಾಯಕ ಸಭಾಧ್ಯಕ್ಷರು ಅವರೇ ಕಾರನ್ನು ಕೊಂಡುಕೊಂಡು ಮೇನ್‌ಟೇನ್ ಮಾಡಬೇಕಾಗುತ್ತದೆ. ನ್ಯಾಯವಿಧಾಯಕ ಸಭಾಧ್ಯಕ್ಷರ ಸಂಬಳಕ್ಕಿಂತ ಇವರ ಸಂಬಳ ಕಡಿಮೆ ಗೊತ್ತುಮಾಡಿ ಇವರ ಸ್ಥಾನಮಾನ ಇಳಿಸಿದೆ ಎಂದು ಯಾರೂ ತಿಳಿದುಕೊಳ್ಳಬೇಕಾಗಿಲ್ಲ. ಎರಡನೆಯದು- ನ್ಯಾಯವಿಧಾಯಕ ಸಭಾಧ್ಯಕ್ಷರ ಸಂಬಳವನ್ನು ಇದೇ ರೀತಿ ಮಾಡಬೇಕೆಂದು ಒಂದು ಸಲಹೆ ಬಂದಿದೆ. ನ್ಯಾಯವಿಧಾಯಕ ಸಭಾಧ್ಯಕ್ಷರ ಸಂಬಳ, ಆ ಸಭೆಯಲ್ಲಿ ಗೊತ್ತುಪಡಿಸಿದ್ದಾರೆ. ಅದನ್ನು ಅಂಗೀಕಾರ ಮಾಡಿದ್ದು ಈಗಿನ ಮಂತ್ರಿಮಂಡಲ ಅಲ್ಲ. ಹಿಂದಿನ ಮಂತ್ರಿಮಂಡಲ ಎಂಬುದು ಎಲ್ಲರಿಗೂ ಗೊತ್ತಿದೆ. ಅದನ್ನು ಬದಲಾವಣೆ ಮಾಡಬೇಕೆಂಬ ವಿಚಾರ ಯೋಚನೆ ಮಾಡುತ್ತೇನೆ. ಮೂರನೆಯದು ಸರ್ಕಾರಿ ಕಾರು ಒದಗಿಸಿರುವ ವಿಚಾರ. ಸರ್ಕಾರಿ ಕಾರು ಇದ್ದರೆ ಸರ್ಕಾರಿ ಕೆಲಸಕ್ಕೆ ಉಪಯೋಗಿಸಬೇಕು. ಸಂದರ್ಭ ಬಂದರೆ ಕ್ಲಿಷ್ಟ ಪರಿಸ್ಥಿತಿಗೆ ಸಿಕ್ಕಿಕೊಳ್ಳಬೇಕಾಗುತ್ತದೆ ಎಂದು ಮಾನ್ಯ ಸದಸ್ಯರು ಹೇಳಿದರು. ಈ ವಿಚಾರವನ್ನು ಯಾರು ಯಾರು ಜವಾಬ್ದಾರಿ ಸ್ಥಾನಗಳನ್ನು ಅಕ್ರಮಿಸುತ್ತಾರೋ ಅವರವರಿಗೆ ಬಿಡಬೇಕೇ ಹೊರತು ಅಷ್ಟು ಮಾತ್ರ ವಿವೇಚನೆ ಮಾಡಿ ಸರಿಯಾದ ರೀತಿಯಲ್ಲಿ ಉಪಯೋಗಿಸುವುದಕ್ಕೆ ಅವರಿಗೆ ಚೈತನ್ಯವಿಲ್ಲವೆಂದು ಭಾವಿಸಬಾರದು. ಒಂದು ವಿಷಯವನ್ನು ಈ ಸಭೆಯವರು ಗಮನಿಸಬೇಕು. ಅದೇ ಸರ್ಕಾರಿ ಕೆಲಸ ಇದೇ ಖಾಸಗಿ ಕೆಲಸ ಎಂಬುದಾಗಿ ಗೆರೆ ಎಳೆಯುವುದಕ್ಕಾಗುವುದಿಲ್ಲ. ಆ ಸ್ಥಾನದಲ್ಲಿರತಕ್ಕವರು ಒಂದು ವೇಳೆ ಬೇರೆ ಯಾವುದಾದರೂ ಕೆಲಸಕ್ಕೆ ಹೋಗುವಾಗ ಅಂಥ ಖಾಸಗೀ ಕೆಲಸಕ್ಕೇ ಬೇರೆ ಒಂದು ಸ್ವಂತ ಕಾರು ಇಟ್ಟುಕೊಳ್ಳಬೇಕೆಂದು ಹೇಳುವುದಕ್ಕಾಗುವುದಿಲ್ಲ. ಆದ್ದರಿಂದ ಅದನ್ನು ಸ್ವಲ್ಪ ಮಟ್ಟಿಗೆ ಅವರ ವಿವೇಚನೆಗೆ ಬಿಡಬೇಕು. ಬಹಳ ಸೂಕ್ಷ್ಮ ದೃಷ್ಟಿಯಿಂದ ನೋಡುವುದಾದರೆ ಕಷ್ಟವಾಗುತ್ತದೆ. ಕಾರು ಏಕೆ ಒದಗಿಸಬೇಕೆಂದು ಕೇಳಬಹುದು. ಕೆಲವು ಸಂದರ್ಭಗಳಲ್ಲಿ ಇಂಥ ದೊಡ್ಡ ಸ್ಥಾನಗಳಿಗೆ ಬರತಕ್ಕವರಿಗೆ ಕಾರು ಕೊಂಡುಕೊಳ್ಳತಕ್ಕ ಶಕ್ತಿ ಇಲ್ಲದೆ ಇರಬಹುದು. ಆದ್ದರಿಂದ ಚುನಾಯಿತರಾಗಿ ಬಂದ ತಕ್ಷಣ ಕಾರು ಒದಗಿಸತಕ್ಕ ಜವಾಬ್ದಾರಿ

ಸರ್ಕಾರಕ್ಕೆ ಇದೆ. ತೀರ ಬಡವರಾದ ಕೂಲಿಗಾರರಾಗಲೀ, ವ್ಯವಸಾಯಗಾರರಾಗಲೀ ಈ ಸ್ಥಾನಗಳಿಗೆ ಚುನಾಯಿತರಾಗಿ ಬಂದರೆ ಹೇಗೆ ಕಾರು ತೆಗೆದುಕೊಳ್ಳುವುದಕ್ಕೆ ಸಾಧ್ಯವಾಗುತ್ತದೆ ಎಂಬುದನ್ನೂ ಮನಸ್ಸಿನಲ್ಲಿಟ್ಟುಕೊಳ್ಳಬೇಕು.

ಶ್ರೀ ಬಿ. ಹುಚ್ಚೇಗೌಡರು:– ಅಂಥವರಿಗೆ ಸರ್ಕಾರದವರು ಹಣ ಅಡ್ವಾನ್ಸ್ ಮಾಡಿ.

ಶ್ರೀ ಕೆ. ಚೆಂಗಲರಾಯರೆಡ್ಡಿಯವರು:– ಅಡ್ವಾನ್ಸ್ ಮಾಡಿದರೂ ಕೊಂಡುಕೊಳ್ಳುವುದಕ್ಕಾಗುವುದಿಲ್ಲ. ಅದನ್ನು ಯೋಚನೆ ಮಾಡಿ ನೋಡಿ. ಈಗ ಒಂದು ದೃಷ್ಟಿಯಿಂದ ಕಾರು ಒದಗಿಸುವ ಅವಶ್ಯಕತೆ ಇದೆ, ಅಗತ್ಯವಿದೆ, ಆದ್ದರಿಂದ ಒದಗಿಸಬೇಕು ಎಂದು ಹೇಳಿ ಈ ನಿರ್ಣಯವನ್ನು ಸರ್ವರೂ ಒಪ್ಪುತ್ತೀರೆಂದು ನಂಬಿದ್ದೇನೆ.

ಅಧ್ಯಕ್ಷರು:– "ಮೈಸೂರು ಪ್ರಜಾಪ್ರತಿನಿಧಿ ಸಭೆಯ ಪ್ರೆಸಿಡೆಂಟರವರಿಗೆ ತಿಂಗಳಿಗೆ 800 ರೂಪಾಯಿಗಳ ಸಂಬಳ 150 ರೂಪಾಯಿಗಳ ವಾಹನ ಭತ್ಯವೂ ತಿಂಗಳಿಗೆ 200 ರೂಪಾಯಿಗಳ ಮನೆಬಾಡಿಗೆ ಭತ್ಯವೂ ಪಾವತಿ ಮಾಡಲ್ಪಡಬೇಕೆಂದು ಅಥವಾ ಮನೆಬಾಡಿಗೆ ಭತ್ಯಕ್ಕೆ ಬದಲಾಗಿ ಸುಸಜ್ಜಿತವಾದ ವಾಸದ ಬಂಗಲೆಯೊಂದು ಉಚಿತವಾಗಿ ಒದಗಿಸಲ್ಪಡಬೇಕೆಂದೂ ಮತ್ತು ಅವರ ಉಪಯೋಗಕ್ಕಾಗಿ ಒಂದು ಸರ್ಕಾರಿ ಮೋಟಾರು ಕಾರು ಸಹ ಅವರಿಗೆ ಒದಗಿಸಲ್ಪಡಬೇಕೆಂದೂ ಈ ಸಭೆಯವರು ಶ್ರೀಮನ್ ಮಹಾರಾಜರವರ ಸರ್ಕಾರದವರಿಗೆ ಸಲಹೆ ಮಾಡುತ್ತಾರೆ. ಈ ನಿರ್ಣಯದ ಮೇಲೆ ಸದಸ್ಯರು ತಮ್ಮ ಅಭಿಮತವನ್ನು ಸೂಚಿಸಬಹುದು (ನಿರ್ಣಯವು ಸರ್ವಾನುಮತದಿಂದ ಅಂಗೀಕೃತವಾಯಿತು).

............

# 9. ಕೋಲಾರ ಜಿಲ್ಲೆಯ ಗ್ರಾಮಾಂತರ ಪ್ರದೇಶಗಳಿಗೆ ವಿದ್ಯುಚ್ಛಕ್ತಿಯನ್ನೊದಗಿಸುವ ಕುರಿತು

## (ಪ್ರಜಾಪ್ರತಿನಿಧಿ ಸಭೆಯ ನಡೆವಳಿಗಳು–14, ಜೂನ್ 1949)

**ಶ್ರೀ ಕೆ. ಚೆಂಗಲರಾಯರೆಡ್ಡಿಯವರು:–** ಮಾನ್ಯ ಅಧ್ಯಕ್ಷರೇ, ಶ್ರೀಮಾನ್ ನಾರಾಯಣಗೌಡರು ತಂದಿರತಕ್ಕ ನಿರ್ಣಯ ಕೋಲಾರ ಜಿಲ್ಲೆಗೆ ವ್ಯವಸಾಯಕ್ಕೂ ಮತ್ತು ದೀಪ ಸೌಕರ್ಯ ಒದಗಿಸುವುದಕ್ಕೂ ಈ ಕೂಡಲೇ ವಿದ್ಯುಚ್ಛಕ್ತಿಯನ್ನು ಒದಗಿಸಬೇಕೆಂದು ಸೂಚಿಸಿದ್ದಾರೆ. ಕೋಲಾರ ಜಿಲ್ಲೆಯಲ್ಲಿ ಹಾಗೂ ಸಂಸ್ಥಾನದ ಇತರ ಭಾಗಗಳಲ್ಲಿ ವಿದ್ಯುಚ್ಛಕ್ತಿಯನ್ನು ಒದಗಿಸಿಕೊಡುವುದಕ್ಕಾಗಿ ಸರ್ಕಾರದವರು ಇದುವರೆಗೂ ಸರ್ವಪ್ರಯತ್ನ ಮಾಡುತ್ತಿದ್ದಾರೆ. ಅನೇಕ ವರ್ಷಗಳಿಂದ ಹೀಗೆ ಮಾಡುತ್ತಾ ಬಂದಿದೆ. ಈಗಲೂ ಮಾಡುತ್ತಿದೆ ಮತ್ತು ಮುಂದೆಯೂ ಮಾಡುತ್ತದೆಂದು ಮೊಟ್ಟಮೊದಲನೆಯದಾಗಿ ನಾವು ಪ್ರಸ್ತಾಪಿಸಬೇಕಾಗಿದೆ. ಇಡೀ ಭಾರತ ದೇಶದಲ್ಲಿ ಮೈಸೂರು ಸಂಸ್ಥಾನದಲ್ಲಿ ವಿದ್ಯುಚ್ಛಕ್ತಿ ಸೌಕರ್ಯ ಎಲ್ಲ ಪ್ರಾಂತ್ಯಗಳಿಗಿಂತಲೂ ಹೆಚ್ಚಾಗಿದೆಯೆಂದು ನಾನು ಧಾರಾಳವಾಗಿ ಹೇಳಬಲ್ಲೆ. 1902ನೇ ಇಸವಿಯಲ್ಲಿ ಸರ್.ಕೆ. ಶೇಷಾದ್ರಿ ಐಯ್ಯರ್‌ರವರು ಶಿವನಸಮುದ್ರದಲ್ಲಿ ಸ್ಟೇಶನ್ ಪ್ರಾರಂಭ ಮಾಡಿದಂದಿನಿಂದ ಇವತ್ತಿನವರೆಗೂ ಆ ಕಾರ್ಯವನ್ನು ಮುಂದುವರೆಸಿಕೊಂಡು ಬಂದಿದ್ದೇವೆ. ಇಡೀ ಭಾರತಕ್ಕೆ ಇದು ಮಾದರಿಯಾಗಿದೆ ಎಂಬುದು ಎಲ್ಲರಿಗೂ ಗೊತ್ತಿರತಕ್ಕ ವಿಚಾರ. ಈಗಾಗಲೇ ಸರ್ಕಾರದವರು ಅನೇಕ ಪ್ರಯತ್ನಗಳನ್ನು ಮಾಡಿದ್ದಾರೆ. ವಿದ್ಯುಚ್ಛಕ್ತಿ ಸರಬರಾಯಿಯ ಸಂದರ್ಭದಲ್ಲಿ ನಾನಾ ಅಂದಾಜುಗಳನ್ನು ಮಂಜೂರು ಮಾಡಿದ್ದಾರೆ. ಇನ್ನೂ ಹೆಚ್ಚಿಗೆ ಆಗಬೇಕೆಂದು ಹೇಳಿ ಗ್ರಾಮಾಂತರಗಳಲ್ಲೂ ಮತ್ತಿತರ ಕಡೆಗಳಲ್ಲೂ ಕೇಳಿತ್ತಿರುವುದು ಒಂದು ಸಂತೋಷಕರವಾದ ಸೂಚನೆ. ಏಕೆಂದರೆ ಎಲೆಕ್ಟ್ರಿಕಲ್ ಮೈಂಡೆಡ್‌ನೆಸ್ ಎನ್ನುವುದು ನಮ್ಮ ಸಂಸ್ಥಾನದಲ್ಲಿ ತೀವ್ರವಾಗಿ ಬೆಳೆಯುತ್ತಿದೆಯೆಂದು ವ್ಯಕ್ತಪಡುತ್ತದೆ. ಈ ವಿಧವಾದ ಕ್ರಾಂತಿ ನಮ್ಮ ಜನರಲ್ಲಿ ಉಂಟಾಗುತ್ತಿರುವುದು ನಮ್ಮ ದೇಶದ ಅಭ್ಯುದಯಕ್ಕೆಂದೇ ಹೇಳಬೇಕು. ಹಿಂದೆ ನಮ್ಮಲ್ಲಿ ಜನರು ವಿದ್ಯುಚ್ಛಕ್ತಿಯ ವಿಚಾರದಲ್ಲಿ ಯಾವ ಭಾವನೆಯನ್ನು ಹೊಂದಿದ್ದರೆಂಬುದು ನನಗೆ ಜ್ಞಾಪಕವಿದೆ. 1929ನೇ ಇಸವಿಯಲ್ಲಿ ನಮ್ಮ ಊರಿಗೆ ವಿದ್ಯುಚ್ಛಕ್ತಿಯನ್ನು ತೆಗೆದುಕೊಂಡು ಹೋದಾಗ ಈ ರೀತಿಯಾಗಿ ನೀರಾವರಿ ವಿದ್ಯುಚ್ಛಕ್ತಿ ಪಂಪುಗಳನ್ನೂ ತಗೆದುಕೊಳ್ಳಿ ಎಂದು ಬಹಳ ಮಟ್ಟಿಗೆ ಪ್ರಚಾರ ಮಾಡಬೇಕಾದ ಸಂದರ್ಭವಿತ್ತು. ಅಂಥದ್ದರಲ್ಲೂ ನಾಲ್ಕೈದು ಜನರು ಪಂಪನ್ನು ಹಾಕಿಕೊಳ್ಳುತ್ತೇವೆಂದು ಒಪ್ಪಿಕೊಂಡವರು ಆಮೇಲೆ ಸಾಮಾನೆಲ್ಲ ತರಿಸಿದಾಗ ಹಿಂತೆಗೆದುಕೊಂಡ ಸಂದರ್ಭಗಳೂ ಉಂಟು. ಅಂಥ ಕಾಲ ಹೋಗಿ ಈಗ ಎಲ್ಲ ಕಡೆಗಳಲ್ಲೂ ಈ ರೀತಿಯಾದ ಸೌಕರ್ಯ ಬೇಕೆಂದು ಕೇಳುವುದು ಬಹಳ ಒಳ್ಳೆಯದು. ಇದರಿಂದ ದೇಶಕ್ಕೆ ಪ್ರಗತಿಯಾಗುವುದಕ್ಕೆ ಸಾಧ್ಯವಾಗುತ್ತದೆಂದು ನಾನು ತಿಳಿಯುತ್ತೇನೆ. ಈಗಾಗಲೇ ಎಲ್ಲ ತಾಲ್ಲೂಕುಗಳಿಗೂ ವಿದ್ಯುಚ್ಛಕ್ತಿಯನ್ನು ಸರಬರಾಜು ಮಾಡಬೇಕೆಂದು ಸರ್ಕಾರದವರು ತೀರ್ಮಾನ ಮಾಡಿದ್ದಾರೆ. ಸಂಸ್ಥಾನದ 85 ತಾಲೂಕುಗಳ ಪೈಕಿ ಸುಮಾರು 65 ತಾಲೂಕುಗಳಿಗೆ ಈಗಾಗಲೇ ವಿದ್ಯುಚ್ಛಕ್ತಿ ಸೌಕರ್ಯ ದೊರೆತಿದೆ. ಇನ್ನು ಒಂದೆರಡು ವರುಷಗಳಲ್ಲಿ ಎಲ್ಲ ತಾಲೂಕು ಹೆಡ್‌ಕ್ವಾರ್ಟರ್‌ಗಳಿಗೂ ಈ ಸೌಕರ್ಯ ದೊರಕುತ್ತದೆ. ಕೋಲಾರ ಜಿಲ್ಲೆಯನ್ನೆ ತೆಗೆದುಕೊಂಡರೆ ಅಲ್ಲಿರುವ 11 ತಾಲೂಕುಗಳ ಪೈಕಿ 9

ತಾಲೂಕುಗಳಿಗೆ ಈಗಾಗಲೇ ವಿದ್ಯುಚ್ಛಕ್ತಿ ಸೌಕರ್ಯ ದೊರೆತಿದೆ. ಈಗತಾನೆ ಬಾಗೇಪಲ್ಲಿ, ಗುಡಿಬಂಡೆ ತಾಲೂಕುಗಳಿಗೆ ಅಂದಾಜು ಮಂಜೂರಾಗಿದೆ. ಕೆಲಸವನ್ನೂ ಇಷ್ಟರಲ್ಲೇ ಕೈಗೊಳ್ಳುತ್ತಾರೆ. ಆದ್ದರಿಂದ ಮಾನ್ಯ ಸೂರ್ಯನಾರಾಯಣ ಜೋಷಿಯವರು ತಮ್ಮ ತಾಲೂಕಿನಲ್ಲಿ ವಿದ್ಯುತ್ ದೀಪಗಳನ್ನು ನೋಡಲು ಬಹುದಿನಗಳು ಕಳೆಯಬೇಕಾಗಿಲ್ಲ. ಶೀಘ್ರದಲ್ಲೆ ದೊರೆಯುವುದೆಂಬ ಭರವಸೆ ಅವರಿಗೆ ಕೊಡುತ್ತೇನೆ.

ಒಬ್ಬ ಸದಸ್ಯರು– ಹಾಗೆಯೇ ಇತರ ಜಿಲ್ಲೆಗಳಲ್ಲೂ ಇದೆಯಾ?

ಶ್ರೀ ಕೆ. ಚೆಂಗಲರಾಯರೆಡ್ಡಿಯವರು: ಸರ್ಕಾರದವರು ಎಲ್ಲ ತಾಲೂಕು ಹೆಡ್‌ಕ್ವಾರ್ಟರುಗಳಿಗೂ ಸರಬರಾಯಿ ಮಾಡುವ ಯೋಚನೆ ಮಾಡಿದ್ದಾರೆ. ಅದನ್ನು ಬೇಗನೆ ಮಾಡುತ್ತೇವೆ. ಇಷ್ಟೆ ಅಲ್ಲದೆ 1000ಕ್ಕೆ ಮೇಲ್ಪಟ್ಟು ಜನಸಂಖ್ಯೆಯಿರುವ ಎಲ್ಲ ಊರುಗಳಿಗೂ ಕೂಡ ವಿದ್ಯುಚ್ಛಕ್ತಿಯನ್ನು ಸರಬರಾಯಿ ಮಾಡುವ ಒಂದು ಮೂರು ವರ್ಷದ ಯೋಜನೆ ತಯಾರಾಗಿದೆ. ಇನ್ನು ಉಳಿದಿರತಕ್ಕದ್ದು ನೀರಾವರಿ ಪಂಪುಗಳ ವಿಚಾರ. ಈ ಪಂಪುಗಳಿಗೆ ಈಗ ಸಾಮಾನ್ಯವಾಗಿ ಅನೇಕ ಕಡೆಗಳಿಂದ ಕೋರಿಕೆಗಳು ಬರುತ್ತಿವೆ. ಸಧ್ಯಕ್ಕೆ ನನ್ನಲ್ಲಿ ಈ ಬಗ್ಗೆ ಕರಾರುವಾಕ್ಕಾದ ಅಂಕಿ ಅಂಶಗಳಿಲ್ಲದಿದ್ದರೂ ಸಾವಿರಗಟ್ಟಲೆ ಮನವಿಗಳು ಬಂದಿವೆಯೆಂದು ಹೇಳಿದರೆ ಸಾಕೆಂದು ಭಾವಿಸುತ್ತೇನೆ. ಸರ್ಕಾರದವರ ಆಶಯವಾದರೂ ಕೂಡ ಆದಷ್ಟು ಬೇಗನೆ ಈ ಪಂಪುಗಳನ್ನು ಒದಗಿಸಿಕೊಡಬೇಕೆಂಬುದೇ ಆಗಿದೆ. ವಿದ್ಯುಚ್ಛಕ್ತಿ ನಮ್ಮ ದೇಶದಲ್ಲಿ ಯಥೇಚ್ಛವಾಗಿ ಉತ್ಪತ್ತಿಯಾಗುತ್ತಿದೆ. ಈಗ ಉತ್ಪತ್ತಿಯಾಗುತ್ತಿರತಕ್ಕಷ್ಟನ್ನು ಖರ್ಚು ಮಾಡುವುದೇ ಕಷ್ಟವಾಗಿದೆ. ಆದ್ದರಿಂದ ಕೇಳಿದ ಕಡೆಗೆಲ್ಲಾ ವಿದ್ಯುಚ್ಛಕ್ತಿ ಕೊಡಬೇಕೆಂಬುದೇ ನಮ್ಮ ಇಷ್ಟ, ಆದರೆ ಇದಕ್ಕೆ ಸರಿಯಾಗಿ ನಮ್ಮಲ್ಲಿ ಸಾಕಾದಷ್ಟು ಟ್ರಾನ್ಸ್‌ಫಾಮರ್‌ಗಳು, ಕಂಭಗಳು ಮುಂತಾದ ಸಾಧನಗಳಿಲ್ಲದೆ ಕಷ್ಟವಾಗಿದೆ. ಈ ಎರಡು ಬಾಬುಗಳನ್ನು ಹೊರ ದೇಶಗಳಿಂದ ತರಿಸಿಕೊಳ್ಳಬೇಕಾಗಿದೆ. ಅವುಗಳು ಅಮೇರಿಕಾ ಮುಂತಾದ ದೂರದೇಶಗಳಿಂದ ಬರಬೇಕು. ಅಂಥಾದ್ದರಲ್ಲೂ ಈ ಕಷ್ಟವನ್ನು ಆದಷ್ಟು ಮಟ್ಟಿಗೆ ನಿವಾರಿಸಲು ನಮ್ಮಎಲೆಕ್ಟ್ರಿಕ್ ಫ್ಯಾಕ್ಟರಿಯಲ್ಲೇ ಟ್ರಾನ್ಸ್‌ಫಾರ್ಮರ್‌ಗಳನ್ನು ತಯಾರಿಸಿಬೇಕೆಂದಿದ್ದೇವೆ. ಕಂಭಗಳಿಗಾಗಿ ಬಲವಾದ ಕಂಭಗಳನ್ನೇ ಉಪಯೋಗಿಸುವುದಕ್ಕೆ ಪ್ರಯತ್ನಪಟ್ಟಿದ್ದೇವೆ. ಆದರೂ ಕೂಡ ಇವೆಲ್ಲಾ ಸಾಧನಗಳು ಸಾಕಾದಷ್ಟಿಲ್ಲದೆ ಕೊರತೆಯಾಗಿದೆ.

ಇನ್ನೊಂದು ವಿಷಯವೇನೆಂದರೆ, ಹತ್ತಾರು, ನೂರಾರು ಕಡೆಗಳಿಂದ ಪಂಪುಗಳು ಬೇಕೆಂದು ಮನವಿಗಳು ಬರುತ್ತಿರುವಾಗ ಎಲ್ಲವನ್ನೂ ಒಂದೇ ವರ್ಷದಲ್ಲಿ ಸ್ಥಾಪನೆ ಮಾಡುವುದಕ್ಕೆ ಸಾಧ್ಯವಿಲ್ಲವೆಂದು ಎಲ್ಲರೂ ಒಪ್ಪತಕ್ಕ ವಿಚಾರ. ಪ್ರತಿಯೊಬ್ಬರೂ ನಮಗೆ ಮುಂಚೆ ಕೊಡಬೇಕೆಂದು ಕೇಳುವುದು ಸ್ವಾಭಾವಿಕವಾಗಿದೆ. ಹೀಗಿರುವಲ್ಲಿ ಯಾರಿಗೆ ಮೊದಲು ಕೊಡಬೇಕೆಂಬದನ್ನು ನಿರ್ಧರಿಸುವುದೇ ಕಷ್ಟವಾಗಿದೆ. ನೀವುಗಳೇ ಒಮ್ಮೆ ಸಭೆ ಸೇರಿ ಯಾರಿಗೆ ಮುಂಚೆ ಕೊಡಬೇಕೆಂಬ ಬಗ್ಗೆ ಒಂದು ಸರ್ವಸಮ್ಮತವಾದ ಪಟ್ಟಿ ತಯಾರಿಸಿ ಕೊಟ್ಟುಬಿಟ್ಟರೆ ನಮಗೆ ಈ ಕಷ್ಟ ತಪ್ಪುತ್ತದೆ.

ಶ್ರೀ ಭೂಪಾಳಂ ಆರ್. ಚಂದ್ರಶೇಖರಯ್ಯನವರು:– ಕೋಲಾರ ಡಿಸ್ಟ್ರಿಕ್ಟ್‌ಗೆ ತಾವು priority ಕೊಡಬಹುದು.

ಶ್ರೀ ಕೆ. ಚೆಂಗಲರಾಯರೆಡ್ಡಿ:- Thank you, ಅಂತೂ ಇಂಥ ಕಷ್ಟವಿದೆ, ಸಾಧ್ಯವಾದ ಮಟ್ಟಿಗೂ ಎಲ್ಲಾ ಕಡೆಗಳಿಗೂ ಆದಷ್ಟೂ ಜಾಗ್ರತೆ ಒದಗಿಸಿ ಕೊಡುವ ಏರ್ಪಾಡು ಮಾಡುತ್ತೇವೆ. ಈ ಕೋಲಾರ ಜಿಲ್ಲೆಯ ವಿಚಾರ ಹೇಳುವುದಾದರೆ, ಅದರ ವಿಚಾರದಲ್ಲಿ ಒಂದು ಪೂರ್ವದ ಇತಿಹಾಸವಿದೆ. ಕೋಲಾರ ಜಿಲ್ಲೆಯಲ್ಲಿ ಕಂದಾಯ ಜಾಸ್ತಿಯೆಂದು ಹಿಂದೆಲ್ಲಾ ಒಂದೇ ಸಮನೆ ಕೇಳುತ್ತಿದ್ದುದರ ಮೇಲೆ ಅದರ ಬಗ್ಗೆ ಒಂದು ಸಮಿತಿ ಏರ್ಪಾಡಾಗಿತ್ತು. ಆ ಸಮಿತಿಯವರು ಅಲ್ಲಿನ ಸ್ಥಿತಿಗತಿಗಳನ್ನೆಲ್ಲಾ ಪರಿಶೀಲನೆ ಮಾಡಿ ಕೊನೆಯಲ್ಲಿ ಮಾಡಿದ ಒಂದು ವರದಿಯಲ್ಲಿ ಒಂದು ಶಿಫಾರಸ್ಸು ಮಾಡಿದ್ದಾರೆ. ಆ ಡಿಸ್ಟ್ರಿಕ್ಟ್‌ನಲ್ಲಿ ಕಂದಾಯವನ್ನು ಕಡಿಮೆ ಮಾಡಲು ಸಾಧ್ಯವಿಲ್ಲವೆಂದು ಅವರೂ ಅಭಿಪ್ರಾಯಪಟ್ಟರು. ಆದರೆ ಆ ಡಿಸ್ಟ್ರಿಕ್ಟ್‌ನ ವಿಚಾರದಲ್ಲಿ ನೀರಾವರಿ ಕಾಮಗಾರಿಗಳು, ವಿದ್ಯುಚ್ಛಕ್ತಿ ಸರಬರಾಯಿ, ರಸ್ತೆ ಕಾಮಗಾರಿಗಳು ಇತ್ಯಾದಿ ವಿಷಯದಲ್ಲಿ ವಿಶೇಷ ಗಮನ ಕೊಟ್ಟು ಹೆಚ್ಚು ಹೆಚ್ಚು ಸೌಲಭ್ಯಗಳನ್ನು ಒದಗಿಸಿಕೊಡಬೇಕೆಂದು ಅವರು ಕಳುಹಿಸಿಕೊಟ್ಟ ಶಿಫಾರಸ್ಸಿನಲ್ಲಿ ತಿಳಿಸಿದ್ದಾರೆ. ಇದನ್ನು ಸರ್ಕಾರದವರೂ ಒಪ್ಪಿಕೊಂಡಿದ್ದಾರೆಂಬುದನ್ನು ನಾನು ತಿಳಿಸಬೇಕಾಗಿದೆ.

ಶ್ರೀ ಎಚ್.ಎಂ. ಮಲ್ಲಿಕಾರ್ಜುನಪ್ಪನವರು: ನಮಗೂ ಕಂದಾಯ ಜಾಸ್ತಿ ಮಾಡಿ ಇವೆಲ್ಲಾ ಅನುಕೂಲಗಳನ್ನೂ ಮಾಡಿಕೊಡುತ್ತೀರಾ?

ಶ್ರೀ ಕೆ. ಚೆಂಗಲರಾಯರೆಡ್ಡಿಯವರು: ನಾನು ಈ ಅಂಶವನ್ನು ಪ್ರಸ್ತಾಪ ಮಾಡಿದ್ದು ಬೇರೆ ಭಾವನೆಗಳಿಗೆ ಕಾರಣವಾಗಿದ್ದರೆ ಅದನ್ನು ನಾನು ವಾಪಸ್ಸು ತೆಗೆದುಕೊಳ್ಳುತ್ತೇನೆ.

ಆಮೇಲೆ, ಇನ್ನೂ ಒಂದೆರಡು ವಿಷಯಗಳನ್ನು ಹೇಳಬೇಕೆಂದಿದ್ದೇನೆ. ನೀರಾವರಿ ಪಂಪುಗಳ ವಿಚಾರದಲ್ಲಿ ಶೇಕಡ ಇಷ್ಟು ಉತ್ಪತ್ತಿಯಿದ್ದರೇನೇ ಕೊಡಬೇಕೆಂದು ನಿರ್ಬಂಧ ಹಾಕಿರುವುದು ಸರಿಯಿಲ್ಲವೆಂದು ಶ್ರೀ ವೇಮಾರೆಡ್ಡಿಯವರೂ, ಮತ್ತೆ ಕೆಲವರೂ ಹೇಳಿದರು. ಆದರೆ ವಾಸ್ತವವಾಗಿ ಇರತಕ್ಕ ನಿಯಮಗಳಿವು; 3,000 ರೂಪಾಯಿಗೆ ಕಡಿಮೆ ಖರ್ಚಿರುವ ಪಂಪುಗಳ ವಿಷಯದಲ್ಲಿ ಏನೊಂದು ಶೇಕಡಾವಾರು ಉತ್ಪತ್ತಿಯನ್ನು ಗೊತ್ತು ಮಾಡಿಲ್ಲ. 3,000 ರೂಪಾಯಿಗಳಿಂದ 5,000 ರೂಪಾಯಿಗಳವರೆಗೆ ಖರ್ಚು ಬೀಳುತ್ತಿದ್ದರೆ ಶೇಕಡಾ 3 ರಷ್ಟಾದರೂ ಉತ್ಪತ್ತಿ ಬರುವಂತಿರಬೇಕು; ಐದು ಸಾವಿರಕ್ಕೆ ಮೇಲ್ಪಟ್ಟು ಖರ್ಚು ಬೀಳುವುದಾಗಿದ್ದರೆ ಶೇಕಡ ಐದರಷ್ಟಾದರೂ ಲಾಭ ಬರುವಂತಿರಬೇಕೆಂದು ಷರತ್ತು ಹಾಕಿದೆ. ಹಿಂದಿನಿಂದಲೂ ತಮಗೆ ಗೊತ್ತಿರುವ ಹಾಗೆ ವಿದ್ಯುಚ್ಛಕ್ತಿ ಕಾಮಗಾರಿಗಳಿಂದ ನಮ್ಮ ಸಂಸ್ಥಾನಕ್ಕೆ ಹೆಚ್ಚಿಗೆ ವರಮಾನ ಬರುತ್ತಿದೆ ಆ ಬಾಬಿನಿಂದ ಇನ್ನೂ ಹೆಚ್ಚಿಗೆ ವರಮಾನ ತೆಗೆದುಕೊಳ್ಳಬೇಕೆಂದು ಆದಷ್ಟು ಮಟ್ಟಿಗೆ ಅದನ್ನು ಮುಂದುವರೆಸಿಕೊಂಡು ಬಂದಿದ್ದೇನೆ. ಈ ದೃಷ್ಟಿಯಿಂದ ನೀರಾವರಿ ಪಂಪುಗಳ ಸಂಬಂಧದಲ್ಲಿ ಬಹಳಮಟ್ಟಿಗೆ ನಿಬಂಧನೆಗಳನ್ನು ಸಡಿಲಮಾಡಿದೆ. ನೀರಾವರಿ ಸಂಬಂಧದಲ್ಲಿ ಇನ್ನೂ ಹೆಚ್ಚಿನ ರಿಯಾಯಿತಿ ಸೇರಿಸಿ ಕೆಲವು ಸಂದರ್ಭಗಳಲ್ಲಿ ವಿನಾಯಿತಿ ಕೊಡುವ ವಿಷಯವನ್ನೂ ಯೋಚನೆ ಮಾಡುತ್ತೇವೆ.

ಶ್ರೀ ಎಲ್. ವೇಮಾರೆಡ್ಡಿಯವರು: ನೀರಾವರಿ ಸಂದರ್ಭದಲ್ಲಿ ಶೇಕಡಾ ಹತ್ತರಷ್ಟು ಉತ್ಪತ್ತಿ ನಿರೀಕ್ಷಿಸಿದರೆ, ಯಾವ ರೈತತಾನೆ ಅಷ್ಟು ದುಡ್ಡು ಕೊಡಲು ಸಾಧ್ಯವಾಗುತ್ತದೆ.

ಶ್ರೀ ಕೆ. ಚೆಂಗಲರಾಯರೆಡ್ಡಿಯವರು: ನೀರಾವರಿ ಪಂಪುಗಳ ಸಂಬಂಧದಲ್ಲಿ ಶೇಕಡಾ ಹತ್ತರಷ್ಟು ಉತ್ಪತ್ತಿಯಿರಬೇಕೆಂದು ಯಾವ ಷರತ್ತನ್ನೂ ವಿಧಿಸಿಲ್ಲವೆಂದೇ ಈಗ ನಾನು ಹೇಳುತ್ತಿರುವುದು.

ಶ್ರೀ ಎಲ್, ವೆಂಕಟನಾರಣಪ್ಪನವರು: ಪರಿಸ್ಥಿತಿ ನೋಡಿಕೊಂಡು ರೈತರಿಗೆ ಎಷ್ಟು ಕೊಡಲು ಶಕ್ತಿ ಇರುತ್ತದೆಂದು ತೋರುತ್ತದೋ ಅಷ್ಟು ಕೊಡಬೇಕು. ಹೆಚ್ಚಾಗಿ ಹಾಕಬೇಡಿ. ಅವನಿಗೆ ಕೊಡುವುದಕ್ಕೆ ಶಕ್ತಿಯಿಲ್ಲ.

ಶ್ರೀ ಕೆ. ಚೆಂಗಲರಾಯರೆಡ್ಡಿಯವರು: ನೀರಾವರಿ ಕೆಲಸಕಾರ್ಯಗಳಿಗೆ 10% ರಿಟರ್ನ್ ಇರಬೇಕೆಂದು ಒತ್ತಾಯಪಡಿಸುತ್ತಿಲ್ಲ. ಇರತಕ್ಕ ಶೇಕಡಾವಾರು ಸಂಖ್ಯೆಯನ್ನು ತಿಳಿಸಿದ್ದೇನೆ. ಕೆಲವುಕಡೆ ಸ್ಟ್ರೀಮ್ಸ್‌ಗೆ ಪಂಪುಹಾಕಿ ನೀರು ಒದಗಿಸಿ ವಾಟರ್ ಟ್ಯಾಂಕ್ಸ್ ಹಾಕುತ್ತಿದ್ದಾರೆ. ಹನಸೋಗೆ ಹತ್ತಿರ ಹರಿಹರ ತಾಲ್ಲೂಕಿನ ಕೆಲವು ಭಾಗಗಳಲ್ಲಿ ಈ ರೀತಿ ಏರ್ಪಾಡುಮಾಡಿ 20-30 ಎಚ್. ಪಿ. ಪಂಪುಹಾಕಿ ಸಹಾಯ ಮಾಡಬೇಕೆಂದು ಸರ್ಕಾರದವರ ಯೋಚನೆಯಲ್ಲಿದೆ.

ಕೋಲಾರಕ್ಕೆ ಸಂಬಂಧಪಟ್ಟ ಹಾಗೆ ಇನ್ನೊಂದು ವಿಷಯ. ಅಲ್ಲೂ ಕೂಡ ಅನೇಕ ಕಡೆಗಳಿಗೆ ವಿದ್ಯುಚ್ಛಕ್ತಿ ಮತ್ತು ನೀರಾವರಿ ಪಂಪುಗಳನ್ನು ಮಂಜೂರು ಮಾಡುತ್ತಾ ಇದ್ದೇವೆ. ಅಲ್ಲಿರತಕ್ಕ ತೊಂದರೆ Step-up transformers, ಕೋಲಾರ-ಶ್ರೀನಿವಾಸಪುರ ಲೈನಿನಲ್ಲಿ ಟ್ರಾನ್ಸ್‌ಫಾರ್ಮರ್ಸ್ ಬಹಳ ಲೋಡ್ ಆಗಿರುತ್ತದೆ ಆದ್ದರಿಂದ ಆ ಟ್ರಾನ್ಸ್‌ಫಾರ್ಮರ್ಸ್ capacity ಇನ್ನೂ ಜಾಸ್ತಿ ಮಾಡಬೇಕಾಗುತ್ತದೆ. ಅದಕ್ಕೂ ತಕ್ಕ ಏರ್ಪಾಡು ಮಾಡುತ್ತಾ ಇದ್ದೇವೆ. ಸಲಕರಣೆಗಳು ಒದಗಿದ ತಕ್ಷಣ ಟ್ರಾನ್ಸ್‌ಫಾರ್ಮರ್ಸ್ capacity ಜಾಸ್ತಿ ಮಾಡಿ ವಿದ್ಯುಚ್ಛಕ್ತಿಯ ನೀರಾವರಿ ಪಂಪುಗಳನ್ನು ಕೊಡಬೇಕೆದಿಂದ್ದೇವೆ. ಸಾಧ್ಯವಾದ ಮಟ್ಟಿಗೂ ಶ್ರಮ ಪಡುತ್ತೇವೆ. ಗೌರಿಬಿದನೂರಿನಲ್ಲಿ Step destation ಮಾಡಿ ಅದರ ಸುತ್ತಮುತ್ತಲಿನ ಪ್ರದೇಶದಲ್ಲಿ ಹೆಚ್ಚು ವಿದ್ಯುಚ್ಛಕ್ತಿ ಒದಗಿಸಲು ಏರ್ಪಾಡು ಮಾಡುವಂತೆ ಇದ್ದಾರೆ. ಕೋಲಾರದಲ್ಲಿ ಬಾಗೆಪಲ್ಲಿಯಲ್ಲಿ ನೀರಾವರಿ ಪಂಪುಗಳು ಬೇಕೆಂದು ನೂರಾರು ಜನ ಕೇಳುತ್ತಾ ಇದ್ದಾರೆ. ಅದೇ ರೀತಿ ಶ್ರೀನಿವಾಸಪುರದಲ್ಲೂ ಕೇಳುತ್ತಿದ್ದಾರೆ. ಆ ಕಡೆಗಳಲ್ಲಿ ಒಂದೂ ಇಲ್ಲ. ಶಿಡ್ಲಘಟ್ಟ ತಾಲ್ಲೂಕಿನಲ್ಲಿ ಅನೇಕರು ಕೇಳುತ್ತಿದ್ದಾರೆ. ಹೆಚ್ಚು ಆಹಾರ ಬೆಳೆ. ಬೇಕೆಂದು ಯೋಜನೆಯ ಇದಕ್ಕೆ ಸಹಾಯಕವಾಗುವಂತೆ ಎಲ್ಲಾ ಕಡೆಗಳಲ್ಲೂ ಪಂಪುಗಳನ್ನು ಹೆಚ್ಚಾಗಿ ಒದಗಿಸಬೇಕೆಂಬ ಉದ್ದೇಶವು ಸರ್ಕಾರದವರಿಗೆ ಇದೆ. ಅದು ಅವರ ಆಲೋಚನೆಯಲ್ಲಿದೆ. ಇದಕ್ಕೆ ಟ್ರಾನ್ಸ್‌ಫಾರ್ಮರ್‌ಗಳ ಕೆಪಾಸಿಟಿ ಜಾಸ್ತಿ ಮಾಡಿಕೊಳ್ಳಬೇಕು. ಟ್ರಾನ್ಸ್‌ಫಾರ್ಮರ್‌ಗಳು ಬೇಕು. ಸಲಕರಣೆಗಳು ಸಿಕ್ಕದೆ ತೊಂದರೆಯಾಗಿರುವುದರಿಂದ ನಿಧಾನವಾಗುತ್ತಿದೆ. ಎಲ್ಲಾ ಸಲಕರಣೆಗಳು ಇದ್ದರೂ ಸಹ ಸಂಸ್ಥಾನಾ ಮಳೆ ಆಗಬೇಕಾದರೆ ಕೆಲವು ಕಾಲ ಬೇಕು. ಎಲ್ಲಾ ಕಡೆಗಳಿಗೂ ಒಂದೇ ದಿನ ಹಾಕಬೇಕೆಂದರೆ ಸಾಧ್ಯವೇ ಎಂಬುದನ್ನು ಆಲೋಚಿಸಬೇಕಾಗಿದೆ. ಆದ್ದರಿಂದ 3-5 ವರ್ಷದ ಯೋಜನೆಯನ್ನು ಹಾಕಿಕೊಂಡು ಎಲ್ಲವನ್ನು ಪೂರೈಸಬೇಕಾಗಿದೆ. ಕೋಲಾರದ ಅವಶ್ಯಕತೆಯನ್ನು ಗಮನದಲ್ಲಿಟ್ಟುಕೊಂಡು ಆದಷ್ಟು ಮಟ್ಟಿಗೆ ಸೌಲಭ್ಯ ಒದಗಿಸಿಕೊಡಲು ಸರ್ಕಾರದವರು ಸಿದ್ಧವಾಗಿದ್ದಾರೆ. ಅದಕ್ಕೆ ತಕ್ಕ ಏರ್ಪಾಡು ಮಾಡುತ್ತಾರೆ. ಈ ಭರವಸೆಯ ಮೇಲೆ ಮಾನ್ಯ ನಾರಾಯಣಗೌಡರು ಈ ನಿರ್ಣಯವನ್ನು ವಾಪಸು ತೆಗೆದುಕೊಳ್ಳುತ್ತಾರೆಂದು ನಂಬಿದ್ದೇನೆ.

## 10. ಪ್ರಜಾಪ್ರತಿನಿಧಿ ಸಭೆಯ ನಡೆವಳಿಗಳು

### ಪ್ರಶ್ನೋತ್ತರಗಳು

### (15ನೇ ಜೂನ್ 1949)

ಶ್ರೀಮುಲ್ಕಾ ಗೋವಿಂದರೆಡ್ಡಿಯವರು (ಚಿತ್ರದುರ್ಗ ತಾಲ್ಲೂಕು:- 70 (a) ಪ್ರಶ್ನೆಗೆ ಕೊಟ್ಟಿರುವ ಉತ್ತರದಲ್ಲಿ ಕೆಲವು ಹೆಸರುಗಳನ್ನು ಬಿಟ್ಟಿದೆ. ಸ್ವಾತಂತ್ರ್ಯೋದಯವು ನಮ್ಮ ಬೆಂಗಳೂರಿನಲ್ಲಿ ಪ್ರಕಟವಾಗುತ್ತಿರಲಿಲ್ಲವೆ?

ಶ್ರೀ ಕೆ. ಚೆಂಗಲರಾಯರೆಡ್ಡಿಯವರು:- ನೋಟೀಸ್ ಬೇಕು.

ಶ್ರೀ ಮುಲ್ಕಾ ಗೋವಿಂದ ರೆಡ್ಡಿಯವರು:- (a) ಪ್ರಶ್ನೆ "The number of newspapers and periodicals that are printed and published in the State" ಎಂಬುದಾಗಿ ಅದಕ್ಕೆ ಉತ್ತರವಾಗಿ ಪ್ರಕಟವಾಗುತ್ತಿರುವ ಪತ್ರಿಕೆಗಳ ಪಟ್ಟಿಯನ್ನೂ ಕೊಟ್ಟಿದೆ. ಸ್ವಾತಂತ್ರ್ಯೋದಯವನ್ನು ಅದರಲ್ಲಿ ಏಕೆ ಸೇರಿಸಿಲ್ಲ?

ಶ್ರೀ ಕೆ. ಚೆಂಗಲರಾಯರೆಡ್ಡಿಯವರು:- ತಾವು ಹೇಳುವ ಪತ್ರಿಕೆಯು ಮುದ್ರಣ ಆಗುತ್ತಿಲ್ಲ. ಆದ್ದರಿಂದ ಸೇರಿಸಿಲ್ಲ.

ಶ್ರೀ ಮುಲ್ಕಾ ಗೋವಿಂದರೆಡ್ಡಿಯವರು:- "Statement of newspapers and periodicals published in Mysore state for the period ending 31st December1948 ಎಂದು ಕೊಟ್ಟಿದ್ದೀರಿ. ಅಂದರೆ ಡಿಸೆಂಬರ್ 48 ರವರೆಗೆ ಇರುವುದನ್ನು ಕೊಟ್ಟಿದ್ದೀರಲ್ಲವೆ?

ಶ್ರೀ ಕೆ. ಚೆಂಗಲರಾಯರೆಡ್ಡಿಯವರು:-ಅದುವರೆಗೆ ಪ್ರಕಟವಾಗಿ ಮುದ್ರಣವಾಗುತ್ತಿರುವುದನ್ನು ಮಾತ್ರ ಕೊಟ್ಟಿದೆ.

ಶ್ರೀ ಮುಲ್ಕಾ ಗೋವಿಂದರೆಡ್ಡಿಯವರು:- ಡಿಸೆಂಬರ್ 31ರವರೆಗೆ ಕೊಟ್ಟಿದ್ದೀರಿ ಆಗ ಇನ್ನೂ ಎರಡು ಪತ್ರಿಕೆಗಳು ಮುದ್ರಣವಾಗುತಿರಲಿಲ್ಲವೆ?

ಶ್ರೀ ಕೆ. ಚೆಂಗಲರಾಯರೆಡ್ಡಿಯವರು:- ಆಗ ಮುದ್ರಣವಾಗಿ ಪ್ರಕಟವಾಗುತ್ತಿರುವುದು ಮಾತ್ರ ಕೊಟ್ಟಿದೆ.

ಶ್ರೀ ಮುಲ್ಕಾ ಗೋವಿಂದರೆಡ್ಡಿಯವರು:- 20ನೆಯ ಪುಟದಲ್ಲಿ "Statement of newspapers and periodicals published in Mysore state for the period ending 31st December 1948 ಎಂದು ಹೇಳಲಾಗಿದೆ.

**Sri k. Chengalaraya reddy:-** I have already answered the questeion.

**Sri Mulka Govinda reddy:-**I Seek The protection of the Chair.

**Sri k. Chengalaraya reddy:-** question (a) is: The number of newspapers and periodicals that are printed........Not that were printed and published in the State.

ಶ್ರೀ ಮುಲ್ಕಾ ಗೋವಿಂದ ರೆಡ್ಡಿಯವರು:-20ನೆಯ ಪುಟದಲ್ಲಿ ಕೊಟ್ಟಿರುವ ತಖ್ತೆಯಲ್ಲಿ 1948ನೆ ಡಿಸೆಂಬರ್ 31ರ ವರೆಗೆ ಮೈಸೂರು ದೇಶದಲ್ಲಿ ಮುದ್ರಣವಾಗಿ ಪ್ರಕಟವಾಗುತ್ತಿದ್ದ ಪತ್ರಿಕೆಗಳನ್ನು ತಿಳಿಸುವುದಾಗಿ ಹೇಳಿದೆ. ಆ ದಿವಸದವರೆಗೆ ಆಗುತ್ತಿದ್ದುದನ್ನು ಕೊಟ್ಟಿಲ್ಲ. 1948ನೆ ಡಿಸೆಂಬರ್ 31ರ ವರೆಗೆ ಸ್ವಾತಂತ್ರ್ಯೋದಯ ಪತ್ರಿಕೆ ಪ್ರಕಟವಾಗುತ್ತಿರಲಿಲ್ಲವೆ?

ಶ್ರೀ ಕೆ. ಚೆಂಗಲರಾಯರೆಡ್ಡಿಯವರು:- ಪ್ರಶ್ನೆ ಸ್ಪಷ್ಟವಾಗಿದೆ. "number of newspapers and periodicals that are printed and published in State". ಎಂಬುದಾಗಿ ಕೇಳಿದ್ದಾರೆ ಈ 10 ವರ್ಷಗಳ ಹಿಂದೆ ಯಾವುದು ಪ್ರಕಟವಾಗುತ್ತಿತ್ತೋ ಅದನ್ನು ಕೊಟ್ಟಿಲ್ಲ. ಈಗ ಅಚ್ಚಾಗಿ ಪ್ರಕಟವಾಗುತ್ತಿರುವುದನ್ನು ಮಾತ್ರ ಕೊಟ್ಟಿದೆ.ಕೊಟ್ಟಿರುವ ಹೆಡ್ ಲೈನಿನಲ್ಲಿ ಸ್ವಲ್ಪ ವ್ಯತ್ಯಾಸವಿದೆಯೆಂಬದನ್ನು ಒಪ್ಪುತ್ತೇನೆ ಆದರೆ ಕೇಳಿತಕ್ಕ ಪ್ರಶ್ನೆಗ ಉತ್ತರ ಹೇಳಿದೆ.

ಶ್ರೀ ಮುಲ್ಕಾಗೋವಿಂದರೆಡ್ಡಿಯವರು:- ಸರ್ಕಾರವನ್ನು ಟೀಕೆ ಮಾಡಿದವರಿಗೆ ಸೆಕ್ಯೂರಿಟಿ ಕೊಡಬೇಕೆಂದು ನಿರ್ಬಂಧಿಸಿದ್ದೀರಾ?

**Sri k. Chengalaraya reddy:-** That question was put yesterday and a reply has been given.

**Janab H.R. Abdul gaffarl:- (Hassan cum manjarabad cum AlurMuslim Rural):-** What is the basis on which advertisementes are given to newspapers (Dailies and Weeklies)?

**Sri k. Chengalaraya reddy:-** I submit that question also was put yestrerday and a reply was given. It is being repeated.

**Janab H.R. Abdul gaffarl:-** Is it on the circulation strength of a paper that advertisements are generally given?

**Sri k. Chengalaraya reddy:-** That also I have replied yesterday.

ಜನಾಬ್ ಎಚ್.ಆರ್. ಅಬ್ದುಲ್ ಗಫಾರ್‌ರವರು:- ಯಾವ ಆಧಾರದ ಮೇಲೆ ಎಂಬುದಕ್ಕೆ ಉತ್ತರ ಹೇಳಲಿಲ್ಲ.

ಶ್ರೀ ಕೆ. ಚೆಂಗಲರಾಯರೆಡ್ಡಿಯವರು:- ಸರ್ಕ್ಯುಲೇಷನ್ ಒಂದೇ ಮುಖ್ಯವಾಗಿ ಗಮನಿಸಬೇಕಾದ ವಿಚಾರವೆಂದು ಹೇಳಿದೆ.

ಜನಾಬ್ ಎಚ್.ಆರ್. ಗಫಾರವರು:- ಡೈಲಿಪೋಸ್ಟ್ ಅಲ್ಕರಾಮ್, ಅಜಾದ್ ಈ ಪತ್ರಿಕೆಗಳ ಸರ್ಕ್ಯುಲೇಷನ್‌ನಲ್ಲಿ ಬೇಕಾದಷ್ಟು ವ್ಯತ್ಯಾಸವಿದೆ. ಆದ್ದರಿಂದ ಸರ್ಕ್ಯುಲೇಷನ್‌ನಲ್ಲಿ ಎಷ್ಟು ವ್ಯತ್ಯಾಸವಿದೆ ಎಂದು ಹೇಳುತ್ತೀರಾ?

ಶ್ರೀ ಕೆ. ಚೆಂಗಲರಾಯರೆಡ್ಡಿಯವರು:- ಸರ್ಕ್ಯುಲೇಷನ್ ಅಂಕಿ ಅಂಶಗಳನ್ನು ನೋಟೀಸ್ ಕೊಟ್ಟರೆ ಕೊಡಬಹುದು. ಆಡಿಟ್ ಅಂಕಿ ಅಂಶ ಕೊಡಬೇಕೆಂದು ಪತ್ರಿಕೆಯವರನ್ನು ಕೇಳಿದ್ದೇವೆ, ಅದು ಇಷ್ಟರಲ್ಲೇ ಬರುವ ಸಂಭವವಿದೆ, ಈಗ 1947-48ನೆಯ ಸಾಲಿನ ಅಂಕಿ ಅಂಶ ಕೊಟ್ಟಿದೆ.

ಜನಾಬ್ ಎಚ್.ಆರ್. ಅಬ್ದುಲ್ ಗಫಾರ್‌ರವರು:- ಡೈಲಿ ಪೋಸ್ಟಿಗೆ 3,509 ರೂಪಾಯಿ ಕೊಟ್ಟಿದೆ. ಅಲ್ಕರಾಮಿಗೆ 3,712 ಕೊಟ್ಟಿದೆ. ವ್ಯತ್ಯಾಸ ಬಹಳವಾಗಿಲ್ಲವೆ?

ಶ್ರೀ ಕೆ. ಚೆಂಗಲರಾಯರೆಡ್ಡಿಯವರು:- ಡೈಲಿ ಪೋಸ್ಟ್ ಮತ್ತು ಡೈಲಿ ನ್ಯೂಸ್, ಅಲ್ಕಾರಾಂ ಮತ್ತು ಅಜಾದ್ ಇವುಗಳನ್ನು ಹೋಲಿಸಿ ನೋಡಿದ ನಂತರ ಕೇಳಿ.

ಜನಾಬ್ ಎಚ್.ಆರ್. ಅಬ್ದುಲ್ ಗಫಾರ್‌ರವರು:- ಆಜಾದ್ ಪ್ರಾಯಶಃ ಹೊಸದಾಗಿ ಪ್ರಾರಂಭವಾಗಿ ಹೆಚ್ಚಾಗಿ ಪ್ರಚಾರವಾಗಿಲ್ಲದೆ ಇರಬಹುದು. ಅದು ಬಹಳ ದಿವಸದಿಂದ ನಡೆಯುತ್ತಿಲ್ಲ. ವ್ಯತ್ಯಾಸಕ್ಕೆ ಕಾರಣವೇನು? ಆಡಿಟ್ ಅಂಕಿ ಅಂಶಗಳಿಲ್ಲದೆ ಯಾವ ಆಧಾರದ ಮೇಲೆ ತಾವು ಒಂದಕ್ಕೆ300 ಇನ್ನೊಂದಕ್ಕೆ 3,000 ಕೊಟ್ಟಿದ್ದೀರಿ?

ಶ್ರೀ ಕೆ. ಚೆಂಗಲರಾಯರೆಡ್ಡಿಯವರು:-ಈಗ ಆಧಾರವಿಲ್ಲವೆಂದು ತಿಳಿಯಬಾರದು.ಇಷ್ಟು ಸರ್ಕ್ಯುಲೇಷನ್ ಇದೆಯೆಂದು ಗೊತ್ತು ಆದರೆ ಆಡಿಟೆಡ್ ಅಂಕಿ ಅಂಶಗಳನ್ನು ತರಿಸುವುದು ಒಳ್ಳೆಯದೆಂಬ ಭಾವನೆಯಿಂದ ಆ ಸಮಾಚಾರವನ್ನು ಕೇಳಿದೆ.

ಜನಾಬ್ ಎಚ್.ಆರ್. ಅಬ್ದುಲ್ ಗಫಾರ್‌ರವರು:-ಆಡಿಟೆಡ್ ಅಂಕಿ ಅಂಶಗಳಿಲ್ಲದೆ ಯಾವ ಆಧಾರದ ಮೇಲೆ ಕೊಟ್ಟಿರಿ?

**Sri k. Chengalaraya reddy:-** We have got the Figures. If the Member gives notice, I am prepared to give them..

**Janab H.R. Abdul Gaffar:-** This information should have been ready. Mr. President, because the question is asked as per (c) viz. "the amount that the Government pay annualy to each of them for the pubilcation of Government Advertisements ....."

ಶ್ರೀ ಬಿ. ಚಾಮಯ್ಯನವರು ( ಶ್ರೀರಂಗಪಟ್ಟಣ ತಾಲ್ಲೂಕು):- ಜಾಹಿರಾತುಗಳನ್ನು ಆಯಾ ಇಲಾಖೆಯವರೇ ಪ್ರಕಟಣೆ ಮಾಡುವಂತೆ ಏರ್ಪಾಡು ಮಾಡುವುದಕ್ಕಾಗುವುದಿಲ್ಲವೆ?

ಶ್ರೀ ಕೆ. ಚೆಂಗಲರಾಯರೆಡ್ಡಿಯವರು:- ಆ ರೀತಿ ಏರ್ಪಾಡುಗಳನ್ನು ಮಾಡುವುದರಿಂದ ಅನೇಕ ತೊಂದರೆಗಳು ಉದ್ಭವಿಸುತ್ತವೆ ಆದ್ದರಿಂದ ಈ ಕೆಲಸವನ್ನು ಒಂದು ಕೇಂದ್ರ ಏಜೆನ್ಸಿಯ ಮೂಲಕ ಮಾಡಿಸಬೇಕೆಂದು ತೀರ್ಮಾನ ಮಾಡಲಾಗಿದೆ.

ಶ್ರೀ ಬಿ. ಚಾಮಯ್ಯನವರು:- ಪತ್ರಿಕೆಗಳನ್ನು ಸರ್ಕಾರದ ಅಧೀನದಲ್ಲಿಟ್ಟುಕೊಳ್ಳಲು ಈ ರೀತಿ ಜಾಹಿರಾತುಗಳನ್ನು ಕೊಡುತ್ತೇವೆಂದು ತಿಳಿದುಕೊಂಡರೆ ತಪ್ಪಾಗುತ್ತದೆಯೇ?

ಶ್ರೀ ಕೆ. ಚೆಂಗಲರಾಯರೆಡ್ಡಿಯವರು:- ಬಹಳ ತಪ್ಪಾಗುತ್ತದೆ.

ಶ್ರೀ ಬಿ. ಚಾಮಯ್ಯನವರು:- ಕೆಲವು ಪತ್ರಿಕೆಗಳಿಗೆ 6,000, ಕೆಲವಕ್ಕೆ 300, ಕೆಲವಕ್ಕೆ 30, ಕೆಲವಕ್ಕೆ 60 ರೂಪಾಯಿಗಳು ಈ ರೀತಿ ವ್ಯತ್ಯಾಸವಿರಲು ಕಾರಣವೇನು?

ಶ್ರೀ ಕೆ. ಚೆಂಗಲರಾಯರೆಡ್ಡಿಯವರು:- ಆ ರೀತಿ ವ್ಯತ್ಯಾಸವಿರಲೇಬೇಕು. ಆ ರೀತಿ ವ್ಯತ್ಯಾಸವಿರುವುದು ನಾವು ಸರಿಯಾದ ನೀತಿಯನ್ನು ಅನುಸರಿಸಿಕೊಂಡು ಬಂದಿದ್ದೇವೆ ಎಂದು ಗೊತ್ತಾಗುತ್ತದೆ.

ಶ್ರೀಮತಿ ಸುನಂದಮ್ಮನವರು (ಮೈಸೂರು ಸ್ತ್ರೀಯರು):- ನೀವು ಪತ್ರಿಕೆಗಳಲ್ಲಿ ಒಂದು ಸಾಮಾನಿನ ವಿಷಯ ಜಾಹಿರಾತು ಕೊಡುವುದು ಅದಕ್ಕೆ ಒಂದು ಉತ್ತೇಜನ ಕೊಡಲಿ ಎಂಬ ಉದ್ದೇಶದಿಂದ ತಾನೆ?

ಶ್ರೀ ಕೆ. ಚೆಂಗಲರಾಯರೆಡ್ಡಿಯವರು:- ಅಷ್ಟೇ ಹೊರತು ವಿಶೇಷ ಕಾರಣವೇನೂ ಇಲ್ಲ.

ಶ್ರೀಮತಿ ಸುನಂದಮ್ಮನವರು:- ಹಾಗೆ ಜಾಹಿರಾತು ಕೊಡುವಾಗ ಪತ್ರಿಕೆಗಳ ಪ್ರಾಮುಖ್ಯತೆ ಮತ್ತು, ಅವು ಎಷ್ಟು ಪತಿಗಳು ಮುದ್ರಣವಾಗುತ್ತವೆ ಎಂಬ ಅಂಶವನ್ನು ಗಣನೆಗೆ ತೆಗೆದುಕೊಂಡು ತಾನೇ ಕೊಡುವುದು?

ಶ್ರೀ ಕೆ. ಚೆಂಗಲರಾಯರೆಡ್ಡಿಯವರು:- ಅದಕ್ಕೆ ಆಗಲೇ ಉತ್ತರ ಕೊಟ್ಟಿದೆ.

ಶ್ರೀಮತಿ ಸುನಂದಮ್ಮನವರು:- ತಾವು ವಾರಪತ್ರಿಕೆಗಳಿಗೆ ಜಾಹಿರಾತು ಕೊಡುವಂತೆ ಮಾಸ ಪತ್ರಿಕೆಗಳಿಗೂ ಸಹಾಯ ಮಾಡುವುದುಂಟೆ?

ಶ್ರೀ ಕೆ. ಚೆಂಗಲರಾಯರೆಡ್ಡಿಯವರು:- ಉಂಟು.

ಶ್ರೀಮತಿ ಸುನಂದಮ್ಮನವರು:- ಆದರೆ ತಮಗೆ ಗೊತ್ತಿರುವ ಹಾಗೆ ಸರಸ್ವತಿ ಎಂಬ ಹೆಣ್ಣುಮಕ್ಕಳ ಪತ್ರಿಕೆಗೆ ಯಾವ ಸಹಾಯವನ್ನು ಮಾಡುತ್ತಿಲ್ಲವಲ್ಲವೇ?

ಶ್ರೀ ಕೆ. ಚೆಂಗಲರಾಯರೆಡ್ಡಿಯವರು:-ಅದು ಪರಿಶೀಲಿಸಲಾಗುತ್ತದೆ, ಆದರೆ ನನಗೆ ಜ್ಞಾಪಕವಿರುವ ಹಾಗೆ ಆದರ ರಜತಮಹೋತ್ಸವದ ಸಂದರ್ಭದಲ್ಲಿ ಜಾಹಿರಾತು ಕೊಟ್ಟಿದೆ ಎಂದು ಕಾಣುತ್ತದೆ.

ಶ್ರೀಮತಿ ಸುನಂದಮ್ಮನವರು:- ಅದಕ್ಕೆ ಮಾಮೂಲಾಗಿ ಸಹಾಯ ಮಾಡುವ ವಿಚಾರ ಯೋಚಿಸಿಲಾಗುವುದೇ?

ಶ್ರೀ ಕೆ. ಚೆಂಗಲರಾಯರೆಡ್ಡಿಯವರು:- ಈಗಾಗಲೇ ಅದನ್ನು ನಮ್ಮ ಪಟ್ಟಿಯಲ್ಲಿ ಸೇರಿಸಲಾಗಿದೆ ಎಂಬುದನ್ನು ತಾವು ಪಟ್ಟಿಯನ್ನು ನೋಡಿದರೆ ಗೊತ್ತಾಗುತ್ತದೆ.

ಶ್ರೀಮತಿ ಸುನಂದಮ್ಮನವರು:- ಈಗ ತಾವು ಅದಕ್ಕೆ ಕೊಡುವ 60 ರೂಪಾಯಿಗಳು ಸಾಲದು ಎಂಬುದು ತಮಗೆ ಗೊತ್ತಿದೆಯೇ?

**Sri k. Chengalaraya reddy:-** That is a matter of opinion.

**Mr. president:-** Question time is over.

## 11. ಶ್ರೀ ಡಿ. ಎಸ್ ಮಲ್ಲಪ್ಪನವರ ನಿಧನದ ಸಂದರ್ಭದಲ್ಲಿ ಮಂಡಿಸಿದ ಸಂತಾಪ ಸೂಚಕ ನಿರ್ಣಯ

### (ಪ್ರಜಾಪ್ರತಿನಿಧಿ ಸಭೆಯ ನಡೆವಳಿಗಳು- 24, ಅಕ್ಟೋಬರ್ 1949)

ಮಾನ್ಯ ಅಧ್ಯಕ್ಷರೇ, ಈ ಸಂತಾಪ ಸೂಚಕ ನಿರ್ಣಯವನ್ನು ಸಭೆಯ ಮುಂದೆ ಇಡಬೇಕಾದಂಥ ಒಂದು ಪ್ರಮೇಯ ಒದಗಿದ್ದಕ್ಕಾಗಿ ನಾನು ಬಹಳ ವ್ಯಸನಪಡುತ್ತೇನೆ. ಶ್ರೀ ಡಿ. ಎಸ್ ಮಲ್ಲಪ್ಪನವರು ಕೇವಲ ಕಮ್ಮಿ ಮನಸ್ಸಿನಲ್ಲೇ ದೈವಾಧೀನರಾಗಿದ್ದಾರೆಂದು ನಾನು ಬೇರೆ ಒತ್ತಿ ಹೇಳಬೇಕಾಗಿಲ್ಲ. ಅವರಿಗೆ ಕೇವಲ 52-53 ವರ್ಷ ಮಾತ್ರ ಆಗಿತ್ತು. ಇನ್ನೂ ಅನೇಕ ಕಾಲ ಅವರ ಸೇವೆ ದೇಶಕ್ಕೆ ದೊರಕೀತು ಎಂಬ ಆಶಯವನ್ನು ಅನೇಕರು ಇಟ್ಟುಕೊಂಡಿದ್ದರು. ಶ್ರೀ ಮಲ್ಲಪ್ಪನವರು ಈ ಸಭೆಯಲ್ಲಿ ಎಷ್ಟು ಪ್ರಮುಖ ಪಾತ್ರ ವಹಿಸಿದ್ದರು ಎಂಬುದನ್ನು ನಾನು ಬಹಳ ವಿವರವಾಗಿ ಹೇಳಬೇಕಾದ ಅವಶ್ಯಕತೆ ಇಲ್ಲ. ಈ ಸಭೆಯಲ್ಲಿರತಕ್ಕ ಅನೇಕ ಮಾನ್ಯ ಸದಸ್ಯರು ಅವರ ಚಟುವಟಿಕೆಗಳನ್ನೂ ಮತ್ತು ಈ ಸಭೆಯಲ್ಲಿ ಅವರು ವಹಿಸಿದಂಥ ಪಾತ್ರವನ್ನೂ ಚೆನ್ನಾಗಿ ಅರಿತವರಾಗಿದ್ದಾರೆ. ಅನೇಕ ವರ್ಷಗಳು ಅವರು ಸಭೆಯ ಸದಸ್ಯರಾಗಿದ್ದರು. ಪ್ರಾಯಶಃ ಈ ಸಭೆಯಲ್ಲಿ ಒಂದು ಕಾಲಕ್ಕೆ ಎಲ್ಲರಿಗಿಂತ ಕಮ್ಮಿ ವಯಸ್ಸಿನ ಸದಸ್ಯರಾಗಿದ್ದರು ಎಂದು ಹೇಳಬಹುದಾಗಿದೆ. ಅವರು ಅಸೆಂಬ್ಲಿಗೆ ಪ್ರವೇಶಿಸಿದಾಗ 22 ವರ್ಷ ಮಾತ್ರ ಆಗಿತ್ತು ಎಂದು ತಿಳಿದುಬಂದಿದೆ. ಸುಮಾರು 1920ರಿಂದ ಒಂದೇ ಸಮನಾಗಿ 1949ರವರೆಗೂ ಶಾಸನ ಸಭೆಗಳ ಸದಸ್ಯರಾಗಿದ್ದರು. ಅಷ್ಟೇ ಅಲ್ಲದೆ ನಮ್ಮ ದೇಶದ ರಾಜಕೀಯದಲ್ಲಿ ಬಹಳ ಗಣ್ಯವಾದಂಥ ಮುಖ್ಯ ಪಾತ್ರವನ್ನು ವಹಿಸಿದ್ದರು. ಪ್ರಜಾಮಂಡಳಿಯ ಸದಸ್ಯರಾಗಿದ್ದು ಅದರ ನಾಯಕವರ್ಗದಲ್ಲಿ ಶ್ರೇಷ್ಠ ಸ್ಥಾನವನ್ನು ಪಡೆದಿದ್ದರು.1930ರಲ್ಲಿ ನಮ್ಮ ದೇಶದ ಮುಖ್ಯ ಜವಾಬ್ದಾರಿ ಸರ್ಕಾರ ಸ್ಥಾಪನೆಯಾಗಬೇಕೆಂಬ ಮೂಲ ಉದ್ದೇಶವನ್ನು ಸಾಧಿಸುವುದಕ್ಕೋಸ್ಕರ ಪ್ರಜಾ ಪಕ್ಷ ಎಂಬ ಬೇರೆ ಒಂದು ಪಕ್ಷವನ್ನು ಕಟ್ಟಿದಂತಹವರ ಪೈಕಿ ಅಗ್ರ ಗಣ್ಯರು. ಅದಕ್ಕಾಗಿ ಅವರನ್ನು ಬಹಳ ಮಟ್ಟಿಗೆ ಸ್ಮರಿಸಬೇಕಾಗಿದೆ. 1930 ರಲ್ಲಿ ನಾನು ರಾಜಕೀಯಕ್ಕೆ ಕಾಲಿಟ್ಟಾಗ ಆ ಕಾಲಕ್ಕೆ ಪ್ರಜಾ ಪಕ್ಷದ ನಾಯಕರಾಗಿ ಆಗಿನಿಂದಲೂ ಅದನ್ನು ಬೆಳೆಸಿಕೊಂಡು ಬರುತ್ತಿದ್ದರು ಎಂದು ಹೇಳಲಿಚ್ಚಿಸುತ್ತೇನೆ. ಅನೇಕ ವರ್ಷಗಳಿಂದ ಅವರು ಈ ಪ್ರಜಾಪ್ರತಿನಿಧಿ ಸಭೆಯಲ್ಲೇ ಅಲ್ಲದೆ ಮೈಸೂರು ದೇಶದ ರಾಜಕೀಯ ಕ್ಷೇತ್ರದಲ್ಲೂ ಕೂಡ ಬಹಳ ಪ್ರಾಮುಖ್ಯ ಪಾತ್ರವನ್ನು ವಹಿಸಿದ್ದರು ಎಂದು ನಾನು ಈ ದಿನ ಅವರ ನೆನಪನ್ನು ಮಾಡಿಕೊಳ್ಳಬೇಕಾಗಿದೆ. ಅವರು ನ್ಯಾಯ ವಿಧಾಯಕ ಸಭೆಯಲ್ಲೂ ಸದಸ್ಯರಾಗಿದ್ದರು. ಅಲ್ಲೂ ಅವರು ಬಹಳ ಪ್ರಶಂಸನೀಯವಾದ ರೀತಿಯಲ್ಲಿ ಅವರ ಕರ್ತವ್ಯಗಳನ್ನು ನೆರವೇರಿಸುತ್ತಿದ್ದರು ಎಂದು ಹೇಳಲು ಬಯಸುತ್ತೇನೆ. ಶ್ರೀಮಾನ್ ಮಲ್ಲಪ್ಪನವರು ಬರೀ ರಾಜಕೀಯ ಕ್ಷೇತ್ರದಲ್ಲೇ ಅಲ್ಲದೆ ಕಾಂಗ್ರೆಸ್ ಮತ್ತು ವಾಣಿಜ್ಯ ಕ್ಷೇತ್ರದಲ್ಲೂ ಸಹ ಬಹಳ ಹೆಚ್ಚಾದಂಥ ಒಂದು ಸ್ಥಾನವನ್ನು ದೊರಕಿಸಿಕೊಂಡಿದ್ದರು. ಮೈಸೂರು ಬ್ಯಾಂಕಿನ ಡೈರೆಕ್ಟರ್‌ರಾಗಿದ್ದು ಆ ಸಂಸ್ಥೆಯ ಆಡಳಿತದ ಬಗ್ಗೆ ಬಹಳ ಹೆಚ್ಚಿನ, 20-22 ವರ್ಷದ ಸೇವೆ ಸಲ್ಲಿಸಿದ್ದಾರೆ ಎಂಬುದು ನನಗೆ ಗೊತ್ತಿರತಕ್ಕ ಅಂಶ. ಇಂಡಿಯನ್ ಕೋಕೋನಟ್ ಕಮಿಟಿಯಲ್ಲೂ ಅವರು ಒಬ್ಬ ಮುಖ್ಯಸದಸ್ಯರಾಗಿ ಉತ್ತಮ ಸೇವೆ ಸಲ್ಲಿಸಿದ್ದಾರೆ. ಅವರ ಡಿಸ್ಟ್ರಿಕ್ಟ್‌ನಲ್ಲಿ ಡಿಸ್ಟ್ರಿಕ್ಟ್ ಬೋರ್ಡ್ ಸದಸ್ಯರಾಗಿದ್ದರು. ಡಿಸ್ಟ್ರಿಕ್ಟ್‌ನ ಸೇವೆಯನ್ನು

ಸಲ್ಲಿಸಿದ್ದಾರೆ. ಇತ್ತೀಚೆಗೆ 1937-38ನೇ ಇಸವಿಯಿಂದ , ರಾಜಕೀಯ ಒಂದು ಹೊಸ ರೂಪವನ್ನು ತಾಳಿದ ಮೇಲೆ ಅವರು ಹಿಂದೆ ಸರಿದಂತೆ ತೋರಿಬಂದರೂ ಸಹ ಮೈಸೂರು ದೇಶಕ್ಕೆ ರಾಜಕೀಯ ಕ್ಷೇತ್ರದಲ್ಲಿ ಅವರು ಮಾಡಿದಂಥ ಕೆಲಸ, ಸೇವೆ ನಿಜವಾಗಿಯೂ ಚಿರಸ್ಮರಣೀಯವಾದದ್ದು. ಅವರ ಹೆಸರನ್ನು ನಾವು ಸ್ಮರಿಸತಕ್ಕದ್ದು ನಮ್ಮ ಆದ್ಯ ಕರ್ತವ್ಯವೆಂದು ಭಾವಿಸುತ್ತೇನೆ.

ಅವರು ಕಾಯಿಲೆಯಾಗಿದ್ದರೂ, ಇಷ್ಟು ಬೇಗ ಮೃತ್ಯುವಿನ ಪಾಲಿಗೆ ಬೀಳುತ್ತಾರೆಂದು ಅಂದುಕೊಂಡಿರಲಿಲ್ಲ. ಈ ದುಃಖದ ವಾರ್ತೆಯನ್ನು ಕೇಳಿ ಸಿಡಿಲು ಬಡಿದಂತೆ ಆಯಿತು. ಈ ವರ್ತಮಾನ ಬಂದಾಗ ನಾನು ದೆಹಲಿಯಲ್ಲಿ ಇದ್ದೆ. ಬಹಳ ನೊಂದುಕೊಂಡು ಅವರ ಬಂಧು ವರ್ಗದವರಿಗೆ ಸಂತಾಪವನ್ನು ತಿಳಿಸಿದೆ. ಇದೇ ರೀತಿ ದೇಶದಲ್ಲಿ ಅವರ ನಿಧನದಿಂದ ಎಷ್ಟು ವ್ಯಸನವುಂಟಾಗಿದೆ ಎಂಬುದನ್ನು ಅನೇಕರು ತಿಳಿಸಿದ್ದಾರೆ.

ಇತ್ತೀಚೆಗೆ ಕೆಲವು ಮಿತ್ರರು ಅವರ ಸ್ಮಾರಕವನ್ನೂ ಸಹ ಮಾಡಬೇಕೇಂದು ಸಲಹೆ ಮಾಡಿದ್ದಾರೆ. ಇನ್ನೂ ಹೆಚ್ಚು ಹೇಳುವುದಕ್ಕೆ ಈ ಸಂದರ್ಭದಲ್ಲಿ ಇಚ್ಛಿಸುವುದಿಲ್ಲ. ಶ್ರೀಮಾನ್ ಮಲ್ಲಪ್ಪನವರಿಗೆ ಅನೇಕರು ಆಪ್ತ ಮಿತ್ರರು ಇದ್ದಾರೆ. ಅವರ ಪೈಕಿ ನಾನೂ ಒಬ್ಬನೆಂದು ಹೇಳಲಿಚ್ಛಿಸುತ್ತೇವೆ. ಅವರ ನಿಧನದಿಂದ ದೇಶದಲ್ಲಿ ಒಬ್ಬ ಗಣ್ಯ ಪ್ರಜೆ ಮತ್ತು ಮುಖ್ಯ ನಾಯಕರನ್ನು ಕಳೆದುಕೊಂಡಿರುವುದೂ ಅಲ್ಲದೆ ಅನೇಕರು ಒಬ್ಬ ಆಪ್ತ ಸ್ನೇಹಿತನನ್ನು ಕಳೆದುಕೊಂಡಿದ್ದಾರೆ. ಈ ಸಭೆಯವರು ಅವರ ನಿಧನದ ಬಗ್ಗೆ ಸಂತಾಪ ಸೂಚಿಸುವುದು ಅಲ್ಲದೆ ಅವರ ಆತ್ಮಕ್ಕೆ ಶಾಂತಿ ದೊರೆಯಲೆಂದು ಪ್ರಾರ್ಥಿಸಿ ಈ ನಿರ್ಣಯವನ್ನು ಅವರ ಬಂಧುವರ್ಗದವರಿಗೆ ಕಳುಹಿಸಿಕೊಡಬೇಕೆಂದು ಅರಿಕೆ ಮಾಡುತ್ತೇನೆ. ಮತ್ತು ಅವರ ಬಂಧುವರ್ಗಕ್ಕೆ ದುಃಖ ಶಮನವಾಗಿ ಪರಮಾತ್ಮನು ಒಳ್ಳೆಯದನ್ನು ಮಾಡಲೆಂದು ಸೂಚಿಸುವ ಈ ನಿರ್ಣಯವನ್ನು ಸರ್ವಾನುಮತದಿಂದ ಒಪ್ಪಿಸಬೇಕೆಂದು ಹೇಳಿ ಈ ಸಭೆಯ ಮುಂದಿಡುತ್ತೇನೆ.

## 12. ದಿವಾನರ ಭಾಷಣದ ಅಗತ್ಯತೆಯ ಬಗ್ಗೆ ಮಾಡಲಾದ ಚರ್ಚೆಗೆ ಉತ್ತರ

### ಪ್ರಜಾಪ್ರತಿನಿಧಿ ಸಭೆಯ ನಡೆವಳಿಗಳು

### 31, ಅಕ್ಟೋಬರ್ 1949

**ಶ್ರೀ ಕೆ. ಚೆಂಗಲರಾಯರೆಡ್ಡಿಯವರು (ಪ್ರಧಾನ ಸಚಿವರು)** ಮಾನ್ಯ ಅಧ್ಯಕ್ಷರೇ, ಶ್ರೀಮಾನ್ ಎಲ್. ಸಿದ್ದಪ್ಪನವರು ಒಂದು ಮುಖ್ಯವಾದ ವಿಷಯವನ್ನು ಸಭೆಯಲ್ಲಿ ಪ್ರಸ್ತಾಪಿಸಿದ್ದಾರೆ. ಹಿಂದೆ ಇದ್ದ ಸಂಪ್ರದಾಯದಂತೆ ಸಭೆಯ ಪ್ರಾರಂಭದಲ್ಲಿ ದಿವಾನರು ಒಂದು ಬಾಷಣ ಮಾಡುವುದಾಗಿತ್ತು. ಆದರೆ ದಿವಾನರವ ಹುದ್ದೆ ರದ್ದಾದಮೇಲೆ ಆ ಸಂಪ್ರದಾಯ ಇರಬೇಕೇ ಬೇಡವೇ ಎಂಬುದನ್ನು ಯೋಚನೆ ಮಾಡಿ ಸಂಪ್ರದಾಯವನ್ನು ತಾತ್ಕಲಿಕವಾಗಿ ಯಾವ ರೂಪದಲ್ಲಿ ಇಟ್ಟುಕೊಂಡಿದ್ದರು ಎಂಬ ಬಗ್ಗೆ ಸರಿಯಾದ ಒಂದು ಅಭಿಪ್ರಾಯ ಖಚಿತವಾಗಿ ಬರದೆ ಆ ಸಂಪ್ರದಾಯವನ್ನು ಬದಲಾಯಿಸಲಾಯಿತು. ಈ ಸಂದರ್ಭದಲ್ಲಿಂದು ವಿಷಯವನ್ನು ಸಭೆಯ ಗಮನಕ್ಕೆ ತರಬೇಕೆಂದಿದ್ದೇನೆ. ಅದೇನೆಂದರೆ ದಿವಾನರವರು ಭಾಷಣ ಮಾಡುತ್ತಿದ್ದ ಕಾಲದಲ್ಲಿ ಅನೇಕರ ಅಭಿಪ್ರಾಯವೇನಿತ್ತು? ನನಗೆ ಗೊತ್ತಿರುವ ಹಾಗೆ ಈ ಭಾಷಣ ಏಕೆ? ಭಾಷಣ ಮಾಡಿದ ಮೇಲೆ ಚರ್ಚೆ ಆಗುವುದಿಲ್ಲವಾದ್ದರಿಂದ ಇದರ ಅವಶ್ಯಕತೆ ಏನೂ ಇಲ್ಲ, ಇನ್ನು ಮುಂದಿನ ಕಾರ್ಯಕ್ರಮದಲ್ಲಿ ಇದನ್ನು ಮುಂದುವರೆಸಿಕೊಂಡು ಹೋಗಕೂಡದು ಎಂಬ ಅಭಿಪ್ರಾಯ ಹಲವಾರು ಸದಸ್ಯರಲ್ಲಿತ್ತು. ಅದನ್ನು ಸಭಿಕರ ನೆನಪಿಗೆ ತರುತ್ತೇನೆ. ಅದಕ್ಕೋಸ್ಕರವೇ ದಿವಾನರ ಹುದ್ದೆ ಹೋದಮೇಲೆ ದಿವಾನಾರ ಭಾಷಣವೂ ಅನಾವಶ್ಯಕ ಎಂಬ ಅಭಿಪ್ರಾಯ ಬಂದು ಈಗ ಅದನ್ನು ರದ್ದು ಮಾಡಿದೆವು. ನನ್ನ ಸ್ವಂತ ಅಭಿಪ್ರಾಯ, ವೈಯಕ್ತಿಕ ಅಭಿಪ್ರಾಯ ಹೇಳಬೇಕಾದರೆ ಆ ರೀತಿ ಒಂದು ಅವಕಾಶವಿದ್ದಿದ್ದರೆ ಚೆನ್ನಾಗಿತ್ತು. ಆ ಅವಕಾಶ ಕಳೆದುಕೊಳ್ಳಬೇಕೆಂಬ ಅಭಿಪ್ರಾಯ ನಮಗೆ ಖಂಡಿತವಾಗಿಯೂ ಇಲ್ಲ. ಹೋದ ವರ್ಷ ಆಡಳಿತ ಏನು ನಡೆದಿದೆ, ಮುಂದಿನ ಕಾರ್‍ಯಕ್ರಮವೇನು ಎಂಬುದನ್ನು ತಿಳಿಸಲು ಅವಕಾಶ ದೊರೆತರೆ ದೀರ್ಘವಾದ ಹೇಳಿಕೆ ಕೊಡಲು ನಮಗೆ ಇಷ್ಟವಿದೆ. ಆ ರೀತಿ ಮಾಡಿದರೆ ನಮಗೂ ಅನುಕೂಲ ಎಂಬ ಅಭಿಪ್ರಾಯವಿದೆ. ಆದರೆ ಈಗ ಏನು ಒಂದು ಹೊಸ ಏರ್ಪಾಡನ್ನು ಮಾಡಬೇಕೆಂದು ಹೋರಟಿದ್ದೇವೆಯೋ ಆ ಏರ್ಪಾಡಿನಲ್ಲಿ ಇದು ಸರಿ ಹೋಗಲಾರದು ಎಂದು ಮನ್ನಾ ಮಾಡಿದ್ದೇವೆಯೇ ಹೊರತು ಮತ್ತೇನೂ ಅಲ್ಲ.

**ಶ್ರೀ ಎಲ್. ಸಿದ್ದಪ್ಪವರು:** ಆ ಬಗ್ಗೆ ರೂಲ್ಸ್‌ನಲ್ಲಿ ಬದಲಾವಣೆ ಆಗಿದೆಯೇ?

**ಶ್ರೀ ಕೆ. ಚೆಂಗಲರಾಯರೆಡ್ಡಿಯವರು:** ಆ ರೀತಿ ಸರ್ಕಾರದ ಪರವಾಗಿ ಒಂದು ಭಾಷಣ ಮಾಡಬೇಕೆಂದು ಅಭಿಪ್ರಾಯಪಡುವ ಪಕ್ಷದಲ್ಲಿ ಆ ರೀತಿ ಮಾಡಲು ಸಿದ್ದವಾಗಿದ್ದೇವೆ. ಆದರೆ ಹಾಗೆ ಮಾಡಲು ಅವಕಾಶವಿಲ್ಲವಲ್ಲಾ ಎಂದು ವ್ಯಥೆಪಡುತ್ತೇವೆ, ತಮ್ಮ ಮುಂದೆ ಇರತಕ್ಕ ವಿಷಯವನ್ನು ಹೇಳುವುದಾದರೆ ಎಲ್ಲಾ ಸಿದ್ದವಾಗಿತ್ತು. ಪಾರ್ಟ್-1, ಪಾರ್ಟ್-2 ಸಕಲ ಸಾಮಗ್ರಿ ಸಿದ್ಧವಾಗಿತ್ತು. ಅದನ್ನು ಫೈನಲೈಸ್ ಮಾಡಬೇಕೆಂದಾಗ ಹೊಸ ಕಾರ್ಯಕ್ರಮದಲ್ಲಿ ಅದಕ್ಕೆ ಅವಕಾಶವಿಲ್ಲವೆಂದು ವ್ಯಸನದಿಂದ ಬಿಡಬೇಕಾಗಿ ಬಂತು. ಈಗ ಪ್ರಾಂತ್ಯ ಶಾಸನ ಸಬೆಯಲ್ಲಾಗಲೀ,

ಕೇಂದ್ರ ಪಾರ್ಲಿಮೆಂಟಿನಲ್ಲಾಗಲೀ ಒಂದು ಅಧಿವೇಶನ ಪ್ರಾರಂಭವಾಗತಕ್ಕ ಕಾಲದಲ್ಲಿ ಸರ್ಕಾರದ ಪರವಾಗಿ ಈ ರೀತಿ ಭಾಷಣ ಮಾಡತಕ್ಕ ಪದ್ದತಿ ಇಲ್ಲ ಎಂಬ ವಿಷಯವನ್ನು ಮಾನ್ಯ ಸಿದ್ಧಪ್ಪನವರ ಗಮನಕ್ಕೆ ತರಬೇಕಾಗಿದೆ.

ಶ್ರೀ ಎಲ್. ಸಿದ್ಧಪ್ಪನವರು: ಕೇಂದ್ರ ಸಭೆಯಲ್ಲೂ ಸಹ ಪ್ರತಿಯೊಬ್ಬ ಸಚಿವರೂ ಅವರವರ ಇಲಾಖೆಗೆ ಸಂಬಂಧಪಟ್ಟ ಬಡ್ಜೆಟ್‌ಗೆ ಒಪ್ಪಿಗೆಯನ್ನು ತೆಗೆದುಕೊಳ್ಳುವ ಸಂದರ್ಭದಲ್ಲಿ ಹಿಂದೆ ಏನೇನು ಕಾರ್ಯಕ್ರಮ ನಡೆಸಿದ್ದಾರೆ ಎಂಬ ಬಗ್ಗೆ ಭಾಷಣ ಮಾಡುತ್ತಾರೆ. ಎಂದು ಮಾನ್ಯ ಮಂತ್ರಿಗಳು ತಿಳಿಸಿದ್ದರು. ಅದೇ ರೀತಿ ಮಾಡಬೇಕೆಂದು ಮೊನ್ನೆ 1949ನೇ ಮಾರ್ಚ್ ತಿಂಗಳಿನಲ್ಲಿ ನಡೆದ ಅಧಿವೇಶನದಲ್ಲಿ ತಾವೇ ಒಂದು ಸಂಪ್ರದಾಯವನ್ನು ಹಾಕಿದ್ದೀರಿ.

ಶ್ರೀ ಕೆ. ಚೆಂಗಲರಾಯರೆಡ್ಡಿಯವರು: ಬಡ್ಜೆಟ್ ವಿಷಯ ಬಡ್ಜೆಟ್ ಚರ್ಚೆಗೆ ಬಂದಾಗ, ಅದು ಬೇರೆ ವಿಧಾನವಾಯಿತು. ನಾನು ಹೇಳುತ್ತಾ ಇದ್ದುದು, ಕೇಂದ್ರ ಪಾರ್ಲಿನಮೆಂಟಿನಲ್ಲಾಗಲೀ, ಪ್ರಾಂತ್ಯ ಶಾಸನ ಸಭೆಗಳಲ್ಲಾಗಲೀ, ಅಧಿವೇಶನ ಪ್ರಾರಂಭವಾದಾಗ ಸರ್ಕಾರದ ಪರವಾಗಿ ತಾವು ಯಾವ ಒಂದು ಭಾಷಣ ಮಾಡುವ ಸಂಪ್ರದಾಯ ಇದೆಯೋ ಎಂದು ಹೇಳಿದ್ದೀರೊ ಅದು ಇಲ್ಲ. ಅದಕ್ಕೆ ಅನುಸಾರವಾಗಿ ನಾವೂ ಸಹ ಇಲ್ಲಿ ತೆಗೆಯಬೇಕೆಂದು ತೀರ್ಮಾನ ಮಾಡಿದ್ದೇವೆ. ಆದರೂ ಅವರಿಗೆ ಆಶಾಯದಾಯಕವಾದ ಭರವಸೆಯನ್ನು ಕೊಡಬಲ್ಲೆ. ಹೊಸ ಕಾನ್‌ಸ್ಟಿಟ್ಯೂಷನಲ್ಲಿ, ಬ್ರಿಟಿಷ್ ಪಾರ್ಲಿಮೆಂಟಿನಲ್ಲಿ ಯಾವ ಒಂದು ಸಂಪ್ರದಾಯ ಇದೆಯೇ ಅದನ್ನು ನಾವೂ ಸಹ ಅನುಷ್ಠಾನಕ್ಕೆ ತರಬೇಕೆಂದು ಹೇಳಿದ್ದೇವೆ. ಅದೇ ರೀತಿ ರಚನೆ ಆಗಬೇಕೆಂದು ಇಂಡಿಯನ್ ಕಾನ್‌ಸ್ಟಿಟ್ಯೂಷನಲ್ಲೂ ಸೂಚಿಸಿದ್ದಾರೆ.

ಏನೆಂದರೆ, ಪ್ರತಿಯೊಂದು ಅಧಿವೇಶನದ ಪ್ರಾರಂಭ ಕಾಲದಲ್ಲಿ ಮಂತ್ರಿಗಳು ಅಥವಾ ಮುಖ್ಯಮಂತ್ರಿಗಳು ಭಾಷಣ ಮಾಡುವುದಿಲ್ಲ. ಕಾನ್‌ಸ್ಟಿಟ್ಯೂಷನಲ್ ಹೆಡ್ ಪ್ರಾಂತ್ಯಗಳಲ್ಲಿ ಗವರ್ನರ್ ಮತ್ತು ನಮ್ಮ ಸಂಸ್ಥಾನಗಳಲ್ಲಿ ಶ್ರೀಮನ್ಮಹಾರಾಜರು ಭಾಷಣ ಮಾಡುವುದಕ್ಕೆ ಅವಕಾಶವನ್ನುಂಟುಮಾಡಿದೆ. ಆದ್ದರಿಂದ ಪ್ರತಿಯೊಂದು ಅಧಿವೇಶನದಲ್ಲೂ ಕೂಡ ಇನ್ನು ಮುಂದೆ ಮಹಾರಾಜರವರ ಭಾಷಣ ಎಂಬ ಸಂಪ್ರದಾಯ ರೂಢಿಗೆ ಬರುತ್ತದೆ.

ಶ್ರೀ ಎಲ್. ಸಿದ್ದಪ್ಪನವರು: ರಾಜ್ಯಾಂಗವು ಜಾರಿಗೆ ಬಂದಮೇಲೆ ತಾನೆ?

ಶ್ರೀ ಕೆ. ಚೆಂಗಲರಾಯರೆಡ್ಡಿಯವರು: ಜನವರಿ 26 ಬಹಳ ದೂರವಿಲ್ಲ. ಇಷ್ಟೇ ಅಲ್ಲದೆ ಇನ್ನೊಂದು ಸಂತೋಷದಾಯಕವಾದ ವಿಚಾರವೇನೆಂದರೆ ಇಷ್ಟುದಿವಸ ಭಾಷಣದ ಮೇಲೆ ಚರ್ಚೆಯಿರುತ್ತಿರಲಿಲ್ಲ. ಸರ್ಕಾರಿ ಮುಖ್ಯ ಅಧಿಕಾರಿಗಳಿಂದ ಭಾಷಣವಾದ ಮೇಲೆ ಪಾರ್ಲಿಮೆಂಟ್‌ನಲ್ಲಿ ಚರ್ಚೆಯಾಗುವ ಹಾಗೆ ಇಲ್ಲಿ ಆಗುತ್ತಿರಲಿಲ್ಲ. ಭಾಷಣವಾದ ಮೇಲೆ ಅದರ ಪ್ರತಿಗಳು ನಮಗೆ ಚರ್ಚೆ ಮಾಡುವಾಗ ರೆಫೆರೆನ್ಸ್‌ಗೆ ಮಾತ್ರ ಉಪಯೋಗವಾಗುತ್ತಿದ್ದುವು. ಇನ್ನು ಮುಂದೆ ಭಾಷಣವನ್ನು ಮಹಾರಾಜರು ಮಾಡಬೇಕು. ಹಾಗೆ ಮಾಡುವುದು ಅಲ್ಲದೆ ಅದರ ಮೇಲೆ ಚರ್ಚೆ ಕೂಡ ಮಾಡುವುದಕ್ಕೆ ಲೆಜಿಸ್ಲೇಟರುಗಳಿಗೆ ಅವಕಾಶವಿರುತ್ತದೆ. ಯಾವ ರೀತಿ ಚರ್ಚೆ ಮಾಡಬೇಕೆಂಬುದಕ್ಕೆ ನಿಬಂಧನೆಯಿದೆ. ಆದ್ದರಿಂದ ಮುಂದಿನ ಅಧಿವೇಶನದಿಂದ ಹೊಸ ರಾಜ್ಯಾಂಗ, ಇಂಡಿಯಾದ ರಾಜ್ಯಾಂಗ ಜಾರಿಗೆ ಬಂದ ಮೇಲೆ ಮಹಾರಾಜರು ಭಾಷಣ

ಮಾಡುವುದಕ್ಕೂ ಮತ್ತು ಆ ಭಾಷಣದ ಮೇಲೆ ಚರ್ಚೆ ನಡೆಸುವುದಕ್ಕೂ ಈ ಸಭೆಗೆ ಅವಕಾಶವಿದೆ. ಆದ್ದರಿಂದ ಈ ಸಂದರ್ಭಧಲ್ಲಿ ಹಿಂದಿದ್ದ ಒಂದು ಸಂಪ್ರದಾಯವನ್ನು ಬಿಟ್ಟುಬಿಡಬೇಕಾಗುವುದಿಲ್ಲ. ಅದೂ ಒಂದು ರಾಜ್ಯಾಂಗದ ಭಾಗವಾಗಿರುವುದರಿಂದ ತೊಂದರೆಯಿರುವುದಿಲ್ಲ ಎಂದು ಪ್ರಸ್ತಾಪಿಸಬೇಕಾಗಿದೆ. ಆದ್ದರಿಂದ ಮೊದಲೇ ಹೇಳಿದಂತೆ ಈ ಸಭೆಯು ಮಾಡತಕ್ಕ ಕೆಲಸಗಳನ್ನು ಮಾಡುವುದಕ್ಕೆ ತೊಂದರೆಯಿಲ್ಲ. ಸಂಪ್ರದಾಯವನ್ನು ಬಿಟ್ಟಿಲ್ಲ ಎಂದು ಖಚಿತವಾಗಿ ಹೇಳಬೇಕಾಗಿದೆ. ಇಂಥ ಸಭೆಗಳ ಸಂಪ್ರದಾಯಗಳಿಗೆ ಧಕ್ಕೆ ಬರುವ ನೀತಿ ಅಥವಾ ಕಾರ್ಯಕ್ರಮ ಯಾವುದನ್ನೂ ಸರ್ಕಾರದವರು ಮಾಡಿಲ್ಲ ಎಂಬ ಭರವಸೆ, ನಂಬಿಕೆ ನಮಗೆ ಇದೆ. ಹೊಸ ಬದಲಾವಣೆಗಳಲ್ಲಿ ಪ್ರಾಯಶಃ ಅದು ಸರಿಹೋಗುವುದಿಲ್ಲವೆಂದು ಈಗ ಒಂದುವೇಳೆ ಕಂಡರೂ ಮುಂದೆ ಸರಿಹೋಗುತ್ತದೆಂಬ ಭರವಸೆ ನಮಗಿದೆ.

ಎರಡನೆಯದಾಗಿ, ಇದರಲ್ಲಿ ಮಂತ್ರಿಗಳು ಹೇಳಿಕೆ ಕೊಡುತ್ತಾರೆ ಎಂದು ಶ್ರೀ ಎಲ್. ಸಿದ್ದಪ್ಪನವರು ಹೇಳಿದರು. ಬಜ್ಜೆಟ್ಟನ್ನು ಸಭೆಯ ಮುಂದಿಟ್ಟಾಗ ಅದಕ್ಕೆ ಸಂಬಂಧಪಟ್ಟ ಆಯಾ ಮಂತ್ರಿಗಳು ಅವರಿಗೆ ಸಂಬಂಧಪಟ್ಟ ಡಿಮ್ಯಾಂಡಿನ ವಿಚಾರವಾಗಿ ಭಾಷಣ ಮಾಡುವುದು ಸಂಪ್ರದಾಯ. ಅದು ರೂಢಿಯಲ್ಲಿದೆ.

ಶ್ರೀ ಎಲ್. ಸಿದ್ದಪ್ಪನವರು: ದಸರಾ ಅಧಿವೇಶನದಲ್ಲಿ ಇದು ಸಾಧ್ಯವಿಲ್ಲ. ಹಣಕಾಸಿನ ಮಂತ್ರಿಗಳು ಕೊಟ್ಟಿರುವ ಭಾಷಣದಲ್ಲಿ ಅಡ್ಮಿನಿಸ್ಟ್ರೇಷನ್ ವಿಚಾರವೇನೂ ಇಲ್ಲ.

ಶ್ರೀ ಕೆ. ಚೆಂಗಲರಾಯರೆಡ್ಡಿಯವರು: ಹಣಕಾಸಿನ ಸಂಬಂಧದಲ್ಲಿ ಸಂಬಂಧಪಟ್ಟ ಮಂತ್ರಿಗಳು ತಮ್ಮ ಭಾಷಣದಲ್ಲಿ ಅದರ ವಿಚಾರವನ್ನು ಹೇಳುತ್ತಾರೆ. ಪ್ರತಿಯೊಬ್ಬ ಮಂತ್ರಿಗಳೂ ಅವರ ಡಿಮ್ಯಾಂಡನ್ನು ಸಭೆಯ ಮುಂದಿಡುವಾಗ ಇಲಾಖೆಗೆ ಸಂಬಂಧಪಟ್ಟ ವಿಷಯಗಳನ್ನು ಸಭೆಯ ಮುಂದಿಡುವುದು ರೂಢಿಯಾಗಿದೆ. ಅದು ಪಾರ್ಲಿಮೆಂಟ್ ಮತ್ತು ಇತರ ಕಡೆ ಇರುವ ಪದ್ಧತಿ. ಇಲ್ಲೂ ಸಹ ಮಾಡುತ್ತೇವೆ. ಮುಂದೆ ಬೇರೆ ಮಾರ್ಗ ಹೂಡಬೇಕೆಂಬ ಅಭಿಪ್ರಾಯ ಸರ್ಕಾರದವರಿಗಿಲ್ಲ. ಆದ್ದರಿಂದ ಈಗ ನಮ್ಮಲ್ಲಿ ಏನು ನಡವಳಿಕೆ ಇದೆಯೋ ಅದಕ್ಕೂ ಪ್ರಾಂತಗಳಲ್ಲಿರುವ ನಡೆವಳಿಕೆಗೂ ವಿರೋಧವಾಗಿಲ್ಲದಂತೆ ಅದಕ್ಕನುಸಾರವಾಗಿ ತಾತ್ಕಾಲಿಕವಾಗಿ ಮಾಡುತ್ತಿದ್ದೇವೆ. ಮುಂದೆ ಏನಾಗುತ್ತದೆಂಬುದಕ್ಕೆ ಸೂಚನೆ ಈಗಾಗಲೇ ಕೊಟ್ಟಿದ್ದೇನೆ. ಆದ್ದರಿಂದ ಸಂಪ್ರದಾಯ ಬಿಟ್ಟುಹೋಗಿದೆ ಎಂದು ಹೇಳುವುದಕ್ಕೆ ಅವಕಾಶವಿಲ್ಲ. ಹೊಸ ರಾಜ್ಯಾಂಗದಲ್ಲಿ ಅವಕಾಶವನ್ನೊದಗಿಸಿರುವುದರಿಂದ ಶಂಕೆ ಪಡಬೇಕಾಗಿಲ್ಲ, ಇನ್ನೊಂದು ವಿಚಾರ. ಮುಖ್ಯ ವಿಷಯಗಳ ಚರ್ಚೆಗೆ ಅವಕಾಶವಿಲ್ಲದೇ ಹೋಗುತ್ತಿದಿಯೆಂದು ಶ್ರೀ ಸಿದ್ದಪ್ಪನವರು ಒಂದು ವಿಷಯವನ್ನು ಎತ್ತಿ ಹೇಳಿದರು. ಆ ಮುಖ್ಯ ವಿಷಯಗಳಲ್ಲಿ ಎರಡು ಭಾಗ ಮಾಡಬಹುದು. ಕಾನ್‌ಸ್ಟಿಟ್ಯುಷನ್ ಮತ್ತು ರಾಜ್ಯಾಂಗಕ್ಕೆ ಸಂಬಂಧಪಟ್ಟ ವಿಷಯಗಳು ಒಂದು ತರಗತಿಗೆ ಸೇರಿದೆ ಅನ್ನುವುದು ಆಡಳಿತಕ್ಕೆ ಸಂಬಂಧಪಟ್ಟಿರುವುದು ಗೊತ್ತಿರುವ ವಿಚಾರ. ನಾವು ಮಾಡುತ್ತಿರುವ ಕಾನ್‌ಸ್ಟಿಟ್ಯೂಷನ್‌ಗೆ ಸಂಬಂಧಪಟ್ಟ ವಿಚಾರಗಳ ಬಗ್ಗೆ ಬಹುಮಟ್ಟಿಗೆ ರಾಜ್ಯಾಂಗರಚನಾ ಸಭೆಯ ಅಭಿಪ್ರಾಯ ಪಡೆದು ಮುಂದುವರಿಯುತ್ತಿದ್ದೇವೆ. ಎಲ್ಲವನ್ನೂ ಸಹ ಅಲ್ಲಿಯೇ ಆಲೋಚಿಸುವುದಕ್ಕೂ ಮತ್ತು ಇಲ್ಲಿ ರಾಜ್ಯಾಂಗ ರಚನಾ ಸಭೆಯನ್ನು ಏರ್ಪಡಿಸುವುದಕ್ಕೂ ಕಲಾವಕಾಶವಿದೆ; ಕಾಲಾವಧಿಯಿದೆ.

ಇರುವ ಕಾಲವನ್ನು ಸರಿಯಾಗಿ ಉಪಯೋಗಿಸಿ ಇದನ್ನು ನಡೆಸಬೇಕು. ಆಡ್ಮಿನಿಸ್ಟ್ರೇಷನ್ ಸಹ ನಡೆಸಬೇಕು. ಆದ್ದರಿಂದ ರಾಜ್ಯಾಂಗಕ್ಕೆ ಸಂಬಂಧಪಟ್ಟ ವಿಚಾರವನ್ನು ಬಹುಮಟ್ಟಿಗೆ ರಾಜ್ಯಾಂಗ ರಚನಾ ಸಭೆಯಲ್ಲಿ ಚರ್ಚೆ ಮಾಡುತ್ತಿದ್ದೇವೆ. ಸಾಧ್ಯವಾದಮಟ್ಟಿಗೂ ಚರ್ಚೆ ಮಾಡುವುದಕ್ಕೆ ಅವಕಾಶ ಕೊಟ್ಟಿದ್ದೇವೆ.

ಫೈನಾನ್ಷಿಯಲ್ ಇಂಟಿಗ್ರೇಷನ್ ವಿಚಾರ ಕೇಳಿ ಹೇಳಿದರು. ಆ ವಿಚಾರದಲ್ಲಿ ಹೋದ ಸಲವೇ ಮಾನ್ಯ ಹಣಕಾಸಿನ ಸಚಿವರು ಅದರ ಸ್ವರೂಪ ಹೇಗಿದೆಯೆಂಬುದನ್ನೂ, ಮುಖ್ಯ ತತ್ವವನ್ನೂ ಸಭೆಯವರ ಗಮನಕ್ಕೆ ತಂದರು. ಈಗ ನಾನು ವಿವರಗಳನ್ನು ಸಭೆಯ ಮುಂದಿಡುವುದು ಸಾಧುವಲ್ಲ ಏಕೆಂದರೆ ಕೇಂದ್ರ ಸರ್ಕಾರದಲ್ಲೂ ಇದು ಅನಿಶ್ಚಿತವಾಗಿದೆ; ಮತ್ತು ಈ ವಿಷಯವಾಗಿ ಇನ್ನೂ ಸಂಧಾನ ನಡೆಯುತ್ತಿದೆ. ಬಹಿರಂಗಪಡಿಸಿದರೆ ಧಕ್ಕೆ ಬರುತ್ತದೆಂದು ಹೇಳಿದ ಮೇಲೆ ಸಭೆಯ ಮುಂದೆ ತರುವುದಕ್ಕಾಗುವುದಿಲ್ಲ. ಈಗ ಬೇರೆ ಪ್ರಾಂತಗಳೂ ಮತ್ತು ಸಂಸ್ಥಾನಗಳೂ ಆಖೈರಾಗಿ ಒಪ್ಪಿದರೂ ಸಹ ಯಾವ ಒಂದು ಲೆಜಿಸ್ಲೇಚರಿನಲ್ಲಿ ಚರ್ಚೆಗೆ ಒಪ್ಪಿದರೂ ಸಹ ಎಂದು ನಾವು ರುಜು ಹಾಕಿರುವುದು ಎಂದು ಈಗ ಸಭೆಗೆ ತಿಳಿಸಬೇಕಾಗಿದೆ ಇದಕ್ಕೆ ಹಣಕಾಸಿನ ಸಚಿವರ ರುಜು ಬಿದ್ದಿದೆ. ಪ್ರಜಾಭಿಪ್ರಾಯ ಯಾವ ರೀತಿಯಾದರೂ ತೆಗದುಕೊಳ್ಳಬೇಕೆಂಬ ದೃಷ್ಟಿಯಿಂದ ಎಂದು ರುಜು ಹಾಕಿದ್ದೇವೆ. ಹಿಂದಿನ ಈ ಸಭೆಯಲ್ಲಿ ಶ್ರೀ ಎಲ್. ಸಿದ್ದಪ್ಪನವರು ಚರ್ಚೆಗೆ ಅವಕಾಶ ಕೊಡಬೇಕೆಂದು ಕೇಳಿದ್ದಾರೆ. ಅದನ್ನು ನಾವು ಯೋಚನೆ ಮಾಡಬೇಕಾಗಿದೆ. ಪ್ರೊವಿಷನಲ್ ಅಗ್ರಿಮೆಂಟ್ ಕಾಪಿಯು ತಯಾರಾಗುತ್ತಿದೆ. ಅದನ್ನು ಸಭಿಕರ ಗಮನಕ್ಕೆ ತರುವುದಕ್ಕೆ ಯಾವ ಅಭ್ಯಂತರವೂ ಇಲ್ಲ.

ಮೂರನೆಯದಾಗಿ ಅಧಿವೇಶನವನ್ನು ಇನ್ನೂ ಮುಂದುವರಿಸುವ ವಿಚಾರ. ಈ ವಿಚಾರದಲ್ಲಿ ಒಂದೆರಡು ಅಂಶಗಳಿವೆ. ಈಗ ನವೆಂಬರ್ 14 ರಲ್ಲಿ ಭಾರತ ರಾಜ್ಯಾಂಗ ರಚನಾ ಸಭೆಯು 3ನೇ ರೀಡಿಂಗ್‌ಗಾಗಿ ಸೇರಬೇಕು. ಅದಕ್ಕೆ ಪೂರ್ವಭಾವಿಯಾಗಿ ಮೈಸೂರು ರಾಜ್ಯಾಂಗ ರಚನಾ ಸಭೆಯು ಸೇರಬೇಕಾದ ಪ್ರಮೇಯವಿದೆ. ಪ್ರಾಯಶಃ 2-3 ದಿವಸಗಳು ಸೇರಬೇಕಾಗುತ್ತದೆ, ಎಂದು ಒಂದು ತೀರ್ಮಾನಕ್ಕೆ ಬಂದಿದೆ. ಪ್ರಾಯಶಃ ಈ ವಾರದ ಆಖೈರಿನಲ್ಲಿ ನವೆಂಬರ್ 7ಕ್ಕೆ ಅಥವಾ ಅದಕ್ಕೆ ಪೂರ್ವಾಭಾವಿಯಾಗಿ ಸ್ವಲ್ಪ ಹೆಚ್ಚು ಕಡಿಮೆ ಸೇರಬೇಕಾಗಿದೆ. ಅದಕ್ಕೂ ಸಹ ಕಾಲಾವಕಾಶಬೇಕು, ಈ ಕಾರಣಗಳಿಂದ ಸಭೆಯನ್ನು ಮುಂದುವರಿಸುವುದಕ್ಕೆ ಕಷ್ಟವಾಗಿದೆಯೇ ಹೊರತು ಯಾವ ವಿಷಯವನ್ನಾದರೂ ಈ ಸಭೆಗೆ ಮರೆಮಾಚಿ ನಮ್ಮಷ್ಟಕ್ಕೆ ನಾವೇ ಆಟೋಕ್ರಾಟಿಕ್ ಆಗಿ ಹೋಗಬೇಕೆಂಬ ಒಂದು ಭಾವನೆಯಿಂದಲ್ಲ ಎಂದು ಸ್ಪಷ್ಟವಾಗಿ ಹೇಳಬೇಕಾಗಿದೆ. 3ನೆಯ ತಾರೀಖು ಮಧ್ಯಾಹ್ನ ಸಹ ಸಭೆ ನಡೆಯಬೇಕೆಂದು ಹಣಕಾಸಿನ ಸಚಿವರು ನಿನ್ನೆ ಹೇಳಿದ್ದಾರೆ. ಆ ಬಗ್ಗೆ ಗೆಜೆಟ್ ನೋಟಿಫಿಕೇಶನ್ ಸಹ ಹೊರಟಿದೆ. 3ನೆಯ ತಾರೀಖು ಮಧ್ಯಾಹ್ನ ಸಭೆಯಿದೆ. ಈಗಿರುವ ಕಾಲಾವಕಾಶದಲ್ಲೇ ಫೈನಾನ್ಷಿಯಲ್ ಇಂಟಿಗ್ರೇಷನ್ ವಿಷಯ ಚರ್ಚೆ ಮಾಡಬೇಕೆಂದು ಹೇಳಿದರೆ ಮುಖ್ಯ ವಿಷಯಗಳನ್ನು ಗಮನಕ್ಕೆ ತಂದು ಚರ್ಚೆ ಮಾಡುವುದಕ್ಕೆ ಅಭ್ಯಂತರವಿಲ್ಲ. ಚರ್ಚೆ ನಮಗೂ ಬೇಕು, ಈ ವಿಚಾರದಲ್ಲಿ ಒಂದು ಸಂದೇಹ, ಭೀತಿ ಜನರಿಗೆ ಇರುವುದರಿಂದ ಚರ್ಚೆಯಾದರೆ ನಾವು ಮಾಡಿಕೊಂಡಿರುವ ಒಪ್ಪಂದದಿಂದ ಹೆಚ್ಚು ಅನುಕೂಲವಿದೆ ಎಂದು

ಹೇಳಲು ಅವಕಾಶ ಸಿಕ್ಕಂತಾಗುತ್ತದೆ. ಈ ಅವಕಾಶವನ್ನು ಕಲ್ಪಿಸಿಕೊಳ್ಳಬೇಕೆಂದು ಇರುವವೇ ವಿನಃ ಅದನ್ನು ಮುಚ್ಚಿಡಬೇಕೆಂಬ ಅಭಿಪ್ರಾಯ ನಮಗೆ ಖಂಡಿತವಾಗಿಯೂ ಇಲ್ಲ. ಇನ್ನು ಎರಡು ಮೂರು ದಿನಗಳಲ್ಲಿ ಅವಕಾಶವಿದೆಯೇ ಇಲ್ಲವೇ ಎಂದು ಪರಿಶೀಲನೆ ಮಾಡಿ ತೀರ್ಮಾನ ಮಾಡಬಹುದು.

ಶ್ರೀ ಎಲ್.ಸಿದ್ದಪ್ಪ: ಹಿಂದಿನ ವರ್ಷದ ಆಡಳಿತದ ವರದಿಯ ವಿಷಯ ಏನಾಯಿತು ನೀವು ಈ ಬಗ್ಗೆ ಒಂದು ಹೇಳಿಕೆಯನ್ನು ಕೊಡದಿದ್ದರೂ ಈ ಬಗ್ಗೆ ಯಾಕೆ ಇಷ್ಟು ಜಿಗುಟಾಗಿದ್ದೀರಿ? ಈ ಭಾಷಣದ ಮೊದಲ ಮತ್ತು ಎರಡನೆಯ ಭಾಗಗಳು ಸಿದ್ಧವಾಗಿವೆ ಮತ್ತು ಮುದ್ರಿತವಾಗಿವೆ ಎಂದು ಹೇಳಿದಿರಿ.

ಶ್ರೀ **ಕೆ. ಚೆಂಗಲರಾಯರೆಡ್ಡಿ:-** ಇಲ್ಲ ಅದು ಮುದಿತವಾಗಿಲ್ಲ.

ಶ್ರೀ ಎಲ್. ಸಿದ್ದಪ್ಪ: ನೀವು ಅದನ್ನು ಮುದ್ರಿಸಿ ಪ್ರತಿಗಳನ್ನು ಸದಸ್ಯರಿಗೆ ವಿತರಿಸಬಹುದಿತ್ತಲ್ಲಾ ಹಿಂದಿನ ತೀರ್ಮಾನಗಳಿಗೆ ಅವಕಾಶ ತಪ್ಪಿಹೋಯಿತು, ಮುಂದುವರಿಯುತ್ತೇವೆಂಬ ಧೋರಣೆಗೆ ಅವಕಾಶ ಇಲ್ಲದೆ ಹೋಯಿತು. ಮುಂದೆ ಬರತಕ್ಕವರಿಗೆ ಅವಕಾಶ ಕಲ್ಪಿಸಿಕೊಟ್ಟಿಲ್ಲ, ಈ ರೀತಿ ಆಗಿರುವುದರಿಂದ.....

ಶ್ರೀ **ಕೆ. ಚೆಂಗಲರಾಯರೆಡ್ಡಿಯವರು:** ಸದಾ ಕಾಲದಲ್ಲೂ ಅದೇ ಧೋರಣೆ ಹೇಗಿರುತ್ತದೆ? ಹೇಳಿಕೊಟ್ಟವರು ಮೋಸ ಹೋಗುವುದುಂಟು.

ಶ್ರೀ ಎಲ್ ಸಿದ್ದಪ್ಪ: ಪ್ರಾವಿಶನ್ ಮಾಡದೇ ಏಕೆ ಮಾಡುತ್ತೀರೆಂದು ಹೇಳುತ್ತೇನೆ. ಸರ್ಕಾರದವರು ಮಾಡುತ್ತಾರೆಂಬ ಭರವಸೆ ಇದ್ದರೂ ಗೊತ್ತಿರುವ ವಿಚಾರ ಹೇಳುತ್ತಿದ್ದೇನೆ.

ಶ್ರೀ ಎಫ್.ಸಿ. ದೇವರಾಜ ಅರಸ್‌ನವರು: 168 ನಿರ್ಣಯಗಳಲ್ಲಿ 20 ಚರ್ಚೆಯಾಗಿ ಬಾಕಿ 148 ನಿರ್ಣಯಗಳು ನಿಂತು ಹೋಗುತ್ತವೆ ಪ್ರಶ್ನೆಗಳು ಬಹಳವಾಗಿವೆ ಅದರಲ್ಲಿ 30 ಅಥವಾ 40 ಪ್ರಶ್ನೆಗಳು ಮಾತ್ರ ಚರ್ಚೆಯಾಗಿವೆ. ಆದ್ದರಿಂದ ಇನ್ನೂ ಎರಡು ಮೂರು ದಿನಗಳು ಈ ಸಭೆಯ ಕಾಲಾವಧಿಯನ್ನು ಹೆಚ್ಚಿಸಬೇಕೆಂದು ಹೇಳುತ್ತೇನೆ. ನಾಲ್ಕು ಮತ್ತು ಐದನೇ ತಾರೀಖುಗಳಲ್ಲಿ ಸಭೆ ನಡೆಸಿ ಏಳನೇ ತಾರೀಖಿಗೆ ಮುಗಿಸಬಹುದು, ಅಲ್ಲದೆ ಈಗ ಅರಿಕೆಗಳು ಬರುವುದು ತಪ್ಪಿಹೋಗಿದೆ, ಪ್ರತಿ ಅಧಿವೇಶನದಲ್ಲೂ ಎಷ್ಟೋ ಕೆಲಸಗಳು ನಿಂತು ಹೋಗುವುದರಿಂದ ಪ್ರಯೋಜನವೇನು ಅಲ್ಲದೆ ಸಂಸ್ಥಾನಾಮಳೆ ಪ್ರಜೆಗಳಿಗೆ ಡಿ ವ್ಯಾಲ್ಯೂಯೇಶನ್ ವಿಚಾರ ಅತ್ಯಾವಶ್ಯಕವಾಗಿದೆ. ಆ ವಿಚಾರದಲ್ಲಿ ಸರ್ಕಾರದವರು ಒಂದು ಪ್ರಕಟಣೆಯನ್ನು ಹೊರಡಿಸಿ ಜನರ ಮನಸ್ಸಿಗೆ ಸಮಾಧಾನ ಮಾಡಿದ್ದರೆ ಚರ್ಚೆ ಮಾಡುವುದಕ್ಕೆ ಅವಕಾಶವಿರುತ್ತಿತ್ತು, ಅದೂ ಮಾಡಿಲ್ಲ ಕೇಂದ್ರ ಸರ್ಕಾರವಾಗಲೀ, ನೀವಾಗಲೀ ತಿಳಿಯದೇ ಇರುವ ಪ್ರಜೆಗಳಿಗೆ ಪ್ರಕಟಣೆ ಹೊರಡಿಸುವುದು ಧರ್ಮವಲ್ಲವೇ, ಇದನ್ನು ತಮ್ಮ ಗಮನಕ್ಕೆ ತಂದಿದ್ದೇನೆ.

## 13. ಸಾರ್ವತ್ರಿಕ ಚುನಾವಣೆಗಳು ನಡೆಯುವವರೆಗೂಶಾಸನ ಸಭೆಗಳನ್ನು ಮುಂದೂಡಿಸುವ ಬಗ್ಗೆ

## (ಪ್ರಜಾಪ್ರತಿನಿಧಿ ಸಭೆಯ ನಡೆವಳಿಗಳು, 4ನೇ ನವೆಂಬರ್ 1949)

## ಅಲ್ಪಾವಧಿಯ ಪ್ರಶ್ನೋತ್ತರಗಳು

ಶಾಸನ ಸಭೆಗಳನ್ನು ಸಾರ್ವತ್ರಿಕ ಚುನಾವಣೆಗಳು ನಡೆಯುವವರೆವಿಗೂ ಮುಂದುವರಿಸುವ ವಿಚಾರ.

**ಶ್ರೀ ಬಿ. ಹುಚ್ಚೇಗೌಡರು (ತುರುವೇಕೆರೆ ತಾಲ್ಲೂಕು ಮತ್ತು ಶ್ರೀ ಚನ್ನಬೈರೇಗೌಡರು ಹೊಸಕೋಟೆ ತಾಲ್ಲೂಕು).**

ಪ್ರಶ್ನೆ. ಈ ಕೆಳಗೆ ಕೇಳಿರುವ ಸಂಗತಿಗಳನ್ನು ಸರ್ಕಾರದವರು ದಯವಿಟ್ಟು ತಿಳಿಸಬೇಕೆಂದು ಪ್ರಾರ್ಥನೆ:-

ಎ) ಇಂಡಿಯಾ ದೇಶದ ರಾಜ್ಯಾಂಗ ರಚನಾ ಸಭೆಯ ತೀರ್ಮಾನ ಪ್ರಕಾರ ಪ್ರಾಂತ್ಯಗಳಲ್ಲಿಯೂ ಮತ್ತು ಸಂಸ್ಥಾನಗಳಲ್ಲಿಯೂ ಈಗಿರುವ ಶಾಸನ ಸಭೆಗಳನ್ನು ಸಾರ್ವತ್ರಿಕ ಚುನಾವಣೆಗಳು ನಡೆಯುವವರೆವಿಗೂ ಮುಂದುವರಿಸಿಕೊಂಡು ಬರಬೇಕೆಂಬುದು ನಿಜವೇ?

ಬಿ) ಅದು ನಿಜವಾದರೆ ಸಂಸ್ಥಾನದಲ್ಲಿ ಸಾರ್ವತ್ರಿಕ ಚುನಾವಣೆಗಳು ನಡೆಯುವವರೆವಿಗೂ ಪ್ರಜಾ ಪ್ರತಿನಿಧಿ ಸಬೆಯನ್ನು ಮುಂದುವರಿಸಿಕೊಂಡು ಬರಲಾಗುವುದೇ?

**ಶ್ರೀ ಕೆ. ಚೆಂಗಲರಾಯರೆಡ್ಡಿಯವರು (ಪ್ರಧಾನ ಸಚಿವರು):** ಇಂಡಿಯಾ ದೇಶದ ರಾಜ್ಯಾಂಗ ರಚನಾ ಸಭೆಯವರ ಪರ್ಯಾಲೋಚನೆಯಲ್ಲಿರುವ ಇಂಡಿಯಾ ದೇಶದ ರಾಜ್ಯಾಂಗ ರಚನೆಯ ಮಸೂದೆಯಲ್ಲಿ ಇದಕ್ಕೆ ಸಂಬಂಧಪಟ್ಟ ಆರ್ಟಿಕಲ್‌ನ್ನು ಇಲ್ಲಿ ಕೊಡಲಾಗಿದೆ. ಅದು ಯಾವುದೆಂದರೆ-ಮೊದಲನೆಯ ಷೆಡ್ಯುಲಿನ 3ನೆಯ ಭಾಗದಲ್ಲಿ ಸಂಸ್ಥಾನಗಳ ತಾತ್ಕಾಲಿಕ ಶಾಸನ ಸಭೆಗಳಿಗೆ ಸಂಬಂಧಪಟ್ಟ ನಿಯಮಗಳು.

312 ಸಿ. ಮೊದಲನೆಯ ಷಡ್ಯೂಲಿನ 3ನೆಯ ಭಾಗದಲ್ಲಿ ತಾತ್ಕಾಲಿಕವಾಗಿ ನಮೂದಿಸಲ್‌ಪಟ್ಟಿರುವ ಸಂಸ್ಥಾನದ ಶಾಸನಸಭೆ ಅಥವಾ ಸಭೆಗಳು ಈ ರಾಜ್ಯಾಂಗ ರಚನಾ ವ್ಯವಸ್ಥೆಯ ನಿಯಮಗಳ ಮೇರೆಗೆ ಕ್ರಮವಾಗಿ ಏರ್ಪಡಿಸಲ್ಪಟ್ಟು ಮೊಟ್ಟಮೊದಲನೆಯ ಅಧಿವೇಶನಕ್ಕಾಗಿ ಸಭೆ ಸೇರತಕ್ಕುದೆಂದು ಆಹ್ವಾನಿಸಲ್ಪಡುವವರೆಗೂ, ಈ ರಾಜ್ಯಾಂಗ ರಚನಾ ವ್ಯವಸ್ಥೆಯು ಆಚರಣೆಗೆ ಬರುವುದಕ್ಕೆ ತತ್ಪೂರ್ವದಲ್ಲಿ ಆ ಭಾರತೀಯ ಸಂಸ್ಥಾನದಲ್ಲಿ ಶಾಸನ ಸಭೆಯಂತೆ ಕೆಲಸ ನಡೆಯಿಸುತ್ತಿರುವ ಸಂಸ್ಥೆಯಾಗಲಿ ಅಥವಾ ಅಧಿಕಾರವರ್ಗವಾಗಲಿ, ಸದರಿ ಮೊದಲನೆಯ ಷಡ್ಯೂಲಿನ 3ನೆಯ ಭಾಗದಲ್ಲಿ ನಮೂದಾಗಿರುವ ಸದರಿ ಸಂಸ್ಥಾನದ ಶಾಸನ ಸಭೆಗೆ ಅಥವಾ ಸಭೆಗಳಿಗೆ ಈ ರಾಜ್ಯಾಂಗ ರಚನೆಯ ನಿಯಮಗಳ ಮೇರೆಗೆ ವಹಿಸಿಕೊಡಲ್ಪಟ್ಟಿರುವ ಅಧಿಕಾರಗಳನ್ನು ಚಲಾಯಿಸತಕ್ಕದ್ದು ಮತ್ತು ಕರ್ತವ್ಯಗಳನ್ನು ನೆರವೇರಿಸತಕ್ಕದ್ದು.

**ಶ್ರೀ ಬಿ. ಹುಚ್ಚೇಗೌಡರು:** ನೂತನ ರಾಜ್ಯಾಂಗದ ಪ್ರಚಾರ ಚುನಾವಣೆಗಳು ಯಾವಾಗ ನಡೆಯುತ್ತವೆ?

ಶ್ರೀ ಕೆ. ಚೆಂಗಲರಾಯರೆಡ್ಡಿಯವರು: ಅದು ನೂತನ ರಾಜ್ಯಾಂಗದ ಆರ್ಟಿಕಲ್‌ನಲ್ಲೇ ನಮೂದಾಗಿದೆ.

ಶ್ರೀ ಬಿ. ಹುಚ್ಚೇಗೌಡರು: ಎಷ್ಟು ದಿನದಲ್ಲಿ ಆಗುತ್ತದೆ ಎಂದು ಈಗ ನಿರೀಕ್ಷಿಸಿದ್ದೀರಿ?

ಶ್ರೀ ಕೆ. ಚೆಂಗಲರಾಯರೆಡ್ಡಿಯವರು: ಅದು ನಾವು ನಿರೀಕ್ಷೆ ಮಾಡಿ ಹೇಳತಕ್ಕ ವಿಷಯವಲ್ಲ. ನೂತನ ರಾಜ್ಯಾಂಗ ಜಾರಿಗೆ ಬಂದ ಮೇಲೆ ಭಾರತ ಸರ್ಕಾರದವರು ತೀರ್ಮಾನ ಮಾಡಬೇಕಾದ ವಿಷಯ.

ಶ್ರೀ ಬಿ. ಹುಚ್ಚೇಗೌಡರು: ಅವರು ನಿಮಗೆ ಪ್ರೋಗ್ರಾಂ ಕೊಟ್ಟಿಲ್ಲವೇ?

ಶ್ರೀ ಕೆ. ಚೆಂಗಲರಾಯರೆಡ್ಡಿಯವರು: ನಮಗೆ ಸಂಬಂಧಪಟ್ಟ ಹಾಗೆ ಅಡಲ್ಟ್ ಫ್ರಾಂಛೈಸ್ ರೀತ್ಯಾ ಚುನಾವಣೆ ನಡೆಸಲು ಓಟುದಾರರ ಪಟ್ಟಿಯನ್ನು ತಯಾರು ಮಾಡಬೇಕೆಂದು ಸೂಚನೆ ಬಂದಿದೆ. ಅದರ ಪ್ರಕಾರ ಕಾರ್ಯಕ್ರಮ ತೆಗೆದುಕೊಳ್ಳುತ್ತೇವೆ.

ಶ್ರೀ ಬಿ. ಹುಚ್ಚೇಗೌಡರು: ಇಂಥಾ ವಿಷಯದಲ್ಲಿ ಹೀಗೇ ನಡೆಯಬೇಕೆಂದು ತೀರ್ಮಾನಕ್ಕೆ ಬಂದಿಲ್ಲವೆ?

ಶ್ರೀ ಕೆ. ಚೆಂಗಲರಾಯರೆಡ್ಡಿಯವರು: ಭಾರತದ ಪ್ರಧಾನ ಮಂತ್ರಿಗಳು ಇಂಡಿಯನ್ ಕಾನ್‌ಸ್ಟಿಟ್ಯೂಯೆಂಟ್ ಅಸೆಂಬ್ಲಿಯಲ್ಲಿ ಹೇಳಿಕೆ ಕೊಡುತ್ತಾ 1950ನೇ ಇಸವಿಯ ಅಂತ್ಯ ಭಾಗದಲ್ಲಿ ಇಲ್ಲದೇ ಇದ್ದರೆ 1951ನೆಯ ಇಸವಿಯ ಮೊದಲ ಭಾಗದಲ್ಲಿ ಚುನಾವಣೆ ಆಗಬೇಕು ಮತ್ತು ಅದಕ್ಕೆ ತಕ್ಕ ಏರ್ಪಾಡುಗಳನ್ನು ಮಾಡಬೇಕು ಎಂದು ಹೇಳಿರುತ್ತಾರೆ. ಆ ರೀತಿ ಒಂದು ನಿರ್ಣಯ ಆಗಿದೆ ಎಂದು ಹೇಳುತ್ತೇನೆ.

ಶ್ರೀ ಬಿ. ಹುಚ್ಚೇಗೌಡರು: ಆ ರೀತಿ ಖಚಿತವಾಗಿ ಒಂದು ನಿರ್ಣಯ ಮಾಡಿದ್ದಾರೆಂದು ತಿಳಿಯಬಹುದೇ?

ಶ್ರೀ ಕೆ. ಚೆಂಗಲರಾಯರೆಡ್ಡಿಯವರು: ಉತ್ತರ ಹೇಳಿದ್ದೇನೆ.

ಶ್ರೀ ಬಿ. ಹುಚ್ಚೇಗೌಡರು: ಗೊತ್ತಿಲ್ಲ ಎಂದು ಹೇಳಿದಿರಿ.

ಶ್ರೀ ಕೆ. ಚೆಂಗಲರಾಯರೆಡ್ಡಿಯವರು: ನಾನು ಗೊತ್ತಿಲ್ಲವೆಂದು ಹೇಳಲಿಲ್ಲ. ನಿರ್ಣಯ ಆಗಿದೆ ಹೇಳಿಕೆ ಕೊಟ್ಟಿದ್ದಾರೆ. ಅಂತ್ಯದಲ್ಲಿ ಭಾರತ ಸರ್ಕಾರದವರು ತೀರ್ಮಾನ ಮಾಡಬೇಕಾದ ವಿಚಾರ.

ಶ್ರೀ ಬಿ. ಹುಚ್ಚೇಗೌಡರು: ಸಂಸ್ಥಾನದಲ್ಲಿ ಸಾರ್ವತ್ರಿಕ ಚುನಾವಣೆಗಳು ನಡೆಯುವವರೆಗೂ ಪ್ರಜಾಪ್ರತಿನಿಧಿ ಸಭೆಯನ್ನು ಮುಂದುವರೆಸಿಕೊಂಡು ಬರಲಾಗುವುದೇ ಎಂದು ಕೇಳಿರುವುದಕ್ಕೆ ಉತ್ತರ ಏನು?

ಶ್ರೀ ಕೆ. ಚೆಂಗಲರಾಯರೆಡ್ಡಿಯವರು: ಉತ್ತರ ಕೊಟ್ಟಿದೆ (ಎ) ಮತ್ತು (ಬಿ) ಎರಡಕ್ಕೂ ಅದೇ ಉತ್ತರ.

ಶ್ರೀ ಬಿ. ಹುಚ್ಚೇಗೌಡರು: ಕಾನೂನು ಅಂಶ ಮಾತ್ರ ಕೊಟ್ಟಿದ್ದೀರಿ.

ಅಧ್ಯಕ್ಷರು: ಅದರಲ್ಲೇ ಸ್ಪಷ್ಟವಾಗುತ್ತದೆ.

ಶ್ರೀ ಬಿ. ಹುಚ್ಚೇಗೌಡರು: ನನ್ನ ಪ್ರಶ್ನೆಗೆ "ಹೌದು" ಅಥವಾ "ಇಲ್ಲ" ಎಂಬುದರಲ್ಲಿ ಯಾವುದಾದರೂ ಒಂದನ್ನು ಹೇಳಿ.

ಅಧ್ಯಕ್ಷರು: ಉತ್ತರದಲ್ಲಿದೆ ನೋಡಿ.

ಶ್ರೀ ಬಿ. ಹುಚ್ಚೇಗೌಡರು:-ಸೆಕ್ಷನ್ 312 (ಸಿ) ನಲ್ಲಿ ಯಾವ ಯಾವ ರೀತಿ ಹೇಳಿದ್ದಾರೋ ಆ ರೀತಿ ನಡೆಯಲಾಗುವುದೇ?

ಶ್ರೀ ಕೆ. ಚೆಂಗಲರಾಯರೆಡ್ಡಿಯವರು: ಇಂಡಿಯ ರಾಜ್ಯಾಂಗ ರಚನಾ ಸಭೆಯಲ್ಲಿ ಇಂಡಿಯನ್ ಕಾನ್‌ಸ್ಟಿಟ್ಯೂಷನ್ ತಯಾರು ಮಾಡುವಾಗ ಆ ಸೆಕ್ಷನ್ ರೀಡಿಂಗ್ ಆಗಿ ಪಾಸ್ ಆಗಿದೆ. ಮೂರನೇ ರೀಡಿಂಗ್ ಆಗಿ ಪಾಸ್ ಆಗಬೇಕು. ಅದು ನವೆಂಬರ್ 14ನೇ ತಾರೀಖು ಆಗುತ್ತದೆ. ಆದಮೇಲೆ ಜನವರಿ 26 1950ರಲ್ಲಿ ಜಾರಿಗೆ ಬರಬೇಕೆಂದು ಅಭಿಪ್ರಾಯವಿದೆ. ಅದು ಮೈಸೂರು ಸಂಸ್ಥಾನಕ್ಕೆ ಅನ್ವಯಿಸುವ ಪಕ್ಷದಲ್ಲಿ ಅದಕ್ಕನುಗುಣವಾಗಿ ನಮ್ಮ ಶಾಸನ ಸಭೆ ಯಾವುದು ಇರಬೇಕೆಂಬುದು ತೀರ್ಮಾನವಾಗುತ್ತದೆ.

ಶ್ರಿ ಬಿ. ಹುಚ್ಚೇಗೌಡರು: ಮೂರನೆ ರೀಡಿಂಗ್ ಆದ ಮೇಲೆ ತೀರ್ಮಾನಕ್ಕೆ ಬರಲಾಗುತ್ತದೆಯೇ?

ಶ್ರೀ ಕೆ. ಚೆಂಗಲರಾಯರೆಡ್ಡಿಯವರು: ಮೂರನೇ ರೀಡಿಂಗ್ ಆಗಬೇಕು. ಕಾನ್‌ಸ್ಟಿಟ್ಯೂಷನ್ ಜಾರಿಗೆ ಬರಬೇಕು.

ಶ್ರೀ ಬಿ. ಹುಚ್ಚೇಗೌಡರು: 3ನೇ ರೀಡಿಂಗ್‌ನಲ್ಲಿ ಫಂಡಮೆಂಟಲ್ ಛೇಂಜಸ್ ಸಾಧ್ಯವೇ?

ಶ್ರೀ ಕೆ. ಚೆಂಗಲರಾಯರೆಡ್ಡಿಯವರು: ಸಾಧಾರಣವಾಗಿ ಆಗುವುದಿಲ್ಲ.

ಶ್ರೀ ಬಿ. ಹುಚ್ಚೇಗೌಡರು: ಹಾಗಿದ್ದರೆ ಈಗಿರುವ ಶಾಸನ ಸಭೆಗಳನ್ನೇ ಮುಂದಿನ ಚುನಾವಣೆಯಾಗುವವರೆಗೂ ಮುಂದುವರಿಸಬೇಕಾಗಿರುತ್ತದೆಯಲ್ಲವೇ?

ಶ್ರೀ ಕೆ. ಚೆಂಗಲರಾಯರೆಡ್ಡಿಯವರು: ಅದು ಸ್ಪಷ್ಟವಾಗಿಯೇ ಇದೆ.

ಶ್ರೀ ಬಿ. ಹುಚ್ಚೇಗೌಡರು: ಅದು ಸರಿ ಎಂದು ಭಾವಿಸಬಹುದೇ?

ಶ್ರೀ ಕೆ. ಚೆಂಗಲರಾಯರೆಡ್ಡಿಯವರು: ಭಾವಿಸಬಹುದು. ಈಗಿರುವ ಶಾಸನ ಸಭೆಗಳೇ ಮುಂದುವರೆಯುತ್ತವೆ ಎಂದು ಅದರ ಅರ್ಥ.

ಶ್ರೀ ಬಿ. ಎನ್. ಗುಪ್ತರವರು (ಬೆಂಗಳೂರು ನಗರ ಮುನಿಸಿಪಾಲಿಟಿ): ಇದರಲ್ಲಿ (ಎ) ಮತ್ತು (ಬಿ) ಎರಡಕ್ಕೂ ಒಂದೇ ಉತ್ತರ ಎಂದು ಹೇಳಿದಿರಿ. ಬರೀ ಸೆಕ್ಷನ್ ತಾನೆ ತಾವು ಕೊಟ್ಟಿರುವುದು.

ಶ್ರೀ ಕೆ. ಚಂಗಲರಾಯರೆಡ್ಡಿಯವರು: ಹೌದು ಎರಡಕ್ಕೂ ಅದು ಅನ್ವಯಿಸುತ್ತದೆ.

ಶ್ರೀ ಬಿ. ಎನ್. ಗುಪ್ತರವರು: ಈಗ ಕಾನ್‌ಸ್ಟಿಟ್ಯೂಷನ್ ಆಕ್ಟ್ ಪಾಸ್ ಆಗುವವರೆಗೂ ಯಾವುದು ಶಾಸನ ಸಭೆಯಾಗಿರಬೇಕು ಎಂಬುದು ತೀರ್ಮಾನವಾಗಿದೆಯೇ?

ಶ್ರೀ ಕೆ. ಚೆಂಗಲರಾಯರೆಡ್ಡಿಯವರು: ತಮ್ಮ ಪ್ರಶ್ನೆ ಸರಿಯಾಗಿ ಅರ್ಥವಾಗಲಿಲ್ಲ.

ಶ್ರೀ ಬಿ.ಎನ್. **ಗುಪ್ತರವರು:** ಹೊಸ ಕಾನ್‌ಸ್ಟಿಟ್ಯೂಷನ್ ಮುಂದಿನ ವರ್ಷ ಜನವರಿಯಲ್ಲಿ ಜಾರಿಗೆ ಬರುತ್ತದೆ. ಅಷ್ಟರವರೆಗೆ ಯಾವುದು ಶಾಸನಸಭೆಯಾಗಿರಬೇಕೆಂಬುದು ತೀರ್ಮಾನವಾಗಿದೆಯೇ?

ಶ್ರೀ **ಕೆ. ಚೆಂಗಲರಾಯರೆಡ್ಡಿಯವರು:** ಮೈಸೂರು ಗೌರ್ನಮೆಂಟ್ ಆ್ಯಕ್ಟ್ ಪ್ರಕಾರ ಸರ್ಕಾರದವರು ಒಂದು ಆಜ್ಞೆಯನ್ನು ಹೊರಡಿಸಿ ಅಸೆಂಬ್ಲಿ ಮತ್ತು ಕೌನ್ಸಿಲ್ 1950 ನೇ ಇಸವಿ ಮಾರ್ಚ್‌ವರೆಗೂ ಇರಬೇಕೆಂದು ತೀರ್ಮಾನವಾಗಿದೆ, ಆದಕ್ಕೆ ಒಂದು ಸರ್ಕಾರಿ ಆಜ್ಞೆ ಆಗಲೇ ಆಗಿದೆ.

ಶ್ರೀ ಬಿ. ಎನ್. **ಗುಪ್ತರವರು:** 1950ನೇ ಮಾರ್ಚ್ ವರೆಗೂ ಇರಬೇಕೆಂದು ಇದೆ, ಅದರೊಳಗೆ ರದ್ದು ಮಾಡಲು ಅಧಿಕಾರವಿದೆಯೇ?

ಶ್ರೀ **ಕೆ. ಚೆಂಗಲರಾಯರೆಡ್ಡಿಯವರು:** ಅಧಿಕಾರ ಇದೆ ಅಥವಾ ಇಲ್ಲ ಎಂಬುದು ಮುಖ್ಯ ಸದಸ್ಯರಿಗೆ ಗೊತ್ತಿದೆ.

ಶ್ರೀ ಬಿ. ಎನ್. **ಗುಪ್ತರವರು:** ನನಗೆ ಗೊತ್ತಿಲ್ಲ. ಈ ಸೆಕ್ಷನ್ ಡ್ರಾಫ್ಟ್‌ನಲ್ಲಿದೆ ಎಂದು ಹೇಳಿದಿರಿ ಹಾಗಿದ್ದರೆ ಡ್ರಾಫ್ಟ್‌ನಲ್ಲಿರುವುದನ್ನು ಹೇಗೆ ಪರಿಶೀಲನೆ ಮಾಡಿದ್ದೀರಿ, ಡ್ರಾಫ್ಟ್ ಪೂರ್ತಿಯಾಗಿ ಕಾನ್‌ಸ್ಟಿಟ್ಯೂಷನ್ ಆದ ಮೇಲೆ ತೀರ್ಮಾನ ಮಾಡೋಣವೆಂದು ಸರ್ಕಾರದ ಅಭಿಪ್ರಾಯವೇ ಅಥವಾ ಅದಕ್ಕೆ ಪೂರ್ವಭಾವಿಯಾಗಿಯೇ ಮಾಡೋಣವೆಂದು ಅಭಿಪ್ರಾಯವೇ?

ಶ್ರೀ **ಕೆ. ಚೆಂಗಲರಾಯರೆಡ್ಡಿಯವರು:** ಸರ್ಕಾರದವರು ಅದನ್ನು ಪರಿಶೀಲನೆ ಮಾಡಬೇಕಾದ ಪ್ರಮೇಯವೇ ಇಲ್ಲ.

ಶ್ರೀ ಬಿ. ಎನ್. ಗುಪ್ತ: ಹಾಗಾದರೆ ಯಾವಾಗ ಪರಿಶೀಲನೆ ಮಾಡುತ್ತೀರಿ?

ಶ್ರೀ **ಕೆ. ಚೆಂಗಲರಾಯರೆಡ್ಡಿಯವರು:** ಪರಿಶೀಲನೆ ಮಾಡಬೇಕಾದ ಪ್ರಮೇಯವೇ ಇಲ್ಲ. ಇಂಡಿಯನ್ ಕಾನ್‌ಸ್ಟಿಟ್ಯೂಷನ್ ಆ್ಯಕ್ಟ್ ಮೈಸೂರಿಗೆ ಅನ್ವಯಿಸುವ ವಿಚಾರದಲ್ಲಿ ಅದು ಮೈಸೂರು ರಾಜ್ಯಾಂಗ ರಚನಾ ಸಭೆಯ ಮತ್ತು ಶ್ರೀಮನ್ ಮಹಾರಾಜರ ಅಭಿಪ್ರಾಯದ ಮೇಲೆ ನಿಂತಿದೆ.

ಶ್ರೀ **ಹೆಚ್. ಲಿಂಗಪ್ಪನವರು (ಹೊನ್ನವಳ್ಳಿ ತಾಲ್ಲೂಕು):** ತಾವು ಕೊಟ್ಟಿರತಕ್ಕ ಈ ಆರ್ಟಿಕಲ್ ಸೆಕೆಂಡ್ ರೀಡಿಂಗ್ ಆದ ನಂತರ ಯಾವ ರೀತಿ ಇದೆಯೋ ಆ ರೀತಿ ಇರತಕ್ಕದ್ದೇ ಅಥವಾ ಕರಡಿನಲ್ಲಿ ಇರುವಂಥದ್ದೇ.

ಶ್ರೀ **ಕೆ. ಚೆಂಗಲರಾಯರೆಡ್ಡಿಯವರು:** ಇದು ಸೆಕೆಂಡ್ ರೀಡಿಂಗ್ ಆಗಿ ಪಾಸ್ ಆಗಿರತಕ್ಕದ್ದು.

ಶ್ರೀ **ಎಚ್ ಲಿಂಗಪ್ಪನವರು:-** ಅನ್‌ಲೆಸ್ ದಿ ಪ್ರೆಸಿಡೆಂಟ್ ಅದರ್‌ವೈಸ್ ಡೈರಕ್ಟ್ಸ್ ಎಂಬುದಾಗಿ ಕಂಡಿಷನ್ ಇದೆ ಅಲ್ಲವೇ?

ಶ್ರೀ **ಕೆ. ಚೆಂಗಲರಾಯರೆಡ್ಡಿಯವರು:**ಇಲ್ಲ.

ಶ್ರೀ **ಮುಲ್ಕಾ ಗೋವಿಂದರೆಡ್ಡಿಯವರು (ಚಿತ್ರದುರ್ಗ ತಾಲ್ಲೂಕು):-** ಇಂಡಿಯನ್ ಕಾನ್‌ಸ್ಟಿಟ್ಯೂಷನ್ ಜಾರಿಗೆ ಬಂದ ಮೇಲೆ ಮೈಸೂರು ಕಾನ್‌ಸ್ಟಿಟ್ಯೂಷನ್ ಆ್ಯಕ್ಟ್‌ನಲ್ ಅಂಡ್ ವಾಯ್ಡ್ ಆಗುತ್ತದೆ ಅಲ್ಲವೇ?

ಶ್ರೀ ಕೆ. ಚೆಂಗಲರಾಯರೆಡ್ಡಿಯವರು: ಇಂಡಿಯನ್ ಕಾನ್‌ಸ್ಟಿಟ್ಯೂಷನ್ ಆಕ್ಟು ಇಂಡಿಯಾ ದೇಶಕ್ಕೆ ಸಂಬಂದಪಟ್ಟ ಎಲ್ಲಾ ಯೂನಿಟ್‌ಗೂ ಅನ್ವಯಿಸಬೇಕೆಂದು ಹೇಳಿದ ಮೇಲೆ ಕಾನ್‌ಸ್ಟಿಟ್ಯೂಷನ್ ಆಕ್ಟಿಗೆ ಆವಶ್ಯಕತೆಯೇ ಇಲ್ಲವೆಂಬುದು ವೇದ್ಯವಾಗುತ್ತದೆ.

ಶ್ರೀ ಮುಲ್ಕಾ ಗೋವಿಂದ ರೆಡ್ಡಿಯವರು: ಮೈಸೂರು ಸರ್ಕಾರದವರು ಈ ವಿಷಯದಲ್ಲಿ ಯಾವ ತೀರ್ಮಾನ ಮಾಡುವುದಕ್ಕೂ ಅಧಿಕಾರವಿಲ್ಲ ಎಂಬುದನ್ನು ಒಪ್ಪಿಕೊಳ್ಳುತ್ತೀರಾ?

ಶ್ರೀ ಕೆ. ಚೆಂಗಲರಾಯರೆಡ್ಡಿಯವರು: ಒಪ್ಪುವುದಿಲ್ಲ.

ಶ್ರೀ ಚೆನ್ನಬೈರೇಗೌಡರು (ಹೊಸಕೋಟೆ ತಾಲ್ಲೂಕು): Fundamental changes ಇಲ್ಲ ಎಂದು ಹೇಳಿದಿರಿ. ಹಾಗಾದರೆ ಈಗಿರತಕ್ಕ ಶಾಸನ ಸಭೆಗಳನ್ನೇ ಮುಂದುವರಿಸುತ್ತೀರಿ ಎಂದು ಭಾವಿಸಬಹುದೇ?

ಶ್ರೀ ಕೆ. ಚೆಂಗಲರಾಯರೆಡ್ಡಿಯವರು: Fundamental changes ಆಗುತ್ತದೆಯೇ ಇಲ್ಲವೇ ಎಂಬುದನ್ನು ಈಗ ಹೇಗೆ ಹೇಳಲಿ? ಅದು ರಾಜ್ಯಾಂಗ ರಚನಾ ಸಭೆಯಲ್ಲಿ ಮುಂದೆ ಆಗತಕ್ಕ ವಿಷಯ.

ಶ್ರೀ ಎಂ ಲಿಂಗೇಗೌಡರು (ಕನಕಾನ ಹಳ್ಳಿ ತಾಲ್ಲೂಕು.): ಈಗ ಇರತಕ್ಕ ರಾಜ್ಯಾಂಗ ರಚನಾ ಸಭೆಯನ್ನೇ ಶಾಸನ ಸಭೆಯನ್ನಾಗಿ ಬದಲಾಯಿಸಲಾಗುತ್ತದೆಂದು ವರ್ತಮಾನ ಇದೆ. ಅದು ನಿಜವೇ?

**Mr President:** That does not arise.

ಶ್ರೀ ಎಂ. ಲಿಂಗೇಗೌಡರು: ಇದು ಸರ್ಕಾರದವರ ಪರ್ಯಾಲೋಚನೆಯಲ್ಲಿದೆಯೇ?

**Sri k. Chengalaraya reddy:** That question does not arise. The Hon`ble President has given a ruling How can I answer the question?

ಶ್ರೀ ಎಂ. ಶಂಕರಲಿಂಗೇಗೌಡರು (ನಾಗಮಂಗಲ ತಾಲ್ಲೂಕು): ಮುಂದೆ ಆಗುವುದನ್ನು ಈಗ ಹೇಗೆ ಹೇಳಲಿ ಎಂದು ಹೇಳತಕ್ಕವರು ಎರಡನೆ ರೀಡಿಂಗ್ ಆಗಿರತಕ್ಕದ್ದನ್ನು ಹೇಗೆ ತಿಳಿಸಿದಿರಿ?

ಶ್ರೀ ಕೆ. ಚೆಂಗಲರಾಯರೆಡ್ಡಿಯವರು: ಪ್ರಶ್ನೆ ಕೇಳಿರುವುದು ಅದಕ್ಕೆ ಸಂಬಂಧಪಟ್ಟಿದೆ. ಆದ್ದರಿಂದ ಹೇಳಬೇಕಾಯಿತು. (a) ಪ್ರಶ್ನೆಯಲ್ಲಿ " Whether it is a fact that according to the decision of the Indian Constituent Assembly the existing Legislatures in the Provinces and states should continue to function till fresh general election".ಎಂದು ಕೇಳಿದ್ದಾರೆ. ಅದಕ್ಕೆ ಇಂಡಿಯನ್ ಕಾನ್‌ಸ್ಟಿಟ್ಯೂಯಂಟ್ ಅಸೆಂಬ್ಲಿಯಲ್ಲಿ ಏನು ಮಾಡಿದ್ದಾರೆ ಎಂಬುದನ್ನು ಹೇಳಿದ್ದೇನೆ.

ಶ್ರೀ ಎಂ. ಶಂಕರಲಿಂಗೇಗೌಡರು: ಈಗ ಇರತಕ್ಕ ಶಾಸನ ಸಭೆಗಳನ್ನು ಈಗಲೇ disslove,ಮಾಡಿ ಚುನಾವಣೆ ನಡೆಸಲು ಏರ್ಪಾಡು ಮಾಡುತ್ತೀರಾ?

ಶ್ರೀ ಕೆ. ಚೆಂಗಲರಾಯರೆಡ್ಡಿಯವರು:– ಆ ರೀತಿ ಮಾಡಬೇಕೆಂದು ತಮ್ಮ ಅಭಿಪ್ರಾಯ ಇರಬಹುದು.

ಅಧ್ಯಕ್ಷರು: ಪ್ರಶ್ನೋತ್ತರಗಳ ಕಾಲ ಮುಗಿಯಿತು.

## 14. ಆರ್ಥಿಕ ವಿಲೀನೀಕರಣ ಕುರಿತು
## ಪ್ರಜಾಪ್ರತಿನಿಧಿ ಸಭೆಯ ನಡವಳಿಗಳು
## 4ನೇ ನವೆಂಬರ್ 1949

ಶ್ರೀ ಕೆ. ಚೆಂಗಲರಾಯರೆಡ್ಡಿಯವರು (ಪ್ರಧಾನ ಸಚಿವರು): ಮಾನ್ಯ ಅಧ್ಯಕ್ಷರೇ, ಕೇಂದ್ರದೊಡನೆ ಮಾಡಿಕೊಂಡಿರತಕ್ಕ ಒಂದು ಒಪ್ಪಂದದ ವಿಚಾರದಲ್ಲಿ ಚರ್ಚೆಯಾಗುವ ಈ ಸಂಬಂಧದಲ್ಲಿ ನಾನು ಭಾಗವಹಿಸಬೇಕಾದ ಪ್ರಮೇಯ ಬರುತ್ತದೆಯೆಂದು ತಿಳಿದುಕೊಂಡಿರಲಿಲ್ಲ. ಏಕೆಂದರೆ ಈ ಫೈನಾನ್‌ಷಿಯಲ್ ಇಂಟೆಗ್ರೇಷನ್ ಒಪ್ಪಂದ ಏನು ಈಗ ತಮ್ಮ ಮುಂದೆ ಇದೆಯೋ ಅದರ ಗುಣಾವಗುಣಗಳ ಮೇಲೆ ಚರ್ಚೆಯಾಗುತ್ತದೆ ಎಂದು ಭಾವಿಸಿದ್ದೆ. ಆದರೆ ನೀತಿಗೆ ಸಂಬಂಧಪಟ್ಟ ಒಂದು ಮುಖ್ಯ ಅಂಶವನ್ನು ಸಭೆಯ ಮುಂದೆ ಕೆಲವು ಸದಸ್ಯರು ಪ್ರಸ್ತಾಪ ಮಾಡಿದರು. ಮೈಸೂರಿನ ಸ್ಥಾನಮಾನಗಳಿಗೆ ಧಕ್ಕೆ ಬರುವ ಹಾಗೆ ನಡೆದುಕೊಂಡಿದ್ದೇವೆ; ಮೈಸೂರಿನ ಸೌಲಭ್ಯ ಕಡಿಮೆಯಾಗಿದೆ; ಮೈಸೂರಿನ ಅಭ್ಯುದಯವನ್ನು ಗಮನದಲ್ಲಿಟ್ಟುಕೊಂಡು ಕೆಲಸಮಾಡದೆ ಇರುವುದರಿಂದ ಅದು ಬಲಹೀನವಾಗಿದೆ ಎಂಬ ಅಪಾದನೆಯನ್ನು ಒಂದಲ್ಲ ಒಂದು ರೀತಿಯಲ್ಲಿ ಈ ಸಭೆಯಲ್ಲಿ ಸದಸ್ಯರು ಮಾಡಿದ್ದಾರೆ. ಆದ್ದರಿಂದ ಮುಖ್ಯವಾದ ನೀತಿಗೆ ಸಂಬಂಧಪಟ್ಟ ಹಾಗೆ ಕೆಲವು ಸ್ಪಷ್ಟವಾದ ವಿಷಯಗಳನ್ನು ತಮ್ಮ ಮುಂದಿಡಬೇಕೆಂದು ಎದ್ದು ನಿಂತಿದ್ದೇವೆ. ನಾವು ನಮ್ಮ ಭಾರತದ ರಾಜಕೀಯ ಚರಿತ್ರೆಯನ್ನು ಮರೆಯಬಾರದು ಹಿಂದೆ ಶತಮಾನಗಳಿಂದ ಯಾವ ಸ್ಥಿತಿಯಲ್ಲಿದ್ದೆವೆಂಬುದನ್ನು ಮನಸ್ಸಿನಲ್ಲಿಡಬೇಕು. ಸುಮಾರು ಎರಡು ಶತಮಾನಗಳು ಪರಕೀಯರ ಆಳ್ವಿಕೆಗೆ ಒಳಪಟ್ಟು ಯಾವ ರೀತಿ ಅವಸ್ಥೆ ಪಡಬೇಕಾಗಿತ್ತೆಂಬುದನ್ನು ಮರೆಯಬಾರದು. ಹಿಂದಿನ ಚರಿತ್ರೆಯ ಅನೇಕ ಅಂಶಗಳನ್ನು ನಾನು ಈಗ ಸಭೆಯ ಮುಂದೆ ವಿವರಿಸುವುದಕ್ಕೆ ಪ್ರಯತ್ನಪಡುವುದಿಲ್ಲ. ಅಂತೂ 1947ರಲ್ಲಿ ಮಹಾತ್ಮಗಾಂಧಿಯವರ ಉತ್ತೇಜನದಿಂದಲೂ ಮತ್ತು ಅವರು ತೋರಿಸಿದ ಅಸಾಧಾರಣ ಮಾರ್ಗದಿಂದಲೂ ನಾವು ಭಾರತದ ಸ್ವಾತಂತ್ರ್ಯವನ್ನು ಪಡೆದೆವು. ಪಡೆದನಂತರ ನಮ್ಮೆಲ್ಲರ ದೃಷ್ಟಿಕೋಣ, ಪ್ರಯತ್ನ ಏನಿರಬೇಕು ಎಂದು ಹೇಳಿದರೆ ಈಗ ಆ ಒಂದು ಸ್ವಾತಂತ್ರ್ಯವನ್ನು ನಾವು ಕಾಪಾಡಿಕೊಂಡು, ಭಾರತ ದೇಶದ ಐಕ್ಯತೆಯನ್ನು ಕಾಪಾಡಿಕೊಂಡು ಅದರ ಭದ್ರತೆಯ ಕಡೆ ಗಮನ ಕೊಟ್ಟು ನಮ್ಮ ನಮ್ಮ ಪ್ರತ್ಯೇಕ ಸೌಲಭ್ಯಗಳು, ಸ್ಥಾನಮಾನಗಳು ಇದರ ಕಡೆ ಗಮನ ಕೊಡಬೇಕು. ಇಡೀ ಭಾರತದ ದೃಷ್ಟಿಯಿಂದ ನಾವು ಪ್ರತಿಯೊಂದು ಸಮಸ್ಯೆಯನ್ನು ಕೂಡ ನೋಡಬೇಕಾದ್ದೂ ಮುಖ್ಯವೇ ಎಂದು ಅರಿಕೆ ಮಾಡಿಕೊಳ್ಳಬೇಕಾಗಿದೆ. ಹಿಂದೆ ನಮ್ಮ ದೇಶದಲ್ಲಿ ಹೀನ ಸ್ಥಿತಿ, ಒಂದು ಗುಲಾಮಗಿರಿ ಯಾವುದಿತ್ತೋ ಅದನ್ನು ಮುಂದುವರೆಸಿಕೊಂಡು ಹೋಗುವುದಕ್ಕೆ ಒಂದು ಅನುಕೂಲವಾದ ಸನ್ನಿವೇಶವನ್ನು ಭಾರತೀಯರಿಗೆ ಆಂಗ್ಲರು ಹೋಗುವಾಗ ಉಂಟುಮಾಡಿದ್ದರು. ಸುಮಾರು 565 ಸಂಸ್ಥಾನಗಳವರು ಸ್ವತಂತ್ರರಾಗಿರಬಹುದು, ಯಾವ ಧಕ್ಕೆಯೂ ಇಲ್ಲ, ಬ್ರಿಟಿಷರ ಸಾರ್ವಭೌಮತ್ವ ಮಾಯವಾಯಿತು. ಅವರ ಮೇಲೆ ಯಾವ ಅಧಿಕಾರವೂ ಇಲ್ಲ ಎಂದು ಹೇಳಿ ಈ ದೇಶವನ್ನು ಬಿಟ್ಟರು. ಬಿಟ್ಟು ಹೋಗತಕ್ಕ ಕಾಲದಲ್ಲಿ ಇನ್ನೊಂದು ವಿಶೇಷ ಘಟನೆ ಜರುಗಿತು. ಭಾರತದೇಶ ಇಬ್ಭಾಗವಾಯಿತು. ಇಂಡಿಯಾ ಮತ್ತು ಪಾಕೀಸ್ಥಾನ ಎಂದು ಎರಡು ಭಾಗವಾಯಿತು. ಅದರ ವಿಚಾರ ಈಗ ಬೇಡ. ಅದು ಹೇಗಾದರೂ

ಇರಲಿ. ಈ 565 ಸಂಸ್ಥಾನಗಳವರು ಅವರವರಿಗೆ ತೋರಿದಂತೆ ಅವರವರ ಧ್ವಜಗಳನ್ನು ಹಾರಿಸಿ ನಾವು ಸ್ವತಂತ್ರರು ಎಂದು ಹೇಳಲು ಪ್ರಯತ್ನ ಮಾಡಿದರೆ ಹೊಸದಾಗಿ ಸ್ವಾತಂತ್ರ್ಯವನ್ನು ಸಂಪಾದಿಸಿದ ಭಾರತಕ್ಕೆ ಎಷ್ಟು ಅಪಘಾತ ಸಂಭವಿಸಿ ಧಕ್ಕೆ ಉಂಟಾಗುತ್ತದೆ ಎಂಬುದನ್ನು ಮತ್ತೆ ಅರಿಕೆ ಮಾಡಿಕೊಳ್ಳಬೇಕಾದ ಪ್ರಮೇಯವಿಲ್ಲವೆಂದು ನಂಬುತ್ತೇನೆ. ಆದ್ದರಿಂದ ಸ್ವಾತಂತ್ರ್ಯ ಬಂದ ಕೂಡಲೇ ಎಲ್ಲರ ಗಮನವೂ ಸಹ ಭಾರತ ಐಕ್ಯತೆಯನ್ನು ಸಾಧಿಸುವ ಕಡೆಗೆ ತಿರುಗಿ ಎಲ್ಲರೂ ಅದಕ್ಕೆ ಪ್ರಯತ್ನ ಮಾಡಬೇಕಾದ್ದು ಅಗತ್ಯವಾಯಿತು. ಸರ್ದಾರ್ ಪಟೇಲರು ಸಂಸ್ಥಾನಗಳ ದೃಷ್ಟಿಯಿಂದ ಯಾವ ಒಂದು ಮಹಾತ್ವಕಾರ್ಯವನ್ನು ಸಾಧಿಸಿದ್ದಾರೆ ಎಂಬುದನ್ನು ಈ ದಿನ ದೇಶಕ್ಕೆ ದೇಶವೇ ಸಾರುತ್ತಿದೆ. ಇವೆಲ್ಲವನ್ನೂ ಸಹ ಒಂದು ರೂಪಕ್ಕೆ ತಂದು ಭಾರತದ ಐಕ್ಯತೆ ಕಾಪಾಡುವುದಕ್ಕಾಗಿ ಅವರು ಮಾಡಿರುವ ಸಾಹಸವೂ ಚರಿತ್ರಾರ್ಹವಾದುದು. ಈ ಒಂದು ಕೆಲಸದಲ್ಲಿ ಸಹಕರಿಸಿ ಈ ಒಂದು ಕೆಲಸದಲ್ಲಿ ಎಲ್ಲಾ ಸಾಧಕ ಭಾದಕಗಳನ್ನು ಯೋಚನೆ ಮಾಡಿ, ಈ ಒಂದು ಮಹಾತ್ಕಾರ್ಯವನ್ನು ಸಾಧಿಸುವುದಕ್ಕೆ ನಾವು ಅನುಸರಿಸಿದ ನೀತಿ ಈ ದಿವಸ ಪ್ರೋತ್ಸಾಹ ಮಾಡಲ್ಪಡುತ್ತಿದೆಯೇ ಎಂದು ಕೇಳಬೇಕಾಗಿದೆ. ಈ ದಿವಸ ಮೈಸೂರು ಸಂಸ್ಥಾನ ಸುಮಾರು ಎರಡು ವರ್ಷಗಳಿಂದ ಅನುಸರಿಸಿರುವ ನೀತಿಯ ಫಲವಾಗಿ, ಅವರು ಹೋಗುತ್ತಿದ್ದ ದಾರಿಯ ಫಲವಾಗಿ ಈ ದಿನ ಭಾರತ ರಾಜ್ಯಾಂಗದಲ್ಲಿ ಮೈಸೂರೇ ಒಂದು ಪ್ರತ್ಯೇಕ ಯೂನಿಟ್ ಎಂದು ಅಡಕವಾಗುವುದಕ್ಕೆ ಸಾಧಕವಾಗಿದೆಯೆಂದು ಧೈರ್ಯದಿಂದ ಹೇಳುತ್ತೇನೆ. ಮಿಕ್ಕ ಸಂಸ್ಥಾನಗಳವರು ಅನುಸರಿಸಿದ ನೀತಿಯೇನು, ಅದರಿಂದ ಈ ದಿವಸ ಏನು ಫಲ ನಮ್ಮ ಮುಂದೆ ಕಾದಿದೆ ಎಂಬುದನ್ನು ಹೆಚ್ಚಾಗಿ ಹೇಳಬೇಕಾಗಿಲ್ಲ. ಸಣ್ಣ ಸಂಸ್ಥಾನಗಳು ಬೇರೆಯಾಗಿರಬೇಕೆಂದು ಪ್ರಯತ್ನಪಟ್ಟವು. ಒಂದೇ ಒಂದು ಉದಾಹರಣೆ ಹೇಳುತ್ತೇನೆ. ಹೈದರಬಾದು ಪ್ರತ್ಯೇಕವಾಗಿ ಉಳಿಯಬೇಕೆಂದು ಮನೋಭಾವವನ್ನಿಟ್ಟುಕೊಂಡಿದ್ದಾಗ ಅದನ್ನು ಅದುಮಬೇಕೆಂದು ಮಾಡಿದ ಪ್ರಯತ್ನ ನಮ್ಮ ಇಡೀ ಭಾರತಕ್ಕೆ ಮತ್ತು ಭಾರತ ಸರ್ಕಾರಕ್ಕೆ ಎಷ್ಟು ಕಳವಳವನ್ನುಂಟು ಮಾಡಿತೆಂಬುದನ್ನು ಯಾರೂ ಮರೆಯಬಾರದು. ಈ ವಿಚಾರ ತಮಗೆಲ್ಲರಿಗೂ ಜ್ಞಾಪಕದಲ್ಲಿರಬಹುದು. ಆರು ತಿಂಗಳು ಅಥವಾ ಒಂದು ವರ್ಷ ಹೈದರಬಾದ್ ಸಂಸ್ಥಾನ ಅನುಸರಿಸಿದ ಒಂದು ನೀತಿ ಒಂದು ಪ್ರಯತ್ನ ಭಾರತಕ್ಕೇ ಅಲ್ಲ ಮೈಸೂರು ಸಂಸ್ಥಾನಕ್ಕೂ ಸರ್ವಸಾಮಾನ್ಯವಾಗಿ ಎಷ್ಟೋ ಕಳವಳವನ್ನುಂಟುಮಾಡಿದೆ. ಆ ವಿಚಾರದಲ್ಲಿ ಮೈಸೂರಿನವವರಿಂದ ಎಷ್ಟು ಪ್ರಯತ್ನ ನಡೆದಿದೆಯೆಂಬುದು ಮುಂದೆ ಚರಿತ್ರಕಾರರು ವಿವರಿಸತಕ್ಕ ಕಾಲದಲ್ಲಿ ಗೊತ್ತಾಗುತ್ತದೆ, ಈಗ ಹೇಳುವುದಕ್ಕೆ ಸಾಧ್ಯವಿಲ್ಲ. ಹೀಗೆ ಪ್ರತಿಯೊಂದು ಸಂಸ್ಥಾನವೂ ಒಂದೊಂದು ದಾರಿಯನ್ನು ಹಿಡಿಯುವುದಕ್ಕೆ ಪ್ರಯತ್ನ ಮಾಡಿದರೆ ಭಾರತಕ್ಕೆ ಬಂದ ಸ್ವಾತಂತ್ರ್ಯ ಈ ದಿವಸ ಏನಾಗುತ್ತದೆಯೋ ಗೊತ್ತಿಲ್ಲ, ಅದನ್ನು ಹೇಳುವುದಕ್ಕೆ ಸಾಧ್ಯವಿಲ್ಲ. ಆದ್ದರಿಂದ ಈ ದಿವಸ ನಾವು ಈ ಸಮಸ್ಯೆಯನ್ನು ಕೇವಲ ಸಂಕುಚಿತ ದೃಷ್ಟಿಯಿಂದ ಕೇವಲ ಮೈಸೂರಿನ ದೃಷ್ಟಿಯಿಂದ ನೋಡಿ ಆ ಆಧಾರದ ಮೇಲೆ ಅನುಸರಿಸುವ ನೀತಿ, ಮಾಡುವ ಟೀಕೆ, ಸರ್ವಥಾ ಸಾಧುವಲ್ಲ. ಈ ದಿವಸ ಸಂಕುಚಿತ ದೃಷ್ಟಿಯಿಂದ ನೋಡಿ ಎಲ್ಲವನ್ನೂ ಬಿಟ್ಟು ಕೊಟ್ಟರೆಂದು ಹೇಳಬಹುದು. ಆದರೆ ವಿಶಾಲ ದೃಷ್ಟಿಯಿಂದ ಬಿಟ್ಟುಕೊಟ್ಟಿರುವ ನೀತಿಯನ್ನು ನೋಡಿದರೆ ಬಿಡುವುದು, ತೆಗೆದುಕೊಳ್ಳುವುದು, ಅಂದರೆ Give and take policy ಮೇಲೆ ನಮ್ಮ ಉಳಿವು ಈ ದಿವಸ ಇದೆ ಎಂದು ಹೇಳುತ್ತೇನೆ.

ಇನ್ನೊಂದು ವಿಷಯ. ಈ ದಿವಸ ನಾವು ಕೇವಲ ಮೈಸೂರಿನವರಂತೆ ಎಲ್ಲಾ ವಿಷಯಗಳನ್ನು ನೋಡುವ ಒಂದು ಭಾವನೆಯನ್ನು ಬಿಡಬೇಕೆಂಬುದು ಖಚಿತ ಅಭಿಪ್ರಾಯ. ಈಗ ದುಃಖವೆಷ್ಟೇ ಇರಲಿ, ಭಾರತದ ಒಂದು ಅಂಗವಾಗಿ, ಭಾರತದಲ್ಲಿ ಭಾರತೀಯರಾಗಿ ಈ ದಿವಸ ನಾವು ನಿಂತುಕೊಂಡು ಭಾರತದ ಭವ್ಯ ಭವಿಷ್ಯವೇನಿದೆಯೆಂಬುದನ್ನು ನೋಡಬೇಕು. ಅದು ಬಿಟ್ಟು ಮೈಸೂರು ಮೈಸೂರಿನ ದೃಷ್ಟಿಯಿಂದ, ತಿರುವಾಂಕೂರು ತಿರುವಾಂಕೂರಿನ ದೃಷ್ಟಿಯಿಂದ ಮದ್ರಾಸು ಮದ್ರಾಸಿನ ದೃಷ್ಟಿಯಿಂದ, ನೋಡಬೇಕೆಂದು ಹೇಳಿದರೆ ಭಾರತದ ಚರಿತ್ರೆಯಲ್ಲಿ ಹಿಂದೆ ಆಗಿರುವ ಪ್ರಸಂಗ ಮುಂದೆಯೂ ಆಗುವುದಕ್ಕೆ ಅವಕಾಶವಾಗುತ್ತದೆ. ಆದ್ದರಿಂದ ಬಂದಿರುವ ಸ್ವಾತಂತ್ರ್ಯವನ್ನು ಉಳಿಸಿ, ಇಡೀ ಭಾರತವನ್ನು ಉದ್ಧಾರಮಾಡಿ ಒಂದು ಅಂತಸ್ತಿಗೆ ತರಬೇಕು. ಹಾಗೆ ಮಾಡದಿದ್ದರೆ ಮುಖ್ಯವಾದ ಧ್ಯೇಯವನ್ನು ಸಾಧಿಸುವುದಕ್ಕೆ ಪ್ರಯತ್ನ ಮಾಡಿದಂತಾಗುವುದಿಲ್ಲ. ಆದ್ದರಿಂದ ಕೇವಲ ಈಗಿನ ತಾತ್ಕಾಲಿಕ ದೃಷ್ಟಿಯಿಂದ ನೋಡುವ ಒಂದು ಮನೋಭಾವವನ್ನು ಬಿಟ್ಟು ಮೈಸೂರು ಮೈಸೂರಿನವರಿಗೆ ಮಾತ್ರ ಎಂಬ ಭಾವನೆ ವಿಶಾಲಭಾವನೆಯಿಂದ ಇಡೀ ಭಾರತದ ಹಿಂದೆ ಈ ಸಮಸ್ಯೆಯನ್ನು ನೋಡಬೇಕಾಗಿದೆ ಎಂದು ಹೇಳುತ್ತೇನೆ.ಈ ದಿವಸ ಏನೋ ಒಂದು ಭಾವನೆಯಿಂದ ಟೀಕೆ ಮಾಡುವಾಗ ಮತ್ತು ಅಭಿಪ್ರಾಯ ಕೊಡುವಾಗ ಅವರಿಗೆ ನಾವು ಯಾವುದೋ ಕೊಟ್ಟಿದ್ದೇವೆ ಹಾಗೆ ಹೀಗೆ ಎಂದು ಮಾಡಿರುವ ಏನೋ ಒಂದು ವಾದ ಸರಣಿಯ ಹಿಂದಿರುವ ಭಾವನೆ ತಪ್ಪುವುದಿಲ್ಲ. ಅವರು ಯಾರು? ನಾವು ಯಾರು? ಅವರಲ್ಲಿ ನಾವೂ ಸೇರಿಕೊಂಡಿದ್ದೇವೆ.

ಶ್ರೀ ಎಲ್. ಸಿದ್ದಪ್ಪನವರು: ಹಾಗಾದರೆ ಏಳು ತಿಂಗಳಿಂದ ಏಕೆ ಫೈನಾನ್‌ಷಿಯಲ್ ಇಂಟಿಗ್ರೇಷನ್ ವ್ಯವಹಾರ ಹೀಗೆ ನಡೆಸಬೇಕಾಗಿತ್ತು?

**ಶ್ರೀ ಕೆ. ಚೆಂಗಲರಾಯರೆಡ್ಡಿಯವರು:** ಅವರು ಎಂಬುದು ಈಗ ಬಂದಿದೆ. ನಾವು ಇಡೀ ಎರಡು ವರ್ಷಗಳಿಂದ ಬಂದಿರುವ ಚೌಕಟ್ಟಿನಲ್ಲಿದ್ದೇವೆ. ಈ ದಿವಸ ಅವರು ಎಂಬ ಭಾವನೆಯಲ್ಲಿ ನಾವಿಲ್ಲ. ಇಂಡಿಯನ್ ಪಾರ್ಲಿಮೆಂಟಿನಲ್ಲಿ ಭಾಗವಹಿಸುವ ಯಾವ ಏಜೆನ್ಸಿಯಿದೆಯೋ ಅದರಲ್ಲಿ ಮೈಸೂರಿನವರೂ ಒಬ್ಬೊಬ್ಬರಾಗಿ ಯಾವ ಒಂದು ವ್ಯತ್ಯಾಸವೂ ಇಲ್ಲದೆ ಎಲ್ಲದರಲ್ಲೂ ಈ ದಿವಸ ನಾವು ಬಾಗವಹಿಸುವ ಚೌಕಟ್ಟಿನಲ್ಲಿದ್ದೇವೆ, ಆದ್ದರಿಂದ ಅವರಲ್ಲಿ ನಾವಿಲ್ಲ ಎಂದು ಭಾವನೆಮಾಡುವುದು ಸರಿಯಲ್ಲ. ಅವರಲ್ಲಿ ನಾವು ಇದ್ದೇವೆ ಎಂಬ ಭಾವನೆ ಇಟ್ಟುಕೊಂಡು ಮುಂದುವರಿಸಬೇಕು. ಮೈಸೂರು ಅಥವಾ ಮದ್ರಾಸು ಎಂದು ಬೇರೆ ಬೇರೆ ಯೂನಿಟ್ಸ್ ಇದ್ದರೂ ಅವೆಲ್ಲಾ ಭಾರತದಲ್ಲಿ ಸೇರಿಕೊಂಡಿವೆ. ಬಾರತ ದೇಶವೆಲ್ಲಾ ಒಂದೇ, ಮೈಸೂರು ಸಂಸ್ಥಾನವು ಫೈನಾನ್‌ಷಿಯಲ್ ಇಂಟಿಗ್ರೇಷನ್ ಸೇರದೆ ಇದ್ದು ತೊಂದರೆಯಾದರೆ ಅದರಿಂದ ಮೈಸೂರಿಗೆ ತೊಂದರೆಯೇ ಹೊರತು ಭಾರತಕ್ಕೆ ತೊಂದರೆಯಿಲ್ಲ. ಈ ಮಾತು ನಾನು ಹೇಳುವುದಲ್ಲ ಇದು ಸರ್ದಾರ್ ಪಟೇಲ್‌ರವೇ ಹೇಳಿರುವ ಮಾತು. ಒಮ್ಮೆ ಸರ್ದಾರ ಪಟೇಲರು ಈ ರೀತಿಯಾಗಿ ತಿಳಿಸಿದ್ದಾರೆ. ಮೈಸೂರು ತಿರುವಾಂಕೂರು ಎಂದು ಈ ರೀತಿಯಾಗಿ ವಾದಿಸುತ್ತಿದ್ದೀರಿ ಮೈಸೂರು, ತಿರುವಾಂಕೂರುಗಳ ಮೇಲೆ ನನಗೆ ಪ್ರೀತಿಯಿಲ್ಲವೇ? ಅವುಗಳು ಅಭ್ಯುದಯದಲ್ಲಿ ಆಸಕ್ತಿಯಿಲ್ಲವೆ? ಇವು ಸರಿಯಾದ ಸ್ಥಿತಿಯಲ್ಲಿರಬೇಕೆಂಬ ಅಭಿಲಾಷೆ ನಮಗಿಲ್ಲವೆ? ಅನುಮಾನವೇಕೆ ಪಡಬೇಕು, ಈ ರೀತಿ ಏಕೆ ಅನುಮಾನಪಟ್ಟುಕೊಂಡು ಪ್ರಶ್ನೆ ಮಾಡಬೇಕು ಎಂದು ಒಮ್ಮೆ ಕೇಳಿದರು.

ಆದ್ದರಿಂದ ತೊಂದರೆಯಾಗಬಾರದೆಂಬ ಉದ್ದೇಶದಿಂದ ಕೇಂದ್ರದವರೇ ಜವಾಬ್ದಾರಿಯಾಗಿರಬೇಕು. ಪ್ರಾಂತ್ಯಗಳ ಮಟ್ಟದಲ್ಲೇ ಸಂಸ್ಥಾನಗಳವರು ಇರಬೇಕು ಎಂದು ಅವರು ಈ ದಿವಸ ಹೇಳಬಹುದಾಗಿತ್ತು ಈಗ 5-10 ವರ್ಷಗಳ ಅವಧಿಕೊಟ್ಟರೆ, ಇರುವ ಹಣಕಾಸಿನಿಂದ ಆಗಬೇಕಾದ ಕೆಲಸ ಕಾರ್ಯಗಳು ಮಾಡಿಕೊಳ್ಳಲಿ, ಯಾವುದಕ್ಕೂ ಧಕ್ಕೆ ಬರಬಾರದು, ಒಂದು ಹದ್ದುಬಸ್ತಿಗೆ ಬಂದಮೇಲೆ ಒಂದೇ ವಿಧವಾದ ನೀತಿಯನ್ನು ಅನುಸರಿಸಬೇಕು ಎಂಬ ಒಂದು ಏರ್ಪಾಡು ಮಾಡಿಕೊಂಡಿದ್ದಾರೆ. ನಾನು ಈಗ ಆ ಮುಖ್ಯವಾದ ಒಂದು ನೀತಿಯ ಕಡೆಗೆ ತಮ್ಮ ಗಮನವನ್ನು ಸೆಳೆಯಬೇಕೆಂದಿದ್ದೇವೆ. ನನ್ನ ವಿನಂತಿ ಏನೆಂದರೆ ಈ ಸಮಸ್ಯೆಗಳೆಲ್ಲವನ್ನೂ ನಾವು ನೋಡುವಾಗ ಮತ್ತು ಅವುಗಳ ಮೇಲೆ ಚರ್ಚೆ ಮಾಡುವಾಗ ಮುಖ್ಯವಾಗಿ ನಾವು ಭಾರತದ ಇಡೀ ಐಕ್ಯಮತ್ಯತೆ ಮತ್ತು ಭದ್ರತೆ ಇವುಗಳನ್ನು ಗಮನದಲ್ಲಿಟ್ಟುಕೊಂಡು ವಾದ ಮಾಡಬೇಕೇ ಶಿವಾಯಿ, ಕೇವಲ ನಮ್ಮೊಬ್ಬರ ಸೌಲಭ್ಯಗಳ ಪ್ರಶ್ನೆಯೇನ್ನೇ ಗಮನದಲ್ಲಿಟ್ಟು ಚರ್ಚೆ ಮಾಡುವುದು ಸರಿಯಲ್ಲ. ಇಂಥ ಪ್ರತ್ಯೇಕ ಮನೋಭಾವನೆಯನ್ನಿಟ್ಟುಕೊಂಡಿರುವುದು ಸರಿಯಲ್ಲ ಹೀಗೆ ಈ ಆರ್ಥಿಕ ವಿಲಿನೀಕರಣದ ಸಂಬಂಧವಾಗಿ ಚರ್ಚೆಮಾಡುವಾಗ ನಾವೆಲ್ಲರೂ ಮುಖ್ಯವಾಗಿ ಗಮನದಲ್ಲಿಟ್ಟುಕೊಳ್ಳಬೇಕಾಗಿರತಕ್ಕದ್ದು ಒಂದು ವಿಷಯವಾಯಿತು. ಇದೇ ನನ್ನ ಒಂದು ಮುಖ್ಯ ವಿನಂತಿ. ನಾವು ಹೀಗೆ ಈ ಪ್ರಥಮ ಒಪ್ಪಂದದಲ್ಲಿ ಭಾಗವಹಿಸದೆ ಹೋದರೆ, ನಂತರ ಆಗತಕ್ಕ ಮುಖ್ಯವಾದ ಅನೇಕ ಒಪ್ಪಂದಗಳಲ್ಲಿ ನಾವು ಸೇರಿಕೊಳ್ಳುವುದಕ್ಕೆ ಸಾಧ್ಯವಿಲ್ಲ. ಈಗ ನಾವು ಮಾಡಿಕೊಂಡಿರುವಂಥಹ ಅರ್ಥಿಕ ವಿಲಿನೀಕರಣ ಒಪ್ಪಂದದಿಂದ ಇನ್ನೂ ೫ ವರ್ಷಗಳ ಕಾಲದಲ್ಲಿ ಈಗಿನ ಪರಿಸ್ಥಿತಿಗಿಂತಲೂ ನಮ್ಮ ಸಂಸ್ಥಾನದ ಹಣಕಾಸಿನ ಪರಿಸ್ಥಿತಿ ಭಾರತದಲ್ಲಿ ಉತ್ತಮಗೊಳ್ಳುತ್ತದೆ. ಎಂದು ನಾನು ಹೇಳುತ್ತೇನೆ. ಈ ವ್ಯವಸ್ಥೆಯಿಂದ ನಮಗೆ ಇತರ ಪ್ರಾಂತ್ಯಗಳಿಗೆ ದೊರೆಯುವಂತೆ ಸಬ್ಸಿಡಿ ಮತ್ತು ಗ್ರಾಂಟ್‌ಗಳು ದೊರೆಯುತ್ತದೆ. ಬೇರೆ ಕಾರಣಗಳೇನೇ ಇರಲಿ, ಈ ಫೈನಾನ್ಷಿಯಲ್ ಇಂಟಿಗ್ರೇಷನ್ನಿನಿಂದ ನಮ್ಮಲ್ಲಿರತಕ್ಕ ರೆವಿನ್ಯೂ ಉತ್ಪತ್ತಿಯ ಜೊತೆಗೆ ಸಬ್ಸಿಡಿ ಮತ್ತು ಗ್ರಾಂಟ್‌ಗಳನ್ನು ಅವರು ನಮಗೆ ಕೊಡುವುದರಿಂದ ನಮ್ಮ ಹಣಕಾಸಿನ ಪರಿಸ್ಥಿತಿ ಈಗಿಗಿಂತಲೂ ಇನ್ನೂ ಉತ್ತಮ ಸ್ಥಿತಿಗೆ ಬರಲು ಅವಕಾಶವಿರುತ್ತದೆ ಎಂದು ಈ ದಿವಸ ನಾನು ಖಡಾ ಖಂಡಿತವಾಗಿ ಹೇಳಬಲ್ಲೆ. ಇನ್ನು ಮುಂದಿನ ಐದು ವರ್ಷಗಳಲ್ಲಿ ನಮ್ಮ ಸಾಲದ ಹೊರೆ ಕ್ರಮಕ್ರಮೇಣ ಕಡಿಮೆಯಾಗುತ್ತಾ ಹೋಗುತ್ತದೆ. ಆದುದರಿಂದ ಈಗ ನಾವು ಮಾಡಿಕೊಂಡಿರುವಂಥ ಫೈನಾಷಿಯಲ್ ಇಂಟಿಗ್ರೇಷನ್ನಿನಿಂದ ನಮಗೆ ಅಂಥಾ ತೊಂದರೆಗಳೇನೂ ಬರುವುದಿಲ್ಲ ಮತ್ತು ಇದರಿಂದೇನೂ ಧಕ್ಕೆಯುಂಟಾಗುವುದಿಲ್ಲವೆಂದು ನಾನು ತಿಳಿಸುತ್ತೇನೆ. ಇದೇ ಬಹಳ ಮುಖ್ಯ ವಿಚಾರ. ಆದರೆ ತಾವು ಈ ಸಂದರ್ಭದಲ್ಲಿ ಒಂದು ಪ್ರಶ್ನೆ ಕೇಳಬಹುದು. ಇನ್ನು 10 ವರ್ಷಗಳ ಆಖೈರಿನಲ್ಲಿ ಅಥವಾ 30 ಅಥವಾ 50 ವರ್ಷಗಳ ನಂತರ ಇದರ ಪರಿಣಾಮವೇನಾಗಬಹುದು ಎಂದು. ಆದರೆ ಅಂಥ ಭವಿಷ್ಯವನ್ನು ಈಗಲೇ ತಿಳಿಸುವುದಕ್ಕೆ ನನ್ನಿಂದ ಸಾಧ್ಯವಿಲ್ಲ ಇದಕ್ಕೆ ಅಗತ್ಯವಾದ ಅಂಕಿ ಅಂಶಗಳು ಬೇಕು. ಆದರೆ ಅಂಥ ಅಂಕಿ ಅಂಶಗಳು ಈಗಾಗಲೇ ಎಲ್ಲಿಂದ ದೊರೆಯಬೇಕು? ಇನ್ನು 5-10 ವರ್ಷಗಳ ಅವಧಿಯಲ್ಲಿ ಯಾವ ಯಾವ ಸಂಸ್ಥಾನಗಳು ತಮ್ಮ ಹಣಕಾಸಿನ ವಿಚಾರದಲ್ಲಿ ಪ್ರಾಂತ್ಯಗಳ ಮಟ್ಟಕ್ಕೆ ಬಂದಿಲ್ಲವೋ ಅವುಗಳೆಲ್ಲವೂ ಆ ಪ್ರಾಂತ್ಯಗಳ ಮಟ್ಟಕ್ಕೆ ಬರುವಂತೆಯೂ ಮತ್ತು ಇಂಥಾ ಒಂದು ವ್ಯವಸ್ಥೆಯಿಂದ ಭಾರತಕ್ಕಾಗಲಿ ಅಥವಾ ಭಾರತದ ಯೂನಿಯನ್ನಿಗಾಗಲೀ ಯಾವ ವಿಧದಲ್ಲಿಯೂ ಧಕ್ಕೆ

ಯುಂಟಾಗದಂತೆ ಇದನ್ನು ಮಾಡಲಾಗಿದೆ ಎಂದು ಕೇಂದ್ರ ರಾಜ್ಯಾಂಗ ಘಟಕಾ ಸಮಿತಿಯವರು ಸೂಚಿಸಿದ್ದಾರೆ. ಈಗಾಗಲೇ ನಾವು ಮಾಡಿಕೊಂಡಿರತಕ್ಕದ್ದೇ ಆಶ್ಚೈರಲ್ಲ. ಸಂಸ್ಥಾನಗಳವರು ವರಮಾನ ಬಾಬುಗಳ ತೆರಿಗೆಯಲ್ಲಿ ಒಂದು ಭಾಗವನ್ನು ಕೇಂದ್ರಕ್ಕೆ ಕೊಡುತ್ತಿದ್ದುದ್ದು ಮೊದಲಿನಿಂದಲೂ ರೂಢಿಯಲ್ಲಿತ್ತು. ಆದರೆ ಈಗ ನಾವು ಅದನ್ನು ಹೆಚ್ಚು ಕಡಿಮೆ ಮಾಡಬಹುದು. ಈ ರೀತಿಯ ಒಂದು ಭಾವನೆಯನ್ನು ಭಾರತ ಸರ್ಕಾರ ನೀಡಿರುವುದರಿಂದ ಹಾಗೆ ಆ ಭಾರತದ ಯೂನಿಯನ್‌ನಲ್ಲಿ ಸೇರತಕ್ಕ ಭಾಗಗಳಲ್ಲಿ ಮೈಸೂರಿಗೇ ಒಂದು, ಮದರಾಸಿಗೇ ಒಂದು ರೀತಿ ಅನ್ವಯಿಸುವಂತೆ ಮಾಡುವುದಕ್ಕಾಗುವುದಿಲ್ಲ, ಹಾಗೆ ಮನಸ್ಸಿಗೆ ಬಂದ ರೀತಿಯಲ್ಲಿ ಒಂದೊಂದಕ್ಕೆ ಒಂದೊಂದು ರೀತಿ ಇಟ್ಟುಕೊಂಡರೆ ಭಾರತದ ಉದ್ಧಾರವು ಹೇಗೆ ಆಗಬೇಕು? ಹೀಗೆ ನಾವು ಹಟ ಹಿಡಿಯುವುದನ್ನು ನೋಡಿದರೆ ಆ ಭಾರತದ ಉದ್ಧಾರವೇಕೆ ಆಗಬೇಕು ನಾವೇಕೆ ಅವರಿಗೆ ದುಡ್ಡು ಕೊಡಬೇಕು ಎಂದು ಕೇಳಿದ ಹಾಗಾಗುತ್ತದೆ.

ಶ್ರೀ ಎಲ್. ಸಿದ್ದಪ್ಪನವರು(ಚೆನ್ನಗಿರಿ ತಾಲ್ಲೂಕು): ಇವುಗಳನ್ನೆಲ್ಲಾ ತನಿಖೆಮಾಡದೆ ಹಣವನ್ನು ಹೇಗೆ ಕೊಡುವುದಕ್ಕಾಗುತ್ತದೆ?

ಶ್ರೀ ಕೆ. ಚೆಂಗಲರಾಯರೆಡ್ಡಿಯವರು: ಭಾರತದಲ್ಲಿ ನಾವೂ ಕೂಡ ಅದರ ಒಂದು ಅಂಗವಾಗಿರುತ್ತೇವೆಂಬುದನ್ನು ತಿಳಿದುಕೊಂಡಿದ್ದರೆ ಹಾಗೆ ನಾವು ಅವರಿಗೆ ಹಣವನ್ನು ಕೊಡತಕ್ಕದ್ದು ಸೂಕ್ತವಾಗಿರುತ್ತೆಂಬುದು ವ್ಯಕ್ತವಾಗುತ್ತದೆ. ಭಾರತ ಉಳಿದರೆ ನಾವೂ ಉಳಿಯುತ್ತೇವೆ, ಭಾರತ ಅಳಿದರೆ ನಾವೂ ಅಳಿಯುತ್ತೇವೆ. ನಾವು ಈ ವಿಷಯಗಳನ್ನೆಲ್ಲಾ ಅಲ್ಲಿ ಚರ್ಚೆಮಾಡಿರುತ್ತೇವೆ. ಆದರೆ ಕೊನೆಯಲ್ಲಿ ನಾವು ನಮ್ಮ ದೇಶದ ಪ್ರೇಮಕ್ಕೆ ತಲೆಬಾಗಿ, ನಮಗೆ ಒಳ್ಳೆಯದು ಯಾವುದೋ ಅದು ಭಾರತಕ್ಕೆ ಒಳ್ಳೆಯದು, ನಮಗೆ ಕೆಟ್ಟದ್ದು ಯಾವುದೋ ಅದು ಭಾರತಕ್ಕೂ ಕೆಟ್ಟದ್ದು ಎಂಬ ಭಾವನೆಯನ್ನಿಟ್ಟು ಒಪ್ಪಿಕೊಳ್ಳಬೇಕಾಗಿ ಬಂತು. ಆದುದರಿಂದ ತಾವೆಲ್ಲರೂ ಕೂಡ ಈಗ ಇದನ್ನು ಚರ್ಚೆಮಾಡುವ ಕಾಲದಲ್ಲಿ ಆ ದೃಷ್ಟಿಯಿಟ್ಟು ಇದಕ್ಕೆ ಒಪ್ಪಿಕೊಳ್ಳಬೇಕೆಂದು ನಾನು ತಮ್ಮನ್ನು ಕೇಳಿಕೊಳ್ಳುತ್ತೇನೆ.

## ರಾಜ್ಯಂಗಳಿಗೆ ಸಂಬಂಧಿಸಿದ '6ಎ' ಭಾಗವನ್ನು ಸಂವಿಧಾನದಲ್ಲಿ ಅಳವಡಿಸಿಕೊಳ್ಳುವುದರ ಬಗ್ಗೆ

### ಭಾರತದ ರಾಜ್ಯಾಂಗ ರಚನಾ ಸಭೆಯ ಕಲಾಪ 13 ಅಕ್ಟೋಬರ್ 1949

**ಶ್ರೀ ಕೆ. ಚೆಂಗಲರಾಯರೆಡ್ಡಿ (ಮೈಸೂರು ರಾಜ್ಯ ):** ಸನ್ಮಾನ್ಯ ರಾಷ್ಟ್ರಪತಿಯವರೇ, ಈಗ ಸದನದ ಮುಂದೆ ಪ್ರಸ್ತಾಪಿಸಲಾಗಿರುವ ವಿಷಯಕ್ಕೆ ಸಂಬಂಧಿಸಿದಂತೆ ನನ್ನ ಕೆಲವೊಂದು ಅಭಿಪ್ರಾಯಗಳನ್ನು ವ್ಯಕ್ತಪಡಿಸಲು ಸಂತೋಷವಾಗುತ್ತದೆ. ಈಗ ನಮ್ಮ ಮುಂದಿರುವ ಪ್ರಸ್ತಾಪವೇನೆಂದರೆ ಮೊದಲನೇ ಅನುಸೂಚಿಯ ಭಾಗ 1 ರಲ್ಲಿ ತಿಳಿಸಲಾಗಿರುವ ರಾಜ್ಯಗಳಿಗೆ ಅನ್ವಯಿಸುವಂತಹ ಸಂವಿಧಾನದ 6ನೇ ಭಾಗವನ್ನು ಅನುಸೂಚಿಯ 3ನೇ ಭಾಗದಲ್ಲಿ ತಿಳಿಸಿರುವ ರಾಜ್ಯಗಳಿಗೂ ಅನ್ವಯಿಸುವಂತೆ ಮಾಡಬೇಕು ಮತ್ತು ಹಾಗೆ ಮಾಡುವಾಗ ಆಯಾ ರಾಜ್ಯಗಳ ಪರಿಸ್ಥಿತಿ ಯಾವ ರೀತಿಯದು ಎಂಬುದನ್ನು ನೋಡಿಕೊಂಡು ಅಗತ್ಯವಾದ ತಿದ್ದುಪಡಿಗಳನ್ನು ಹಾಗೂ ಬದಲಾವಣೆಗಳನ್ನು ಮಾಡಬೇಕು ಎಂಬುದು. ಇಂತಹ ಒಂದು ಘನತೆವೆತ್ತ ಸಭೆಯು ಕೈಗೊಂಡ ಕೆಲಸದ ಕೊನೆಯ ಹಂತದಲ್ಲಾದರೂ ಈ ನಿರ್ಣಯ ಕೈಗೊಂಡಿರುವುದು ನನಗೆ ಅತ್ಯಂತ ಸಮಾಧಾನದ ವಿಷಯ.

ಈ ಸಭೆಯು ತನ್ನ ಕಾರ್ಯ ಪ್ರಾರಂಭಿಸಿದಾಗ, ಸ್ವತಂತ್ರ ಭಾರತವು ಒಳಗೊಂಡಿರುವ ಎಲ್ಲ ರಾಜ್ಯಗಳಿಗೂ ಅನ್ವಯಿಸುವಂಥ ಒಂದು ಸಮಾನ ಸಂವಿಧಾನ ರಚನೆ ಸಾಧ್ಯವಾಗುತ್ತದೆಯೇ ಎಂಬ ಬಗ್ಗೆ ತೀವ್ರವಾದ ಸಂದೇಹವಿತ್ತು. ಭಾರತದ ರಾಜ್ಯಗಳಿಗೆ ಸಂಬಂಧಿಸಿದಂತೆ ಆಯಾ ರಾಜ್ಯಗಳ ಸಂವಿಧಾನವನ್ನು ಆಯಾ ರಾಜ್ಯಗಳ ರಾಜ್ಯಾಂಗ ರಚನಾ ಸಮಿತಿಗಳೇ ರೂಪಿಸಬೇಕು ಎಂದು ಭಾವಿಸಲಾಗಿತ್ತು ಮತ್ತು ಒಪ್ಪಿಕೊಳ್ಳಲಾಗಿತ್ತು. ಈ ನಿರ್ಣಯದ ಅನುಗುಣವಾಗಿಯೇ ಕೆಲವೊಂದು ರಾಜ್ಯಗಳಲ್ಲಿ ಆಯಾ ರಾಜ್ಯಗಳ ಸಂವಿಧಾನ ರಚನಾ ಸಭೆಗಳು ರಚಿತವಾದವು ಮತ್ತು ಅವು ತಮ್ಮ ರಾಜ್ಯಕ್ಕೆ ಏನು ಬೇಕೋ ಅಂತಹ ಸಂವಿಧಾನವನ್ನು ರೂಪಿಸುವ ಕೆಲಸವನ್ನು ಆರಂಭಿಸಿದವು. ಆದರೆ ಮೈಸೂರು ರಾಜ್ಯದ ಪ್ರತಿನಿಧಿಗಳು ಹಾಗೂ ಇನ್ನಿತರ ಕೆಲವು ರಾಜ್ಯಗಳ ಪ್ರತಿನಿಧಿಗಳು ಈ ಎಲ್ಲ ರಾಜ್ಯಗಳ ಕೂಡ ಒಂದು ಸಮಾನ ಸಂವಿಧಾನವನ್ನು ಅಳವಡಿಸಿಕೊಳ್ಳಲಾಗುವಂತಹ ಒಂದು ವಿಧಾನವನ್ನು ರೂಪಿಸಲು ಮಾಡಿದ ಪ್ರಯತ್ನವನ್ನು ಇಲ್ಲಿ ತಮ್ಮ ಗಮನಕ್ಕೆ ತರಬಯಸುತ್ತೇನೆ.

1947ರ ಆಗಸ್ಟ್ ತಿಂಗಳಷ್ಟು ಹಿಂದೆಯೇ ಈ ರಾಜ್ಯಗಳ ಕೆಲವೊಂದು ಪ್ರತಿನಿಧಿಗಳು ಈ ಘನತೆವೆತ್ತ ಸಭೆಗೆ ಸದಸ್ಯರಾಗಿ ಬಂದಾಗ, ಭಾರತೀಯ ರಾಜ್ಯಗಳಿಗೆ (ಇಂಡಿಯನ್ ಸ್ಟೇಟ್ಸ್) ಅನ್ವಯಿಸುವಂತಹ ಒಂದು ಮಾದರಿ ಸಂವಿಧಾನವನ್ನು ರೂಪಿಸಿ ಅಂತಹ ಸಂವಿಧಾನವನ್ನು ಭಾರತೀಯ ಸಂವಿಧಾನದಲ್ಲಿ ಒಳಗೊಳ್ಳಲಾಗುವಂತೆ ಮಾಡುವ ದೃಷ್ಟಿಯಿಂದ ಈ ಸದನದ ಒಂದು ಸಮಿತಿಯನ್ನು ಸ್ಥಾಪಿಸುವುದಕ್ಕಾಗಿ ಗಂಭೀರ ಪ್ರಯತ್ನ ಮಾಡಲಾಯಿತು. ಆದರೆ ಆ ಸಮಯದಲ್ಲಿ ಅದು ಕಾರ್ಯ ಸಾಧ್ಯವಾಗಿ ಕಾಣಲಿಲ್ಲ ಮತ್ತು ನಮ್ಮ ರಾಜ್ಯಗಳ ಸಂವಿಧಾನವನ್ನು ರೂಪಿಸುವುದಕ್ಕಾಗಿ ನಮ್ಮ ರಾಜ್ಯಗಳಿಂದ ನಮಗೆ ಕರೆ ಬಂತು. ನಾವು ಆ ಕೆಲಸವನ್ನು ಆರಂಭಿಸಿದ ನಂತರವೂ ಸಹ, ಅಂತಹ ಪ್ರತ್ಯೇಕ ಸಂವಿಧಾನಗಳು ಭಾರತೀಯ ಸಂವಿಧಾನಕ್ಕೆ ಅನುಗುಣವಾಗಿ ಮತ್ತು ಭಾರತದ

ಸಂವಿಧಾನ ರಚನಾ ಸಭೆಯು ನಿರ್ಣಯಿಸಿರುವ ಉದ್ದೇಶ ಮತ್ತು ಧ್ಯೇಯಗಳಿಗೆ ಅನುಗುಣವಾಗಿರಬೇಕಾದ್ದು ಬಹಳ ಅಗತ್ಯ ಎಂಬ ಅಂಶವನ್ನು ನಾವು ಗಮನದಲ್ಲಿಟ್ಟುಕೊಂಡಿದ್ದೆವು. ನಮ್ಮದೇ ಆದ ಸಂವಿಧಾನವನ್ನು ರೂಪಿಸುವ ಸ್ವಾತಂತ್ರ್ಯ ಹಾಗೂ ಅವಕಾಶವನ್ನು ನಮಗೆ ನೀಡಿದ್ದರೂ ಸಹ ನಾವು ಕೈಗೊಂಡ ನಿಲುವು ಆ ರೀತಿಯದಾಗಿತ್ತು. ಈ ಹಿನ್ನೆಲೆಯಿಂದಾಗಿಯೇ, ಈ ಸಭೆಯಲ್ಲಿ ಕೈಗೊಳ್ಳಲಾಗುತ್ತಿರುವ ಪ್ರಸ್ತುತ ನಿರ್ಣಯ ಭಾರತದ ರಾಜ್ಯಗಳವರ ಪಾಲಿಗೆ ಅತ್ಯಂತ ಸಮಾಧಾನಕರ ವಿಷಯವಾಗಿದೆ. ಅದರಲ್ಲಿಯೂ ಮೈಸೂರು ರಾಜ್ಯದವರಿಗೆ ಅತ್ಯಂತ ಸಮಾಧಾನ ತಂದಿದೆ ಎಂದು ನಾನು ಅಧಿಕೃತವಾಗಿ ಹೇಳಬಲ್ಲೆ. ಈಗ ನಾವು ಪರಿಸ್ಥಿತಿಗೆ ಮುಖಾಮುಖಿಯಾಗಿದ್ದೇವೆ. ನಾವು ಗಳಿಸಿರುವ ಸ್ವಾತಂತ್ರ್ಯ ಯಾವುದೇ ರೀತಿಯ ಅಪಾಯವಿಲ್ಲದೆ ಸುಭದ್ರ ಹಾಗೂ ಸ್ಥಿರವಾಗಿರಬೇಕಾದರೆ ದೇಶದಲ್ಲಿರುವ ಎಲ್ಲ ರಾಜ್ಯತಂತ್ರಜ್ಞತೆಯೂ ಒಂದುಗೂಡಬೇಕಾದ್ದು ಅಗತ್ಯ. ಬೇರೆ ಬೇರೆ ರಾಜ್ಯಗಳಲ್ಲಿ ಭಿನ್ನ ರೀತಿಯ ಸಂವಿಧಾನಗಳಿದ್ದರೆ ದೇಶದ ಏಕತೆಗೆ ತೊಂದರೆಯಾಗಬಹುದು. ಬೇರೆ ಬೇರೆ ದಿಕ್ಕುಗಳಲ್ಲಿ ಕೆಲಸ ಮಾಡಬೇಕಾಗಬಹುದು. ಆದ್ದರಿಂದ ಇದು ಸರಿಯಲ್ಲ ಎಂಬ ಆಲೋಚನೆ ಮೊದಲಿನಿಂದಲೂ ಇತ್ತು. ಭಾರತೀಯ ರಾಜ್ಯಗಳ ಸಂವಿಧಾನಗಳೆಲ್ಲವೂ ಒಂದೇ ರೀತಿ ಇರಬೇಕು ಮತ್ತು ಪ್ರಾಂತಗಳ ಸಂವಿಧಾನಕ್ಕೆ ಅನುಗುಣವಾಗಿರಬೇಕು ಎಂದು ಈಗ ಒಪ್ಪಿಕೊಳ್ಳಲಾಗಿದೆ. ಈ ಸಂಬಂಧವಾಗಿ, 1947ರ ಆಗಸ್ಟ್ 15ರಿಂದ ಆರಂಭವಾದ ಭಾರತೀಯ ರಾಜ್ಯಗಳ ಈ ಜಟಿಲ ಸಮಸ್ಯೆಯನ್ನು ಅತ್ಯಂತ ಚಾಕಚಕ್ಯತೆಯಿಂದ ನಿಭಾಯಿಸಿದ ಸರ್ದಾರ್ ಅವರಿಗೂ ಮತ್ತು ರಾಜ್ಯಗಳ ಮಂತ್ರಾಲಯಗಳಿಗೂ ನನ್ನ ವಿನಮ್ರ ಗೌರವ ಹಾಗೂ ಅಭಿನಂದನೆಗಳು ಸಲ್ಲಿಸಬಯಸುತ್ತೇನೆ. ನಾವು ಆಗ ಇದ್ದಂತಹ ಪರಿಸ್ಥಿತಿಯಲ್ಲಿ ತಕರಾರು, ಕಿಡಿಗೇಡಿತನಗಳನ್ನು ಮಾಡುವುದಕ್ಕೆ ಎಲ್ಲ ಸಾಧ್ಯತೆಗಳೂ ಇದ್ದವು. ಬಾರತದ ಒಗ್ಗಟ್ಟನ್ನು ಒಡೆಯುವುದಕ್ಕೆ ಬೇಕಾದ ಸಂಪೂರ್ಣ ಅವಕಾಶಗಳು ಮತ್ತು ಗಳಿಸಿದ ಸ್ವಾತಂತ್ರ್ಯವನ್ನು ತಪ್ಪುಹಾದಿಗೆ ಕೊಂಡೊಯ್ಯುವ ಎಲ್ಲ ಸಾಧ್ಯತೆಗಳು ಇದ್ದವು. ಈ ಸಮಸ್ಯೆಯನ್ನು ರಾಜತಂತ್ರಜ್ಞ ರೀತಿಯಲ್ಲಿ ನಿರ್ವಹಿಸದಿದ್ದಲ್ಲಿ ಕೈಗೆ ಸಿಕ್ಕ ಈ ಅವಕಾಶವನ್ನು ವಿಚ್ಛಿದ್ರಕಾರಕ ಶಕ್ತಿಗಳು ಬಳಸಿಕೊಂಡು, ಇನ್ನೂ ಶೈಶವಾಸ್ಥೆಯಲ್ಲಿದ್ದ ಸ್ವತಂತ್ರ ಭಾರತದ ಪಾಲಿಗೆ ಮಾರಕ ಹೊಡೆತ ನೀಡುತ್ತಿದ್ದವು. ಹೀಗಾಗದಂತೆ ಅತ್ಯಂತ ಸಮರ್ಪಕವಾಗಿ ಈ ಸಮಸ್ಯೆಯನ್ನು ನಿಭಾಯಿಸಿದ ಸರ್ದಾರ್ ಅವರಿಗೂ ರಾಜ್ಯಗಳ ಮಂತ್ರಾಲಯಗಳಿಗೂ ಜಗತ್ತಿನಾದ್ಯಂತದಿಂದ ವ್ಯಕ್ತವಾಗುತ್ತಿರುವ ಮುಕ್ತ ಪ್ರಶಂಸೆ ಹಾಗೂ ಅಭಿನಂದನೆಗಳ ಜೊತೆಗೆ ನನ್ನ ಅಭಿಂದನೆಗಳನ್ನು ಹೇಳುತ್ತಿದ್ದೇನೆ. ಇಂದು ನಾವು ಸಾಧಿಸಿರುವುದನ್ನು ಒಂದು ರಕ್ತರಹಿತ ಕ್ರಾಂತಿ ಎಂದು ಹೇಳುವುದು ಅತ್ಯಂತ ಸರಿಯಾಗಿದೆ. ಯಾವುದೇ ದೇಶದ ಯಾವುದೇ ಕಾಲದ ಇತಿಹಾಸದಲ್ಲಿಯೂ ಇದಕ್ಕೆ ಸಮನಾದ ನಿದರ್ಶನವಿಲ್ಲ. ಭಾರತವನ್ನು, ಭಾರತದ ಇತಿಹಾಸದಲ್ಲೇ ಮೊತ್ತಮೊದಲ ಬಾರಿಗೆ ಒಂದು ಏಕೀಕೃತ ಪ್ರಜಾಸತ್ತಾತ್ಮಕ ಹಾಗೂ ಬಲಿಷ್ಠವಾದ ದೇಶವನ್ನಾಗಿ ನಿರ್ಮಾಣ ಮಾಡುವಂತಹ ಸಂವಿಧಾನವನ್ನು ರೂಪಿಸುವಂತಹ ಹೆಮ್ಮೆಯ ಕೆಲಸವನ್ನು ನಾವು ಈಗ ಮಾಡುತ್ತಿದ್ದೇವೆ. ರಾಜ್ಯಗಳ ಜನತೆ ಹಾಗೂ ಪ್ರಾಂತಗಳ ಜನತೆಯ ಸಹಕಾರ ಪ್ರಯತ್ನದಿಂದ ಈ ಕನಸು ಸಾಕಾರಗೊಂಡಿದೆ ಮತ್ತು ಭಾರತದ ಇತಿಹಾಸದಲ್ಲಿ ಮೊತ್ತಮೊಲಬಾರಿಗೆ ಪ್ರಜೆಗಳ ಸಾರ್ವಭೌಮತೆಯನ್ನು ಆಧರಿಸಿದಂತಹ ಪ್ರಜೆಗಳ ರಾಜ್ಯ ಅಸ್ತಿತ್ವಕ್ಕೆ ಬಂದಿದೆ. ಆದ್ದರಿಂದ ದೇಶದ ಯಾವುದೇ ಭಾಗದಲ್ಲಾಗಲೀ,

ಯಾವುದೇ ರಾಜ್ಯದಲ್ಲಾಗಲೀ, ಈ ದೇಶವು ಒಂದು ಸಮಾನ ಸಂವಿಧಾನವನ್ನು ಹೊಂದಿರಬೇಕು ಎಂಬ ಬಗ್ಗೆ ಯಾವುದೇ ಭಿನ್ನಾಭಿಪ್ರಾಯವಿಲ್ಲ ಎಂದು ನಾನು ಭಾವಿಸುತ್ತೇನೆ. ಇಷ್ಟು ಹೇಳಿದ ನಂತರ, ಈ ಸದನದಲ್ಲಿ ಮಂಡಿಸಲಾದ ಕೆಲವೊಂದು ಪ್ರಸ್ತಾಪಗಳ ಬಗ್ಗೆ ಇನ್ನಷ್ಟು ವಿವರಗಳನ್ನು ಪ್ರಸ್ತಾಪಿಸಬಯಸುತ್ತೇನೆ. ಈಗ ಸದನದಲ್ಲಿ ಮಂಡಿಸಿರುವ ಪ್ರಸ್ತಾಪಗಳು ಹಾಗೂ ಬಹುತೇಕ ಕರಡು ತಿದ್ದುಪಡಿಗಳನ್ನು ಭಾರತದ ರಾಜ್ಯಗಳ ಪ್ರತಿನಿಧಿಗಳೂ ಸೇರಿದಂತೆ ಈ ಸದನದ ಬಹುತೇಕ ಎಲ್ಲಾ ಸದಸ್ಯರೂ ಒಪ್ಪಿಕೊಳ್ಳುವುದಕ್ಕೆ ಯಾವ ತೊಂದರೆಯೂ ಇಲ್ಲ. ಸಂವಿಧಾನದ ಆರನೇ ಭಾಗದಲ್ಲಿ ವಿವಿಧ ಪ್ರಾಧಿಕಾರಗಳಿಗೆ ಹಕ್ಕುಗಳು, ಅಧಿಕಾರಗಳು ಹಾಗೂ ಜವಾಬ್ದಾರಿಗಳನ್ನು ನೀಡಲಾಗಿರುವಂತೆ ಅಂಥದ್ದೆ ಅಧಿಕಾರಗಳನ್ನು ಭಾರತೀಯ ರಾಜ್ಯಗಳಲ್ಲಿರುವ ಸಂವಾದೀ ಪ್ರಾಧಿಕಾರಗಳಿಗೂ ನೀಡಬೇಕು ಎಂಬುದು ಎಲ್ಲರ ಅಭಿಪ್ರಾಯವಾಗಿದೆ. ಕೆಲವೊಂದು ವ್ಯತ್ಯಾಸಗಳಿರುತ್ತವೆ, ಆದರೆ ಅವುಗಳಿಗೆ ಅವಕಾಶ ಮಾಡಿಕೊಡಬೇಕು. ಮೂಲಭೂತ ಹಕ್ಕುಗಳು ಹಾಗೂ ಪೌರತ್ವ ಹಕ್ಕುಗಳಿಗೆ ಸಂಬಂಧಿಸಿದಂತೆ ಒಂದು ಘಟಕ ಇನ್ನೊಂದು ಘಟಕದ ನಡುವೆ ಯಾವ ಭೇದವೂ ಇರಕೂಡದು ಎಂಬುದರಲ್ಲಿ ಯಾವುದೇ ಸಂದೇಹವಿಲ್ಲ. ಆದರೆ ಆಂತರಿಕ ವ್ಯವಸ್ಥೆಗೆ ಸಂಬಂಧಿಸಿದಂತೆ ಕೆಲವೊಂದು ಏರ್ಪಾಟುಗಳನ್ನು ಮಾಡುವುದು ಅವಶ್ಯವಾಗಿದೆ. ಕೆಲವು ಸದಸ್ಯರು "ನೀವು ಸಮಾನ ಸಂವಿಧಾನ ಇರಬೇಕು ಎಂದು ಹೇಳುತ್ತಿರುವಾಗ ಈ ತಿದ್ದುಪಡಿಗಳೇಕೆ ಬೇಕು? ನಿಮಗೆ ಆರನೇ ಭಾಗದ ಅಗತ್ಯವಾದರೂ ಏನು" ಎಂದು ಕೇಳಿರುವುದರಿಂದ ಈ ವಿಷಯವನ್ನು ಸ್ಪಷ್ಟಪಡಿಸುವುದಕ್ಕಾಗಿ ಸಂಕ್ಷಿಪ್ತವಾಗಿ ಆ ಬಗ್ಗೆ ಪ್ರಸ್ತಾಪಿಸುತ್ತಿದ್ದೇನೆ. ಈ ಪ್ರಶ್ನೆಗೆ ಉತ್ತರಿಸುವುದು ನನಗೆ ಕಷ್ಟವೇನಲ್ಲ. ಆದರೆ ಈ ವಿಷಯಕ್ಕೆ ಸಂಬಂಧಿಸಿದಂತೆ ಸರ್ದಾರ್ ಪಟೇಲ್ ಅವರು ನೆನ್ನೆಯ ದಿನ ಅತ್ಯಂತ ತಿಳಿಯಾದ ಭಾಷೆಯಲ್ಲಿ ಸಮಗ್ರವಾಗಿ ವಿವರಣೆ ನೀಡಿದ್ದಾರೆ. ಅದು ಇಂತಹ ಪ್ರಶ್ನೆಗಳಿಗೆ ಸಮಾಧಾನಕರವಾದ ಉತ್ತರ ನೀಡಿದೆ.

ಮೊದಲನೆಯದಾಗಿ, ಮಾನ್ಯರೇ, ಮಾರ್ಪಾಟು ಅಗತ್ಯವಾಗಿರುವ ಒಂದು ವಿಷಯ, ಸಂಬಂಧಪಟ್ಟ ರಾಜ್ಯದ ಸಾಂವಿಧಾನಿಕ ಪ್ರಧಾನರು ಯಾರು ಎಂಬುದಕ್ಕೆ ಸಂಬಂಧಿಸಿದ್ದು. ಪ್ರಾಂತ್ಯಗಳಲ್ಲಿ ಆ ರಾಜ್ಯದ ರಾಜ್ಯಪಾಲರು ಸಾಂವಿಧಾನಿಕ ಮುಖ್ಯಸ್ಥರಾಗಿರುತ್ತಾರೆ. ಆದರೆ ಭಾರತದ ರಾಜ್ಯಗಳ ವಿಷಯದಲ್ಲಿನ ಪರಿಸ್ಥಿತಿಯೇ ಬೇರೆ.ಚಾರಿತ್ರಿಕ ಅಂಶಗಳು ಹಾಗೂ ನಿಷ್ಠುರವಾದ ಈಗಿನ ಸನ್ನಿವೇಶಗಳಿಂದಾಗಿ ಬೇರೆ ರೀತಿಯ ವ್ಯವಸ್ಥೆ ಮಾಡುವುದು ಅಗತ್ಯವಾಗಿದೆ. ಈ ಕಾರಣದಿಂದಾಗಿಯೇ ಇನ್ನೊಂದು ರೀತಿಯ ಅವಕಾಶ ಕಲ್ಪಿಸಿ, ತಿದ್ದುಪಡಿಯನ್ನು, ಮಾರ್ಪಾಟನ್ನು ಸದನದ ಮುಂದಿಡಲಾಗಿದೆ. ಭಾರತದ ರಾಜ್ಯಗಳಿಗೆ ಸಂಬಂಧಿಸಿದಂತೆ ರಾಜಪ್ರಮುಖರು ಆಯಾ ರಾಜ್ಯಗಳ ಸಾಂವಿಧಾನಿಕ ಮುಖ್ಯಸ್ಥರಾಗಿರುತ್ತಾರೆ. ಈ ಸಾಂವಿಧಾನಿಕ ಮುಖ್ಯಸ್ಥರಿಗೆ ವಹಿಸಲಾಗಿರುವ ಅಧಿಕಾರಗಳಿಗೂ ಪ್ರಾಂತ್ಯಗಳ ರಾಜ್ಯಪಾಲರಿಗೆ ವಹಿಸಲಾಗಿರುವ ಅಧಿಕಾರಗಳಿಗೂ ಯಾವ ವ್ಯತ್ಯಾಸವೂ ಇಲ್ಲ. ಆದ್ದರಿಂದ ರಾಜಪ್ರಮುಖರನ್ನು ಸಾಂವಿಧಾನಿಕ ಮುಖ್ಯಸ್ಥರೆಂದು ಗುರುತಿಸಿದರೂ ಕೂಡ ಅವರು ಚಲಾಯಿಸುವ ಅಧಿಕಾರಗಳು ರಾಜ್ಯಪಾಲರ ಅಧಿಕಾರಗಳಿಗಿಂತ ಸ್ವಲ್ಪ ಕಡಿಮೆಯೂ ಇಲ್ಲ ಸ್ವಲ್ಪ ಹೆಚ್ಚೂ ಇಲ್ಲ.

ಈ ಪದದ ವ್ಯಾಖ್ಯಾನಕ್ಕೆ ಸಂಬಂಧಿಸಿದಂತೆ ಸ್ವಲ್ಪ ಭಿನ್ನಾಭಿಪ್ರಾಯವಿದೆ. ರಾಜಪ್ರಮುಖ ಎಂದರೆ ಅನೇಕ ರಾಜರಲ್ಲಿ ಅವನು ಪ್ರಮುಖ ಎಂಬ ಅರ್ಥ ಬರುವುದರಿಂದ ಈಗ ಒಬ್ಬನೇ ಒಬ್ಬ ಆಳುವವನಿರುವಂಥ ರಾಜ್ಯಗಳ ವಿಷಯದಲ್ಲಿ ಇದು ಅಷ್ಟು ಸರಿಯಾಗಲಾರದು ಎಂಬುದಾಗಿ ವಾದಿಸಲಾಗಿದೆ. ಆದ್ದರಿಂದ "ರಾಜಪ್ರಮುಖ" ಎಂಬ ಈ ಪದಕ್ಕೆ ಸೂಕ್ತ ವ್ಯಾಖ್ಯಾನವನ್ನು ಕೊಡುವ ಕೆಲಸ ಈಗ ಸದನದ ಮುಂದಿದೆ. ವಿವಿಧ ರಾಜ್ಯಗಳಲ್ಲಿ ಈ ಸಂಬಂಧವಾಗಿ ಏನೇನು ವ್ಯತ್ಯಾಸಗಳಿವೆ ಎಂಬುದನ್ನು ಇಲ್ಲಿ ಹೇಳಲಾಗಿದೆ. ಹೈದ್ರಾಬಾದ್‌ಗೆ ಸಂಬಂಧಿಸಿದಂತೆ 'ರಾಜಪ್ರಮುಖ' ಎಂದರೆ ಹೈದ್ರಾಬಾದಿನ ನಿಜಾಮ ಎಂದು ಅರ್ಥವಾಗುತ್ತದೆ. ಜಮ್ಮು ಮತ್ತು ಕಾಶ್ಮೀರ ಹಾಗೂ ಮೈಸೂರು ರಾಜ್ಯಗಳ ವಿಷಯದಲ್ಲಿ 'ಮಹಾರಾಜ' ಎಂಬ ಅರ್ಥ ಕೊಡುತ್ತದೆ. ಏಕೆಂದರೆ ಭಾರತದ ರಾಷ್ಟ್ರಪತಿಯವರೇ ಈ ಮಹಾರಾಜರನ್ನು ರಾಜಪ್ರಮುಖರೆಂದು ಮಾನ್ಯ ಮಾಡತಕ್ಕದ್ದು ಎಂದು ತಿಳಿಯಪಡಿಸಿದ್ದಾರೆ. ಇದರಲ್ಲಿ ಆಶ್ಚರ್ಯಪಡುವಂಥದೇನೂ ಇಲ್ಲ. ಹಿಂದೆ ಬ್ರಿಟಿಷರ ಆಳ್ವಿಕೆ ಇಲ್ಲಿದ್ದಾಗಲೂ ಸಹ ಈ ರೀತಿಯ ಮಾನ್ಯತೆ ನೀಡುವ ಬಗ್ಗೆ ಒಂದು ಗೊತ್ತುಪಾಡು ಇತ್ತು. ಆದ್ದರಿಂದ ಈಗ ಪ್ರಸ್ತಾಪಿಸಿರುವುದರಲ್ಲಿಯೂ ಹೆಚ್ಚಿನ ವ್ಯತ್ಯಾಸವೇನೂ ಇಲ್ಲ. ಆದ್ದರಿಂದ ರಾಜ್ಯಗಳ ಸಾಂವಿಧಾನಿಕ ಮುಖ್ಯಸ್ಥರನ್ನು ಸೂಚಿಸಲು ಇನ್ನೂ ಹೆಚ್ಚು ಸೂಕ್ತವಾದ ಪದವನ್ನು ಕಂಡುಹಿಡಿಯಬಹುದಾಗಿತ್ತಾದರೂ ಈಗಾಗಲೇ ಮಾಡಿಕೊಂಡಿರುವ ಒಪ್ಪಂದಗಳಲ್ಲಿ 'ರಾಜ್ಯಪ್ರಮುಖ' ಎಂಬ ಪದವನ್ನೇ ಈಗಾಗಲೇ ಬಳಸಿರುವುದರಿಂದ ಅದೇ ಪದವನ್ನು ಉಳಿಸಿಕೊಳ್ಳಲು ಪ್ರಸ್ತಾವಿಸಲಾಗಿದೆ.

ಶಾಸನಾತ್ಮಕ ಅಧಿಕಾರಗಳಿಗೆ ಸಂಬಂಧಿಸಿದಂತೆ ಯಾವ ರೀತಿಯ ವ್ಯತ್ಯಾಸವೂ ಇಲ್ಲ. ಶಾಸನ ರಚನೆಯ ಕ್ಷೇತ್ರವು ಪ್ರಾಂತ ಹಾಗೂ ಭಾರತೀಯ ರಾಜ್ಯಗಳೆರಡರಲ್ಲೂ ಸದೃಶವಾಗಿರುತ್ತದೆ ಹಾಗೂ ಒಂದೇ ರೂಪದ್ದಾಗಿರುತ್ತದೆ, ಆ ಬಗ್ಗೆ ನಾನು ಶೀಘ್ರವಾಗಿ ಪ್ರಸ್ತಾಪಿಸುವುದಿಲ್ಲ.

ಹಣಕಾಸು ವ್ಯವಸ್ಥೆಗೆ ಸಂಬಂಧಿಸಿದಂತೆ ಒಂದೇ ಒಂದು ಮಾತು ಹೇಳಬೇಕು. ಇಲ್ಲಿಯೂ ಸಹ ಪ್ರಾಂತ ಹಾಗೂ ಕೇಂದ್ರದ ಸಂಬಂಧ ಮತ್ತು ಭಾರತೀಯ ರಾಜ್ಯಗಳು ಹಾಗೂ ಕೇಂದ್ರದ ಸಂಬಂಧ ಒಂದೇ ರೀತಿ ಇರಬೇಕು ಎಂಬ ಮೂಲ ಆಧಾರದ ಮೇಲೇ ನಾವು ಮುಂದುವರೆಯುತ್ತಿದ್ದೇವೆ. ಈ ತತ್ವವನ್ನು ಜಾರಿಗೆ ತರುವಾಗ ಸಹಜವಾಗಿಯೇ ಇದರಿಂದ ಭಾರತೀಯ ರಾಜ್ಯಗಳಲ್ಲಿನ ಹಣಕಾಸಿನ ವ್ಯವಸ್ಥೆಯಲ್ಲಿ ಕೆಲವು ಪಲ್ಲಟಗಳಾಗುತ್ತವೆ. ಕಳೆದ ಕೆಲವು ತಿಂಗಳುಗಳಲ್ಲಿ ಈ ಏಕರೂಪತೆಯ ತತ್ವ ಜಾರಿಯಾಗುವುದರ ಜೊತೆಜೊತೆಗೆಯೇ ಭಾರತೀಯ ರಾಜ್ಯಗಳ ಹಣಕಾಸು ವ್ಯವಸ್ಥೆಯಲ್ಲಿ ಪಲ್ಲಟಗಳಾಗದಂತೆ ನೋಡಿಕೊಳ್ಳಲು ಕೆಲವೊಂದು ಪ್ರಯತ್ನಗಳನ್ನು ಮಾಡಲಾಗಿದೆ. ಸರ್ ವಿ. ಟಿ. ಕೃಷ್ಣಮಾಚಾರಿ ಅವರ ಅಧ್ಯಕ್ಷತೆಯ The Federal Finance Integration ಸಮಿತಿಯು ಈ ಅಂಶವನ್ನು ಕೂಲಂಕಷವಾಗಿ ಪರಿಶೀಲಿಸಿದೆ ಹಾಗೂ ಎಲ್ಲ ರಾಜ್ಯಗಳೂ ಈ ಸಂಬಂಧವಾದ ಒಪ್ಪಂದಕ್ಕೆ ತಾತ್ಕಾಲಿಕ ಸಹಿ ಹಾಕಿವೆ. ಈ ಸಂಬಂಧವಾಗಿ ನಾನು ಒಂದು ಅಂಶವನ್ನು ನಿವೇದಿಸಿಕೊಳ್ಳುತ್ತಿದ್ದೇನೆ. ಕೇಂದ್ರದೊಂದಿಗೆ ರಾಜ್ಯಗಳು ಮಾಡಿಕೊಳ್ಳುತ್ತಿರುವ ಒಪ್ಪಂದವು 10 ವರ್ಷಗಳ ಅವಧಿಯವರೆಗೆ ಮಾತ್ರ

ಜಾರಿಯಲ್ಲಿರಬೇಕು ಎಂದು ಉದ್ದೇಶಿಸಲಾಗಿದೆ. ಆದರೆ ಫೆಡರಲ್ ಹಣಕಾಸು ಒಪ್ಪಂದದ ಪರಿಣಾಮವಾಗಿ ಉಂಟಾಗುವ ಕಷ್ಟಕರ ಪರಿಸ್ಥಿತಿಯನ್ನು ಭಾರತೀಯ ರಾಜ್ಯಗಳು ನಿಭಾಯಿಸಿಕೊಂಡು ಹೋಗುವುದಕ್ಕಾಗಿ ಈ ಹತ್ತು ವರ್ಷಗಳ ಅವಧಿಯನ್ನು 15 ವರ್ಷಗಳ ಅವಧಿಗೂ ವಿಸ್ತರಿಸಬೇಕಾಗಬಹುದು ಎಂದು ನಾನು ಒತ್ತಿಹೇಳಬಯಸುತ್ತೇನೆ. ಸಂಬಂಧಪಟ್ಟ ವಲಯಗಳಲ್ಲಿ ಈ ಬಗ್ಗೆ ಈಗಾಗಲೇ ಚರ್ಚಿಸಲಾಗಿದೆ. ನಮ್ಮ ಈ ಸೂಚನೆಯನ್ನು ಸಂಬಂಧಪಟ್ಟವರು ಕಳಕಳಿಯಿಂದ ಹಾಗೂ ಸಹಾನುಭೂತಿಯಿಂದ ಗಮನಿಸುತ್ತಾರೆ ಎಂದು ನಿರೀಕ್ಷಿಸುತ್ತೇನೆ.

ಅನಂತರ, ರಾಜ್ಯಗಳ ಗಡಿ ರೇಖೆಗಳ ಮರುವಿತರಣೆ ಕುರಿತಂತೆ ಕೆಲವೊಂದು ಭಿನ್ನಾಭಿಪ್ರಾಯಗಳಿವೆ. ಮೂಲತಃ ಈ ಘನತೆವೆತ್ತ ಸದನವು ಜಾರಿಗೊಳಿಸಿದ ಉಪಖಂಡ (3)ರ ಪ್ರಕಾರ ಭಾಗ 1ರಲ್ಲಿರುವ ಪ್ರಾಂತಗಳಿಗೆ ಸಂಬಂಧಿಸಿದಂತೆ ಶಾಸಕಾಂಗದ ಅಭಿಪ್ರಾಯಗಳೇನಿವೆ ಎಂಬುದನ್ನು ಖಚಿತಪಡಿಸಿಕೊಳ್ಳಬೇಕು ಹಾಗೂ ಭಾಗ 3 ರಲ್ಲಿರುವ ರಾಜ್ಯಗಳಿಗೆ ಸಂಬಂಧಿಸಿದಂತೆ ರಾಜ್ಯಗಳ ಪದ್ಧತಿಯನ್ನು ಪಡೆದುಕೊಳ್ಳಬೇಕು ಎಂದು ಅವಕಾಶ ಕಲ್ಪಿಸಲಾಗಿತ್ತು. ಭಾರತೀಯ ರಾಜ್ಯಗಳ ವಿಷಯದಲ್ಲಿ ಯಾವುದೇ ಗಡಿ ರೇಖೆಗಳ ಮರುವಿತರಣೆ ಮಾಡುವುದಕ್ಕೆ ಮೊದಲು ರಾಜ್ಯಗಳ ಪೂರ್ವಸಮ್ಮತಿ ಪಡೆಯಬೇಕು ಎಂದು ಮೈಸೂರು ರಾಜ್ಯಾಂಗ ರಚನಾ ಸಭೆ ಅಭಿಪ್ರಾಯಪಟ್ಟಿತು. ಮೈಸೂರು ರಾಜ್ಯಾಂಗ ರಚನಾ ಸಭೆ ಯಾಕೆ ಈ ನಿರ್ಣಯ ಕೈಗೊಂಡಿತು ಮತ್ತು ಯಾಕೆ ಇಂತಹ ಶಿಫಾರಸ್ಸು ಮಾಡಿತು ಎಂಬುದರ ಕಾರಣಗಳನ್ನು ನಾನು ಇಲ್ಲಿ ಪ್ರಸ್ತಾಪಿಸಬೇಕಿಲ್ಲ.

ಪ್ರಾಂತ್ಯಗಳ ವಿಷಯದಲ್ಲಿ ಅವರ ಅಭಿಪ್ರಾಯ ಏನೆಂಬುದನ್ನು ಖಚಿತಪಡಿಸಿಕೊಂಡರೆ ಸಾಕು ಎಂದು ಇದ್ದುದರಿಂದ ರಾಜ್ಯಗಳಿಗೆ ಸಂಬಂಧಿಸಿದಂತೆಯೂ ಕೂಡ ಇಂತಹದೇ ವಿಧಾನ ಸಾಕು ಹಾಗೂ ಈ ವಿಷಯ ಕುರಿತಂತೆ ಭಾಗ 1ರಲ್ಲಿರುವ ಪ್ರಾಂತಗಳು ಹಾಗೂ ಭಾಗ 3ರಲ್ಲಿರುವ ರಾಜ್ಯಗಳ ನಡುವೆ ಯಾವುದೇ ವ್ಯತ್ಯಾಸ ಮಾಡಬೇಕಿಲ್ಲ ಎಂದು ಪ್ರಸ್ತಾಪಿಸಲಾಗಿದೆ. ಈ ವಿಷಯವನ್ನು ನಾನು ಇನ್ನಷ್ಟು ಪ್ರಸ್ತಾಪಿಸುವುದಿಲ್ಲ. ನೆನ್ನೆ ಸರ್ದಾರ್ ಪಟೇಲ್ ಅವರು ನೀಡಿದ ಹೇಳಿಕೆಯ ಬಗ್ಗೆ ಮಾತ್ರ ಈ ಸದನದ ಗಮನವನ್ನು ಸೆಳೆಯುತ್ತಿದ್ದೇನೆ. ಯಾವಾಗ ಗಡಿರೇಖೆಗಳ ಮರುಹಂಚಿಕೆ ಮಾಡಬೇಕಾಗಿದ್ದರೂ ರಾಜ್ಯದ ಶಾಸಕಾಂಗದ ಸಮ್ಮತಿಯೇ ಆಗಲಿ,ಅಥವಾ ಪ್ರಾಂತಗಳ ಶಾಸಕಾಂಗದ ಸಮ್ಮತಿಯೇ ಆಗಲಿ ಒಟ್ಟಿನಲ್ಲಿ ಜನತೆಯ ಆಶೋತ್ತರಗಳನ್ನು ಮಾತ್ರ ಕಡೆಗಣಿಸುವುದಿಲ್ಲ ಎಂದು ಸರ್ದಾರರು ಖಚಿತವಾಗಿ ತಿಳಿಸಿದ್ದಾರೆ. ಅದೇ ರೀತಿ ಭಾರತ ಸರ್ಕಾರವಾಗಲೀ, ಸಂಸತ್ತಾಗಲೀ ನಿರ್ದಿಷ್ಟ ರಾಜ್ಯದ ಹಾರೈಕೆಯನ್ನು ಎಂದಿಗೂ ಕಡೆಗಣಿಸುವುದಿಲ್ಲ ಎಂದೂ ಕೂಡ ಅವರು ಹೇಳಿದ್ದಾರೆ. ಅವರು ಈ ರೀತಿ ಆಶ್ವಾಸನೆ ಕೊಟ್ಟಿರುವುದರಿಂದ ಈ ವಿಷಯದ ಬಗ್ಗೆ ನಾನು ಹೆಚ್ಚಿಗೆ ಹೇಳಬಯಸುವುದಿಲ್ಲ.

ನಾನು ನನ್ನ ಮಾತುಗಳನ್ನು ಮುಗಿಸುವ ಮೊದಲು ಈಗ ನಮ್ಮ ಮುಂದಿಟ್ಟಿರುವ ಪ್ರಸ್ತಾಪದ ಮುಖ್ಯ ಉದ್ದೇಶವೇನೆಂದರೆ ಭಾಗ1 ಹಾಗೂ ಭಾಗ 3ರಲ್ಲಿ ತಿಳಿಸಿರುವ ಪ್ರಾಂತಗಳಿಗೆ ಸಂಬಂಧಿಸಿದಂತೆ ಏಕರೂಪತೆಯನ್ನೂ ಕಾಪಾಡಿಕೊಳ್ಳುವುದು. ಪ್ರಸ್ತಾವಿಸಿರುವ ಕರಡು ಅನುಚ್ಛೇದ 306 ಬಿ ಗೆ ಸಂಬಂಧಿಸಿದಂತೆ ಸಹಜವಾಗಿಯೇ ಸ್ವಲ್ಪ ತಪ್ಪು ತಿಳುವಳಿಕೆ ಉಂಟಾಗಿದೆ ಎಂದು

ಸರ್ದಾರ್ ಅವರು ಹೇಳಿದ್ದು ಈ ಹಿನ್ನೆಲೆಯಲ್ಲಿಯೇ. ಅನೇಕ ಸದಸ್ಯರುಗಳು ಸದನದಲ್ಲಿ ವಿವಿಧ ಅಭಿಪ್ರಾಯಗಳನ್ನು ಈಗಾಗಲೇ ವ್ಯಕ್ತಪಡಿಸಿದ್ದಾರೆ. ಈ 306 ಬಿ ಅನುಚ್ಛೇದವು ಪ್ರಾಂತಗಳು ಹಾಗೂ ರಾಜ್ಯಗಳ ನಡುವೆ ವ್ಯತ್ಯಾಸ ಕಲ್ಪಿಸುವ ಅಂಶ ಮೇಲುನೋಟಕ್ಕೆ ವ್ಯಕ್ತವಾಗುತ್ತಿದೆ ಎಂದು ನಾನು ಗೌರವದಿಂದಲೇ ಹೇಳುತ್ತಿದ್ದೇನೆ. ಆದ್ದರಿಂದ 'ಈ ವ್ಯತ್ಯಾಸ ಏಕೆ' ಎಂಬ ಪ್ರಶ್ನೆಯನ್ನು ಸಹಜವಾಗಿಯೇ ಕೇಳುವಂತಾಗುತ್ತದೆ. ರಾಜ್ಯಗಳನ್ನೂ ಹಾಗು ಪ್ರಾಂತಗಳನ್ನು ಒಂದೇ ರೀತಿಯಾಗಿ ನೋಡಬೇಕು ಎಂಬುದೇ ಉದ್ದೇಶವಾಗಿದ್ದಲ್ಲಿ ಅನುಸೂಚಿಯ ಭಾಗ 3ರಲ್ಲಿರುವ ಈ ರಾಜ್ಯಗಳನ್ನು 306ಬಿ ಅನುಚ್ಛೇದದಲ್ಲಿ ಆಲೋಚಿಸಲಾಗಿರುವ ಸಾರ್ವತ್ರಿಕ ನಿಯಂತ್ರಣಕ್ಕೆ ಒಳಪಡಿಸಿದ್ದೇಕೆ? ಮೈಸೂರು ರಾಜ್ಯಾಂಗ ರಚನಾ ಸಭೆಗೆ ಸಂಬಂಧಿಸಿದಂತೆ ಈ ಅಂಶವನ್ನು ನಾನು ಪ್ರಸ್ತಾಪಿಸದಿದ್ದರೆ ನನ್ನ ಕರ್ತವ್ಯ ಚ್ಯುತಿ ಮಾಡಿದಂತಾಗುತ್ತದೆ. ಮೈಸೂರಿಗೆ ಸಂಬಂಧಿಸಿದಂತೆ ಮಾತ್ರ ಯಾವುದೇ ರೀತಿಯಲ್ಲಿಯೂ ಈ ಅನುಚ್ಛೇದವನ್ನು ನ್ವಯಿಸಬಾರದು ಎಂದು ಸರ್ವಾನುಮತದ ಅಭಿಪ್ರಾಯ ವ್ಯಕ್ತವಾಗಿದೆ.

ಪ್ರಾಂತಗಳು ಮತ್ತು ರಾಜ್ಯಗಳ ನಡುವೆ ಯಾವುದೇ ಭೇದ ಎಣಿಸುವುದಿಲ್ಲ ಎಂಬ ಭಾವನೆಯಿಂದಲೇ ನಾವು ಅಂದರೆ ರಾಜ್ಯಗಳ ಜನರು ಸಮಾನ ಸಂವಿಧಾನಕ್ಕಾಗಿ ಸದಾಕಾಲವೂ ಒತ್ತಾಯಿಸುತ್ತಿದ್ದೇವೆ ಮತ್ತು ಹೋರಾಡುತ್ತಿದ್ದೇವೆ. ಆದರೆ ಈ 306 ಬಿ ಅನುಚ್ಛೇದವು ಈ ವ್ಯತ್ಯಾಸವನ್ನು ಕಲ್ಪಿಸಿದಂತೆ ಕಾಣುತ್ತಿದೆ. ಇದೇ ಸಂದರ್ಭದಲ್ಲಿ ನಾನು ಹೇಳಬಯಸುವುದೇನೆಂದರೆ ನಾವು ಈ ಸಮಸ್ಯೆಯ ಬಗ್ಗೆ ವ್ಯವಹರಿಸುವಾಗಲೆಲ್ಲ ಭಾರತದ ಭದ್ರತೆ ಮತ್ತು ಸ್ಥಿರತೆಗೆ ಯಾವ ರೀತಿಯಲ್ಲೂ ಸ್ವಲ್ಪವೂ ಕೂಡ ಧಕ್ಕೆಯಾಗಬಾರದು ಎಂಬ ಆಪೇಕ್ಷೆಯೇ ನಮ್ಮಲ್ಲಿ ಎಲ್ಲಕ್ಕಿಂತಲೂ ಮುಖ್ಯವಾಗಿದೆ. ನಮ್ಮ ಮುಂದೆ ಯಾವ ಪ್ರಸ್ತಾಪವನ್ನಿಟ್ಟರೂ ಈ ಮೂಲಭೂತ ಅಂಶವನ್ನು ಮರೆಯದಿರಬೇಕು ಎಂಬುದು ನಮ್ಮ ಆಶಯ. ಪ್ರಸ್ತುತ ಸನ್ನಿವೇಶದಲ್ಲಿ ಯಾವುದೇ ರಾಜ್ಯದಲ್ಲಿ ಪರಿಸ್ಥಿತಿಯಲ್ಲಿ ಸ್ಥಿರತೆ ಸಾಧಿಸುವುದಕ್ಕಾಗಿ, ಪ್ರಜಾಪ್ರಭುತ್ವ ಭದ್ರವಾಗಿ ನೆಲೆ ಊರುವಂತೆ ಮಾಡಲು ಹಾಗೂ ಅದು ದೃಢವಾಗಿ ನಿಲ್ಲುಲು ಇಂತಹ ಕೆಲವೊಂದು ಅಧಿಕಾರ ಅಗತ್ಯ ಎಂದು ಬಾವಿಸಿದ್ದಾದರೆ ಅಂತಹ ನಿರ್ಧಾರದ ಔಚಿತ್ಯವನ್ನು ನಾನು ಪ್ರಶ್ನಿಸುವುದಕ್ಕೆ ಹೋಗುವುದಿಲ್ಲ. ಆದರೆ ಭಾಗ 3ರಲ್ಲಿ ತಿಳಿಸಿರುವ ಎಲ್ಲ ರಾಜ್ಯಗಳಿಗೂ ಏಕರೂಪವಾಗಿ ಈ ವಾಕ್ಯಾಂಶವನ್ನು ಅನ್ವಯಿಸುವಂತಿಲ್ಲ ಎಂಬುದನ್ನು ಮಾತ್ರ ಗಮನದಲ್ಲಿಟ್ಟುಕೊಳ್ಳಲೇಬೇಕು.

ಈ ಸಂದರ್ಭದಲ್ಲಿ ನಾನು ಮೈಸೂರಿನ ಪರವಾಗಿ ಮಾತ್ರ ಮಾತಾಡುತ್ತಿದ್ದೇನೆ ಹಿಂದಿನ ಅನೇಕ ದಶಕಗಳಿಂದಲೂ ಒಂದು ವ್ಯವಸ್ಥಿತವಾದ ಆಡಳಿತವನ್ನು ಹೊಂದಿರುವುದಕ್ಕಾಗಿ ಮೈಸೂರು ಪ್ರಸಿದ್ಧವಾಗಿದೆ. ಮೈಸೂರಿನಲ್ಲಿರುವಂತಹ ಖಾಯಂ ಸೇವಾ ವ್ಯವಸ್ಥೆ ಮೈಸೂರಷ್ಟೇ ಅಲ್ಲ ಭಾರತವೂ ಹೆಮ್ಮೆಪಡಬೇಕಾದಂತಹ ವಿಷಯವಾಗಿದೆ.

ಭಾರತದ ಎಲ್ಲ ರಾಜ್ಯಗಳಿಗಿಂತ ಮೊದಲೇ ಅಷ್ಟೇಕೆ ಎಲ್ಲ ಪ್ರಾಂತಗಳಿಗಿಂತ ಮೊದಲೇ-ಅಂದರೆ 1881ರಷ್ಟು ಹಿಂದೆಯೇ ಪ್ರಜಾಪ್ರತಿನಿಧಿ ಸಭೆಯನ್ನು ಜಾರಿಗೆ ತಂದ ರಾಜ್ಯ ಮೈಸೂರು. 1907ರಲ್ಲಿ ನ್ಯಾಯವಿಧಾಯಕ ಸಭೆ ಎಂಬ ಇನ್ನೊಂದು ಸದನವನ್ನೂ ಸಹ ಜಾರಿಗೆ ತರಲಾಯಿತು. ಆದ್ದರಿಂದ ಈ ಎಲ್ಲ ದಶಕಗಳಲ್ಲಿ ಪ್ರಜಾಸತ್ತಾತ್ಮಕ ವ್ಯವಸ್ಥೆಯಲ್ಲಿ ಕೆಲಸ ಮಾಡುವುದು

ಹೇಗೆ ಎಂಬುದನ್ನು ಮೈಸೂರಿನವರು ಅರಿತಿದ್ದಾರೆ. ಕಾರ್ಯಾಂಗದ ವಿಷಯಕ್ಕೆ ಬಂದರೆ ದಿವಾನರೇ ರಾಜ್ಯದ ಉನ್ನತ ಅಧಿಕಾರಿಯಾಗಿರುತ್ತಿದ್ದರು. ಆದರೂ ಈ ಎಲ್ಲ ದಶಕಗಳಲ್ಲಿ ಮೈಸೂರಿನಲ್ಲಿ ಪ್ರಜಾಸತ್ತಾತ್ಮಕ ವ್ಯವಸ್ಥೆ ಇದ್ದುದನ್ನು ಅಲ್ಲಗಳೆಯುವಂತಿಲ್ಲ.

ಇದನ್ನು ಗಮನದಲ್ಲಿಟ್ಟುಕೊಂಡಾಗ, ಮೈಸೂರಿನಂತಹ ರಾಜ್ಯವನ್ನು 306 ಬಿ ಅನುಚ್ಛೇದದ ವ್ಯಾಪ್ತಿಗೊಳಪಡಿಸುವುದು ಸರಿಯಲ್ಲ ಮತ್ತು ಅಪೇಕ್ಷಣೀಯವೂ ಅಲ್ಲ. ಬಹುದೀರ್ಘಕಾಲದಿಂದ ಪ್ರಜಾಸತ್ತಾತ್ಮಕ ವ್ಯವಸ್ಥೆಗಳು ಇದ್ದಂತಹ ಮತ್ತು ಸಚಿವರು ಶಾಸಕಾಂಗಕ್ಕೆ ಜವಾಬ್ದಾರಿಯಾಗಿದ್ದಂತಹ ಮೈಸೂರು ತಿರುವಾಂಕೂರು ಹಾಗೂ ಕೊಚ್ಚಿನ್‌ಗಳನ್ನು ಬೇರೆಯ ನೆಲೆಯಲ್ಲಿ ಪರಿಗಣಿಸಬೇಕಾಗುತ್ತದೆ ಎಂಬುದು ಸ್ಪಷ್ಟ ಎಂದು ನೆನ್ನೆ ಸದನಕ್ಕೆ ನೀಡಿದ ಹೇಳಿಕೆಯಲ್ಲಿ ಸರ್ದಾರ್ ಅವರು ತಿಳಿಸಿದರು. ಅನುಸೂಚಿಯ ಭಾಗ 3ರಲ್ಲಿ ತಿಳಿಸಿರುವ ಇನ್ನಿತರ ರಾಜ್ಯಗಳ ವಿಷಯದಲ್ಲಿಯೂ ಕೂಡ ಕೇಂದ್ರವು 306ಬಿ ಅನುಚ್ಛೇದದ ಅನ್ವಯ ತನಗೆ ದತ್ತವಾಗಿರುವ ಅಧಿಕಾರಗಳ ನೆರವು ಪಡೆಯುವ ಅಗತ್ಯವಿಲ್ಲ ಎಂಬುದು ನನ್ನ ದೃಢ ವಿಶ್ವಾಸ. ನಮ್ಮ ನಾಯಕರ ಸೂಕ್ಷ್ಮ ಪರಿಜ್ಞಾನ ಹಾಗೂ ರಾಜತಂತ್ರಜ್ಞತೆ ಹಾಗೆಯೇ ಭಾರತದ ರಾಜ್ಯಗಳ ಸಹಕಾರ ಮನೋಭಾವ-ಇವುಗಳಿಂದಾಗಿ ನಾವು ಇದುವರೆಗಿನ ನಮ್ಮ ಸಾಧನೆಗಳ ಬಗ್ಗೆ ಹೆಮ್ಮೆ ಪಡುವಂತಹ ಸ್ಥಿತಿಗೆ ಬಂದಿದೇವೆ. ಈ 306ಬಿ ಅನುಚ್ಛೇದ ಸಂವಿಧಾನಗಳೊಗೆ ಸೇರಿಕೊಂಡರೂ ಮುಂದೆಯೂ ಸಹ ಸ್ವಪ್ರೇರಣೆಯಿಂದಾಗಲೀ ಅಥವಾ ಇನ್ನಿತರ ಕಾರಣಗಳಿಂದಾಗಲೀ ಕೇಂದ್ರವು ಈ ಅನುಚ್ಛೇದದ ನೆರವು ಪಡೆಯಬೇಕಾದಂತಹ ಅಗತ್ಯ ಬರಲಾರದು. ಸಂವಿಧಾನದಲ್ಲಿ ಈ ಅನುಚ್ಛೇದವು ಒಂದು ಮೃತಪತ್ರದಂತೆ ಇರುತ್ತದೆ ಎಂದು ಆಶಿಸುತ್ತೇನೆ. ಏನೇ ಇದ್ದರೂ 306 ಬಿ ಅನುಚ್ಛೇದವು ಮೈಸೂರು ರಾಜ್ಯಕ್ಕೆ ಅನ್ವಯಿಸದಿರಲಿ ಎಂದು ನಿರೀಕ್ಷಿಸುತ್ತೇನೆ.

ಇನ್ನು ಸದನದ ವೇಳೆಯನ್ನು ಹೆಚ್ಚು ತೆಗೆದುಕೊಳ್ಳಲಾರೆ. ರಾಜ್ಯ ಹಾಗೂ ಪ್ರಾಂತಗಳ ಜನರ ಸಹಕಾರಗಳಿಂದ ನಮ್ಮ ಈ ಸಾಧನೆ ಸಾಧ್ಯವಾಗಿದೆ ಎಂದು ನೆನ್ನೆ ಹೇಳಲಾಯಿತು. ನಮ್ಮೆಲ್ಲರಿಗೂ ಇದರ ಬಗ್ಗೆ ಹೆಮ್ಮೆಯಿದೆ. ಈ ಸಂತೋಷದಲ್ಲಿ ನಾವೆಲ್ಲರೂ ಭಾಗಿಗಳು. ಈ ಸಾಧನೆ ಮಾಡಿದ ರಾಜ್ಯ ಮಂತ್ರಾಲಯಗಳಿಗೆ ಈಗಾಗಲೇ ನನ್ನ ವಿನಮ್ರ ಗೌರವ ಹಾಗೂ ಅಭಿನಂದನೆಗಳನ್ನು ತಿಳಿಸಿದ್ದೇನೆ. ಆದರೆ ಇದೆಲ್ಲಕ್ಕಿಂತ ದೊಡ್ಡ ಗುರಿ ನಮ್ಮ ಮುಂದಿದೆ. ಸ್ವರಾಜ್ಯದ ಕನಸು ಸಾಕಾರವಾಗಲು ಸಹಕಾರದ ಪ್ರಯತ್ನ ಹೀಗೆಯೇ ಮುಂದುವರೆಯಬೇಕು. ಸಾಮಾಜಿಕ ಹಾಗೂ ಆರ್ಥಿಕ ಪ್ರಜಾಪ್ರಭುತ್ವವನ್ನು ನಾವಿನ್ನೂ ಸಾಧಿಸಬೇಕಾಗಿದೆ. ನಾವು ಗಳಿಸಿರುವ ರಾಜಕೀಯ ಸ್ವಾತಂತ್ರ್ಯ ಹಾಗೂ ನಾವು ಈಗ ರೂಪಿಸುತ್ತಿರುವ ಸಂವಿಧಾನವನ್ನು ಭಾರತದ ಗೌರವವನ್ನು ಹೆಚ್ಚಿಸುವ ರೀತಿಯಲ್ಲಿ ಬಳಸಿಕೊಳ್ಳಬೇಕು. ಈ ಸಂವಿಧಾನವನ್ನು ವಾಸ್ತವವಾಗಿ ಜಾರಿಗೆ ತಂದಾಗ ಅದು ಅತ್ಯಂತ ಯಶಸ್ವಿಯಾಗುವ ರೀತಿಯಲ್ಲಿ ಇದೇ ರೀತಿಯ ಉತ್ಸಾಹ, ಸಹಕಾರ ಹಾಗೂ ದೃಢನಿಷ್ಠೆಗಳು ಇರುತ್ತವೆ ಎಂಬ ಬಗ್ಗೆ ಪೂರ್ಣ ವಿಶ್ವಾಸವಿದೆ.

ನನ್ನ ಕೆಲವು ಅಭಿಪ್ರಾಯಗಳೊಂದಿಗೆ, ಕರಡು ರಚನಾ ಸಮಿತಿಯು ಸದನದ ಮುಂದಿಟ್ಟಿರುವ ತಿದ್ದುಪಡಿಗಳಿಗೆ ನನ್ನ ಒಪ್ಪಿಗೆ ಸೂಚಿಸುತ್ತಿದ್ದೇನೆ. ಈ ಸಂವಿಧಾನದ ಯಾವುದೇ ಉಪಬಂಧಗಳನ್ನು ಜಾರಿಗೊಳಿಸುವಾಗ-ಯಾವುದೇ ರಾಜ್ಯದಲ್ಲಿರುವ ವಿಶೇಷ ಪರಿಸ್ಥಿತಿಗಳೇನು ಎಂಬುದನ್ನು ಪರಿಗಣಿಸಬೇಕೆಂದು ಸಂಬಂಧಪಟ್ಟ ಪ್ರಾಧಿಕಾರದವರಲ್ಲಿ ನನ್ನ ಮನವಿ.

## 1.ಅಭಿನಂದನಾ ಭಾಷಣ - ಶ್ರೀ ವಿ. ವೆಂಕಟಪ್ಪನವರು ಸಭಾಪತಿಯಾಗಿ ಸರ್ವಾನುಮತದಿಂದ ಆಯ್ಕೆಯಾದ ಸಂದರ್ಭದಲ್ಲಿ.

### ವಿಧಾನಸಭಾ ಕಲಾಪ-12, ಜನವರಿ 1950

**ಶ್ರೀ ಕೆ. ಚೆಂಗಲರಾಯರೆಡ್ಡಿ:** ಈ ಸದನದ ಸಭಾಪತಿಯಾಗಿ ನೀವು ಸರ್ವಾನುಮತದಿಂದ ಆಯ್ಕೆಯಾಗಿರುವುದು ನನಗೆ ಅತ್ಯಂತ ಸಂತೋಷ ಉಂಟುಮಾಡಿದೆ. ನಿಮಗೆ ಅಭಿನಂದನೆ ಸಲ್ಲಿಸುವ ಅವಕಾಶ ನನಗೆ ದೊರಕಿರುವುದು ನನ್ನ ಸುಕೃತ ಎಂದೇ ತಿಳಿಯುತ್ತೇನೆ. ಇಂದು ನಮ್ಮ ದೇಶದ ರಾಜಕೀಯ ಬೆಳವಣಿಗೆಯ ಹೊಸ ದಿಶೆಯನ್ನು ನಾವು ಪ್ರವೇಶಿಸುತ್ತಿದ್ದೇವೆ. ರಾಜ್ಯದಲ್ಲಿ ಕಳೆದ ಕೆಲವು ದಶಕಗಳಿಂದ ಕಾರ್ಯನಿರ್ವಹಿಸುತ್ತಿದ್ದ ಹಳೆಯ ಶಾಸನಸಭೆಗಳನ್ನು ರಾಜಕೀಯ ಬೆಳವಣಿಗೆಗಳ ಕಾರಣದಿಂದಾಗಿ ವಿಸರ್ಜಿಸಬೇಕಾಯಿತು ಮತ್ತು ಹೊಸ ವಿಧಾನಸಭೆಯನ್ನು ಅಸ್ತಿತ್ವಕ್ಕೆ ತರಬೇಕಾಯಿತು. ಈ ರಾಜ್ಯದಲ್ಲಿ ಹಿಂದಿನ ಶಾಸನಸಭೆಗಳು ಸಲ್ಲಿಸಿದ ಬಹಳ ಮಹತ್ತರವಾದ ಹಾಗೂ ಉಪಯುಕ್ತವಾದ ಸೇವೆಗೆ ಗೌರವ ಅರ್ಪಿಸಲು ಈ ಅವಕಾಶ ಬಳಸಿಕೊಳ್ಳುತ್ತಿದ್ದೇನೆ....ಸ್ವತಃ ಮಹಾರಾಜರೇ ಈ ಎರಡೂ ಸದನಗಳು ನಿರ್ವಹಿಸಿದ ಮಹತ್ತರ ಸೇವೆಯನ್ನು ಉಲ್ಲೇಖಿಸಿದ್ದಾರೆ. ನಾನು ಸೂಚಿಸಿದಂತೆ ರಾಜಕೀಯ ಬೆಳವಣಿಗೆಗಳು ಹಾಗೂ ಇನ್ನಿತರ ಕೆಲವು ಗುರುತರ ಪರಿಗಣನೆಗಳಿಂದಾಗಿ ಹಳೆಯ ಶಾಸನಸಭೆಗಳನ್ನು ವಿಸರ್ಜಿಸಬೇಕಾಯಿತು ಮತ್ತು ಹೊಸ ವಿಧಾನಸಭೆಯನ್ನು ಜಾರಿಗೆ ತರಲಾಯಿತು. ಮತ್ತು ರಾಜ್ಯದಲ್ಲಿ ಕಾರ್ಯನಿರ್ವಹಿಸುತ್ತಿರುವ ರಾಜ್ಯಾಂಗ ರಚನಾ ಸಭೆಯನ್ನು ಹೊಸ ವಿಧಾನಸಭೆಯಾಗಿ ಪರಿವರ್ತಿಸುವುದು ಸೂಕ್ತ ಎಂದು ಆಲೋಚಿಸಲಾಯಿತು. ಮಹಾಸ್ವಾಮಿಯವರು ಈ ಕುರಿತಂತೆ ಘೋಷಣೆ ಹೊರಡಿಸಿದ್ದಾರೆ ಮತ್ತು ಹೊಸ ವಿಧಾನಸಭೆಯು ಅಸಿತ್ವಕ್ಕೆ ಬಂದಿದೆ. ಈ ಘೋಷಣೆಯ ಪರಿಣಾಮವಾಗಿ ನಾವು ಇಂದು ಇಲ್ಲಿದ್ದೇವೆ ಮತ್ತು ಈಗಷ್ಟೇ ಈ ಪ್ರತಿಷ್ಠಿತ ಸಭೆಯ ಸಭಾಪತಿಯಾಗಿ ನಿಮ್ಮನ್ನು ಸರ್ವಾನುಮತದಿಂದ ಚುನಾಯಿಸಿದ್ದೇವೆ.

ಈ ಚುನಾವಣೆ ಸರ್ವಾನುಮತದಿಂದ ನಡೆದಿದೆ, ಅಷ್ಟೇ ಅಲ್ಲ, ಈ ಎಲ್ಲ ಪ್ರಕ್ರಿಯೆಗೂ ಮಹಾಸ್ವಾಮಿಯವರ ಅನುಮೋದನೆಯನ್ನು ಸೂಕ್ತವಾಗಿ ಪಡೆದುಕೊಳ್ಳಲಾಗಿದೆ....... ಮಹಾಸ್ವಾಮಿಯವರಿಗೆ ಪರಿಸ್ಥಿತಿಯ ವಾಸ್ತವಾಂಶಗಳು ತಿಳಿದಿದ್ದವು. ಅವರು ಸಂಪೂರ್ಣ ಅರಿವಿನೊಂದಿಗೇ ಸಭಾಪತಿಯವರ ಚುನಾವಣೆಗೆ ತಮ್ಮ ಅನುಮೋದನೆಯನ್ನು ಸಂತೋಷದಿಂದ ನೀಡಿದ್ದಾರೆ. ಈಗಷ್ಟೆ ಮುಗಿದ ಚರ್ಚೆಯಲ್ಲಿ ಸದಸ್ಯರೊಬ್ಬರು ಮಹಾಸ್ವಾಮಿಯವರು ತರಾತುರಿಯಲ್ಲಿ ಈ ನಿರ್ಣಯಕ್ಕೆ ಬಂದಿದ್ದಾರೆ ಎಂದು ಭಾವನೆ ಮೂಡಿಸಲು ಪ್ರಯತ್ನಿಸಿದರು. ಆದರೆ ಆ ಭಾವನೆ ಸರಿಯಿಲ್ಲ.

ಮಾನ್ಯರೆ, ತಾವು ಶಾಸನಸಭೆಯ ಸಭಾಪತಿಯ ಸ್ಥಾನವನ್ನು ಗಳಿಸಿರುವುದು ಇದೇ ಮೊದಲ ಸಲವೇನಲ್ಲ. ಕೇವಲ ಅರೇಳು ತಿಂಗಳುಗಳ ಹಿಂದೆಯಷ್ಟೇ ಪ್ರಜಾಪ್ರತಿನಿಧಿ ಸಭೆಗೆ ತನ್ನದೆ ಆದ ಅಧ್ಯಕ್ಷರನ್ನು ಚುನಾಯಿಸಿಕೊಳ್ಳುವ ಅವಕಾಶ ಮೊದಲ ಬಾರಿಗೆ ಸಿಕ್ಕಿತು. ಆಗಲೂ ಸಹ ನೀವೇ ಪ್ರಜಾಪ್ರತಿನಿಧಿ ಸಭೆಯ ಅಧ್ಯಕ್ಷರಾಗಿ ಸರ್ವಾನುಮತದಿಂದ ಚುನಾಯಿತರಾದಿರಿ. ಆದ್ದರಿಂದ ಪ್ರಜಾಪ್ರತಿನಿಧಿ ಸಭೆಯ ಮೊತ್ತಮೊದಲ ಅನಧಿಕೃತ ಅಧ್ಯಕ್ಷರಾಗುವ ಸದವಕಾಶ

ನಿಮ್ಮದ್ದಾಯಿತು. ಆದರೆ ನೀವು ಪ್ರಜಾಪ್ರತಿನಿಧಿ ಸಭೆಯ ಅಧ್ಯಕ್ಷರಾಗುವ ಪವಿತ್ರ ಜವಾಬ್ದಾರಿಯನ್ನು ವಹಿಸಿಕೊಂಡ ಸ್ವಲ್ಪ ಕಾಲದಲ್ಲಿಯೇ ಪ್ರಜಾಪ್ರತಿನಿಧಿ ಸಭೆ ವಿಸರ್ಜಿತವಾಗಿ ನಿಮ್ಮ ಅಧ್ಯಕ್ಷ ಪದವಿ ಕೊನೆಗೊಂಡಾಗ ನನಗೆ ವೈಯಕ್ತಿಕವಾಗಿ ದುಃಖವಾಯಿತು. ಆದರೆ ಈ ಶಾಸನ ಸಭೆಯು ಸಭಾಪತಿಯವರನ್ನು ಆಯ್ಕೆಮಾಡುವ ತನ್ನ ಅಧಿಕಾರ ಹಾಗೂ ಅವಕಾಶವನ್ನು ಬಳಸಿಕೊಂಡು ನಿಮ್ಮನ್ನು ತನ್ನ ಮೊದಲ ಸಭಾಪತಿಯಾಗಿ ಚುನಾಯಿಸಿರುವುದು ವಿಶೇಷವಾದ ಸಮಾಧಾನ ಹಾಗೂ ಸಂತೋಷ ತಂದಿದೆ.

ಭಾರತದ ಹೊಸ ಸಂವಿಧಾನವು ಈ ವರ್ಷದ ಜನವರಿ 26ರಂದು ಅಸ್ತಿತ್ವಕ್ಕೆ ಬರಲಿದೆ. ಮೈಸೂರಿನ ಸಂವಿಧಾನವೂ ಸಹ ಭಾರತದ ಸಂವಿಧಾನದಂತೇ ಇರುತ್ತದೆ. ಈ ಸಂವಿಧಾನದ ಅವಕಾಶಗಳ ಪ್ರಕಾರ ಈ ಕಾಯಿದೆಯು ಜಾರಿಗೆ ಬರುವ ತತ್‌ಕ್ಷಣದ ಹಿಂದೆ ಯಾರು ಶಾಸಕ ಸಭೆಯ ಸಭಾಪತಿಯಾಗಿರುತ್ತಾರೋ ಅವರೇ ಸಭಾಪತಿಯಾಗಿ ಮುಂದುವರೆಯುತ್ತಾರೆ. ಅಷ್ಟೇ ಅಲ್ಲ ಭಾರತದ ಸಂವಿಧಾನದ ಪ್ರಕಾರ ಇದುವರೆಗೆ ನಮ್ಮ ಸಂವಿಧಾನದಲ್ಲಿದ್ದುದಕ್ಕಿಂತ ಸಭಾಪತಿಯವರ ಸ್ಥಾನಮಾನ ಉತ್ತಮವಾಗಿರುತ್ತದೆ, ಹೆಚ್ಚು ಗೌರವಯುತವಾಗಿರುತ್ತದೆ ಮತ್ತು ಭಾರತೀಯ ಸಂವಿಧಾನದ ಪ್ರಕಾರ ಸಭಾಪತಿಯವರಿಗೆ ನಮ್ಮ ರಾಜ್ಯದಲ್ಲಿ ಇದುವರೆಗೆ ಇಲ್ಲದಿದ್ದಂತಹ ಕೆಲವೊಂದು ಹಕ್ಕು ಹಾಗೂ ಸವಲತ್ತುಗಳನ್ನು ನೀಡಲಾಗಿದೆ. ಈಗ ಆ ವಿಷಯದ ವಿವರಗಳನ್ನು ನಾನು ಪ್ರಸ್ತಾಪಿಸುವುದಿಲ್ಲ. ಆದರೆ ಇಷ್ಟು ಮಾತ್ರ ಹೇಳಬಯಸುತ್ತೇನೆ-ಜನವರಿ 26ರಂದು ಅಸ್ತಿತ್ವಕ್ಕೆ ಬರಲಿರುವ ಹೊಸ ಸಂವಿಧಾನದಲ್ಲಿ ಸಭಾಪತಿಯವರಿಗೆ ಬಹಳ ಉನ್ನತವಾದ ಸ್ಥಾನವಿರುತ್ತದೆ. ಕೇಂದ್ರದಲ್ಲಿ, ಭಾರತದ ಪ್ರಧಾನ ಮಂತ್ರಿಯವರ ನಂತರದ ಸ್ಥಾನ ಸಭಾಪತಿಯವರದು. ಪ್ರಾಂತಗಳಲ್ಲಿ ಅಥವಾ ಇನ್ನು ಮುಂದೆ ಕರೆಯಲಾಗುವಂತೆ ರಾಜ್ಯದಲ್ಲಿ ರಾಜ್ಯದ ಮುಖ್ಯಮಂತ್ರಿಯವರ ನಂತರದ ಸ್ಥಾನ ಸಭಾಪತಿಯವರದು. ಇದುವರೆಗೆ ಇಂತಹ ಪದ್ಧತಿ ಇರಲಿಲ್ಲ. ಹೊಸ ವ್ಯವಸ್ಥೆಯಲ್ಲಿ ಸಭಾಪತಿಯವರಿಗೆ ಎಂತಹ ಉನ್ನತ ಗೌರವವಿರುತ್ತದೆ ಎಂಬುದನ್ನು ಇದು ಸೂಚಿಸುತ್ತದೆ.

ಮಾನ್ಯರೇ, ಈ ದಿನ ನಾವು ಈ ಸದನದಲ್ಲಿ ಪ್ರಸ್ತಾಪಿಸಲಾದ ಆಯಾ Point of order ನ ವಿಷಯದಲ್ಲಿ ತುಂಬ ಸ್ವಾರಸ್ಯಕರ ಚರ್ಚೆಯೊಂದಿಗೆ ಸಭೆ ಆರಂಭಿಸಿದ್ದೇವೆ. ಇನ್ನು ಮುಂದೆ ನಾವು ವಿವಿಧ ಜಟಿಲ ಹಾಗೂ ಪ್ರಮುಖ ವಿವಾದಗಳನ್ನೆದುರಿಸುವಾಗ ನಡೆಯಲಿರುವ ಪರ್ಯಾಲೋಚನೆಗಳಲ್ಲಿ ಎಂತಹ ಅಂಶಗಳು ಹಾಗೂ point of order ಗಳನ್ನು ಪ್ರಸ್ತಾಪಿಸಬಹುದು. ಎಂಬುದನ್ನು ಇದು ಸೂಚಿಸುತ್ತವೆ. (ಒಂದು ದನಿ- 'ಹಾಗಾಗದಿರಲಿ'). ನೀವು ಇನ್ನು ಮುಂದೆ ಕಾಲಾನುಕಾಲಕ್ಕೆ ಎದುರಿಸಬೇಕಾದ ವಿವಿಧ ವಿಷಯಗಳಿಗೆ ಸಂಬಂಧಿಸಿದಂತೆ ಚರ್ಚಿಸುವಾಗ ಏನೇನು ಕಾದಿದೆ ಎಂಬುದರ ರುಚಿ ಈಗ ಗೊತ್ತಾದಂತಾಗಿದೆ (ನಗು). ನಮ್ಮ ಹಳೆಯ ಶಾಸನಸಭೆಯ ಅಧ್ಯಕ್ಷ ಪದವಿ ಹಾಗೂ ಸ್ಪೀಕರ್ ಪದವಿಗಳು ಇದಕ್ಕೆ ಹೋಲಿಸಿದರೆ ಹೂವಿನ ಹಾಸಿಗೆಯಾಗಿದ್ದವು ಎನ್ನಬಹುದು. ನಾವು ನ್ಯಾಯವಿಧಾಯಕ ಸಭೆ (Legislative Council) ಹಾಗೂ ಪ್ರಜಾಪ್ರತಿನಿಧಿ ಸಭೆಯ ಕೆಲಸಕ್ಕಾಗಿ ವರ್ಷಕ್ಕೆ ಎರಡು ಸಲ ಸೇರುತ್ತಿದ್ದೆವು. ಅನಂತರ ಮನೆಗಳಿಗೆ ಹೋಗಿ ದೀರ್ಘಕಾಲ ವಿಶ್ರಾಂತಿಯಲ್ಲಿರುತ್ತಿದ್ದೆವು (ನಗು), ಹೊಸ ಸಂವಿಧಾನದ ಪ್ರಕಾರ ನಾವು ಅನೇಕ ಸಲ ಸಭೆ ಸೇರಬೇಕಾಗುತ್ತದೆ. ನನಗೆ ತಿಳಿದಂತೆ ವರ್ಷಕ್ಕೆ ನಾಲ್ಕರಿಂದ ಐದು ತಿಂಗಳುಗಳ ಕಾಲ ಸಭೆ ನಡೆಯಬೇಕಾಗುತ್ತದೆ. ಮತ್ತು ಕಾರ್ಯಕಲಾಪಗಳನ್ನು ತೃಪ್ತಿಕರವಾಗಿ

ನಡೆಸಿಕೊಂಡು ಹೋಗಬೇಕಾಗುತ್ತದೆ. ಕೇವಲ ನಮ್ಮ ಬಜೆಟ್ ಅಧಿವೇಶನಕ್ಕಾಗಿಯೇ ಬಜೆಟ್‌ನ ಅನುಮೋದನೆಯಾಗುವ ವೇಳೆಗೆ ಒಂದು ತಿಂಗಳು ಬೇಕಾಗುತ್ತವೆ. ಆದ್ದರಿಂದ ಹೊಸ ಸಂವಿಧಾನದಲ್ಲಿ ಶಾಸನಸಭೆಯ ಸಭಾಪತಿಯವರ ಕೆಲಸ ಖಂಡಿತವಾಗಿಯೂ ಹೆಚ್ಚು ಕಠಿಣವಾಗಿರುತ್ತದೆ ಮತ್ತು ಹೆಚ್ಚು ಗೌರವಯುತವಾಗಿಯೂ ಇರುತ್ತದೆ. ಇಂತಹ ಪ್ರತಿಷ್ಠಿತ ಸದನದ ಕಾರ್ಯಕಲಾಪಗಳನ್ನು ಎಲ್ಲರಿಗೂ ಸಮಾಧಾನ ತರುವ ರೀತಿಯಲ್ಲಿ ನಡೆಸಿಕೊಂಡು ಹೋಗುವ ಗುಣ, ಸಾಮರ್ಥ್ಯ ಹಾಗೂ ಮನೋಧರ್ಮ ನಿಮ್ಮಲ್ಲಿವೆ ಎಂಬ ಆತ್ಮವಿಶ್ವಾಸ ನನಗಿದೆ. ನಿಮ್ಮ ಮಹೋನ್ನತ ಗುಣಗಳ ಬಗ್ಗೆ ನಾನು ಇಲ್ಲಿ ಹೇಳುವುದಿಲ್ಲ, ಅವು ಎಲ್ಲರಿಗೂ ಗೊತ್ತಿವೆ. ಜನತಾ ಸೇವೆಯಲ್ಲಿ ನಿಮ್ಮದು ಮರಿಯದ ಧಾಖಲೆ. ಆ ಬಗ್ಗೆ ಪ್ರತಿಯೊಬ್ಬರೂ ಹಾಗೂ ಇಡೀ ದೇಶವೇ ಹೆಮ್ಮೆಪಡಬಹುದಾಗಿದೆ. ನೀವು ಪ್ರಜಾಪ್ರತಿನಿಧಿ ಸಭೆಯ ಅಧ್ಯಕ್ಷರಾಗಿ ಆಯ್ಕೆಯಾದಾಗ ನಾನು ಹೇಳಿದಂತೆ ನೀವು ನನಗಿಂತ ಬಹಳ ಮೊದಲೇ ಜನತೆಯ ಸೇವೆ ಕೈಗೊಂಡಿದ್ದಿರಿ. ಷೋಡಷ ವಯಸ್ಸಿನಲ್ಲಿಯೇ ನಿಮ್ಮ ಸಾರ್ವಜನಿಕ ಸೇವಾಕಾರ್ಯ ಆರಂಭವಾಯಿತು ಎಂದು ಕೇಳಿದ್ದೇನೆ. 1927ರಲ್ಲಿ ಯುವಜನ ಚಳುವಳಿಯ ನೇತಾರರಾಗಿ ನಿಮ್ಮ ಹೆಸರನ್ನು ನಾನು ಕೇಳಿದ್ದೆ. 1930ರಲ್ಲಿ ಮೊದಲಬಾರಿಗೆ ನಾನು ಜನಸೇವೆಯ ಕ್ಷೇತ್ರಕ್ಕೆ ಕಾಲಿರಿಸಿದೆ. ಆಗ ನೀವು ಮೈಸೂರು ಜನತೆಯ ಪ್ರೀತಿ ವಾತ್ಸಲ್ಯಗಳಿಗೆ ಪಾತ್ರರಾದ ನಾಯಕರಾಗಿ ಪ್ರತಿಷ್ಠಾಪನೆಯಾಗಿದ್ದಿರಿ. 1930ರಲ್ಲಿ ನಾನು ಹೆಸರೇ ಇಲ್ಲದ ವ್ಯಕ್ತಿಯಾಗಿ ಜನಸೇವೆಯ ಕ್ಷೇತ್ರ ಪ್ರವೇಶಿಸಿದಾಗ ಹಾಗೂ ನನ್ನ ಕೆಲವು ಮಿತ್ರರು ನಾನು ಪ್ರಜಾಪ್ರತಿನಿಧಿ ಸಭೆಯಿಂದ ನ್ಯಾಯವಿಧಾಯಕ ಸಭೆಗೆ ಅಭ್ಯರ್ಥಿಯಾಗಿ ಸ್ಪರ್ಧಿಸಬೇಕೆಂದು ಒತ್ತಾಯಿಸಿದಾಗ, ಮೈಸೂರು ಜನತೆಗೆ ತೀರಾ ಅಪರಿಚಿತನಾದ ನಾನು ಹೇಗೆ ಗೆಲ್ಲುವುದು ಸಾಧ್ಯ ಎಂದು ಪ್ರಶ್ನಿಸಿದ್ದೆ. ಆಗ ನಾನು ನನಗೆ ಗೊತ್ತಿದ್ದ ಕೆಲವು ಸ್ನೇಹಿತರಿಗೆ ಕಾಗದಗಳನ್ನು ಬರೆದು "ನೀವು ಸ್ನೇಹಿತರು ಆಸಕ್ತಿ ವಹಿಸಿದರೆ ಮತ್ತು ನಾನು ನಿಲ್ಲಬೇಕೆಂದು ನೀವು ಹೇಳಿದರೆ ನಾನು ನಿಲ್ಲುತ್ತೇನೆ" ಎಂದು ತಿಳಿಸಿದ್ದೆ. ನನ್ನ ನೆನಪು ಸರಿಯಾಗಿರುವುದಾದರೆ, ನಾನು ಹಾಗೆ ಪತ್ರ ಬರೆದ ನಾಲ್ಕೈದು ಮಿತ್ರರಲ್ಲಿ ನೀವೂ ಒಬ್ಬರು (ಹರ್ಷೋದ್ಗಾರ). ಆಗಿನಿಂದಲೂ ಸರಿಯೋ ತಪ್ಪೋ, ನಾವು ರಾಜಕೀಯ ಬೆಳವಣಿಗೆಯ ಅನೇಕ ಹಂತಗಳನ್ನು ಹಾದು ಬಂದಿದ್ದೇವೆ. ಒಬ್ಬ ಸಹೋದ್ಯೋಗಿಯಾಗಿ ಹಾಗೂ ಒಬ್ಬ ಸ್ನೇಹಿತನಾಗಿ ನಿಮ್ಮೊಂದಿಗೆ ಕೆಲಸ ಮಾಡಿರುವ ನಾನು ಸ್ವಲ್ಪ ಕಾಲವೂ ಅಂತರವಿಲ್ಲದೆ ನಿರಂತರವಾಗಿ ನಿಮ್ಮೊಂದಿಗೆ ಇದ್ದೇನೆ. ನೀವು ಪ್ರಜಾಪ್ರತಿನಿಧಿ ಸಭೆಯ ಅಧ್ಯಕ್ಷರಾಗಿದ್ದ ಸ್ವಲ್ಪ ಕಾಲಾವಧಿಯಲ್ಲಿಯೇ ನೀವು ಸಭೆಯ ಕಲಾಪಗಳಿಗೆ ಒಂದು ಘನತೆಯನ್ನು ತಂದುಕೊಟ್ಟಿರಿ ಹಾಗೂ ಅತ್ಯಂತ ತೃಪ್ತಿಕರವಾಗಿ ಸಬೆಯ ಕಲಾಪಗಳನ್ನು ನಡೆಸಿಕೊಟ್ಟಿರಿ ಎಂದು ಇಡೀ ಪ್ರಜಾಪ್ರತಿನಿಧಿ ಸಭೆ ಅಭಿಪ್ರಾಯಪಟ್ಟಿತು. ಈಗ ನೀವು ಪ್ರಜಾಪ್ರತಿನಿಧಿ ಸಭೆಯ ಅಧ್ಯಕ್ಷರಾಗಿದ್ದಾಗಿಗಿಂತ ಹೆಚ್ಚಿನ ಗುರುತರವಾದ ಜವಾಬ್ದಾರಿಯ ಕ್ಷೇತ್ರವನ್ನು ಪ್ರವೇಶಿಸುತ್ತಿದ್ದೀರಿ. ಆಗಿನ ಪರಿಸ್ಥಿತಿಯೇ ಒಂದು ರೀತಿ, ಈಗಿನದೇ ಇನ್ನೊಂದು ರೀತಿ. ಆದರೆ ಈ ಪ್ರತಿಷ್ಠಿತ ಸದನದ ಕರ್ತವ್ಯಗಳನ್ನು ನೀವು ತೃಪ್ತಿಕರವಾಗಿ ನಿರ್ವಹಿಸುವ ಬಗ್ಗೆ ನನಗೆ ಯಾವುದೇ ಸಂದೇಹವಿಲ್ಲ.

ಸಭಾಪತಿಯವರು ಪಕ್ಷಾತೀತ ವ್ಯಕ್ತಿಯಾಗಿರಬೇಕು ಹಾಗೂ ಪಕ್ಷಾತೀತ ಮನೋಭಾವ ಹೊಂದಿರಬೇಕು ಎಂದು ಈ ಸಂದರ್ಭದಲ್ಲಿ ಹೇಳುವುದು ಒಂದು ರೂಢಿ. ಆದರೆ ಅದು ಅಗತ್ಯವಿಲ್ಲ ಎಂದು ಅನ್ನಿಸುತ್ತಿದೆ. ಸಭಾಪತಿಯ ಸ್ಥಾನಕ್ಕೆ ಪಕ್ಷದ ವತಿಯಿಂದ ವ್ಯಕ್ತಿಯೊಬ್ಬನನ್ನು ಸ್ಪರ್ಧೆಗೆ ನಿಲ್ಲಿಸಬಹುದಾದರೂ, ಆತ ಸಭಾಪತಿಯಾಗಿ ಆಯ್ಕೆಯಾದ ನಂತರ ಪಕ್ಷಾತೀತ ವ್ಯಕ್ತಿಯಾಗುತ್ತಾನೆ ಮತ್ತು ತನ್ನ ನಿರ್ಣಯಗಳನ್ನು ಪಕ್ಷಾತೀತ ಆಧಾರದ ಮೇಲೆ ಕೈಗೊಳ್ಳುತ್ತಾನೆ. ನೀವು ಈ ಪರಂಪರೆಯನ್ನು ಅತ್ಯಂತ ಸಮರ್ಥವಾಗಿ ಎತ್ತಿಹಿಡಿಯುತ್ತೀರಿ ಎಂಬ ವಿಶ್ವಾಸ ನನಗಿದೆ. ಅವರು ಕಾಂಗ್ರೆಸ್ ಪಕ್ಷಕ್ಕೇ ಸೇರಿರಲಿ, ಪಕ್ಷೇತರರೇ ಆಗಿರಲಿ ಅಥವಾ ಸ್ವತಂತ್ರ ಪಕ್ಷವೆಂದು ಕರೆಯಲಾಗುವ ತಪ್ಪಾಗಿ ವಿವರಿಸಲ್ಪಟ್ಟ ಪಕ್ಷಕ್ಕೆ ಸೇರಿದವರೇ ಆಗಿರಲಿ ಸದನದ ಎಲ್ಲರಿಗೂ ತೃಪ್ತಿಯಾಗುವಂತೆ ಕಾರ್ಯನಿರ್ವಹಿಸುತ್ತೀರಿ ಎಂದು ನಂಬಿದ್ದೇನೆ . ನೀವು ಈ ಸದನದ ಸಭಾಪತಿಯಾಗಿ ಕಾರ್ಯನಿರ್ವಹಿಸುವುದಕ್ಕೆ ನಮ್ಮೆಲ್ಲರ ದೃಢವಾದ ಬೆಂಬಲವಿರುತ್ತದೆ ಎಂದು ಹೇಳಿ ಈ ಅಭಿನಂದನಾ ಭಾಷಣವನ್ನು ಮುಗಿಸುತ್ತಿದ್ದೇನೆ.

## 2. ವಿಧಾನ ಸಭೆಯಲ್ಲಿ ಎಲ್ಲ ಸಚಿವರೂ ಉಪಸ್ಥಿತರಿರಬೇಕು ಎಂಬ ಬಗ್ಗೆ

### ವಿಧಾನ ಸಭಾ ಕಲಾಪ-13, ಜನವರಿ 1950

ಶ್ರೀ ಬಿ. ಹುಚ್ಚೇಗೌಡರು (ತುಮಕೂರು ಜಿಲ್ಲೆ): ಒಂದು ವಿಚಾರ ತಮ್ಮ ಗಮನಕ್ಕೆ ತರಬೇಕಾಗಿದೆ. ಈ ಸಭೆಯಲ್ಲಿ ಕ್ಯಾಬಿನೆಟ್ ಮಿನಿಸ್ಟರ್‌ಗಳ ಪೈಕಿ 8 ಜನ ಮಾತ್ರ ಇರುವುದು ಕಾಣುತ್ತಿದೆ. ಇನ್ನೊಬ್ಬರು ಇಲ್ಲ. ಅವರಿಗೆ ಒಂದು ಸ್ಥಾನವನ್ನೂ ಸಹ ಕೊಟ್ಟಿಲ್ಲ. ಆ ಮಂತ್ರಿಗಳು ಇಲ್ಲಿ ಇಲ್ಲದೇ ಇರುವುದಕ್ಕೆ ಕಾರಣವೇನು?

This is legislative assembly, so all the cabinet Ministers are expected here.

ಶ್ರೀ ಕೆ. ಚೆಂಗಲರಾಯರೆಡ್ಡಿ: (ಸದನದ ನಾಯಕರು) : ಅಗತ್ಯವೇನೂ ಇಲ್ಲ.

ಶ್ರೀ ಬಿ. ಹುಚ್ಚೇಗೌಡ: ಅದು ಅಗತ್ಯ. ಈ ಬಗ್ಗೆ ಒಂದು ರೂಲಿಂಗ್ ಮಾಡಿ.

ಶ್ರೀ ಎಂ. ಎನ್. ಜೋಯಿಸ್ ಅಲಿಯಾಸ್ ಎಂ.ಎಸ್. ನರಸಿಂಹಯ್ಯ (ಮೈಸೂರು ಜಿಲ್ಲೆ-ಸಾಮಾನ್ಯ ): ಹೌದು, ಅಸೆಂಬ್ಲಿಯು ಇರಬೇಕೆಂದು ಬಯಸಿದಾಗ ಅವರು ಇಲ್ಲಿರಬೇಕು.

ಮುಶೀರ್-ಉಲ್-ಮುಲ್ಕ್ ಜೆ. ಮೊಹಮದ್ ಇಮಾಂ: (ಚಿತ್ರದುರ್ಗ ಹಾಗೂ ತುಮಕೂರು, ಮುಸ್ಲಿಂ): ಕಾಯಿದೆಯಲ್ಲಿ ರೂಪಿಸಿರುವ ನಿಯಮಗಳ ಅನ್ವಯ ಸಚಿವಾಲಯವು ಇಡಿಯಾಗಿ ಶಾಸನಸಭೆಗೆ ಜವಾಬ್ದಾರವಾಗಿರುತ್ತದೆ. ಆದ್ದರಿಂದ ಇಡೀ ಸಂಪುಟವೇ ಅದರಲ್ಲಿ ಪಾಲುಗೊಳ್ಳಬೇಕೇ ಹೊರತು ಕೇವಲ ಒಂದು ಭಾಗವಲ್ಲ. ಈಗ ನನ್ನ ಸ್ನೇಹಿತರ ಅಭಿಪ್ರಾಯ ಇದು. ಸಚಿವರಲ್ಲಿ ಒಬ್ಬರು ಈ ಸದನದ ಸದಸ್ಯರಲ್ಲ ಮತ್ತು ಈಗ ತಿದ್ದುಪಡಿಯಾಗಿರುವ ಪ್ರಸ್ತುತ ಕಾಯಿದೆಯ ಉಪಬಂಧಗಳ ಪ್ರಕಾರ ಅವರು ಈ ಸದನದಲ್ಲಿ ಕುಳಿತುಕೊಳ್ಳುವಂತಿಲ್ಲ. ಆದ್ದರಿಂದ ಇಲ್ಲಿ ಪ್ರತಿನಿಧಿಸುತ್ತಿರುವ ಸರ್ಕಾರವೇ ಅಪೂರ್ಣವಾಗಿದೆ, ಆದರೆ ನಿಯಮದ ಪ್ರಕಾರ ಇಡೀ ಸರ್ಕಾರ ಈ ಸದನದಲ್ಲಿ ಪ್ರತಿನಿಧಿತಬೇಕಾಗುತ್ತದೆ. ಆದ್ದರಿಂದ ಈಗ ಪ್ರತಿನಿಧಿತವಾಗಿರುವ ಇಡೀ ಸರ್ಕಾರದಲ್ಲಿ ಒಬ್ಬ ಸಚಿವರು ಮೈನಸ್ ಆಗಿರುವುದರಿಂದ ಇದರ ಪರಿಣಾಮವೇನು ಎಂಬುದನ್ನು ತಿಳಿಯಲು ನನ್ನ ಮಿತ್ರರು ಅಪೇಕ್ಷಿಸುತ್ತಿದ್ದಾರೆ. ಈಗ ನಾನೇನಾದರೂ ಅವಿಶ್ವಾಸ ನಿರ್ಣಯವನ್ನು ತರಬೇಕೆಂದಿದ್ದರೆ ಅದು ಇಡೀ ಸರ್ಕಾರದ ವಿರುದ್ಧವಾಗಿರಬೇಕೇ ಹೊರತು ಅದರ ಒಂದು ಭಾಗದ ಮೇಲೆ ಮಾತ್ರವಲ್ಲ. ತಾಂತ್ರಿಕವಾಗಿ ಇಲ್ಲಿ ಪೂರ್ಣ ಸರ್ಕಾರದ ಪ್ರತಿನಿಧಿತ್ವವಿಲ್ಲ.

ಶ್ರೀ ಕೆ. ಹನುಮಂತಯ್ಯ (ಬೆಂಗಳೂರು ಜಿಲ್ಲೆ-ಸಾಮಾನ್ಯ) : ಆದ್ದರಿಂದ ಅವಿಶ್ವಾಸ ನಿರ್ಣಯ ತರಬೇಡಿ.

ಜನಾಬ್ ಜೆ. ಮೊಹಮದ್ ಇಮಾಂ: ಕಾನೂನು ಮತ್ತು ನಿಯಮಾವಳಿಯ ಪ್ರಕಾರ ಪೂರ್ಣ ಸರ್ಕಾರ ಪ್ರತಿನಿಧಿಸಬೇಕು. ಈಗ ಹಾಗಿಲ್ಲದಿರುವುದರಿಂದ ಏನೇ ಮಾಡಿದರೂ ಮೊದಲಿನಿಂದಲೇ ಮಾಡಬೇಕಾಗುತ್ತದೆ. ಸಚಿವರು ಯಾವ ಹಿನ್ನೆಲೆಯಲ್ಲಿ ಗೈರು ಹಾಜರಾಗಿದ್ದಾರೆ ಎಂಬುದನ್ನು ತಿಳಿಯಲು ನಾನು ಅಪೇಕ್ಷಿಸುತ್ತೇನೆ.

ಮಾನ್ಯ ಸಭಾಪತಿಯವರು: ಇನ್ನೊಬ್ಬ ಸಚಿವರೂ ಯಾಕೆ ಬಂದಿಲ್ಲ ಎಂಬ ಬಗ್ಗೆ ಸಚಿವರು ಮಾಹಿತಿ ಕೇಳುತ್ತಿದ್ದಾರೆ.

ಶ್ರೀ ಬಿ. ಹುಚ್ಚೇಗೌಡರು: ಆ ಸಚಿವರಿಗೂ ಕೂಡ ಇಲ್ಲಿ ಸ್ಥಾನವನ್ನು ಮಾಡಿಕೊಡಬೇಕು. ಅವರಿಗೆ Minister of State ಎಂಬುದಾಗಿ ಬೇರೆ ಯಾವುದಾದರೂ ಕೆಲಸ ಕೊಟ್ಟಿದ್ದರೆ ಅವರು ಇಲ್ಲಿ ಇರಬೇಕಾದ್ದಿಲ್ಲ. ಕ್ಯಾಬಿನೆಟ್‌ನಲ್ಲಿ ಜಾಯಿಂಟ್ ರೆಸ್‌ಪಾನ್ಸಿಬಿಲಿಟಿ ಇರುವಾಗ, ಒಬ್ಬ ಸಚಿವರು ಈ ಸಭೆಯ ಕಾರ್ಯಕಲಾಪಗಳಲ್ಲಿ ಭಾಗವಹಿಸದೆ ಈ ಸಭೆಯಲ್ಲಿ ಏನು ಕಾರ್ಯಕಲಾಪಗಳು ನಡೆಯುತ್ತವೆ ಎಂಬುದನ್ನು ತಿಳಿದುಕೊಳ್ಳದೇ ಇರುವುದು ಸರಿಯಲ್ಲ. ಯಾವಾಗಲೂ ಕೂಡ ಸಚಿವರುಗಳಲ್ಲಿ ನಡೆಯತಕ್ಕ ಚರ್ಚೆಯಲ್ಲಿ ಪೂರ್ಣ ಗಮನಕೊಟ್ಟು ಕೇಳಬೇಕಾದ್ದು ಅವರ ಕರ್ತವ್ಯ. ಅದನ್ನು ತಮ್ಮ ಗಮನಕ್ಕೆ ತಂದಿದ್ದೇನೆ. ಅವರ ಸ್ಥಾನ ಏನು? ಅವರು ಸಚಿವರಲ್ಲವೆ? ಅಥವಾ Minister of State ಆಗಿದ್ದಾರೆಯೇ? ಎಂಬುದನ್ನು ಸ್ಪಷ್ಟಪಡಿಸಬೇಕೆಂದು ನನ್ನ ಪ್ರಾರ್ಥನೆ.

ಶ್ರೀ ಕೆ. ಚೆಂಗಲರಾಯರೆಡ್ಡಿ: ಈ ಅಂಶವನ್ನು ಪ್ರಸ್ತಾಪಿಸಿರುವ ಸನ್ಮಾನ್ಯ ಸದಸ್ಯರುಗಳು 1949 ಡಿಸೆಂಬರ್ 17 ರವರೆಗೆ ತಿದ್ದುಪಡಿಯಾಗಿರುವ 1940ರ ಮೈಸೂರು ಸರ್ಕಾರದ ಕಾಯಿದೆಯನ್ನು ಓದುವ ಶ್ರಮ ತೆಗೆದುಕೊಂಡಿದ್ದೇ ಆದರೆ ಅವರು ಈ ಹಂತದಲ್ಲಿ ಈ ಪ್ರಶ್ನೆಯನ್ನು ಎತ್ತುತ್ತಿರಲಿಲ್ಲ ಎಂದು ನನಗನ್ನಿಸುತ್ತದೆ. ನೆನ್ನೆಯಿಂದಲೂ ಈ ಸದನದಲ್ಲಿ ಉಪಸ್ಥಿತರಿಲ್ಲದಿರುವ ಒಂಬತ್ತನೇ ಸಚಿವರು ರಾಜ್ಯಾಂಗ ರಚನಾ ಸಭೆಯ ಸದಸ್ಯರಾಗಿರಲಿಲ್ಲ. ಹೀಗಾಗಿ ಅವರು ಈ ಸದನದ ನಿಯತ ಸದಸ್ಯರಲ್ಲ.

ಶ್ರೀ ಬಿ. ಹುಚ್ಚೇಗೌಡರು: ನಾನು ರಾಜ್ಯಾಂಗ ರಚನಾ ಸಭೆಯ ವಿಷಯ ಹೇಳಲಿಲ್ಲ.

ಶ್ರೀ ಕೆ. ಚೆಂಗಲರಾಯರೆಡ್ಡಿಯವರು: ನಾನು ಆ ವಿಷಯಕ್ಕೆ ಬರುತ್ತೇನೆ. ಅವರು ರಾಜ್ಯಾಂಗ ರಚನಾ ಸಭೆಯ ಸದಸ್ಯರಲ್ಲದ್ದರಿಂದ ಹಾಗೂ ರಾಜ್ಯಾಂಗ ರಚನಾ ಸಭೆಯ ಸದಸ್ಯರೆಲ್ಲರೂ ಒಂದು ನಿರ್ದಿಷ್ಟ ದಿನಾಂಕದಿಂದ ಶಾಸನ ಸಭೆಯ ಸದಸ್ಯರಾದ್ದರಿಂದ ಆ ಸಚಿವರು ಸದ್ಯದಲ್ಲಿ ಶಾಸನ ಸಭೆಯ ಸದಸ್ಯರಲ್ಲ. ಹೀಗಾಗಿ ಅವರು ಈ ಸಭೆಯ ಅಧಿವೇಶನಗಳಲ್ಲಿ ಭಾಗವಹಿಸುತ್ತಿಲ್ಲ. ಆದರೆ 1949ರ ಡಿಸೆಂಬರ್ 17ರವರೆಗೆ ತಿದ್ದುಪಡಿಯಾಗಿರುವ 1940ರ ಮೈಸೂರು ಸರ್ಕಾರದ ಕಾಯಿದೆಯಲ್ಲಿ, ಅಸೆಂಬ್ಲಿಯ ಸದಸ್ಯರಲ್ಲದಿದ್ದರೂ ಅಧಿಕಾರದಲ್ಲಿ ಮುಂದುವರೆಯುವ ಅವಕಾಶವನ್ನು ಸಚಿವರಿಗೆ ಕೊಡಲಾಗಿದೆ. 6ನೇ ಪರಿಚ್ಛೇದದ 2ನೇ ಉಪಪರಿಚ್ಛೇದವೂ ಹೀಗೆ ತಿಳಿಸುತ್ತದೆ.

1949ರ ಮೈಸೂರು ಸರ್ಕಾರದ ಕಾಯಿದೆ (4ನೇ ತಿದ್ದುಪಡಿ ಕಾಯಿದೆ ಸಂಖ್ಯೆ 1949ರ LXXV) ಆರಂಭವಾಗುವುದಕ್ಕೆ ತಕ್ಷಣದ ಪೂರ್ವದಲ್ಲಿ ಯಾರು ಸಚಿವ ಪದವಿಯಲ್ಲಿದ್ದರೋ ಅವರೆಲ್ಲರೂ, ಅದು ಆರಂಭವಾದ ನಂತರ ಸದರಿ 1949ರ ಮೈಸೂರು ಸರ್ಕಾರದ ಕಾಯಿದೆ (ನಾಲ್ಕನೇ ತಿದ್ದುಪಡಿ) (ಕಾಯಿದೆ ಸಂಖ್ಯೆ 1949 LXXV.) ಅನ್ವಯ ಸಚಿವ ಮಂಡಲಿಯ ಸದಸ್ಯರಾಗುತ್ತಾರೆ.

ಈ ಪರಿಚ್ಛೇದದ ಪ್ರಕಾರ, ಈ ಕಾಯಿದೆ ತಿದ್ದುಪಡಿಯ ತಕ್ಷಣದ ಪೂರ್ವದಲ್ಲಿ ಸಚಿವರಾಗಿದ್ದವರೆಲ್ಲರೂ ಅನಂತರವೂ ಸಚಿವರಾಗಿ ಮುಂದುವರೆಯುತ್ತಾರೆ.

ಎರಡನೆಯದಾಗಿ, ಈ ಅಸೆಂಬ್ಲಿಯ ಸದಸ್ಯರಾಗಿಲ್ಲದಿರುವಂಥ ಸಚಿವರಿಗೆ ಅಸೆಂಬ್ಲಿಯ ಕಲಾಪಗಳಲ್ಲಿ ಒಂದು ಸೀಮಿತ ವ್ಯಾಪ್ತಿಯವರೆಗೆ ಭಾಗವಹಿಸುವ ಅವಕಾಶವಿರುತ್ತದೆ. ನಾನು 14ಎ ಪರಿಚ್ಛೇದದ ಕಡೆಗೆ ಸದಸ್ಯರ ಗಮನ ಸೆಳೆಯಲು ಬಯಸುತ್ತೇನೆ.

"ಪ್ರತಿಯೊಬ್ಬ ಸಚಿವರೂ ಅವರನ್ನು ಯಾವ ಅಸೆಂಬ್ಲಿಗೆ ಮತ್ತು ಯಾವ ಅಸೆಂಬ್ಲಿ ಸಮಿತಿ ಸದಸ್ಯರೆಂದು ಹೆಸರಿಸಲಾಗಿದೆಯೋ ಅಂತಹ ಸಭೆಯಲ್ಲಿ ಮಾತಾಡುವ ಹಾಗೂ ಅದರ ಕಲಾಪಗಳಲ್ಲಿ ಭಾಗವಹಿಸುವ ಹಕ್ಕನ್ನು ಹೊಂದಿರತಕ್ಕದ್ದು. ಆದರೆ ಹೀಗೆ ಅವಕಾಶವಿದ್ದ ಮಾತ್ರಕ್ಕೆ ಅವರಿಗೆ ಮತ ನೀಡುವ ಹಕ್ಕು ಇರುವುದಿಲ್ಲ."

ಆದ್ದರಿಂದ ಈ ಅಸೆಂಬ್ಲಿಯ ಸದಸ್ಯರಾಗಿಲ್ಲದಂತಹ ಸಚಿವರುಗಳನ್ನು ಸಚಿವರಾಗಿ ಅವರ ಕರ್ತವ್ಯ ನಿರ್ವಹಿಸುವಂತೆ ಅವರಿಗೆ ಕರೆ ನೀಡಿದಾಗ ಅವರು ಬರಬಹುದಾಗಿದೆ. ಆದರೆ ಅವರಿಗೆ ಮತ ಚಲಾಯಿಸುವ ಹಕ್ಕು ಮಾತ್ರ ಇರುವುದಿಲ್ಲ.

**ಜನಾಬ್ ಜೆ. ಮೊಹಮದ್ ಇಮಾಂ:** ಇದು ಎಲ್ಲ ಸಚಿವರಿಗೂ ಅನ್ವಯಿಸುತ್ತದೆ.

**ಶ್ರೀ ಕೆ. ಚೆಂಗಲರಾಯರೆಡ್ಡಿ:** ಈ ಸ್ಥಿತಿಯು ತಿದ್ದುಪಡಿಯಾದ ಮೈಸೂರು ಸರ್ಕಾರದ ಕಾಯಿದೆಯನ್ನು ಜಾರಿಮಾಡಿದ ದಿನಾಂಕ ಹಾಗೂ 1950ರ ಜನವರಿ 26ರ ನಡುವಿನ ಒಂದು ತಾತ್ಕಾಲಿಕ ಅವಧಿಯಲ್ಲಿ ಮಾತ್ರ ಇರುತ್ತದೆ. ಜನವರಿ 26ರಿಂದ ಹೊಸ ಸಂವಿಧಾನ ಜಾರಿಗೆ ಬರುತ್ತದೆ ಮತ್ತು ಭಾರತ ಸರ್ಕಾರದ ಕಾಯಿದೆಗೆ ಅನುಗುಣವಾಗಿಲ್ಲದ ಅಥವಾ ಅದರಿಂದ ವ್ಯತ್ಯಾಸವಾಗಿರುವಂಥ ಈ ಕಾಯಿದೆಯ ಅವಕಾಶಗಳು ಜನವರಿ 26ರ ನಂತರ ರದ್ದಾಗುತ್ತವೆ ಮತ್ತು ಪರಿಣಾಮ ಶೂನ್ಯವಾಗುತ್ತವೆ.

**ಶ್ರೀ ಟಿ. ಸುಬ್ರಹ್ಮಣ್ಯ (ತುಮಕೂರು ಜಿಲ್ಲೆ- ಸಾಮಾನ್ಯ ):** ಈ ಇಡೀ ಸಂವಿಧಾನ 1950 ಜನವರಿ 26 ರಿಂದ ರದ್ದಾಗುತ್ತದೆಯೆ?

**ಶ್ರೀ ಕೆ. ಚೆಂಗಲರಾಯರೆಡ್ಡಿ:** ಇಡೀ ಸಂವಿಧಾನವಲ್ಲ. ಕೆಲವೊಂದು ಅಂಶಗಳಿಗೆ ಸಂಬಂಧಿಸಿದಂತೆ ಅನುಗಣವಾಗಿರುವಂಥವೆಲ್ಲ ಅನಂತರವೂ ಜಾರಿಯಲ್ಲಿರಬಹುದು.

**ಶ್ರೀ ಟಿ.ಸುಬ್ರಮಣ್ಯ:** ನೀವು ಸಂವಿಧಾನದ ಮಾರ್ಗದರ್ಶನ ಪಡೆಯುತ್ತೀರಾ?

**ಶ್ರೀ ಕೆ.ಟಿ. ಭಾಷ್ಯಂ:** (ಕಾನೂನು ಮತ್ತು ಕಾರ್ಮಿಕ ಸಚಿವರು): ಇದನ್ನು ಅನಂತರ ಪರಿಶೀಲಿಸಬಹುದು.

**ಶ್ರೀ ಕೆ. ಚೆಂಗಲರಾಯರೆಡ್ಡಿ:** ಇದರಲ್ಲಿ ಬಹಳಷ್ಟು ರದ್ದಾಗುತ್ತವೆ. ಅದರಲ್ಲಿ ಸಂದೇಹವೇ ಇಲ್ಲ. ಅಸೆಂಬ್ಲಿಯ ಸದಸ್ಯರಲ್ಲದವರನ್ನು ಸಚಿವ ಸಂಪುಟದಲ್ಲಿ ಸೇರಿಸಿಕೊಳ್ಳಬಹುದು ಎಂದು ಭಾರತ ಸರ್ಕಾರದ ಕಾಯಿದೆ ತಿಳಿಸುತ್ತದೆ. ಆದರೆ ಹಾಗೆ ನೇಮಕವಾದ ಆರು ತಿಂಗಳೊಳಗಾಗಿ ಅವರು ಅಸೆಂಬ್ಲಿಯ ಸ್ಥಾನವನ್ನು ಗಳಿಸಿಕೊಳ್ಳಬೇಕು. ಹಾಗೆ ಮಾಡದಿದ್ದರೆ ಅವರು ಸಚಿವರಾಗಿ ಉಳಿಯುವಂತಿಲ್ಲ. ಜನವರಿ 26ರಿಂದ ಈ ರೀತಿಯ ಪರಿಸ್ಥಿತಿ ಇರುತ್ತದೆ. ಆದರೆ ಸಂಕ್ರಮಣ

ಅವಧಿಗೆ ಸಂಬಂಧಿಸಿದಂತೆ 1949ರ ಡಿಸೆಂಬರ್ 17ರಂದು ಜಾರಿಯಾದ ಮೈಸೂರು ಸರ್ಕಾರದ ಕಾಯಿದೆಯ ತಿದ್ದುಪಡಿಯಲ್ಲಿ ನಾವು ಸಮೃದ್ಧ ಅವಕಾಶವನ್ನು ಒದಗಿಸಿದ್ದೇವೆ. ಈ ಹಿನ್ನೆಲೆಯಲ್ಲಿ ಯಾವುದೇ ಸಾಂವಿಧಾನಿಕ ತೊಂದರೆಯಾಗಲೀ, ಸಾಂವಿಧಾನಿಕ ತಪ್ಪಾಗಲೀ ಇಲ್ಲವೆಂದು ನಾನು ಅಂದುಕೊಂಡಿದ್ದೇನೆ.

ಶ್ರೀ ಬಿ. **ಹುಚ್ಚೇಗೌಡ:** ಈಗ ಇಲ್ಲಿ ಉಪಸ್ಥಿತರಿಲ್ಲದ ಸಚಿವರನ್ನು ಸದನದಲ್ಲಿ ಭಾಗವಹಿಸದಿರುವಂತೆ ತಡೆಯಲಾಗಿದೆಯೆ?

ಶ್ರೀ **ಕೆ. ಚೆಂಗಲರಾಯರೆಡ್ಡಿ:** ಇಲ್ಲ, ಹಾಗೆ ಮಾಡಿಲ್ಲ.

ಶ್ರೀ **ಬಿ. ಹುಚ್ಚೇಗೌಡ:** ಮತ್ತೆ ಅವರೇಕೆ ಬಂದಿಲ್ಲ.

ಶ್ರೀ ಕೆ.ಟಿ. ಭಾಷ್ಯಂ : ಅವರು ಬಂದಿಲ್ಲ ಅಷ್ಟೆ.

**ಅಧ್ಯಕ್ಷರು:** ಅವರು ಬಂದರೆ ಭಾಗವಹಿಸಬಹುದು. ರೂಲ್ಸಿನಲ್ಲಿ ಈ ರೀತಿ ಇದೆ:

"ಪ್ರತಿಯೊಬ್ಬ ಸಚಿವರೂ ಅವರನ್ನು ಯಾವ ಅಸೆಂಬ್ಲಿಗೆ ಮತ್ತು ಯಾವ ಅಸೆಂಬ್ಲಿ ಸಮಿತಿಗೆ ಸದಸ್ಯರೆಂದು ಹೆಸರಿಸಲಾಗಿದೆಯೋ ಅಂತಹ ಸಭೆಯಲ್ಲಿ ಮಾತಾಡುವ ಹಾಗೂ ಅದರ ಕಲಾಪಗಳಲ್ಲಿ ಭಾಗವಹಿಸುವ ಹಕ್ಕನ್ನು ಹೊಂದಿರತಕ್ಕದ್ದು. ಆದರೆ ಹೀಗೆ ಅವಕಾಶವಿದ್ದ ಮಾತ್ರಕ್ಕೆ ಅವರಿಗೆ ಮತ ನೀಡುವ ಹಕ್ಕು ಇರುವುದಿಲ್ಲ."

ಶ್ರೀ **ಬಿ. ಹುಚ್ಚೇಗೌಡರು:** ಸಚಿವರುಗಳು ಅವರವರ ಸ್ಥಳದಲ್ಲಿ ಇರುವುದು ಸಂಪ್ರಾದಯವಾಗಿ ನಡೆದುಕೊಂಡು ಬಂದಿದೆ. ಮತ್ತು ಸಭೆಯಲ್ಲಿ ನಡೆಯತಕ್ಕ ಚರ್ಚೆಯಲ್ಲಿ ಭಾಗವಹಿಸಬೇಕೆಂದು ಇದೆ.

ಶ್ರೀ **ಕೆ. ಚೆಂಗಲರಾಯರೆಡ್ಡಿ:** ಅವರು ಬಂದಿಲ್ಲ. ಅವರು ಗೈರುಹಾಜರಾಗಬೇಕೆಂದೇ ಉದ್ದೇಶಿಸಿದ್ದಾರೆ ಎಂದು ಸದಸ್ಯರು ಅರ್ಥ ಮಾಡಿಕೊಳ್ಳಬಹುದು.

**ರಾಜಮಂತ್ರ ಪ್ರವೀಣ ಹೆಚ್.ಬಿ. ಗುಂಡಪ್ಪಗೌಡರು (ಹಾಸನ ಜಿಲ್ಲೆ- ಸಾಮಾನ್ಯ):** ಈ ವಿಷಯದಲ್ಲಿ ಸ್ವಲ್ಪ ತೊಡಕಿದ್ದಂತೆ ತೋರುತ್ತದೆ. " ಪ್ರತಿಯೊಬ್ಬ ಸಚಿವರೂ...." ಎಂದು ತಿಳಿಸುವ 14 ಎ ಪರಿಚ್ಛೇದ ಒಂದು ಅಧಿಕಾರ ಕೊಡುವ ಪರಿಚ್ಛೇದ ಮಾತ್ರ ಆಗಿದೆ. ನಾವು ಇದುವರೆಗೆ ನೋಡಿರುವ ಹಾಗೂ ಕೇಳಿರುವ ಪ್ರಕಾರ ಸಚಿವಾಲಯಕ್ಕೆ ಜಂಟಿ ಜವಾಬ್ದಾರಿಯಿದೆ ಮತ್ತು ಅದು ನಿರ್ದಿಷ್ಟ ಖಾತೆಗಳನ್ನು ಹೊಂದಿದೆ. ಸರ್ಕಾರದ ಪರವಾಗಿ ಉತ್ತರಿಸುವುದಕ್ಕೆ ಸಚಿವರುಗಳು ಇಲ್ಲಿ ಉಪಸ್ಥಿತರಿರಬೇಕು. ಎಲ್ಲಿಯವರೆಗೆ ಖಾತೆಗಳು ಆಯಾ ಸಚಿವರ ಕೈಯಲ್ಲಿರುತ್ತವೆಯೋ ಅಲ್ಲಿಯವರೆಗೆ ಅವರು ಇಲ್ಲಿ ಉಪಸ್ಥಿತರಿರಬೇಕು. ಈಗ ನನಗೆ ತಿಳಿಯುವಂತೆ ಅದು ಕೇವಲ ಅಧಿಕಾರ ನೀಡುವಂತ ವಾಕ್ಯಾಂಶ ಮಾತ್ರ. ಸಚಿವರಿಗೆ ಸೂಕ್ತವೆನಿಸಿದಾಗ ಅವರು ಬರಬಹುದು. ಖಾತೆಗಳಿಗೆ ಸಂಬಂಧಿಸಿದಂತೆ ಮಾಹಿತಿಯನ್ನು ಪಡೆದುಕೊಳ್ಳುವ ಸದಸ್ಯರ ಹಕ್ಕಿನ ಬಗ್ಗೆ ಏನು ಹೇಳುತ್ತೀರಿ? ಹೊಸ ಅಸೆಂಬ್ಲಿಯನ್ನು ರಚಿಸಿದ ದಿನಾಂಕದಿಂದ ಸದಸ್ಯನ ಮಾತಾಡುವ ಹಕ್ಕು ಆರಂಭವಾಗುತ್ತದೆ.

**ಶ್ರೀ ಕೆ. ಚೆಂಗಲರಾಯರೆಡ್ಡಿ:** ನಾನು ಮಾನ್ಯ ಸದಸ್ಯರ ಮಾತಿನ ಮಧ್ಯೆ ಪ್ರವೇಶಿಸಿ ಹೇಳುವುದಾದರೆ, ಈ ಅಸೆಂಬ್ಲಿಯ ಸದಸ್ಯರಲ್ಲದಿರುವ ಸಚಿವರು ಈ ಸದನಕ್ಕೆ ಬಂದು ಇಲ್ಲಿಯ ಕಲಾಪಗಳಲ್ಲಿ ಭಾಗವಹಿಸುವುದನ್ನು ಪಡೆಯುವಂತಹ ಯಾವ ಅಂಶವೂ ಇಲ್ಲ. ಅವರು ಬರಬಹುದು, ಅದಕ್ಕೆ ಯಾವ ಆಕ್ಷೇಪಣೆಯೂ ಇಲ್ಲ. ಆದರೆ ನಾನು ಹೇಳುಬೇಕಿದ್ದೇನೆಂದರೆ ಎಲ್ಲ ಸಚಿವರೂ ಕೂಡ ಯಾವುದೇ ಅಧಿವೇಶನದ ಕಲಾಪಗಳಲ್ಲಿ ಯಾವುದೇ ಸಮಯದಲ್ಲಿ ಭಾಗವಹಿಸಬಹುದು ಎಂದರ್ಥವಲ್ಲ. ಯಾವುದೇ ಸಚಿವರು ಬರದಿರಬಹುದು ಮತ್ತು ಬಾಗವಹಿಸುವ ಇಚ್ಛೆ ಅವರಿಗೇ ಸೇರಿದ್ದು. ಆದರೆ ಅವರ ಖಾತೆಗೆ ಸಂಬಂಧಿಸಿದ ವಿಷಯ ಪ್ರಸ್ತಾಪವಾದಾಗ ಮಾತ್ರ ಅವರು ಇರಲೇಬೇಕೇ ಹೊರತು, ಅಧಿವೇಶನದ ಎಲ್ಲ ಸಮಯದಲ್ಲೂ ಇರಬೇಕಿಲ್ಲ.

**ಶ್ರೀ ಹೆಚ್.ಬಿ. ಗುಂಡಪ್ಪಗೌಡ:** ನಾನು ಪ್ರಸ್ತಾಪಿಸುತ್ತಿರುವ ಅಂಶವೂ ಕೂಡ ಅದೇ. ಸಚಿವರ ದೃಷ್ಟಿಯಿಂದ ಅವರು ಇಲ್ಲಿ ಉಪಸ್ಥಿತರಿರುವುದು ಅವಶ್ಯವಿಲ್ಲ. ಆದರೆ ಸದಸ್ಯರ ದೃಷ್ಟಿಯಿಂದ ಹೇಳುವುದಾದರೆ ಪ್ರಜಾತಂತ್ರದ ತತ್ವದಂತೆ ಸಚಿವರನ್ನು ಉಪಸ್ಥಿತರಿರುವಂತೆ ಕೇಳುವುದು ತಮ್ಮ ಹಕ್ಕು ಎಂದು ಅವರು ಭಾವಿಸುತ್ತಾರೆ. ನೀವು ಮೂಲ ವಾಕ್ಯಾಂಶವನ್ನು ತಿದ್ದುಪಡಿ ಮಾಡಿರಬಹುದು. ಆದರೆ ತಿದ್ದುಪಡಿಯು ಸಕಾರಾತ್ಮಕ ವಾಕ್ಯಾಂಶವಲ್ಲ. ಇದರಿಂದ ಸದಸ್ಯರ ಹಕ್ಕನ್ನು ಹ್ರಸ್ವಮಾಡಿದಂತಾಗುತ್ತದೆ.

**ಶ್ರೀ ಕೆ. ಚೆಂಗಲರಾಯರೆಡ್ಡಿ:** ಒಂದು ವೇಳೆ ಆ ನಿರ್ದಿಷ್ಟ ಸಚಿವರಿಗೆ ಸಂಬಂಧಿಸಿದಂತಹ ವಿಷಯವೇ ಬಂದಾಗ ಅಥವಾ ಆ ಸಚಿವರೇ ನಿರ್ದಿಷ್ಟ ಪ್ರಶ್ನೆಗೆ ಉತ್ತರಿಸಬೇಕೆಂದಿದ್ದಾಗ ಲಗ ಶ್ರೀ ಗುಂಡಪ್ಪಗೌಡರು ಪ್ರಸ್ತಾಪಿಸಿದ ಅಂಶ ಏಳುತ್ತದೆ ಆದರೆ ಈಗಲ್ಲ.

ಶ್ರೀ ಎಚ್.ಬಿ. **ಗುಂಡಪ್ಪಗೌಡರು:** ಆ ರೀತಿ ನೋಡಿದರೆ ಎಲ್ಲ ಸಚಿವರೂ ಗೈರು ಹಾಜರಾಗಬಹುದು. ಆದರ ಪರಿಣಾಮವಾಗಿ......

**ಶ್ರೀ ಆರ್. ಚೆನ್ನಿಗರಾಮಯ್ಯ:(ಸ್ಥಳೀಯ ಸ್ವಯಮಾಡಳಿತ ಸರ್ಕಾರದ ಸಚಿವರು):** ಸದನದಲ್ಲಿ ಈವತ್ತಿನ ಕೆಲಸ ಬರೀ ಚುನಾವಣೆಗೆ ಸಂಬಂಧಿಸಿದ್ದು ಎಂದು ಅವರಿಗೆ ತಿಳಿದಿತ್ತೇನೋ.

ಶ್ರೀ ಎಚ್.ಬಿ. **ಗುಂಡಪ್ಪಗೌಡ:** ಸಚಿವರೂ ಕೂಡ ತಮ್ಮ ಮತ ಚಲಾಯಿಸಬೇಕೆಂಬುದು ನಮ್ಮ ಅಪೇಕ್ಷೆ (ಒಂದು ದನಿ-'ಹಾಗೆ ಮಾಡುವಂತಿಲ್ಲ'). ಆ ಅಂಶಕ್ಕೆ ನಾನು ಉತ್ತರಿಸುತ್ತೇನೆ. ಮಾನ್ಯ ಮುಖ್ಯಮಂತ್ರಿಗಳು ಹೇಳಿದ ಹಾಗೆ ಸಚಿವರಿಗಳಿಗೆ ತಮಗೆ ಇಷ್ಟಾನುಸಾರವಾಗಿ ಗೈರುಹಾಜರಾಗುವ ಅವಕಾಶವನ್ನು ಕೊಟ್ಟಿದ್ದೇ ಆದರೆ...

**ಸಭಾಪತಿಯವರು:** ಹಾಗಿದ್ದರೆ ಸದಸ್ಯರ ಹಕ್ಕಿನ ಬಗ್ಗೆ ಏನು ಹೇಳುತ್ತೀರಿ? ಒಬ್ಬ ಸದಸ್ಯರಿಗೆ ಇರಬೇಕೊ ಬಿಡಬೇಕೊ ಎಂಬ ಬಗ್ಗೆ ಯಾವ ಹಕ್ಕಿದೆಯೋ ಅದು ಸಚಿವರಿಗೂ ಕೂಡ ಇದೆ. ಆದರೆ ಯಾವುದಾದರೂ ಉದ್ದೇಶಕ್ಕಾಗಿ ಅವರು ಇರಲೇಬೇಕಾದ್ದು ಅಗತ್ಯವಾದರೆ......

ಶ್ರೀ ಎಚ್.ಬಿ. **ಗುಂಡಪ್ಪಗೌಡ:** ಅದು ಹೀಗೆ - ಸದಸ್ಯರ ವಿಷಯಕ್ಕೆ ಹೇಳುವುದಾದರೆ ಅವರಿಗೆ ಹಂಚಿಕೆಯಾದ ಸ್ಥಾನಗಳಿವೆ. ಈ ಸದನದಲ್ಲಿ ಮಾನ್ಯತೆ ಪಡೆದ ಆ ಮನುಷ್ಯ ಎಲ್ಲಿದ್ದಾರೆ? ಅವರಿಗೆ ಯಾವುದೇ ಸ್ಥಾನ ಹಂಚಿಕೆಯಾಗಿಲ್ಲ. ಕೊನೆಯ ಪಕ್ಷ ಒಂದು ಖಾಲಿ ಸ್ಥಾನವಾದರೂ ಇರಬೇಕಿತ್ತು. ಸನ್ಮಾನ್ಯ ಸಚಿವರಿಗೆ ಮುಜರಾಯಿಗಾಗಿ ಅಸೆಂಬ್ಲಿಯಲ್ಲಿ ಹಂಚಿಕೆಯಾದ ಸ್ಥಾನವೇ ಇಲ್ಲ.

ಶ್ರೀ ಕೆ. ಪುಟ್ಟಸ್ವಾಮಿ-(ಮಂಡ್ಯ ಜಿಲ್ಲೆ-ಸಾಮಾನ್ಯ): ಸಭಾಪತಿಯವರೇ ಮಾಹಿತಿಗಾಗಿ ಕೇಳುತ್ತಿದ್ದೇನೆ. ಈ ಸದನದಲ್ಲಿ ಯಾವ ಹಕ್ಕನ್ನು ಮೊಟಕು ಮಾಡಲಾಗಿದೆ? ಸಚಿವರ ಮುಖವನ್ನು ನೋಡುವ ಹಕ್ಕನ್ನೇ?

ಶ್ರೀ ಎಚ್.ಬಿ. **ಗುಂಡಪ್ಪಗೌಡ**: ಹೌದು, ಮುಖ ನೋಡುವ, ನಿರ್ಣಯಗಳನ್ನು ಮಂಡಿಸುವ, ಅಲ್ಪಾವಧಿ ಸೂಚನೆಯ ಪ್ರಶ್ನೆಗಳಿಗೆ ಸೂಚನೆ ನೀಡುವ.....

ಶ್ರೀ ಕೆ. ಪುಟ್ಟಸ್ವಾಮಿ: ಅಗತ್ಯ ಬಂದಲ್ಲಿ ಅವರು ಹಾಜರಿರುತ್ತಾರೆ.

ಶ್ರೀ ಹೆಚ್.ಬಿ. **ಗುಂಡಪ್ಪಗೌಡ**:..........ಮತ್ತು ಅವರ ಪ್ರತಿಕ್ರಿಯೆ ಹಾಗೂ ಅವರ ಮುಖದ ಮೇಲೆ ಉಂಟಾಗುವ ಮಾನಸಿಕ ಪರಿಣಾಮವನ್ನು ನೋಡುವುದು. ಇದು ಬೇರೆಯದೇ ಅಂಶ.ಈ ಕಾಯಿದೆಯ ತಿದ್ದುಪಡಿಯಿಂದ ಸನ್ಮಾನ್ಯ ಸಚಿವರ ಸ್ಥಿತಿ ಬಲಗೊಂಡಿರಲೂಬಹುದು. ಹಳೆಯ ಕಾಯಿದೆಯ ಪ್ರಕಾರ ಅದು ಹಳೆಯದೋ ಅಲ್ಲವೋ ಸಂಸದೀಯ ನಡೆವಳಿಕೆಯು ಎಲ್ಲ ಸಂಸ್ಥೆಗಳಿಗೂ ಒಂದೇ ರೀತಿಯಾಗಿರುತ್ತದೆ.

ಶ್ರೀ ಕೆ.ಟಿ. ಭಾಷ್ಯಂ: ಆದರೆ ನಿಯಮಗಳು ಬೇರೆಯಾಗಿರುತ್ತದೆ.

ಶ್ರೀ **ಹೆಚ್.ಬಿ.ಗುಂಡಪ್ಪಗೌಡ**: ಅದನ್ನು ನಾನು ಒಪ್ಪುತ್ತೇನೆ. ಹಳೆಯ ಕಾಯಿದೆಯ ಪ್ರಕಾರ ಪ್ರತಿಒಬ್ಬ ಸಚಿವರೂ ಈ ಸದನದ ಸದಸ್ಯರಾಗಿರಬೇಕು ಮತ್ತು ಇಲ್ಲಿ ಉಪಸ್ಥಿತರಿರಬೇಕು ಎಂದು ನಿರೀಕ್ಷಿಸಲಾಗುತಿತ್ತು. ಆದರೆ ಈಗ ಅದಕ್ಕೆ ತಿದ್ದುಪಡಿಯಾಗಿದೆ. ಇಲ್ಲಿರುವ ಒಟ್ಟು ಪ್ರಶ್ನೆ ಇದು ಸದರಿ ಸರ್ಕಾರವು ಕೂಡ ಜವಾಬ್ದಾರಿ ಎಂಬ ಒಂದು ಪರಿಕಲ್ಪನೆಯನ್ನು ನಂಬಿಕೊಂಡಿದೆ. ನನ್ನ ಸ್ನೇಹಿತ ಜನಾಬ್ ಮೊಹಮದ್ ಇಮಾಂ ಅವರು ಹೇಳಿದಂತೆ Where is the question of joint responsibility if one minister is absent uniformly?

**ಸಭಾಪತಿಯವರು**: ಸದನದ ಮಾನ್ಯ ನಾಯಕರು ಈ ಜವಾಬ್ದಾರಿಯನ್ನು ಸ್ವತಃ ವಹಿಸಿಕೊಳ್ಳುತ್ತಾರೆ.

ಶ್ರೀ **ಹೆಚ್.ಬಿ.ಗುಂಡಪ್ಪಗೌಡ**: ಇದಕ್ಕೆ ಸದಸ್ಯವಾದ ಸ್ಥಿತಿಯನ್ನು ನಾನು ಬೇರೆಲ್ಲೂ ಕಾಣಲಿಲ್ಲ. ಇಂತಹ ಸ್ಥಿತಿ ಬೇರೆ ಯಾವುದಾದರೂ ಶಾಸಕಾಂಗಗಳಲ್ಲಿದೆಯೇ ಎಂಬುದನ್ನು ಮಾನ್ಯ ಸದಸ್ಯರಿಂದ ತಿಳಿಯ ಬಯಸುತ್ತೇನೆ.

ಶ್ರೀ ಕೆ.ಟಿ. ಭಾಷ್ಯಂ: ಇದ್ದಂತಿಲ್ಲ.

ಶ್ರೀ ಕೆ. **ಚೆಂಗಲರಾಯರೆಡ್ಡಿ**: ಬಹುತೇಕ ಎಲ್ಲ ಸಂವಿಧಾನಗಳಲ್ಲಿಯೂ ಸದಸ್ಯೇತರರಿಗೆ, ಸಚಿವರಾಗುವುದಕ್ಕೆ ಅವಕಾಶಗಳನ್ನು ಮಾಡಿಕೊಡಲಾಗಿದೆ. ಮತ್ತು ಅವರು ಸಚಿವರಾಗಿ ಆಯ್ಕೆಯಾದ ದಿನಾಂಕದಿಂದ ಆರು ತಿಂಗಳುಗಳೊಳಗಾಗಿ ಗೆದ್ದು ಬರಬೇಕು. ಪ್ರಶ್ನೆಯ ಮೊದಲ ಭಾಗಕ್ಕೆ ಸಂಬಂಧಿಸಿದಂತೆ ಹೇಳುವುದಾದರೆ ಪಾರ್ಲಿಮೆಂಟ್ ಅಥವಾ ಅಸೆಂಬ್ಲಿಯ ಸದಸ್ಯರಲ್ಲದವರು ಸಚಿವರಾಗುವ ಅವಕಾಶ ಕಲ್ಪಿಸಿರುವುದು ಬಹುತೇಕ ಎಲ್ಲ ಸಂವಿಧಾನಗಳಲ್ಲಿಯೂ ಇರುವ ಲಕ್ಷಣ. ಜನವರಿ 26 ರಿಂದ ಜಾರಿಯಾಗುತ್ತಿರುವ ಭಾರತೀಯ ಸಂವಿಧಾನದಲ್ಲಿಯೂ ಈ ಅವಕಾಶವನ್ನು ಅಳವಡಿಸಿಕೊಳ್ಳಲಾಗಿದೆ. ಆದ್ದರಿಂದ ಇದರಲ್ಲಿ ಹೊಸದೇನೂ ಇಲ್ಲ.

ಶ್ರೀ **ಹೆಚ್.ಬಿ. ಗುಂಡಪ್ಪಗೌಡ**: ಆದರೆ ಪ್ರಶ್ನೆಯ ಎರಡನೆಯ ಭಾಗ ಅಲ್ಲಿಲ್ಲ.

**ಶ್ರೀ ಕೆ. ಚೆಂಗಲರಾಯರೆಡ್ಡಿ:** ಈ ಸದನದ ಕಲಾಪದ ಅವಧಿಯಲ್ಲಿ ಈ ಸಚಿವರ ಉಪಸ್ಥಿತಿಯ ಬಗ್ಗೆ ಮಾತ್ರ ಇಲ್ಲಿ ಪ್ರಶ್ನೆ ಎದ್ದಿದೆ. ಅವರು ನೆನ್ನೆ ಹಾಗೂ ಇಂದು ಗೈರುಹಾಜರಾದ ಮಾತ್ರಕ್ಕೆ ಸದಾಕಾಲವೂ ಗೈರು ಹಾಜರಾಗುತ್ತಾರೆ ಎಂದರ್ಥವಲ್ಲ.

**ಶ್ರೀ ಹೆಚ್.ಬಿ. ಗುಂಡಪ್ಪಗೌಡ:** ಅವರಿಗೆ ನಾವು ಒಂದು ಸ್ಥಾನವನ್ನು ಕೂಡ ಹಂಚಿಕೆ ಮಾಡಿಲ್ಲ.

**ಶ್ರೀ ಕೆ. ಚೆಂಗಲರಾಯರೆಡ್ಡಿ:** ಸದಸ್ಯರಲ್ಲಿಯೂ ಕೂಡ ಯಾವೂದೇ ಕಾರಣದಿಂದ ಕೆಲವರು ನೆನ್ನೆ ಮತ್ತು ಇಂದು ಹಾಜರಿಲ್ಲದಿರಬಹುದು.

**ಶ್ರೀ ಹೆಚ್.ಬಿ. ಗುಂಡಪ್ಪಗೌಡ:** ಅದು ಬೇರೆ ವಿಷಯ.

**ಶ್ರೀ ಕೆ.ಚೆಂಗಲರಾಯರೆಡ್ಡಿ:** ಹಾಗಿದ್ದರೂ, ಕ್ರಮಬದ್ಧ ಸದಸ್ಯರಾಗಿಲ್ಲದಿರುವ ಸಚಿವರು ಮಾತ್ರ ಗೈರು ಹಾಜರಾಗಿದ್ದಾರೆ. ಈ ಬಗ್ಗೆ ಒಂದು ಸಾರ್ವತ್ರಿಕ ತೀರ್ಮಾನಕ್ಕೆ ಬರುಲಾಗುವುದಿಲ್ಲ. ಈ ಹಿನ್ನೆಲೆಯಲ್ಲಿ ಯಾವುದೇ ತಪ್ಪಾಗಲೀ, ಸಾಂವಿಧಾನಿಕ ಚ್ಯುತಿಯಾಗಲೀ ಇಲ್ಲವೆಂದು ಭಾವಿಸುತ್ತೇನೆ. ಅಂತಹ ಸಚಿವರಿಗೆ ಖಾಯಂ ಸ್ಥಾನ ಒದಗಿಸುವುದಕ್ಕೆ ಸಂಬಂಧಿಸಿದಂತೆ ಇದನ್ನು ಶಾಸನ ಕಛೇರಿಯು ನಿರ್ಣಯಿಸಬೇಕು. ಅದು ಮುಂದಿನ ಅಧಿವೇಶನದಲ್ಲಿ ಸರಿ ಹೋಗುಬಹುದು.

**ಶ್ರೀ ಟಿ. ಸುಬ್ರಹ್ಮಣ್ಯ:** ಎಲ್ಲ ಸಚಿವರೂ ಇಡೀ ದಿನ ಉಪಸ್ಥಿತರಿರಬೇಕು ಎಂದು ಯಾರೂ ಒತ್ತಾಯ ಪಡಿಸುವಂತಿಲ್ಲ ಎಂದು ನನಗನ್ನಿಸುತ್ತದೆ. ನಿರ್ದಿಷ್ಟ ಸಚಿವರಿಂದ ಯಾರಾದರೊಬ್ಬ ಸದಸ್ಯರು ಏನಾದರೂ ಪ್ರಶ್ನೆಗೆ ಉತ್ತರ ಅಥವಾ ಮಾಹಿತಿ ಕೇಳಿದಾಗ ಆ ಸಚಿವರು ಇರಲೇ ಬೇಕಾಗುತ್ತದೆ. ಅದಕ್ಕೆ ತಕ್ಕ ಮಾಹಿತಿಯನ್ನು ಸಚಿವರು ಕೊಡಬೇಕು, ಆದರೆ ಏನೂ ಕೆಲಸವಿಲ್ಲದಿದ್ದರೆ ಆ ಸಚಿವರು ಗೈರು ಹಾಜರಾಗಬಹುದು. ಆದ್ದರಿಂದ ಅವರಿಗೆ ಸ್ಥಾನ ಕಲ್ಪಿಸಿಲ್ಲ ಎಂಬುದು ತೀರ ಸಣ್ಣ ವಿಷಯ. ಅವರು ಯಾವಾಗ ಬರುತ್ತಾರೋ ಆಗ ಅವರಿಗೆ ಸ್ಥಾನ ಕಲ್ಪಿಸಲಾಗುವುದು ಎಂದು ಮುಖ್ಯ ಮಂತ್ರಿಗಳು ಹೇಳಿದ್ದಾರೆ.

**ಜನಾಬ್ ಸೈಯದ್ ಅಬ್ದೂರ್ ರೆಹಮಾನ್: (ಚಿಕ್ಕಮಗಳೂರು ಹಾಗೂ ಶಿವಮೊಗ್ಗ ಮುಸ್ಲಿಂ):** ಶ್ರೀ ಹುಚ್ಚೇಗೌಡರು ಕೇಳಿದ್ದೇನೆಂದರೆ ಸಚಿವರಿಗೆ ಸ್ಥಾನ ಏಕೆ ಕಾದಿರಿಸಿಲ್ಲ ಎಂದು, ಅಗತ್ಯ ಬಿದ್ದಾಗ ಒದಗಿಸಲಾಗುವುದು ಎಂದು ಉತ್ತರ ಬಂದಿದೆ. ಈಗ ಅಗತ್ಯ ಬಂದಿದೆಯಲ್ಲ, ಅವರನ್ನೇಕೆ ಕರೆಸಬಾರದು?

**(ಹುಚ್ಚೇಗೌಡರು ಮಾತಾಡಲು ಎದ್ದು ನಿಂತಾಗ)**

**ಸ್ಪೀಕರ್:** ಮಾನ್ಯ ಸದಸ್ಯರು ಈಗಾಗಲೇ ಮಾತಾಡಿಯಾಗಿದೆ.

**ಶ್ರೀ ಬಿ. ಹುಚ್ಚೇಗೌಡ:** ನನ್ನ ಮಾತನ್ನು ಸ್ಪಷ್ಟಪಡಿಸಬೇಕು. ಈ ಸಭೆಯ ಸದಸ್ಯರಾಗಿಲ್ಲದೇ ಇರುವವರು ಸಚಿವರಾಗಬಹುದೇ ಎಂಬ ಪ್ರಶ್ನೆಯನ್ನು ನಾನು ಕೇಳುತ್ತಿಲ್ಲ. ಅವರು ಈ ಸಭೆಯಲ್ಲಿದ್ದು ಮಾಡಬೇಕಾದ ಕೆಲಸದ ವಿಚಾರ ಹೇಳುತ್ತಿದ್ದೇನೆ. ತಾವು ಹಿಂದೆ ಅಸೆಂಬ್ಲಿಯ ಅಧ್ಯಕ್ಷರಾಗಿದ್ದೀರಿ. ತಮಗೆ ಗೊತ್ತಿದೆ ಆಗ ಒಂಭತ್ತು ಸೀಟುಗಳು ಇರುತ್ತ ಇದ್ದವು.

ಶ್ರೀ ಎಂ. ಮಾದಯ್ಯನವರು: (ಮೈಸೂರು ಜಿಲ್ಲೆ ನಿಮ್ನ ಪಂಗಡ) ಕ್ರಿಯಾ ಲೋಪದ ವಿಷಯವಾಗಿ ಯಾವುದೋ ಪ್ರಾಸಂಗಿಕವಾದ ಒಂದು ಪ್ರಶ್ನೆಗೆ ಈಗಿನ ಅಜೆಂಡಾದಲ್ಲಿ ಇಲ್ಲದೇ ಇರುವುದಕ್ಕೆ ಅವಕಾಶ ಕೊಟ್ಟಿರುವುದೇ ಒಂದು ಔದಾರ್ಯವನ್ನು ತೋರಿಸಿದ ಹಾಗಾಯಿತು. ಸರ್ಕಾರದ ಪರವಾಗಿ ಮುಖ್ಯ ಮಂತ್ರಿಗಳು ಉತ್ತರ ಕೊಟ್ಟು ತಮ್ಮ ರೂಲಿಂಗ್ ಆದಮೇಲೆ ಪುನಃ ಆ ವಿಚಾರದಲ್ಲಿ ಚರ್ಚೆ ಮಾಡುವುದಕ್ಕೆ ಅವಕಾಶವಿಲ್ಲ.

ಸಭಾಪತಿಯವರು: ಇಲ್ಲಿ ಕ್ರಿಯಾಲೋಪವಿರಲಿಲ್ಲ. ರೂಲಿಂಗ್ ಇರಲಿಲ್ಲ. ಮಾನ್ಯ ಸದಸ್ಯರಿಗೆ ಮಾಹಿತಿ ಮಾತ್ರ ಬೇಕಾಗಿತ್ತು.

ಶ್ರೀ ಕೆ.ಟಿ ಭಾಷ್ಯಂ: ಒಂದು ಅಂಶವನ್ನು ಸ್ಪಷ್ಟಪಡಿಸಬಯಸುತ್ತೇನೆ. ಈಗ ಅವರಿಗೆ ಒಂದು ಜಾಗ ಮಾಡಿಲ್ಲ. ಅದು ತಪ್ಪು ಎನ್ನುವುದು ಒಂದು ಅಂಶ. ಎರಡನೆಯದು 9 ಜನ ಮಂತ್ರಿಗಳೂ ಇಲ್ಲದೆ ಇದ್ದರೆ ಒಂದು ವೇಳೆ ಅವಿಶ್ವಾಸ ನಿರ್ಣಯ ಬಂದರೆ ಜಂಟಿ ಜವಾಬ್ದಾರಿಯನ್ನು ಹೇಗೆ ನಿರ್ವಹಿಸುತ್ತೀರಿ ಎಂಬ ಪ್ರಶ್ನೆ ಬಂದಿದೆ. ಈ ಎರಡರಲ್ಲೂ ತಿರುಳಿಲ್ಲ. ಮೊದಲನೆಯದು ಸದಸ್ಯರುಗಳಿಗೆ ಸ್ಥಳ ಕಲ್ಪಿಸಿಕೊಡುವುದು ನಮ್ಮ ಕರ್ತವ್ಯ. ಯಾರ್‍ಯಾರು ಸದಸ್ಯರುಗಳಾಗಿದ್ದಾರೋ ಅವರುಗಳೆಲ್ಲರಿಗೂ ಸ್ಥಳ ಕಲ್ಪಿಸಿಕೊಟ್ಟಿದ್ದೇವೆ. 9 ನೇ ಮಂತ್ರಿಗಳು ಈ ಸಭೆಯ ಸದಸ್ಯರಲ್ಲದೇ ಇರುವುದರಿಂದ ಅವರಿಗೆ ಸ್ಥಳ ಕೊಡಬೇಕಾದ್ದಿಲ್ಲ. ಕೊಡಲೂ ಇಲ್ಲ. ಅವರಿಗೆ 14(ಎ) ಸೆಕ್ಷನ್ ಪ್ರಕಾರ ಮಾತನಾಡತಕ್ಕ ಅಧಿಕಾರವಿದೆ. ಆದ್ದರಿಂದ ಅದನ್ನು ಏನಾದರೂ ಚಲಾಯಿಸಿ ಮಾತನಾಡಬೇಕೆಂದರೆ ಆಗ ಅವರಿಗೆ ಒಂದು ಸ್ಥಳ ಮಾಡಿಕೊಡುತ್ತೇವೆ. ಅವರಿಗೆ ತಿಳಿಸುತ್ತೇವೆ. ಆ ರೀತಿ ತಿಳಿಸಿದ ಕೂಡಲೇ ಸ್ಥಳ ಮಾಡಿಕೊಡಬಹುದಾಗಿದೆ. ಇದುವರೆಗೆ ಸ್ಥಳ ಒದಗಿಸಬೇಕಾದ ಅಗತ್ಯವಿರಲಿಲ್ಲ. ಆವಶ್ಯಕತೆ ಇಲ್ಲದೆ ಒತ್ತಾಯ ಪಡಿಸತಕ್ಕ ಅಧಿಕಾರ ಯಾರಿಗೂ ಇಲ್ಲ. ಪ್ರತಿಯೊಬ್ಬ ಸದಸ್ಯರಿಗೂ ಸ್ಥಳ ಕಲ್ಪಿಸಿಕೊಡಲಾಗಿದೆ. ಮತ್ತು ಸಭೆಗೆ ಕರೆ ಕಳುಹಿಸಲಾಗಿದೆ. ಈ ಕರೆ ಪ್ರತಿಯೊಬ್ಬರಿಗೂ ತಲುಪಿದೆ ಮತ್ತು ಅವರಿಗೆ ಸ್ಥಳ ಕೊಡಲಾಗಿದೆ ಅಸೆಂಬ್ಲಿಗೆ ಸದಸ್ಯರಲ್ಲದ ಯಾರಿಗೂ ಕರೆ ಕಳುಹಿಸುವಂತಿಲ್ಲ ಅಥವಾ ಅವರಿಗೆ ಸ್ಥಳ ಕೊಡಬೇಕಿಲ್ಲ. ಅವರು ಸದಸ್ಯರಲ್ಲದಿದ್ದರೂ ಇಲ್ಲಿಗೆ ಬಂದು ಮಾತಾನಾಡುವುದು ಅಗತ್ಯವಾದಂತಹ ಸಚಿವರಿಗೆ ಮಾತ್ರ ಅವಕಾಶ ಮಾಡಿಕೊಡಲಾಗುವುದು. ಅವರು ತಮಗಿರುವ ಹಕ್ಕನ್ನು ಬಳಸಿಕೊಳ್ಳಲು ಹಾಗೂ ತಮಗೆ ಸ್ಥಳ ಕೊಡಬೇಕೆಂದು ಬಯಸಿದರೆ ಅದನ್ನು ಅವರಿಗೆ ಕೊಡಲಾಗುವುದು. ಆದ್ದರಿಂದ ಇಲ್ಲಿನ ಆಕ್ಷೇಪಣೆ ಸರಿಯಾಗಿಲ್ಲ. ಎರಡನೆಯದು ಜಂಟಿ ಜವಾಬ್ದಾರಿಯ ವಿಷಯ. ಇಲ್ಲಿ ನಾವೆಲ್ಲ ಇದ್ದೇವೆ. ನಾವು ಉತ್ತರ ಕೊಡುತ್ತೇವೆ. ಅದು ಸಮರ್ಪಕವಾಗಿಲ್ಲವೇ ನೋಡೋಣ. ಅವರೇ ಬರಬೇಕೆಂದೇನೂ ಇಲ್ಲ. ಮಂತ್ರಿಗಳ ಪೈಕಿ ಒಬ್ಬರು ಇದ್ದರೂ ಉತ್ತರ ಕೊಡಬಹುದು. ಯಾವ ರೂಲ್ ಪ್ರಕಾರ ಅವಿಶ್ವಾಸ ನಿರ್ಣಯ ತರಲು 9 ಜನ ಮಂತ್ರಿಗಳೂ ಇರಬೇಕು ಎಂಬುದನ್ನು ಸೂಚಿಸಿದರೆ ಅದರ ಮೇಲೆ ಮಾತಾನಾಡಬಹುದು. ನನಗೆ ತಿಳಿದ ಮಟ್ಟಿಗೆ ಆ ರೀತಿ ಪ್ರಾವಿಷನ್ ಎಲ್ಲೂ ಇಲ್ಲ. ಮುಖ್ಯಮಂತ್ರಿಗಳು ಒಬ್ಬರು ಮಾತನಾಡಿದರೆ ಸಾಕು.

ವಾಸ್ತಾವವಾಗಿ ನಮ್ಮ ಅಸೆಂಬ್ಲಿ ಅಥವಾ ಕೌನ್ಸಿಲ್‌ನಲ್ಲಿರುವ ಸಂಪ್ರದಾಯದಂತೆ ಎಲ್ಲ ಮಂತ್ರಿಗಳ ಪರವಾಗಿ ಮುಖ್ಯ ಮಂತ್ರಿಗಳು ಮಾತಾಡುತ್ತಾರೆ. ಇದು ಬಹಳ ಪರಿಪೂರ್ಣವಾದ ಸಂಪ್ರಾದಾಯ.

ಜನಾಬ್ ಜೆ. ಮೊಹಮದ್ ಇಮಾಂ: ಅವರು ಎಲ್ಲ ಮಂತ್ರಿಗಳ ಪರವಾಗಿ ಕೆಲಸ ಮಾಡುವಂತಿಲ್ಲ. ಎಲ್ಲ ಮಂತ್ರಿಗಳ ಪರವಾಗಿ ಮಾತಾಡಬಹುದು.

ಶ್ರೀ ಕೆ.ಟಿ. ಭಾಷ್ಯಂ: ಅದು ಬಹಳ ಸರಿ. ಅವಿಶ್ವಾಸನಿರ್ಣಯದ ಸಂದರ್ಭದಲ್ಲಿ ಮಂತ್ರಿಯೊಬ್ಬರ ಪರವಾಗಿ ವರ್ತಿಸುವ ಪ್ರಶ್ನೆ ಬರುವುದಿಲ್ಲ. ಅವರು ಮಾತಾನಾಡಬಹುದು. ಅಷ್ಟೆ (ನಗು)

ಶ್ರೀ ಹುಚ್ಚೇಗೌಡರು: ಈಗ ಕ್ಯಾಬಿನೆಟ್ ಮಂತ್ರಿಗಳ ಪೈಕಿ ಮೆಂಬರುಗಳಲ್ಲದೇ ಇರತಕ್ಕವರಿಗೆ ಸರಿಸಮಾನವಾದ ಅಧಿಕಾರವಿಲ್ಲವೆಂದು ಹೇಳಿದರೆ ಅದು ಸರಿಯಲ್ಲ. ಮಂತ್ರಿಗಳಿಗೆ ವೋಟಿಂಗ್ ಅಧಿಕಾರವೊಂದು ವಿನಾ ಬಾಕಿ ಎಲ್ಲಾ ಅಧಿಕಾರವೂ ಇದೆ. ಆದರೆ ಮಂತ್ರಿಗಳು ಯಾವಾಗಲೂ ಹಾಜರಾಗಿರಬೇಕೆಂದು ಕಡ್ಡಾಯ ಮಾಡಬಾರದು ಎಂದು ಹೇಳುವುದನ್ನು ಒಪ್ಪುವುದಕ್ಕಾಗುವುದಿಲ್ಲ.

ಅಧ್ಯಕ್ಷರು: ಖಾಯಿಲೆ ಬಿದ್ದರೆ ಏನು ಮಾಡುತ್ತಾರೆ?

ಶ್ರೀ ಬಿ. ಹುಚ್ಚೇಗೌಡರು: ಅದು ಬೇರೆ ವಿಷಯ, ಈ ವಿಚಾರದಲ್ಲಿ ಅಧ್ಯಕ್ಷರೇ ರೂಲಿಂಗ್ ಕೊಟ್ಟಿದ್ದಾರೆ.

ಅಧ್ಯಕ್ಷರು: ಇದ್ದೂ ಹೊರಗೆ ಹೋಗಿದ್ದರೆ ಏನು ಮಾಡುವುದು? 9 ಜನರೂ ಇರಬೇಕೆಂದು ಹೇಗೆ ನಿರ್ಬಂಧ ಮಾಡುವುದು? ಅದಕ್ಕೆ ಸಂದರ್ಭವೇನೆಂಬುದನ್ನು ಹೇಳಿರುತ್ತಾರೆ. ಅದರ ಮೇಲೆ ಚರ್ಚೆ ಬೇಕಾಗಿಲ್ಲ.

ಶ್ರೀ ಬಿ. ಹುಚ್ಚೇಗೌಡರು:- ವೋಟು ಮಾಡುವ ಅಧಿಕಾರ ಬಿಟ್ಟು ಬಾಕಿ ಎಲ್ಲ ಅಧಿಕಾರವೂ ಅವರಿಗಿದೆ.

ಅಧ್ಯಕ್ಷರು: ಈ ದಿವಸ ವೋಟು ಕೊಡುವ ಕೆಲಸ ಮಾತ್ರ ಇದ್ದುದರಿಂದ ಅವರು ಇರಬೇಕಾದ ಅವಶ್ಯಕತೆ ಇರಲಿಲ್ಲ. ಮುಂದೆ ಸಭೆ ನಡೆದಾಗ ಅವರು ಬಾರದೇ ಇದ್ದರೆ ಆಗ ವಿಚಾರ ಬಂದರೆ ತೀರ್ಮಾನ ಮಾಡೋಣ.

## 3. ಭಾರತೀಯ ಆಡಳಿತ ಸೇವಾ ಯೋಜನೆಯನ್ನು ಮೈಸೂರಿನಲ್ಲಿ ಜಾರಿಗೆ ತರುವುದು

### ವಿಧಾನಸಭಾ ಕಲಾಪ-4ನೇ ಡಿಸೆಂಬರ್ 1950

ಶ್ರೀ ಚೆಂಗಲರಾಯರೆಡ್ಡಿಯವರು: ಮಾನ್ಯ ಸಭಾಪತಿಯವರೇ, ಈ ಸದನದಲ್ಲಿ ಸುದೀರ್ಘಕಾಲ ಚರ್ಚಿತವಾದ ಇಷ್ಟು ಮಹತ್ವದ ವಿಷಯದ ಬಗ್ಗೆ ನಾನು ಈ ಹೊತ್ತಿಗೆ ಎಷ್ಟರ ಮಟ್ಟಿಗೆ ಸಮಾಧಾನ ಒದಗಿಸಬಹುದು ಎಂಬುದನ್ನು ಹೇಳಲಾರೆ. ಈ ಮೂಲ ಭೂತ ವಿಷಯದ ಅನೇಕ ರೀತಿಯ ವ್ಯಾಖ್ಯಾನಗಳೊಂದಿಗೆ ಈ ಅಧಿವೇಶನ ಆರಂಭವಾಯಿತು. ಭಾರತ ಸರ್ಕಾರವು ಹುಟ್ಟುಹಾಕಿದ ಈ ಒಂದು ನಿರ್ದಿಷ್ಟ ಪ್ರಸ್ತಾಪ ಈಗ ಯಾವ ಹಂತದಲ್ಲಿದೆ ಎಂಬುದರ ಬಗ್ಗೆ ನಾನು ಮೊದಲನೆಯ ದಿನವೇ ಪ್ರಶ್ನಾವೇಳೆಯಲ್ಲಿ ಸದನಕ್ಕೆ ತಿಳಿಸಿದ್ದೇನೆ. ಅಖಿಲ ಭಾರತ ಆಡಳಿತ ಸೇವೆ ಹಾಗೂ ಪೋಲೀಸ್ ಸೇವಾ ಯೋಜನೆಗಳನ್ನು ವಿಸ್ತರಿಸುವ ಕುರಿತು ಮೈಸೂರು ಸರ್ಕಾರವು ತಾತ್ವಿಕ ಒಪ್ಪಿಗೆ ನೀಡಿದಾಗ ಅದರ ವಿವಿಧ ವಿವರಗಳ ಕುರಿತು ಯಾವ ಅಂತಿಮ ತೀರ್ಮಾನವೂ ಆಗಿರಲಿಲ್ಲ. ಎಂಬುದನ್ನು ನಾನು ಸ್ಪಷ್ಟಪಡಿಸಿದ್ದೇನೆ. ಆರಂಭದಲ್ಲಿಯೇ ಈ ಬಗ್ಗೆ ನಾನು ಮತ್ತೊಮ್ಮೆ ಸ್ಪಷ್ಟಪಡಿಸುತ್ತಿದ್ದೇನೆ ಇಂತಹ ಒಂದು ಬಹು ಮುಖ್ಯ ಪ್ರಶ್ನೆಯನ್ನು ಕುರಿತಂತೆ ಈ ಸದನವು ವ್ಯಕ್ತಡಿಸಿದ ಕಾಳಜಿ ತುಂಬ ಮೆಚ್ಚುವಂಥಾದ್ದಾಗಿದೆ. ಈ ಸಮಸ್ಯೆಯನ್ನು ನಾನು ಯಾವುದೇ ಹಗುರ ಭಾವನೆಯಿಂದ ನೋಡುತ್ತಿಲ್ಲ ಮತ್ತು ಈ ವಿಷಯದ ಜೊತೆ ಸೇರಿರುವ ಸಮಸ್ಯೆಗಳನ್ನು ಮರೆತಿಲ್ಲ ಈ ಚರ್ಚೆ ಬಹಳ ವ್ಯಾಪಕ ನೆಲೆಯ ಮೇಲೆ ನಡೆದಿದೆ. ಅದರ ರಾಜಕೀಯ ಹಾಗೂ ಸಂವಿಧಾನಿಕ ಮುಖಗಳನ್ನು ಸಹ ಪರಿಶೀಲಿಸಲಾಗಿದೆ. ಈ ಸದನದಲ್ಲಿಯೂ ಹಾಗೂ ಮೈಸೂರು ಸಂವಿಧಾನ ಸಭೆಯಲ್ಲಿಯೂ ಈ ವಿಷಯಗಳನ್ನು ಚರ್ಚಿಸಲಾಗಿದೆ. ಆದ್ದರಿಂದ ಈ ಹಂತದಲ್ಲಿ ಮತ್ತೊಮ್ಮೆ ನಾನು ವಿಷಯದ ಮೂಲಾಂಶಗಳನ್ನೆಲ್ಲ ಪ್ರಸ್ತಾಪಿಸುವುದು ಅನಗತ್ಯವೆಂದು ಭಾವಿಸುತ್ತೇನೆ. ಆದರೆ ಒಂದು ಅಂಶವನ್ನು ನಾವು ಗಮನದಲ್ಲಿಟ್ಟುಕೊಳ್ಳಬೇಕು ಅದೇನೆಂದರೆ, ನಾವು ಪ್ರಸ್ತುತ ಯಾವ ವ್ಯವಸ್ಥೆಯಲ್ಲಿ ಕೆಲಸ ಮಾಡುತ್ತಿದ್ದೇವೆ ಎಂಬುದನ್ನು ಮರೆಯಬಾರದು ಹಾಗೂ ಕಳೆದ ಸುಮಾರು ಮೂರು ವರ್ಷಗಳ ಅವಧಿಯಲ್ಲಿ ಒಟ್ಟಾರೆ ಭಾರತದಲ್ಲಿ ಹಾಗೂ ಮುಖ್ಯವಾಗಿ ಮೈಸೂರು ರಾಜ್ಯದಲ್ಲಿ ಏನೇನು ಬದಲಾವಣೆಗಳಾಗಿವೆ ಎಂಬುದನ್ನು ಮರೆಯಬಾರದು. 1947 ರ ಆಗಸ್ಟ್ 15ಕ್ಕೆ ಮುಂಚೆ ಯಾವ ಪರಿಸ್ಥಿತಿ ಸಂದರ್ಭ ಇದ್ದಿತೋ ಅದರ ಗುಂಗಿನಿಂದ ಅಥವಾ ಪ್ರಭಾವದಿಂದ ನಾವು ಹೊರಬರುವುದು ಅಗತ್ಯ. 1950 ಮತ್ತು ಆ ಮುಂದಿನ ವರ್ಷಗಳಲ್ಲಿ ನಮಗೆ ಎದುರಾಗುವಂತಹ ಪ್ರತಿಯೊಂದು ಸಮಸ್ಯೆಯನ್ನು 1947ಕ್ಕೆ ಮೊದಲು ಇದ್ದಂತಹ ಪರಿಸ್ಥಿತಿಯ ಹಿನ್ನೆಲೆಯಿಂದ ವಿಶ್ಲೇಷಿಸುವುದು ಸರಿಯಲ್ಲ. ಈಗಿನ ಹೊಸ ಪರಿಸ್ಥಿತಿಯ ಹಿನ್ನೆಲೆಯಲ್ಲಿ ನಾವು ಸಮಸ್ಯೆಗಳನ್ನು ಪರಿಶೀಲಿಸಬೇಕು ಮತ್ತು ಹೊಸ ದೃಷ್ಟಿ ಕೋನದಿಂದ ಪರಿಹಾರಗಳನ್ನು ಕಂಡುಕೊಳ್ಳಬೇಕು.

ಈ ಮೂರು ವರ್ಷಗಳ ಅವಧಿಯಲ್ಲಿ ಏನೇನಾಗಿದೆ ಎಂಬುದನ್ನು ಈ ಸದನದ ಗಮನಕ್ಕೆ ತರಬಯಸುತ್ತೇನೆ. ಮಾನ್ಯ ಸದಸ್ಯರೊಬ್ಬರು ಬಹುಶಃ ಜನಾಬ್ ಮೊಹಮದ್ ಇಮಾಂ ರವರು ಈಗಾಗಲೇ ಹೇಳಿದಂತೆ, ಈ ಮೂರು ವರ್ಷಗಳಲ್ಲಿ ಕೆಲವೊಂದು ಬದಲಾವಣೆಗಳಾಗಿರುವುದನ್ನು ಈ ಸದನವೇ ಒಪ್ಪಿಕೊಂಡಿದೆ. ಸಂವಿಧಾನಿಕವಾಗಿ ಇಂದು ನಾವು ಭಾರತದ ಅವಿಭಾಜ್ಯ ಅಂಗ. ಆದರೆ 1947 ರಲ್ಲಿದ್ದ ಸ್ಥಿತಿಯೇ ಭಿನ್ನವಾಗಿತ್ತು. ಮೊದಲು ನಾವು ಮೂರು ವಿಷಯಗಳಿಗೆ ಸಂಬಂಧಿಸಿದಂತೆ ಸಮ್ಮತಿಸಿದೆವು. ಅದಾದ ನಂತರ ಇನ್ನೂ ಕೆಲವು ವಿಷಯಗಳಿಗೆ ಸಮ್ಮತಿಸಿದೆವು. ಸಂವಿಧಾನ ಸಭೆಯಲ್ಲಿ ನಾವು ಸಾಧ್ಯವಿರುವಷ್ಟೂ ಆಂತರಿಕ ಸ್ವಾಯತ್ತತೆಯೊಂದಿಗೆ ನಮ್ಮ ದೇಶದ ಸಂವಿಧಾನವನ್ನು ರೂಪಿಸಿಕೊಳ್ಳಬೇಕೆಂದು ಅವರು ಬಯಸಿದರು. ಇದಾದ ನಂತರ ವಿಷಯ ಬೇರೊಂದು ತಿರುವು ಪಡೆಯಿತು. ಮೈಸೂರು ಸಂವಿಧಾನವನ್ನೂ ಭಾರತದ ಸಂವಿಧಾನ ಸಭೆಯು ರಚಿಸಬಹುದು ಎಂಬ ಪ್ರಸ್ತಾವನೆಗೆ ಮೈಸೂರು ಸಂವಿಧಾನ ಸಭೆ ತನ್ನ ಅನುಮೋದನೆಯ ಮುದ್ರೆ ನೀಡಿತು. ಎಲ್ಲ ಪ್ರಕ್ರಿಯೆಗಳನ್ನು ಪೂರೈಸಿದ ನಂತರ, ಇಡೀ ಭಾರತಕ್ಕೆ, ಒಂದು ಸಮಾನ ಸಂವಿಧಾನ, ಭಾರತದ ಎಲ್ಲ ಘಟಕಗಳಿಗೂ ಒಂದು ಸಮಾನ ಸಂವಿಧಾನ ಹಳೆಯ ಪ್ರಾಂತಗಳು ಹಾಗೂ ರಾಜ್ಯಗಳಿಗೆ (ಇವೆಲ್ಲವನ್ನು ಈಗ ರಾಜ್ಯಗಳು ಎಂದೇ ಕರೆಯಲಾಗುತ್ತದೆ) ಒಂದು ಸಮಾನ ಸಂವಿಧಾನ 1949 ರ ನವೆಂಬರ್ 26 ರಂದು ರೂಪುಗೊಂಡಿತು. ಸಂವಿಧಾನಿಕವಾಗಿ ನಾವು ಭಾರತದ ಉಳಿದ ಭಾಗಗಳೊಂದಿಗೆ ಒಂದು ಗೂಡಿದೆವು. ಇಂತಹ ಸ್ಥಿತಿಯಿಂದ ಉದ್ಭವಿಸುವ ಅನುಕೂಲಗಳು ಅಥವಾ ಅನಾನುಕೂಲಗಳ ಹಿನ್ನೆಲೆಯಲ್ಲಿ, ಎಂತಹ ತೊಂದರೆಗಳು ಉದ್ಭವಿಸುತ್ತವೆ, ಅವುಗಳನ್ನು ಎದುರಿಸುವುದು ಹೇಗೆ, ಮೈಸೂರಿನ ಹಿತಾಸಕ್ತಿಯನ್ನು ಎಷ್ಟರಮಟ್ಟಿಗೆ ಕಾಪಾಡಿಕೊಳ್ಳಬಹುದು, ಮೈಸೂರಿನದಷ್ಟೇ ಅಲ್ಲ, ಈ ಹೊಸ ವ್ಯವಸ್ಥೆಯಲ್ಲಿ, ಅಂದರೆ ನಾವು ಈಗ ಕೆಲಸ ಮಾಡುತ್ತಿರುವಂಥ ಸಂವಿಧಾನದ ವ್ಯವಸ್ಥೆಯಲ್ಲಿ ಇಡೀ ಭಾರತದ ಹಿತಾಸಕ್ತಿಯನ್ನು ಹೇಗೆ ಕಾಪಾಡಿಕೊಳ್ಳಬೇಕು ಎಂಬುದನ್ನು ಗಮನಿಸಬೇಕಾಗಿದೆ.ಈಗ ನಾನು ಹೇಳಿದಂತಹ ಸಂವಿಧಾನದ ವ್ಯವಸ್ಥೆಯನ್ನು ಈ ಸಂವಿಧಾನ ಸಭೆ ಒಪ್ಪಿಕೊಂಡಿದೆ.

ಇದಾದ ನಂತರದ ವಿಷಯ : ಹಣಕಾಸಿನ ವಿಲೀನಕರಣಕ್ಕೆ ಸಂಬಂಧಿಸಿದ್ದು. ಇದೂ ಕೂಡ ಎರಡು ಅಥವಾ ಮೂರು ವರ್ಷಗಳಲ್ಲಿ ನಮ್ಮ ರಾಜ್ಯದ ಇತಿಹಾಸದಲ್ಲಿನ ಒಂದು ಪ್ರಮುಖ ಬೆಳವಣಿಗೆ. ಈ ವಿಷಯದ ಬಗ್ಗೆ ಚರ್ಚೆ ನಡೆಯಲಿಲ್ಲ ಎಂದು ಹೇಳುವುದಕ್ಕಾಗುವುದಿಲ್ಲ. ಪ್ರಜಾ ಪ್ರತಿನಿಧಿ ಸಭೆಯು ವಿಸರ್ಜಿತಗೊಳ್ಳುವ ಮೊದಲು ಆ ಚರ್ಚೆಯ ಸಂದರ್ಭದಲ್ಲಿ ನಾವು ನೀಡಿದ ಸಲಹೆಯೊಂದನ್ನು ಜಾರಿಗೆ ತರಲಿಲ್ಲ ಎಂದು ಶ್ರೀ ಎಲ್. ಸಿದ್ದಪ್ಪನವರು ಹೇಳಿದರು. ಆದರೆ, ಹಣಕಾಸು-ವಿಲೀನೀಕರಣದ ತತ್ವವನ್ನು ಅದರ ವಿವರವಾದ ಅಂಶಗಳನ್ನು ರಾಜ್ಯದ ಶಾಸನ ಸಭೆಯಾಗಲೀ, ಮೈಸೂರು ಸಂವಿಧಾನ ಸಭೆಯಾಗಲೀ ಸಮ್ಮತಿಸಿರಲಿಲ್ಲ. ಎಂಬ ಅಂಶವನ್ನು ಅವರು ಹೇಳಲಿಲ್ಲ.

ಶ್ರೀ ಎಲ್.ಸಿದ್ದಪ್ಪ: ವಿವರಗಳನ್ನು ಒಟ್ಟಾರೆಯಾಗಿ ಒಪ್ಪಿರಲಿಲ್ಲ.

**ಶ್ರೀ ಕೆ. ಚೆಂಗಲರಾಯರೆಡ್ಡಿ:** ಒಂದೋ ಎರಡೋ ವಿವರಗಳನ್ನು ಒಪ್ಪಿಕೊಳ್ಳದಿದ್ದ ಮಾತ್ರಕ್ಕೆ ಅದನ್ನು ಸಂಪೂರ್ಣವಾಗಿ ಒಪ್ಪಿರಲಿಲ್ಲ ಎಂದು ಅರ್ಥವಲ್ಲ. ಈ ಅಂಶ ಬಂದಾಗ ಜನಾಬ್ ಮೊಹಮದ್ ಇಮಾಂ ಅವರು “ಆಯಿತು, ನಾವು ಸಮ್ಮತಿಸಿದೆವು ಎಂದೇ ಅನ್ನೋಣ, ಆದರೆ

ಆನಂತರ ಏನಾಯಿತು? ಮುಖ್ಯಮಂತ್ರಿಗಳ ಆಶ್ವಾಸನೆ ಎಲ್ಲಿ ಹೋಯಿತು? ಈ ಆಶ್ವಾಸನೆಗಳನ್ನು ಈಡೇರಿಸಲಾಗಿದೆಯ? ಎಂದು ಹೇಳಿದರು. ಈ ಪ್ರಶ್ನೆಗಳನ್ನು ಅವರು ಮುಂದಿಟ್ಟಿದ್ದಾರೆ. ಇವು ಬಹಳ ಪ್ರಸ್ತುತವಾದಂತಹ ಪ್ರಶ್ನೆಗಳೇ, ನಾನು ಸಧ್ಯದಲ್ಲಿಯೇ ಈ ಅಂಶಗಳಿಗೆ ಉತ್ತರಿಸುತ್ತೇನೆ. ಅಂತೂ ಹಣಕಾಸು ವಿಲೀನಿಕರಣಕ್ಕೆ ಸಮ್ಮತಿ ನೀಡಲಾಯಿತು. ಮೈಸೂರಿನ ನಮ್ಮ ಅನೇಕ ಇಲಾಖೆಗಳನ್ನು ಕೇಂದ್ರಕ್ಕೆ ವರ್ಗಾಯಿಸಲಾಯಿತು ಅನೇಕ ಪಾರ್ಟ್ ಬಿ.ರಾಜ್ಯಗಳಲ್ಲಿಯೂ ಹೀಗೇ ಆಗಿದೆ. ನಾವು ಕೆಲವು ಮುಖ್ಯ ಅಂಶಗಳನ್ನು ಗಮನದಲ್ಲಿಟ್ಟುಕೊಳ್ಳಬೇಕು. ಹಿಂದಿನ ದಶಕಗಳಲ್ಲಿ ಈ ಮೊದಲಿನ ಪ್ರಾಂತಗಳು ಈಗಾಗಲೇ ವರ್ಗಾವಣೆ ಮಾಡಿದ್ದಂತಹ ಯಾವ ಇಲಾಖೆಯನ್ನೂ ನಾವು ವರ್ಗಾವಣೆ ಮಾಡಲಿಲ್ಲ.

ಶ್ರೀ **ಹೆಚ್. ಬಿ. ಗುಂಡಪ್ಪಗೌಡ:** ಅದೆಲ್ಲ ಬ್ರಿಟಿಷರ ಆಳ್ವಿಕೆ ಇದ್ದಾಗ.

ಶ್ರೀ **ಕೆ. ಚೆಂಗಲರಾಯರೆಡ್ಡಿ:** ಮುಂದುವರೆದಿರುವ ರಾಜ್ಯವಾದ ಮೈಸೂರನ್ನು ಹಿಂದುಳಿದಿರುವ ಬಿ ಭಾಗದ ರಾಜ್ಯಗಳೊಂದಿಗೆ ಸೇರಿಸಲಾಗಿದೆ ಎಂಬ ಟೀಕೆ ಎದ್ದಾಗ ನಾವು ಈ ಮೂಲ ಭೂತ ಅಂಶವನ್ನು ಮರೆಯಬಾರದು, ಬಹುಶಃ ಶ್ರೀ ಗುಂಡಪ್ಪಗೌಡರು ಈ ಅಂಶವನ್ನು ಬಹಳ ತೀವ್ರವಾಗಿ ಒತ್ತಿ ಹೇಳಿದರು. ಮುಂದುವರೆದ ಮೈಸೂರು ರಾಜ್ಯವನ್ನು ಸೌರಾಷ್ಟ್ರ ಮತ್ತು ರಾಜಸ್ತಾನದಂತಹ ಬಹಳ ಹಿಂದುಳಿದ ರಾಜ್ಯಗಳೊಂದಿಗೆ ಸೇರಿಸಲಾಗಿದೆ. ಇಂತಹ ವಿಧಾನದಿಂದ ನಮಗೆ ಬಹಳ ನಷ್ಟವಾಗಿದೆ ಎಂದು ಅವರು ಹೇಳಿದರು. ಆದರೆ ನಾವು ಹೇಳಬಯಸುವುದೇನೆಂದರೆ, ಇದು ಭಾಗ ಬಿ ರಾಜ್ಯಗಳ ವಿಷಯದಲ್ಲಿ ಮಾತ್ರವೇ ಆಗಿರುವಂಥದಲ್ಲ. ಬಹಳ ಹಿಂದಿನಿಂದಲೂ ಈ ದೇಶದಲ್ಲಿ ಸಂವಿಧಾನ, ಹಣಕಾಸು ಹಾಗೂ ರಾಜಕೀಯ ವ್ಯವಸ್ಥೆಯಲ್ಲಿ ಪ್ರಗತಿಪರ ಪ್ರಾಂತಗಳು ಮತ್ತು ಕೇಂದ್ರದ ಸಂಬಂಧದಲ್ಲಿ ಹೀಗೆ ಆಗಿದೆ. ಈಗ ಕೇಂದ್ರಕ್ಕೆ ವರ್ಗಾಯಿಸಲಾಗಿರುವ ವಿವಿಧ ಇಲಾಖೆಗಳ ಮೇಲೆ ಕೇಂದ್ರವು ಹೊಂದಿರುವ ನಿಯಂತ್ರಣ ಮತ್ತು ಕೇಂದ್ರ ಹಾಗೂ ರಾಜ್ಯದ ನಡುವೆ ಇರುವಂಥ ಹಣಕಾಸು ಸಂಬಂಧ ಇವೆಲ್ಲವೂ ಹಳೆಯ ಪ್ರಾಂತಗಳ ವಿಷಯದಲ್ಲಿ ಬಹಳ ಹಿಂದಿನಿಂದಲೂ ಹೀಗೇ ಇವೆ. ಈಗ ಅದೇ ನಿಯಮಗಳನ್ನು ಎಲ್ಲ 'ಬಿ' ಭಾಗದ ರಾಜ್ಯಗಳಿಗೂ ಅನ್ವಯಿಸುವ ಪ್ರಯತ್ನ ನಡೆದಿದೆ. ಮೈಸೂರನ್ನು ಮಾತ್ರವೇ ಬಿ ಭಾಗದ ರಾಜ್ಯದ ಗುಂಪಿಗೆ ಸೇರಿಸಲಾಗಿದೆ ಎಂದರ್ಥವಲ್ಲ, ಮತ್ತು ಪ್ರಗತಿ ಹೀನ ರಾಜ್ಯಗಳೊಂದಿಗೆ ಮುಂದುವರೆದ ರಾಜ್ಯವನ್ನು ಸೇರಿಸಲಾಗಿದೆ ಎಂದು ಅರ್ಥವಲ್ಲ. ಹಳೆಯ ಪ್ರಾಂತಗಳು ಹಾಗೂ ರಾಜ್ಯಗಳು ಎಲ್ಲವನ್ನೂ ಅವು ಇರವಂತೆಯೇ ಒಂದೇ ಬುಟ್ಟಿಯಲ್ಲಿ ಹಾಕಲಾಗಿದೆ. ಹೀಗಾಗಿ ನಾವು ಆ ಗುಂಪಿನೊಳಗೇ ಸೇರಿದ್ದೇವೆ. ಆದ್ದರಿಂದ ಈ ರೀತಿ ಹೋಲಿಸುವುದು ಅಷ್ಟು ಸರಿಯಲ್ಲ ಮತ್ತು ಈ ಟೀಕೆಗಳು ಗಟ್ಟಿಯಾದ ಆಧಾರದ ಮೇಲೆ ನಿಂತಿಲ್ಲ.

ಮಾನ್ಯರೇ, ಭಾರತೀಯ ಆಡಳಿತ ಸೇವಾ ಯೋಜನೆಯನ್ನು ಮೈಸೂರಿಗೆ ವಿಸ್ತರಿಸುವುದಕ್ಕೆ ಸಂಬಂಧಿಸಿದಂತೆ ಸಧ್ಯದಲ್ಲಿಯೇ ಆ ವಿಷಯಕ್ಕೆ ಬರುತ್ತೇನೆ. ಹೀಗೆ ಮಾಡುವ ಮೊದಲು ಇರುವ ಸ್ಥಿತಿ ಏನು ಎಂಬುದನ್ನು ಸ್ಪಷ್ಟಪಡಿಸಿರಬೇಕು. ನಾವು ಉದ್ದಕ್ಕೂ ಕೇಂದ್ರ ಮತ್ತು ಘಟಕಗಳ ಸಂಂಧವನ್ನು ಕುರಿತು ಚರ್ಚಿಸಿದ್ದೇವೆ. ಕೇಂದ್ರದ ಶಕ್ತಿ ದುರ್ಬಲವಾಗಬಾರದು ಎಂಬ ನಿಲುವನ್ನೇ ತಳೆದಿದ್ದೇವೆ. ಕೇಂದ್ರವು ಬಲಯುತವಾಗಿದ್ದರೆ ಘಟಕಗಳೂ ಕೂಡ ಬಲಯುತವಾಗಿರಲು ಹಾಗೂ ಅಭಿವೃದ್ಧಿ ಹೊಂದಲು ಸಹಾಯ ಎಂದು ಸ್ಪಷ್ಟವಾಗಿ ಹೇಳಿದ್ದೇವೆ. ಮುಖ್ಯವಾಗಿ

ಯುದ್ಧಾನಂತರದ ಈ ಸಂಕ್ರಮಣ ಸ್ಥಿತಿಯಲ್ಲಿ, ನಾವು ಸ್ವಾತಂತ್ರ್ಯವನ್ನು ಗಳಿಸಿರಲಾಗಿ ನಾವು ಯಾವ ರೀತಿಯಲ್ಲೂ ಕೇಂದ್ರವನ್ನು ದುರ್ಬಲಗೊಳಿಸುವಂತಹ ಕೆಲಸ ಮಾಡಬಾರದು, ಮುಂದಿನ ವರ್ಷ ಅಥವಾ ಅದಕ್ಕೂ ಮುಂಚೆ ಅಥವಾ ಕೆಲವೊಂದು ವರ್ಷಗಳ ನಂತರ ನಾವು ಏನು ಕೆಲಸ ಮಾಡಬೇಕಾಗಿದೆಯೋ ಅದನ್ನು ಈ ಹಂತದಲ್ಲಿ ನಾವು ಗಂಭೀರ ಶ್ರದ್ಧೆಯಿಂದ ಪರಿಶೀಲಿಸುವ ಅಗತ್ಯವಿಲ್ಲ. ಈ ಬಗ್ಗೆ ನನ್ನದೇ ಆದ ದೃಷ್ಟಿಯಿದೆ ಮತ್ತು ಮುಂದುವರೆದಂತೆ ಅದರ ಬಗ್ಗೆ ಪರಿಶೀಲಿಸುವುದಕ್ಕೆ ಸಾಕಷ್ಟು ಸಮಯಾವಕಾಶವಿದೆ. ಆದರೆ ನಾವು ಕಳೆದ ಮೂರು ವರ್ಷಗಳ ಅವಧಿಯಲ್ಲಿ ಮಾಡಿರುವುದೆಲ್ಲವೂ ಭಾರತದ ಹಾಗೂ ಅದರ ಘಟಕಗಳ ಹಿತಾಸಕ್ತಿಯಿಂದ ಮಾಡಿರುವುದೇ ಆಗಿದೆ. ನಾವು ತಪ್ಪು ಮಾಡಿದ್ದೇವೆ. ಎಂದು ನನಗೆಂದೂ ಅನ್ನಿಸಿಲ್ಲ. ಕಳೆದ ಮೂರು ವರ್ಷಗಳಲ್ಲಿ ಇದ್ದ ಸನ್ನಿವೇಶದ ಹಿನ್ನೆಲೆಯಲ್ಲಿ ನಾವು ಮಾಡಿದ್ದನ್ನು ಸರಿಯಾದ ದಿಕ್ಕಿನಲ್ಲಿ ಮಾಡಿದ್ದೇವೆ. ಮೈಸೂರು ಶರಣಾಗಿದೆ. ಅದು ತನ್ನ ಸ್ವಂತಿಕೆಯನ್ನೇ ಕಳೆದುಕೊಂಡಿದೆ ಮೈಸೂರಿನ ಸ್ಥಾನಮಾನ ಹಿಂದೆ ಇದ್ದುದಕ್ಕಿಂತ ಕೆಳಗಿಳಿದಿದೆ ಎಂದು ಹೇಳಲಾಗುತ್ತಿದೆ. ರೆಸಿಡೆಂಟರು ಇಲ್ಲಿದ್ದಾಗಿನ ಕಾಲದ ಹಳೆಯ ವಿದೇಶೀ ವ್ಯವಸ್ಥೆಯೊಂದಿಗೆ ಹೋಲಿಕೆ ಮಾಡಲಾಗುತ್ತಿದೆ. ಬ್ರಿಟಿಷ್ ಸರ್ಕಾರ ಇಲ್ಲಿದ್ದಾಗ ನಮಗೆ ಹೆಚ್ಚಿನ ಸ್ವಾಯತ್ತತೆ ಇತ್ತು ಹೆಚ್ಚಿನ ಅಧಿಕಾರ ಇತ್ತು ಎಂದು ಹೇಳಲಾಗಿದೆ.

ಶ್ರೀ **ಹೆಚ್.ಬಿ. ಗುಂಡಪ್ಪಗೌಡ**: ಖಂಡಿತವಾಗಿ.

ಶ್ರೀ **ಕೆ. ಚೆಂಗಲರಾಯರೆಡ್ಡಿ:** ಸಧ್ಯ ಹೆಚ್ಚಿನ ಜವಾಬ್ದಾರಿ ಇತ್ತು ಎಂದು ಹೇಳಲಿಲ್ಲವಲ್ಲ. ಆದರೆ ಚಿನ್ನದ ಪಂಜರದಲ್ಲಿರುವ ಗಿಳಿಯಂತೆ ಹೇಳಿದ್ದನ್ನೇ ಹೇಳುವುದರಲ್ಲಿ ಅರ್ಥವಿಲ್ಲ. ಬ್ರಿಟಿಷ್ ಸರ್ಕಾರ ಏಕೆ ಕೆಲವೊಂದು ರಾಜ್ಯಗಳಿಗೆ ಅಧಿಕಾರ ನೀಡಿತ್ತು? ಅದರ ಉದ್ದೇಶವೇನಿತ್ತು? ಹೀಗೆ ಮಾಡಿದ್ದು ಯಾವುದೇ ಔದಾರ್ಯದಿಂದಲ್ಲ. ಅವರಿಗೆ ಕೆಲವೊಂದು ವಲಯಗಳ ಆಸರೆ ಬೇಕಾಗಿತ್ತು. ಕೆಲವೊಂದು ಜನರು ತಮ್ಮ ಆಜ್ಞಾನು ವರ್ತಿಗಳಾಗಿರಬೇಕೆಂದು ಅವರ ನಿರೀಕ್ಷೆಯಾಗಿತ್ತು. ಈ ಉದ್ದೇಶದಿಂದ ಅವರು ರಾಜ್ಯಗಳಿಗೆ ಕೆಲವು ಅಧಿಕಾರಗಳನ್ನು ನೀಡಿದರು. ಆದರೆ ಮೂಲಭೂತ ರಾಜಕೀಯ ಮತ್ತು ಸಂವಿಧಾನಿಕ ವಿಷಯಗಳಿಗೆ ಸಂಬಂಧಿಸಿದಂತೆ ಅವರು ರಾಜ್ಯಗಳನ್ನು ಸರಿಯಾಗಿ ತಮ್ಮ ಹತೋಟಿಯಲ್ಲಿ ಇಟ್ಟುಕೊಂಡಿದ್ದರು. ಆದರೆ ಇಂದು ನಾವು ಹೊಸ ವ್ಯವಸ್ಥೆಯಲ್ಲಿದ್ದೇವೆ. ನಾವು ಕೆಲವೊಂದು ಅಧಿಕಾರಗಳನ್ನು ಕಳೆದುಕೊಂಡರೂ ಪರವಾಗಿಲ್ಲ.

ಶ್ರೀ **ಹೆಚ್.ಬಿ. ಗುಂಡಪ್ಪಗೌಡ**: ಹಾಗಿದ್ದರೆ ನನ್ನ ಆಕ್ಷೇಪಣೆಯಿಲ್ಲ.

ಶ್ರೀ **ಕೆ. ಚೆಂಗಲರಾಯರೆಡ್ಡಿ:** ನನ್ನ ಮಾತನ್ನು ಅಪಾರ್ಥ ಮಾಡಿಕೊಳ್ಳಬೇಡಿ. ಇದಕ್ಕೆ ಪ್ರತಿಯಾಗಿ ನಮಗೇನು ಲಾಭವಾಗಿದೆ ಎಂಬುದನ್ನು ನೋಡೋಣ. ಹಿಂದಿನ ವ್ಯವಸ್ಥೆಯಲ್ಲಿ ಕೇಂದ್ರದಲ್ಲಿ ನಮಗೆ ಪ್ರಾತಿನಿಧ್ಯವಿರಲಿಲ್ಲ. ಪಾರ್ಲಿಮೆಂಟಿನಲ್ಲಿ ನಮ್ಮ ಪ್ರತಿನಿಧಿ ಇರಲಿಲ್ಲ. ಅಖಿಲ ಭಾರತ ಸಂಸ್ಥೆಗಳಲ್ಲಿ ನಮ್ಮ ಪ್ರತಿನಿಧಿಗೆ ಅವಕಾಶವಿರಲಿಲ್ಲ. ಅವರ ನಿರ್ಣಯಗಳ ಮೇಲೆ ಪ್ರಭಾವ ಬೀರುವಂಥವರು ಇರಲಿಲ್ಲ. ನಮ್ಮ ಅಭಿಪ್ರಾಯವನ್ನು ತಿಳಿಸುವ ಅವಕಾಶ ನಮಗಿರಲಿಲ್ಲ. ಆದರೆ, ಇಂದು ನಾವು ಕೇಂದ್ರಕ್ಕೆ ಒಪ್ಪಿಸಿರುವ ಅಧಿಕಾರಗಳ ಜೊತೆಗೆ ಭಾರತದ ಪಾರ್ಲಿಮೆಂಟಿಗೆ ಆಯ್ಕೆಯಾಗುವ, ಲೋಕ ಸಭೆಗೆ ಆಯ್ಕೆಯಾಗುವ ರಾಜ್ಯಾಂಗಳ ಕೌನ್ಸಿಲ್ ನ್ಯಾಯಾಂಗಕ್ಕೆ , ಸರ್ವೋಚ್ಚ ನ್ಯಾಯಾಲಯಕ್ಕೆ ಆಯ್ಕೆಯಾಗುವ ಅಧಿಕಾರ ನಮಗೆ ದೊರೆತಿದೆ. ಒಂದು ಕಡೆ ನಾವು

ಕೆಲವೊಂದು ಅಧಿಕಾರಗಳನ್ನು ಬಿಟ್ಟುಕೊಟ್ಟಿದ್ದೇವೆ ಕೆಲವು ಇಲಾಖೆಗಳನ್ನು ವರ್ಗಾಯಿಸಿದ್ದೇವೆ. ಇನ್ನೊಂದು ಕಡೆ ಭಾರತ ಸರ್ಕಾರದ ಕಾರ್ಯಾಂಗ ಸಂಸ್ಥೆಗಳಲ್ಲಿ ಪ್ರತಿನಿಧಿಸುವ ಸಂವಿಧಾನಾತ್ಮಕ ಹಕ್ಕು ನಮಗೆ ದೊರೆತಿರುವುದರಿಂದ ಇದು ಸರಿತೂಗಿದಂತಾಗಿದೆ. ಇದು ಸರಿಯಾಗೇ ಇದೆ. ಮೈಸೂರು ರಾಜ್ಯವಾಗಲೀ ಅಥವಾ ಇನ್ನಾವುದೇ ಭಾಗವಾಗಲೀ ತನಗೆ ಕೇಂದ್ರದಲ್ಲಿ ಸರಿಯಾದ ಪ್ರಾತಿನಿಧ್ಯವಿಲ್ಲ ಎಂದಾದರೆ ಅದನ್ನು ನಾವು ಸರಿಪಡಿಸಿಕೊಳ್ಳಬಹುದು. ಅದನ್ನು ನಾವು ಪ್ರಯತ್ನ ಮಾಡಿ ಪರಿಹಾರ ಕಂಡುಕೊಳ್ಳಬೇಕು. ನಾವು ಬೇಲಿಕಟ್ಟಿಕೊಂಡು ಕೂತು "ನನ್ನನ್ನು ಯಾರೂ ಮುಟ್ಟಲಾರರು. ಕೋಟೆಯಲ್ಲಿ ನಾನು ಸುರಕ್ಷಿತ, ಎಂಬ ಭಾವನೆಯಿಂದ ಕೂರುವುದರಲ್ಲಿ ಪ್ರಯೋಜನವಿಲ್ಲ: ನಾವು ಇಂದು ಸಂವಿಧಾನಾತ್ಮಕವಾಗಿ ಬೆಳದಿದ್ದೇವೆ, ರಾಜಕೀಯವಾಗಿ ಬೆಳದಿದ್ದೇವೆ. ಕೇಂದ್ರದ ನೀತಿಯನ್ನು ರೂಪಿಸುವ ಎಲ್ಲ ಹಕ್ಕೂ ನಮಗಿದೆ, ಅದಕ್ಕಾಗಿ ನಾವು ಹೋರಾಡೋಣ. ಮೈಸೂರಿನ ಜನತೆಯಲ್ಲಿ ನನ್ನ ಮನವಿ ಏನೆಂದರೆ ಸರಿಯಾದ ದೃಷ್ಟಿಕೋನವನ್ನು ಬೆಳೆಸಿಕೊಂಡು ಮೈಸೂರಿನ ಭವಿಷ್ಯವನ್ನು ರೂಪಿಸುವುದಷ್ಟೇ ಅಲ್ಲ ಭಾರತದ ಭವಿಷ್ಯವನ್ನು ರೂಪಿಸುವ ದೃಷ್ಟಿಯಿಂದಲೂ ಕೆಲಸ ಮಾಡೋಣ. (ಹಿಯರ್, ಹಿಯರ್) ನಾವೇಕೆ ಕೀಳರಿಮೆಯಿಂದ ಬಳಲಬೇಕು? ಇಷ್ಟು ಬೇಗ ಯಾವ ತೀರ್ಮಾನಕ್ಕೂ ಬರುವುದು ಬೇಡ. ಮೋಡ ಕವಿಯುತ್ತಿರಬಹುಸು. ಕೆಲವು ಮೋಡಗಳು ಕಾಣಿಸುತ್ತಿರಬಹುದು. ಇರಬಹುದು, ಇಲ್ಲ ಎಂದು ಹೇಳಲಾರೆ. ಮುಖ್ಯವಾಗಿ ಘಟಕಗಳ ಅಧಿಕಾರದ ಮೇಲೆ ಕೇಂದ್ರದ ಒತ್ತುವರಿಯ ಬಗ್ಗೆ ನಾವು ಅಸಮಾಧಾನಪಟ್ಟುಕೊಂಡಿದ್ದೇವೆ. ಆದರೆ ಇದು ಹೊಸ ವಿಷಯವೇನಲ್ಲ. ಸಂವಿಧಾನವನ್ನು ರೂಪಿಸುತ್ತಿದ್ದಾಗಲೇ ಘಟಕಗಳ ಪ್ರತಿನಿಧಿಗಳು ಪ್ರತಿಯೊಂದು ವಿಷಯದ ಬಗೆಗೂ ಬಲವಾಗಿ ಹೋರಾಡಿದ್ದರು ಎಂಬುದು ನನಗೆ ಗೊತ್ತು. ಈಗಿನ ನಮ್ಮ ಆತಂಕವಾಗಲೀ, ಟೀಕೆಯಾಗಲೀ ಯಾವುದೂ ಹೊಸತಲ್ಲ. ಇದು ವಾಸ್ತವ, ಇಲ್ಲದಿದ್ದಲ್ಲಿ ಸನ್ಮಾನ್ಯ ಸದಸ್ಯರು ಭಯಪಟ್ಟಂತೆ, ಶಿಕ್ಷಣವು ಕೇಂದ್ರದ ವಿಷಯವಾಗಬಹುದು. ವ್ಯವಸಾಯವೂ ಕೇಂದ್ರದ ವಿಷಯವಾಗಬಹುದು ಎಂಬ ಅಂಶ ಈ ಹೊತ್ತಿಗೆ ನಿಜವೇ ಆಗಿಬಿಡಬಹುದಾಗಿತ್ತು. ನಾನು ಹೇಳಬೇಕಿರುವುದೇನೆಂದರೆ ಇವೆಲ್ಲವೂ ಈಗ ಆಗಿ ಬಿಟ್ಟಿವೆ. ಸಂವಿಧಾನವನ್ನು ಉದ್ಘಾಟಿಸಲಾಗಿದೆ, ಅದು ಜಾರಿಗೆ ಬಂದಿದೆ. ಹಣಕಾಸು ವಿಲಿನೀಕರಣವಾಗಿದೆ ಮತ್ತು ಕೆಲವೊಂದು ಇಲಾಖೆಗಳನ್ನು ವರ್ಗಾಯಿಸಲಾಗಿದೆ. ಈ ಹಿನ್ನೆಲೆಯಲ್ಲಿ ನಾವು ಈಗ ಚರ್ಚಿಸುತ್ತಿರುವ ನಿರ್ದಿಷ್ಟ ಸಮಸ್ಯೆಯನ್ನು ಪರಿಶೀಲಿಸಬೇಕೆಂದು ಸನ್ಮಾನ್ಯ ಸದನವನ್ನು ಕೇಳಿಕೊಳ್ಳುತ್ತೇನೆ. ಇದನ್ನು ಚರ್ಚಿಸುವ ಮೊದಲು ಮೈಸೂರು ರಾಜ್ಯದ ನ್ಯಾಯಯುತ ಹಿತಾಸಕ್ತಿಗೆ ಕೇಂದ್ರದ ಅನಗತ್ಯ ಒತ್ತುವರಿಯಿಂದ ಧಕ್ಕೆಯಾಗದಂತೆ ಮೈಸೂರು ಸರ್ಕಾರವು ಸಕಲ ಎಚ್ಚರವನ್ನೂ ವಹಿಸುತ್ತಿದೆ ಎಂಬುದನ್ನು ನಾನು ಮತ್ತೊಮ್ಮೆ ತಿಳಿಸಬಯಸುತ್ತೇನೆ. ಇತರ ರಾಜ್ಯಗಳೂ ಕೂಡ ವಿಷಯದ ಈ ಮುಖವನ್ನು ಪರಿಶೀಲಿಸುತ್ತಿವೆ. ಕೇಂದ್ರಕ್ಕೂ ಕೂಡ ಈ ಸಮಸ್ಯೆ ಗೊತ್ತಿಲ್ಲದೆ ಇಲ್ಲ. ಘಟಕಗಳ ಅಧಿಕಾರಗಳನ್ನು ಮೊಟಕುಗೊಳಿಸುವುದು ಸರಿಯಲ್ಲ, ಅವುಗಳನ್ನು ಸುಮ್ಮನೆ ಕೈಗೊಂಬೆಗಳಂತೆ ನೋಡುವುದು ಸರಿಯಲ್ಲ ಎಂಬ ಅಂಶವನ್ನು ಕಾಲಾನುಕಾಲಕ್ಕೆ ಕೇಂದ್ರದ ಗಮನಕ್ಕೆ ತರಲಾಗಿದೆ ಮತ್ತು ಕೇಂದ್ರವೂ ಸಹ ಈ ಸಮಸ್ಯೆಯನ್ನು ಪರಿಶೀಲಿಸುತ್ತಿದೆ. ಆದರೆ ಪ್ರಸ್ತುತದಲ್ಲಿ ಕೆಲವು ವಿಷಯಗಳನ್ನು ಎದುರಿಸಲೇಬೇಕು. ಉದಾಹರಣೆಗೆ ಆಹಾರ ಸಮಸ್ಯೆ, ಅಗತ್ಯ ಸಾಮಗ್ರಿಗಳ ಸರಬರಾಜು ಮತ್ತು ಏರುತ್ತಿರುವ ಬೆಲೆಗಳ ಸ್ಥಿತಿ. ಭಾರತದ ಸಂಸತ್ತು ಕಳೆದ

ತಿಂಗಳು ಸಭೆ ಸೇರಿತು.ಅದರಲ್ಲಿ ಮೈಸೂರೂ ಸೇರಿದಂತೆ ಎಲ್ಲ ರಾಜ್ಯಗಳ ಪ್ರತಿನಿಧಿಗಳೂ ಇದ್ದರು. ಸರ್ವಾನುಮತದಿಂದ ತೀರ್ಮಾನ ಕೈಗೊಂಡು, ಸಂವಿಧಾನದ ಕಡೆ ಈಗ ಅವು ಹೊಂದಿರುವ ಅಧಿಕಾರವನ್ನು ಸಹ ಕೇಂದ್ರಕ್ಕೆ ನೀಡಿ, ಭಾರತದ ಸರ್ಕಾರ, ಭಾರತದ ಸಂಸತ್ತು ಒಂದು ಕಾನೂನನ್ನು ಜಾರಿಗೆ ತರುವಂತೆ ಕೇಳಿಕೊಂಡಿವೆ.

**ಹೆಚ್.ಬಿ. ಗುಂಡಪ್ಪಗೌಡ:** ಇದು ತಾತ್ಕಾಲಿಕ ಕ್ರಮ.

ಶ್ರೀ **ಕೆ. ಚೆಂಗಲರಾಯರೆಡ್ಡಿ:** ಘಟಕ ರಾಜ್ಯಗಳ ಕೆಲವೊಂದು ವಿಷಯಗಳಲ್ಲಿ ಸ್ವಾಯತ್ತ ಅಧಿಕಾರ ಹೊಂದಿದ್ದರೂ ಕೂಡ ಅಖಿಲ ಭಾರತ ಶಾಸನ ರೂಪಿಸುವಲ್ಲಿ ಹಾಗೂ ಅಖಿಲ ಭಾರತ ನಿಯಂತ್ರಣಗಳಲ್ಲಿ ಕೇಂದ್ರಕ್ಕೆ ಅಧಿಕಾರ ನೀಡಲಾಗಿದೆ ಎಂಬುದಕ್ಕೆ ನಿದರ್ಶನವಾಗಿ ಈ ಅಂಶವನ್ನು ಹೇಳಿದೆ. ನಾವು ಈಗ ಇಂಥ ವ್ಯವಸ್ಥೆಯಲ್ಲಿ ಕೆಲಸ ಮಾಡುತ್ತಿದ್ದೇವೆ.

ಶ್ರೀ **ಹೆಚ್. ಬಿ. ಗುಂಡಪ್ಪಗೌಡ:** ಸೇವೆಗಳ ವಿಷಯದಲ್ಲಿ ಹೀಗಲ್ಲ ಒಂದು ಸಲ ಒಪ್ಪಿಗೆ ನೀಡಿದರೆ ಮುಗಿದೇ ಹೋಯಿತು.

ಶ್ರೀ **ಕೆ. ಚೆಂಗಲರಾಯರೆಡ್ಡಿ:** ನಾನು ಒಟ್ಟಾರೆ ಸ್ಥಿತಿಯ ಬಗ್ಗೆ ವಿವರಿಸಿದೆ. ಇದನ್ನು ಇನ್ನಷ್ಟು ವಿವರಿಸಬೇಕಿದೆ. ಭಾರತದ ಸರ್ಕಾರ ಏನೇ ಪ್ರಸ್ತಾಪ ಮಾಡಿದರೂ ಮೈಸೂರು ಸರ್ಕಾರ ಹಿಂದೆ ಮುಂದೆ ನೋಡದೆ ಅದನ್ನು ಒಪ್ಪಿಕೊಂಡು ಬಿಡುತ್ತದೆ, ಮೈಸೂರು ಸರ್ಕಾರ ಅತ್ಯಂತ ವಿನಮ್ರವಾಗಿ, ಯಾಚನೆಯ ಕೈಗಳಲ್ಲಿ ಭಾರತ ಸರ್ಕಾರದ ಪ್ರಸ್ತಾವಗಳನ್ನು ಸ್ವೀಕರಿಸುತ್ತದೆ ಎಂಭ ಭಾವನೆ ಈ ಸದನದ ಕೆಲವು ಸದಸ್ಯರಲ್ಲಿರುವಂತಿದೆ. ಇತರ ರಾಜ್ಯಗಳ ವಿಷಯ ನನಗೆ ಗೊತ್ತಿಲ್ಲ. ಸ್ನೇಹಿತ ಶ್ರೀ ಹೆಚ್.ಬಿ. ಗುಂಡಪ್ಪಗೌಡರ ಮಾತಿನಲ್ಲಿ ಇದೇ ವ್ಯಥೆ ತುಂಬಿದೆ ಮೈಸೂರು ಸರ್ಕಾರ ಧೈರ್ಯದಿಂದ ವರ್ತಿಸಬೇಕಿತ್ತು, ಇಲ್ಲಿ ಹಿಂದಿದ್ದ ಮಂತ್ರಿಗಳನ್ನು ನೋಡಿ ಕಲಿತುಕೊಳ್ಳಬೇಕಿತ್ತು, ಸರ್ದಾರ್ ಪಟೇಲರಂತೆ ನಾವೂ ಉಕ್ಕಿನ ಮನುಷ್ಯರಾಗಿ ಧೈರ್ಯವಾಗಿ ವರ್ತಿಸಬೇಕಿತ್ತು ಎಂಬ ಸೂಚನೆ ಅವರ ಮಾತಿನಲ್ಲಿರುವಂತಿದೆ. ಆದರೆ ನಾನು ಅತ್ಯಂತ ವಿನಮ್ರವಾಗಿ ತಿಳಿಸಬಯಸುವುದೇನೆಂದರೆ ಯಾವುದಾದರೂ ರಾಜ್ಯ, ಕೇಂದ್ರದ ನಿರ್ಣಯದ ವಿಷಯದಲ್ಲಿ ವಿಳಂಬ ಉಂಟು ಮಾಡಿದ್ದರೆ, ಮತ್ತು ವಿವಿಧ ಹಂತಗಳಲ್ಲಿ ವಿವಾದಗಳನ್ನು ಎಬ್ಬಿಸಿದ್ದರೆ, ಅಂತಹ ರಾಜ್ಯಗಳಲ್ಲಿ ಮೈಸೂರೂ ಒಂದು ನಾನು ನಿಸ್ಸಂದೇಹವಾಗಿ ಹೇಳಬಲ್ಲೆ (ಹಿಯರ್, ಹಿಯರ್).

ಶ್ರೀ **ಹೆಚ್.ಬಿ. ಗುಂಡಪ್ಪಗೌಡ:** ಹಾಗೆ ಮಾಡುವ ಹಕ್ಕು ಮೈಸೂರಿಗಿದೆ.

ಶ್ರೀ **ಕೆ. ಚೆಂಗಲರಾಯರೆಡ್ಡಿ:** ನಾನು ಈಗ ಅದೇ ವಿಷಯಕ್ಕೆ ಬರುತ್ತಿದ್ದೇನೆ ಸಂವಿಧಾನದ ವಿಷಯಗಳಿಗೆ ಸಂಬಂಧಿಸಿದಂತೇ ಆಗಲಿ, ಹಣಕಾಸು ವಿಲೀನೀಕರಣಕ್ಕೆ ಸಂಬಂಧಿಸಿದಂತೇ ಆಗಲಿ ಈ ಎರಡು ಮುಖ್ಯ ವಿಷಯಗಳನ್ನೇ ತೆಗೆದುಕೊಂಡರೆ ಇವುಗಳ ಬಗ್ಗೆ ಮೈಸೂರು ಸರ್ಕಾರ ವ್ಯರ್ಥವಾಗಿ ಹೋರಾಡದೆ, ಭಾರತದ ಹಿತಾಸಕ್ತಿಯನ್ನು ಮತ್ತು ಅಖಿಲಭಾರತ ದೃಷ್ಟಿಯಿಂದ ಸಂವಿಧಾನದ ಅಗತ್ಯತೆಗಳನ್ನು ಗಮನದಲ್ಲಿಟ್ಟುಕೊಂಡು ಸಾಧ್ಯವಾದಷ್ಟು ಮಟ್ಟಿಗೆ ತನ್ನ ಸ್ವಂತ ಹಿತಾಸಕ್ತಿಯನ್ನು ರಕ್ಷಿಸಿಕೊಳ್ಳುವುದಕ್ಕಾಗಿ ನ್ಯಾಯಬದ್ಧವಾದ ಹಾಗೂ ಬಲವಾದ ಹೋರಾಟವನ್ನೇ ಮಾಡಿತು. ಇಲ್ಲಿ ಅದರ ವಿವರಗಳಿಗೆ ನಾನು ಹೋಗುವುದಿಲ್ಲ. ಆದರೆ ಹಣಕಾಸು ವಿಲೀನೀಕರಣಕ್ಕೆ ಸಂಬಂಧಿಸಿದಂತೆ ಇಂತಹ ವಿಲೀನೀಕರಣಕ್ಕೆ ಸಮ್ಮತಿಸಿದ ಔಚಿತ್ಯ ಕುರಿತು ನಾವು ಅನಂತರ ಏನೇ

ನಿಲುವು ತಳೆಯಲಿ ನಾವು ನಮ್ಮ ಕೈಮೀರಿ ಪ್ರಯತ್ನ ಮಾಡಿದ್ದೇವೆ ಮತ್ತು ಈಗ ಮೈಸೂರಿನ ಹಿತಾಸಕ್ತಿಯನ್ನು ಕಾಪಾಡಿಕೊಳ್ಳುವುದಕ್ಕಾಗಿ ಪ್ರತಿಯೊಂದು ಹಂತದಲ್ಲೂ ಎಲ್ಲ ಉಪಾಯಗಳನ್ನು ಬಳಸಿದ್ದೇವೆ ಎಂಬುದಾಗಿ ಶ್ರೀ ಎಲ್. ಸಿದ್ದಪ್ಪನವರಿಗೆ ಭರವಸೆ ಕೊಡುತ್ತೇನೆ. ಈ ಒಪ್ಪಂದ ಷರತ್ತುಗಳನ್ನು ಮಾರ್ಪಡಿಸುವ ಸಂಬಂಧವಾಗಿ ಸದಸ್ಯರು ನೀಡಿದ ವಿವಿಧ ಸಲಹೆಗಳನ್ನು ನಾವು ಮರೆತಿರಲಿಲ್ಲ. ನಾವು ಸಕಲ ಪ್ರಯತ್ನ ಮಾಡಿದ್ದೇವೆ. ಈವತ್ತೂ ಕೂಡ ನಾನು ಇಲ್ಲಿ ಮಾತಾಡುತ್ತಿರುವ ಸಮಯದಲ್ಲಿ ನನ್ನ ಸಹೋದ್ಯೋಗಿ ಶ್ರೀ ಹೆಚ್.ಸಿ. ದಾಸಪ್ಪನವರು ಹಣಕಾಸು ವಿಲೀನೀಕರಣಕ್ಕೆ ಸಂಬಂಧಿಸಿದಂತೆ ಭಾರತ ಸರ್ಕಾರ ಮತ್ತು ಮೈಸೂರು ಸರ್ಕಾರದ ನಡುವೆ ಇನ್ನೂ ಚರ್ಚೆಯಲ್ಲಿದ್ದ ಕೆಲವೊಂದು ವಿಷಯಗಳ ಪರಿಶೀಲನೆಗಾಗಿಯೇ ಹೈದರಬಾದ್‌ಗೆ ಹೋಗಿದ್ದಾರೆ. ಇದು ವಾಸ್ತವ ಸ್ಥಿತಿ.

ಆಡಳಿತ ಸೇವಾ ಯೋಜನೆಯನ್ನು ಮೈಸೂರಿಗೆ ವಿಸ್ತರಿಸುವುದಕ್ಕೆ ಸಂಬಂಧಿಸಿದಂತೆ ಈ ಪ್ರಸ್ತಾವದ ಹಿನ್ನೆಲೆ ಮಾನ್ಯ ಸದಸ್ಯರುಗಳಿಗೆ ಈಗಾಗಲೇ ತಿಳಿದಿದೆ ಎಂದು ಭಾವಿಸುತ್ತೇನೆ. ಈ ಪ್ರಸ್ತಾಪ 1948ರಲ್ಲೇ ಆರಂಭವಾಯಿತು. ಆದ್ದರಿಂದ ಪ್ರಸ್ತಾಪ ಬಂದಿದೆ, ನಾವು ಒಪ್ಪಿಕೊಂಡಿದ್ದೇವೆ ಎಂದರೆ ನಾವಾಗಲೇ ಅದನ್ನು ಒಪ್ಪಿಕೊಂಡೆವು ಎಂದು ಅರ್ಥವಲ್ಲ.

ಶ್ರೀ **ಹೆಚ್.ಬಿ. ಗುಂಡಪ್ಪಗೌಡ:** ಇಲ್ಲಿಗೆ ಬಂದಿದ್ದ ಅಖಿಲ ಭಾರತ ಸಮಿತಿಯ ಸಂದರ್ಶನಕ್ಕೆ ನಮ್ಮ ಅಧಿಕಾರಿಗಳಿಗೆ ಅನುಮತಿ ಕೊಡಲಾಯಿತು.

ಶ್ರೀ **ಕೆ. ಚೆಂಗಲರಾಯರೆಡ್ಡಿ:** ಇದು ತುರ್ತು ನೇಮಕಾತಿಗಾಗಿ ಮಾತ್ರ. ಭಾರತ ಸರ್ಕಾರವು ಒಂದು ತುರ್ತು ನೇಮಕಾತಿ ಸಮಿತಿಯನ್ನು ರಚಿಸಿತು. ಈ ಯೋಜನೆಯ ಅನ್ವಯ ಬಿ ಭಾಗದ ರಾಜ್ಯಗಳವರು ಆಯ್ಕೆಗೆ ಒಳಪಡುವುದಿಲ್ಲ ಎಂಬ ಅಂಶ ಅನಂತರ ಗೊತ್ತಾಯಿತು. ಈ ಬಗ್ಗೆ ಪ್ರಶ್ನೆ ಎತ್ತಲಾಯಿತು ಮತ್ತು ಪ್ರಸ್ತಾವ ಸಲ್ಲಿಸಬೇಕಾಯಿತು. ಅದಕ್ಕೆ ಅವರು "ನಿಮಗೆ ಹಕ್ಕುಗಳು ಬೇಕೆಂದಿದ್ದರೆ ಜವಾಬ್ದಾರಿ ಕೈಗೊಳ್ಳಲು ಸಿದ್ಧವಾಗಬೇಕು" ಎಂದರು. ಹೀಗಾಗಿ ಈ ಪ್ರಸ್ತಾಪವನ್ನು ಸಲ್ಲಿಸಲಾಯಿತು. ಈ ಪ್ರಸ್ತಾಪ ಹೇಗೆ ಬೆಳವಣಿಗೆಯಾಯಿತು ಎಂಬ ಬಗ್ಗೆ ನಿಮಗೆ ಒಂದು ಒಟ್ಟಾರೆ ಅಂದಾಜು ಸಿಗಲಿ ಎಂಬ ದೃಷ್ಟಿಯಿಂದ ಮೂಲ ಅಂಶಗಳನ್ನಷ್ಟೇ ನಿಮ್ಮ ಮುಂದಿಡುತ್ತಿದ್ದೇನೆ. ಈ ಪ್ರಸ್ತಾಪ ಭಾರತ ಸರ್ಕಾರದಿಂದ ಹುಟ್ಟಿಕೊಂಡಿದ್ದರಿಂದ ಅದರ ಉದ್ದೇಶಗಳ ಬಗ್ಗೆ ನಾನು ಏನೂ ಹೇಳಲಾರೆ. ಸದನದ ಮುಂದಿಟ್ಟಿರುವ ಯೋಜನೆಯಲ್ಲಿ ಎಲ್ಲ ವಿವರಗಳೂ ಇವೆ. ಅಲ್ಲದೆ ಮಾನ್ಯ ಸದಸ್ಯರು ಭಾರತೀಯ ರಾಜ್ಯಗಳನ್ನು ಕುರಿತ ಶ್ವೇತಪತ್ರವನ್ನು ಓದಿದ್ದೇ ಆದರೆ ಈ ಬಗ್ಗೆ ಬಹು ಧೀರ್ಘ ಚರ್ಚೆಯಾಗಿದೆ ಎಂಬುದನ್ನು ಕಂಡುಕೊಳ್ಳಬಹುದು ಮತ್ತು ಭಾರತ ಸರ್ಕಾರವು ಇಂಥ ಯೋಜನೆಯನ್ನು ತರುವುದಕ್ಕೆ ಕಾರಣಗಳೇನು ಎಂಬುದನ್ನು ತಿಳಿದುಕೊಳ್ಳಬಹುದು. ಈ ಸದನದಲ್ಲಿ ವಿಶ್ವಾಸವಿಟ್ಟು, ಈ ವಿಷಯಕ್ಕೆ ಸಂಬಂಧಿಸಿದಂತೆ ಸರ್ ಎ. ರಾಮಸ್ವಾಮಿ ಮೊದಲಿಯಾರ್ ಅವರು ದಿವಾನರಾಗಿದ್ದಾಗ 16-7-49ರಲ್ಲಿ ಮೈಸೂರು ಸರ್ಕಾರವು ಕೈಗೊಂಡ ನಿರ್ಣಯವನ್ನು ಓದಬಯಸುತ್ತೇನೆ.

"ಮೈಸೂರಿನಲ್ಲಿ ಒಂದು ಸಿವಿಲ್ ಸರ್ವೀಸ್ ವ್ಯವಸ್ಥೆಯಿದೆ.ಇದು ಬ್ರಿಟಿಷ್ ಇಂಡಿಯಾ ಆಡಳಿತದ ಅಡಿಯಲ್ಲಿದ್ದ ನೆರೆ ಹೊರೆಯ ಪ್ರಾಂತಗಳಲ್ಲಿ ಪ್ರಚಲಿತವಿರುವ ವ್ಯವಸ್ಥೆಯನ್ನೇ ಬಹುತೇಕವಾಗಿ ಆಧರಿಸಿದೆ. ಸೀನಿಯರ್ ಶ್ರೇಣಿಯಲ್ಲಿ ಮೈಸೂರಿನ ಹೊರಗಿನವರನ್ನು ನೇಮಿಸಿಕೊಂಡರೆ ಹಣಕಾಸು ಬಾಧ್ಯತೆಗಳ ಜೊತೆಗೆ ಇತರ ಸಮಸ್ಯೆಗಳು ಉದ್ಭವಿಸುತ್ತವೆಯೇ ಎಂಬ ಪ್ರಶ್ನೆ ಏಳುತ್ತದೆ. ಸೀನಿಯರ್ ಶ್ರೇಣಿಯಲ್ಲಿ ಅಧಿಕಾರಿಗಳನ್ನು ಆಯ್ಕೆಮಾಡಿ ಅವರನ್ನು ಉಳಿದ ಮೈಸೂರು ಶ್ರೇಣಿಯ ಅಧಿಕಾರಿಗಳೊಂದಿಗೆ ಸಮಾನವಾಗಿ ಪರಿಗಣಿಸಿದರೆ ಅಸಮಾಧಾನ ಏಳುವುದಿಲ್ಲವೇ ಎಂಬ ಪ್ರಶ್ನೆ ಇದೆ. ಏಕೆಂದರೆ ಇದು ರಾಜ್ಯದಲ್ಲಿಯೇ ರೂಪುಗೊಂಡ ಸಮಾನರೂಪದ ಸೇವೆಯಾಗಿದೆ. ಈ ವಿಷಯದಲ್ಲಿ ಕೇಂದ್ರ ಸರ್ಕಾರವು ಒಡ್ಡಿದಂತಹ ಯಾವುದೇ ತೊಂದರೆಗಳನ್ನು ಇದು ಒಡ್ಡುವುದಿಲ್ಲ. ಆದ್ದರಿಂದ ಸೀನಿಯರ್ ಶ್ರೇಣಿಯಲ್ಲಿ ಯಾವುದೇ ಹೊಸ ಅಂಶವನ್ನು ಸೇರಿಸುವುದು ಅಪೇಕ್ಷಣೀಯವಲ್ಲ ಎಂಬುದು ಮೈಸೂರು ಸರ್ಕಾರದ ಅಭಿಪ್ರಾಯ. ಆದರೆ ಜೂನಿಯರ್ ಶ್ರೇಣಿಗೆ ಸಂಬಂಧಿಸಿದಂತೆ ಈಗಿನ ಪದ್ಧತಿಯಲ್ಲಿ ಅಸಿಸ್ಟೆಂಟ್ ಕಮಿಷನರ್‌ಗಳ ಹುದ್ದೆಗೆ ಕೆಳ ಶ್ರೇಣಿಗಳಿಂದಲೂ ಹಾಗೂ ಸ್ಪರ್ಧಾತ್ಮಕ ಪರೀಕ್ಷೆ ಅಥವಾ ನಾಮನಿರ್ದೇಶನಗಳ ಮೂಲಕ ನೇರ ನೇಮಕಾತಿಯ ಮೂಲಕವೂ ಆಯ್ಕೆ ನಡೆಯುತ್ತಿದೆ. ಮೈಸೂರು ಸರ್ಕಾರವು ಭಾರತೀಯ ಆಡಳಿತ ಸೇವೆಯ ಸೌಲಭ್ಯದಲ್ಲಿ ಪಾಲ್ಗೊಳ್ಳಲು ಯಾಕೆ ಕಾತರಿಸುತ್ತಿದೆ ಎಂದರೆ ಇಲ್ಲಿನ ಪ್ರಜೆಗಳಿಗೆ ಭಾರತ ಸರ್ಕಾರದ ಆಡಳಿತ ಸೇವೆಯಲ್ಲಿ ಭಾಗವಹಿಸುವ ಅವಕಾಶ ದೊರೆಯುತ್ತದೆ ಎಂಬುದರಿಂದ.

ಶ್ರೀ ಭೀಮಪ್ಪ ನಾಯಕ:-ಸೇರಿಸಿಕೊಳ್ಳಲು ಕಾತರಿಸುತ್ತಿದ್ದವು ಎಂದಿರಾ? ಇಲ್ಲದಿದ್ದಲ್ಲಿ ನಿಮಗೆ ಏನೂ ಲಾಭವಿರಲಿಲ್ಲವೇ? ಹಿಂದಿನ ಐಸಿಎಸ್ ಯಲ್ಲಿಯೂ ನಮಗೆ ಅವಕಾಶವಿತ್ತು.

ಶ್ರೀ ಕೆ. ಚೆಂಗಲರಾಯರೆಡ್ಡಿ:-ಇಲ್ಲ. ನೀವು ಹಿಂದಿನ ರಾಜ್ಯಭಾರಕ್ಕೇ ಹೋಗುವುದಾದರೆ ಇನ್ನೂ ಅನೇಕ ಸಂಗತಿಗಳಿವೆ.

ಶ್ರೀ ಎ. ಭೀಮಪ್ಪನಾಯಕ: ಸಂವಿಧಾನದಲ್ಲಿ ನಮಗೆ ಹಕ್ಕಿಲ್ಲವೇ?

ಶ್ರೀ ಕೆ. ಚೆಂಗಲರಾಯರೆಡ್ಡಿ: ಅಕ್ಕಿ ಮೇಲೆ ಆಸೆ ನೆಂಟರ ಮೇಲೆ ಪ್ರೀತಿ ಎಂದರೆ ಹೇಗೆ?

"ಜೂನಿಯರ್ ಶ್ರೇಣಿಯಲ್ಲಿ ಕಾಲಕಾಲಕ್ಕೆ ಉದ್ಭವಿಸುವ ಶೇ. 25 ರಷ್ಟು ಖಾಲಿ ಹುದ್ದೆಗಳಿಗೆ ಐಎಎಸ್ ಅಭ್ಯರ್ಥಿಗಳನ್ನು ಭರ್ತಿ ಮಾಡಬಹುದು. ಹಾಗೂ ಉಳಿದ ಶೇ 75 ಖಾಲಿ ಹುದ್ದೆಗಳಿಗೆ ಬಡ್ತಿಯ ಮೂಲಕ ಇಲ್ಲವೇ ನೇರ ನೇಮಕಾತಿಯ ಮೂಲಕ ಭರ್ತಿ ಮಾಡಬಹುದು ಎಂದು ಸರ್ಕಾರವು ಪ್ರಸ್ತಾಪಿಸಿತು. ಹೀಗೆ ತೆಗೆದುಕೊಂಡ ಅಧಿಕಾರಿಗಳನ್ನು ಸೂಕ್ತ ಹಂತಗಳಲ್ಲಿ ಐಎಎಸ್ ನ ಸೀನಿಯರ್ ಶ್ರೇಣಿಗೆ ಬಡ್ತಿಗೊಳಿಸಬೇಕು. ಆದ್ದರಿಂದ ಅಂತಹ ಅಧಿಕಾರಿಗಳಿಗೆ ಸೀನಿಯರ್ ಶ್ರೇಣಿಯಲ್ಲಿ ಯಾವುದೇ ನೇಮಕಾತಿಗಳನ್ನು ನಿಗದಿಸುವುದಾಗಲೀ, ನಿರ್ದಿಷ್ಟ ಸಂಖ್ಯೆಯನ್ನು ನಿಗದಿಸುವುದಾಗಲೀ ಅನಗತ್ಯ.

ಭಾರತ ಸರ್ಕಾರದಿಂದ ನಮಗೆ ಪ್ರಸ್ತಾಪ ಬಂದ ಒಂದು ವರ್ಷದ ನಂತರ ಈ ವಿಷಯದಲ್ಲಿ ನಾವು ಕೈಗೊಂಡ ಮೊದಲ ನಿರ್ಣಯವೆಂದರೆ ಈ ಯೋಜನೆಯನ್ನು ಮೈಸೂರಿಗೆ ವಿಸ್ತರಿಸುವುದಕ್ಕೆ ತಾತ್ವಿಕ ಒಪ್ಪಿಗೆ ನೀಡುವುದು ಹಾಗೂ ಉನ್ನತ ಹಂತದಲ್ಲಿ ಅಖಿಲ ಭಾರತ ಆಡಳಿತ ಸೇವೆಗಳನ್ನು ನೇರವಾಗಿ ತೆಗೆದುಕೊಳ್ಳಬಾರದು ಮತ್ತು ನಾವು ಅದನ್ನು ಆರಂಭದಿಂದ ಶುರು ಮಾಡಬೇಕು ಎಂದರೆ ಜೂನಿಯರ್ ಹಂತದಿಂದ ಆರಂಭಿಸಿ ಕ್ರಮೇಣವಾಗಿ ಮುಂದುವರೆಯುವುದು ಎಂದು ಸಲಹೆ ಮಾಡುವುದು. ಮೈಸೂರು ಸರ್ಕಾರವು ಕೈಗೊಂಡು ಹಾಗೂ ಭಾರತ ಸರ್ಕಾರಕ್ಕೆ ತಿಳಿಸಲಾದ ಈ ನಿರ್ಣಯದ ಪ್ರಕಾರ ಹಳೆಯ ಪ್ರಾಂತಗಳು ಅಥವಾ ಇತರ ಭಾಗ-ಬಿ ರಾಜ್ಯಗಳಿಗೆ ಅನ್ವಯಿಸಬೇಕೆಂದು ಉದ್ದೇಶಿಸಲಾಗಿರುವ ಯೋಜನೆಯ ಸಮಸಮಕ್ಕೆ ಮೈಸೂರಿನಲ್ಲಿರುವ ಯೋಜನೆ ತಲುಪುವುದಕ್ಕೆ ಸುಮಾರು 25 ರಿಂದ 30 ವರ್ಷಗಳಷ್ಟು ಕಾಲ ಬೇಕಾಗಬಹುದು. ಆದರೆ ಹೀಗೆ ಮಾಡುವುದರಿಂದ ಮೈಸೂರು ರಾಜ್ಯವು ಈ ಯೋಜನೆಯಲ್ಲಿ ಭಾಗವಹಿಸಿದಂತಾಗುವುದಿಲ್ಲ ಎಂಬ ಕಾರಣದ ಮೇಲೆ ಭಾರತ ಸರ್ಕಾರವು ಈ ಸಲಹೆಯನ್ನು ಒಪ್ಪಲಿಲ್ಲ. ಈ ಪ್ರಸ್ತಾವಕ್ಕೆ ಸಂಬಂಧಿಸಿದಂತೆ ಭಾರತ ಸರ್ಕಾರವು ಹೀಗೆ ಹೇಳಿತು.

“ ಐ ಎ ಎಸ್ ಯೋಜನೆಯಲ್ಲಿ ಪೂರ್ಣ ಪ್ರಮಾಣದಲ್ಲಿ ಭಾಗವಹಿಸದಿರುವುದು ಮೈಸೂರು ಸರ್ಕಾರದ ಅಭಿಪ್ರಾಯವಾಗಿದೆ. ಭಾರತೀಯ ಆಡಳಿತ ಸೇವೆ ಪರೀಕ್ಷೆ ತೇರ್ಗಡೆಯಾದವರಿಗೆ ಜೂನಿಯರ್ ಶ್ರೇಣಿಯಲ್ಲಿ ಅಸಿಸ್ಟೆಂಟ್ ಕಮಿಷನರ್‌ಗಳ ಗುಂಪಿನಲ್ಲಿ ಶೇ. 25 ರಷ್ಟನ್ನೇ ಮೀಸಲಿಡುವುದು ಅದರ ಉದ್ದೇಶವಾಗಿದೆ. ಎಂದು ಮುಖ್ಯ ಕಾರ್ಯದರ್ಶಿಗಳು ಸಮಾವೇಶದಲ್ಲಿ ಮೈಸೂರಿನ ಪ್ರತಿನಿಧಿಗೆ ತಿಳಿಸಿದರು. ಹೀಗೆ ಮಾಡಿದರೆ ಈ ಯೋಜನೆಯಲ್ಲಿ ಮೈಸೂರು ಭಾಗವಹಿಸುವುದಿಲ್ಲ ಎಂದೇ ಅರ್ಥವಾಗುತ್ತದೆ ಎಂದು ಇತರ ಸದಸ್ಯರು ಅಭಿಪ್ರಾಯ ಪಟ್ಟರು. ಆಗ ಮೈಸೂರಿನ ಪ್ರತಿನಿಧಿಯಾದವರು, ಸಧ್ಯದಲ್ಲಿ ದೆಹಲಿಯಲ್ಲಿ, ಇರುವ ಮುಖ್ಯಮಂತ್ರಿಯವರೊಂದಿಗೆ ರಾಜ್ಯ ಮಂತ್ರಾಲಯವು ಈ ಬಗ್ಗೆ ಚರ್ಚಿಸುವಂತೆ ತಿಳಿಸುವುದಾಗಿ ಹೇಳಿದರು.

ಶ್ರೀ ಭೀಮಪ್ಪ ನಾಯಕ: ಮೈಸೂರಿನ ಪ್ರತಿನಿಧಿಯಾಗಿ ಯಾರು ಹೋಗಿದ್ದರು?

**ಶ್ರೀ ಕೆ. ಚೆಂಗಲರಾಯರೆಡ್ಡಿ:** ಮುಖ್ಯ ಕಾರ್ಯದರ್ಶಿಗಳ ಸಮಾವೇಶಕ್ಕೆ ನಾವು ಮುಖ್ಯ ಕಾರ್ಯದರ್ಶಿಯವರನ್ನು ಕಳುಹಿಸಿದೆವು. ನಮ್ಮ ಪ್ರಸ್ತಾಪ ಕುರಿತಂತೆ ಸಮಾವೇಶದ ಅಭಿಪ್ರಾಯ ಮೇಲೆ ತಿಳಿಸಿದಂಥದ್ದು. ನಾನು ಆ ಸಮಯದಲ್ಲಿ ದೆಹಲಿಯಲ್ಲಿದ್ದುದರಿಂದ ನನ್ನೊಂದಿಗೆ ವಿಷಯದ ಬಗ್ಗೆ ಮತ್ತಷ್ಟು ಚರ್ಚಿಸಲಾಯಿತು. ಈ ಸರ್ಕಾರ ಜಾಗ್ರತೆಯಿಂದ ಕೆಲಸ ಮಾಡಿಲ್ಲ. ಮತ್ತು ಈ ಸಮಸ್ಯೆಯ ಬೇರೆ ಬೇರೆ ಮುಖಗಳನ್ನು ಬಾರತ ಸರ್ಕಾರದ ಮುಂದಿಟ್ಟಿಲ್ಲ, ಇದರ ಹಣಕಾಸು ಬಾಧ್ಯತೆಗಳೇನು ಎಂಬುದನ್ನು ಪರಿಶೀಲಿಸಿಲ್ಲ, ಸಿಬ್ಬಂದಿಯ ಹಿತಾಸಕ್ತಿಯನ್ನೇ ಸರಿಯಾಗಿ ರಕ್ಷಿಸಿಕೊಂಡಿಲ್ಲ ಇತ್ಯಾದಿಯಾಗಿ ಸದನವು ಹೇಳಿದೆ. ಆ ವಿವರಗಳೆಲ್ಲ ಇಲ್ಲಿ ಬೇಡ. ಆದರೆ ದೆಹಲಿಯಲ್ಲಿ ನಡೆದ ಸಭೆಯ ನಡೆವಳಿಕೆಗಳನ್ನು ನಿಮಗೆ ಕೊಡುತ್ತಿದ್ದೇನೆ.

"ಮೈಸೂರಿಗೆ ಸಂಬಂಧಿಸಿದಂತೆ ಕೆಳಕಂಡ ಅಂಶಗಳನ್ನು ಮುಖ್ಯ ಮಂತ್ರಿಯವರು ತಿಳಿಸಿದರು (ಇದು 1949ರ ಜುಲೈನಲ್ಲಿ ನಡೆದ ಸಮಾವೇಶದ ವಿವರ). ಭಾರತೀಯ ಆಡಳಿತ ಸೇವಾ ಯೋಜನೆಯಲ್ಲಿ ರಾಜ್ಯವು ಭಾಗವಹಿಸಿರುವುದಕ್ಕೆ ತಾತ್ವಿಕವಾಗಿ ಸಮ್ಮತಿಸಿದೆ. ರಾಜ್ಯದಲ್ಲಿ ಈಗಾಗಲೇ ಬಹಳ ಸಮರ್ಥವಾದ ಹಾಗೂ ಬಹು ಧೀರ್ಘಕಾಲದಿಂದ ನಡೆದುಕೊಂಡು ಬಂದ ಸಿವಿಲ್ ಸರ್ವಿಸ್ ಯೋಜನೆ ಪ್ರಚಲಿತದಲ್ಲಿದೆ, ಆದ್ದರಿಂದ ಹೊಸ ವ್ಯವಸ್ಥೆಯನ್ನು ತಕ್ಷಣವೇ ಜಾರಿಗೆ ತರುವ ಅಗತ್ಯ ಕಂಡು ಬರುತ್ತಿಲ್ಲ (ಇದು ನಡವಳಿಕೆಗಳಲ್ಲಿ ದಾಖಲಾಗಿರುವ ವಿಷಯ. ಇದನ್ನೇ ಸದನದಲ್ಲಿ ಮಂಡಿಸಲಾಯಿತು)

ಇದು ನಮ್ಮ ಸಿವಿಲ್ ಸರ್ವೀಸ್ ಬಗ್ಗೆ ನಾವು ಹೊಂದಿರುವ ಅಭಿಪ್ರಾಯವನ್ನೂ ಹಾಗೂ ಈ ಸದನದಲ್ಲಿ ವ್ಯಕ್ತಪಡಿಸಲಾದ ವಿಷಯವನ್ನು ಪ್ರಾಮಾಣಿಕವಾಗಿ ಮತ್ತು ವಿದ್ಯುಕ್ತವಾಗಿ ಭಾರತ ಸರ್ಕಾರದ ಮುಂದಿಡಲಾಯಿತು ಎಂಬುದನ್ನು ತೋರಿಸುತ್ತದೆ.

"ಮೂರನೆಯದಾಗಿ ಹೊರಗಿನಿಂದ ಇಡಿಯಾಗಿ ನೇಮಕಾತಿಗಳನ್ನು ಮಾಡಿಕೊಳ್ಳುವ ಅಗತ್ಯವಿಲ್ಲದಿರುವುದರಿಂದ ಜೂನಿಯರ್ ಶ್ರೇಣಿಯಲ್ಲಿ ಒಂದು ಅಲ್ಪ ಭಾಗವನ್ನು ಮಾತ್ರ ಭಾರತೀಯ ಆಡಳಿತ ಸೇವೆಯ ನೇಮಕಾತಿಗೆ ಮೀಸಲಾಗಿಟ್ಟರೆ ಸಾಕು, ಐ ಎ ಎಸ್ ನಲ್ಲಿ ಇದಕ್ಕಿಂತ ಪರಿಪೂರ್ಣವಾಗಿ ತೊಡಗಿಕೊಂಡಿದ್ದೇ ಆದರೆ ರಾಜ್ಯಕ್ಕೆ ಅದು ಗಂಭೀರವಾದ ಹಣಕಾಸು ಹೊರೆಯನ್ನು ಉಂಟು ಮಾಡಬಹುದು. ಮತ್ತು ಇತರ ಭಾರತೀಯ ಸೇವೆಗಳವರು ತಮ್ಮ ವೇತನ ಶ್ರೇಣಿಯ ಸುಧಾರಣೆ ಹಾಗೂ ವರಮಾನದ ಸುಧಾರಣೆಗಾಗಿ ಬೇಡಿಕೆಗಳನ್ನೊಡ್ಡಬಹುದು.

ಏನೇ ಇದ್ದರೂ ಮೈಸೂರು ಮತ್ತು ಕೇಂದ್ರ ಸರ್ಕಾರದ ಆದಾಯ ತೆರಿಗೆ ದರದ ವಿಷಯಗಳಲ್ಲಿ ಕೆಲವೊಂದು ಹೊಂದಾಣಿಕೆಗಳು ಅಗತ್ಯವಾಗಬಹುದು.

ಒಂದು ವೇಳೆ ಮೈಸೂರಿನ ವಿದ್ಯಾರ್ಥಿಗಳಿಗೆ ಸ್ಪರ್ಧಾತ್ಮಕ ಪರೀಕ್ಷೆಗಳಲ್ಲಿ ಅವಕಾಶ ಕೊಡದಿದ್ದರೆ ಉಂಟಾಗುವ ಸಮಸ್ಯೆಯನ್ನು ಹೇಗೆ ನಿಭಾಯಿಸಬೇಕು ಎಂಬ ಪ್ರಶ್ನೆಯನ್ನು ನಾನು ಎತ್ತಿದೆ. ಈ ಎಲ್ಲ ಅಂಶಗಳನ್ನೂ ಭಾರತ ಸರ್ಕಾರದ ಮುಂದೆ ಬಲಯುತವಾಗಿ ಪ್ರತಿಪಾದಿಸಲಾಯಿತು.

**ಶ್ರೀ ಹೆಚ್ ಬಿ. ಗುಂಡಪ್ಪಗೌಡ:** ಒಂದು ವೇಳೆ ಮೈಸೂರು ಸರ್ಕಾರವು ಅಖಿಲ ಭಾರತ ಆಡಳಿತ ಸೇವೆಗಳ ತತ್ವದ ವಿರುದ್ಧವಾಗಿಲ್ಲ ಎಂದು ಭಾರತ ಸರ್ಕಾರವು ಭಾವಿಸಿದ್ದರೆ ನಾವು ಭಾಗವಹಿಸಲು ಸಾಧ್ಯವಿಲ್ಲ ಎಂಬ ನಿಲುವನ್ನು ತೆಗೆದುಕೊಳ್ಳಬಹುದಿತ್ತು?

**ಶ್ರೀ ಕೆ. ಚೆಂಗಲರಾಯರೆಡ್ಡಿ:** ಆ ಹಂತದಲ್ಲಿ ಅಂತಹ ನಿಲುವನ್ನು ತಾಳುವುದು ಸಾಧ್ಯವಿರಲಿಲ್ಲ. ಏಕೆಂದರೆ, ವಿವರಗಳು ನಮಗೆ ಲಭ್ಯವಿರಲಿಲ್ಲ. ಈ ಸಮಾವೇಶ ಮುಗಿದ ನಂತರ ನಮಗೆ ವಿವರಗಳನ್ನು ಕಳುಹಿಸಲಾಯಿತು. ಆದರ ಪ್ರತಿ ಸದನದ ಮುಂದಿದೆ. ಅನಂತರ ನಾವು ಯೋಜನೆಯ ವಿವರಗಳ ಬಗ್ಗೆ ಯೋಚಿಸಲಾರಂಭಿಸಿದೆವು. ಈ ಯೋಜನೆಯನ್ನು ಪರಿಶೀಲಿಸುವಾಗ ನಾವು ಹಾದು ಬಂದ ಎಲ್ಲ ಹಂತಗಳನ್ನು ವಿವರಿಸುವುದಾದರೆ ಅದಕ್ಕೆ ಅರ್ಧಗಂಟೆಗಿಂತ ಹೆಚ್ಚು ಬೇಕಾಗಬಹುದು.

ಶ್ರೀ ಸಿದ್ದಪ್ಪ: ಆದ್ದರಿಂದಲೇ ಈ ನಿರ್ಣಯವನ್ನು ಸದನದ ಮುಂದಿಡಲಾಗಿದೆ. ಅಗತ್ಯವಿದ್ದಲ್ಲಿ ಈ ಸದನದ ರಹಸ್ಯ ಅಧಿವೇಶನವೊಂದನ್ನು ಕರೆದು ಅವರ ಪೂರ್ಣ ಅನುಮೋದನೆಯನ್ನು ಪಡೆದುಕೊಳ್ಳಬಹುದು.

ಶ್ರೀ ಕೆ. ಚೆಂಗಲರಾಯರೆಡ್ಡಿ: ಈ ವಿಷಯಗಳಿಗೆ ಸಂಬಂಧಿಸಿದಂತೆ ಭಾರತ ಸರ್ಕಾರವು ಮಂಡಿಸಿದ್ದಕ್ಕೆಲ್ಲ ನಾವು ಕಣ್ಣು ಮುಚ್ಚಿಕೊಂಡು ಆಗಲಿ ಎಂದೆವು ಎಂಬ ಬಾವನೆ ಕೆಲವು ಸದಸ್ಯರಲ್ಲಿರುವುದರಿಂದ ಅದನ್ನು ನಿವಾರಿಸುವ ದೃಷ್ಟಿಯಿಂದ ಈ ಕೆಲವು ಅಂಶಗಳನ್ನು ವಿವರಿಸಿದ್ದೇನೆ. ಪ್ರತಿಯೊಂದು ಹಂತದಲ್ಲಿಯೂ ಸಮಸ್ಯೆಯ ಎಲ್ಲ ಮುಖಗಳನ್ನು ನಾವು ಪರಿಶೀಲಿಸಿದ್ದೇವೆ. ನಮ್ಮ ನಿಲುವನ್ನು ತಿಳಿಸಿದ್ದೇವೆ. ವಿಷಯದ ಬಗ್ಗೆ ಚರ್ಚಿಸಿದ್ದೇವೆ. ಸರ್ಕಾರವು ಈ ಸಂಬಂಧವಾಗಿ ಪತ್ರ ವ್ಯವಹಾರವನ್ನು ನಡೆಸಿದ್ದು ಅದು ಈಗಲೂ ಮುಂದುವರೆದಿದೆ. ಭಾರತ ಸರ್ಕಾರವು ಮಂಡಿಸಿದ ಯಾವುದೇ ಪ್ರಸ್ತಾಪ ಯಾವುದೇ ಅಡೆತಡೆಯಿಲ್ಲದೆ ನಿರ್ಣಯವಾಗಿಲ್ಲ ಎಂಬುದನ್ನು ಸ್ಪಷ್ಟಪಡಿಸಲು ಎಷ್ಟು ಅಗತ್ಯವೋ ಅಷ್ಟು ಅಂಶಗಳನ್ನು ನಿಮ್ಮ ಮುಂದಿಟ್ಟಿದ್ದೇನೆ.

ಇನ್ನು ನಿರ್ದಿಷ್ಟ ಯೋಜನೆಯ ವಿಷಯಕ್ಕೆ ಬಂದರೆ ಈ ತತ್ವವನ್ನು ಅಂಗೀಕರಿಸವುದಕ್ಕೆ ಮೊದಲು ಸದನದ ಅನುಮೋದನೆಯನ್ನು ಪಡೆದುಕೊಂಡು ಸದನಕ್ಕೆ ಬರಬೇಕಿತ್ತು ಎಂದು ಹೇಳಲಾಯಿತು. ನಾನು ಈಗ ಹತ್ತು ನಿಮಿಷಗಳ ಹಿಂದೆ ಹೇಳಿದಂತೆ ಯಾವ ವ್ಯವಸ್ಥೆಯಲ್ಲಿ ನಾವು ಕೆಲಸ ಮಾಡುತ್ತಿದ್ದೇವೆ ಎಂಬುದನ್ನು ಸದಸ್ಯರ ಗಮನಕ್ಕೆ ತರಬಯಸುತ್ತೇನೆ. ನಾವು ಸಂವಿಧಾನದ ವ್ಯವಸ್ಥೆಯನ್ನು ಒಪ್ಪಿಕೊಂಡಿದ್ದೇವೆ, ಸಂವಿಧಾನವನ್ನು ಜಾರಿಗೆ ತಂದಿದ್ದೇವೆ. ಹಣಕಾಸು ವಿಲಿನೀಕರಣವನ್ನು ಒಪ್ಪಿಕೊಂಡಿದ್ದೇವೆ. ಈಗ ಪ್ರಸ್ತಾಪಿಸಿರುವ ಯೋಜನೆ ಅತ್ಯಂತ ಸರಳವಾಗಿದೆ. ಇದು ಭಾರತದ ಆಡಳಿತ ಏಕೀಕರಣಕ್ಕೆ ಸಂಬಂಧಿಸಿದ್ದು. ಮೇಲೆ ಹೇಳಿದ ಎಲ್ಲ ವಿಷಯಗಳನ್ನೂ ಒಪ್ಪಿಕೊಂಡ ನಂತರ ಭಾರತದ ಆಡಳಿತ ಸೇವೆಗಳು ನಮಗೆ ಯಾವ ರೀತಿಯೂ ಸಂಬಂಧಿಸುವುದಿಲ್ಲ ಎಂದು ಹೇಳುವುದು ಸರಿಯೇ? ತರ್ಕ ಸಮ್ಮತವೇ, ಉಚಿತವೇ?

ಒಂದು ಧ್ವನಿ:ಇದಕ್ಕೆಲ್ಲ ಮಿತಿ ಎಲ್ಲಿ?

ಶ್ರೀ ಕೆ. ಚೆಂಗಲರಾಯರೆಡ್ಡಿ: ಮಿತಿ? ಆ ಮಿತಿಯನ್ನು ನಾವೇ ನಿರ್ಮಿಸಿಕೊಳ್ಳಬೇಕು. ಸಂವಿಧಾನದ ವ್ಯವಸ್ಥೆಯನ್ನು ಹಣಕಾಸು ವಿಲಿನೀಕರಣವನ್ನು ಒಪ್ಪಿಕೊಂಡ ನಂತರ ಹಾಗೂ ಕೆಲವೊಂದು ಇಲಾಖೆಗಳನ್ನು ವರ್ಗಾಯಿಸಿದ ನಂತರ ಒಂಟೆಯನ್ನೇ ನುಂಗಿದವರು ಸೊಳ್ಳೆಗೆ ಹೆದರಬೇಕೆ? ಎಂಬಂತೆ, ನಾವು ಇದರಿಂದ ಬೇರೆಯಾಗಿ ನಿಲ್ಲುವುದು ಸರಿಯೇ ಎಂಬ ಬಗ್ಗೆ ನಾವು ಯೋಚಿಸಬೇಕು. ಈ ಬಗ್ಗೆ ನೀವು ಯೋಚಿಸಬೇಕು ಎಂದು ನನ್ನ ಮನವಿ.

ಶ್ರೀ ಹೆಚ್.ಬಿ. ಗುಂಡಪ್ಪಗೌಡ: ಸಂವಿಧಾನದ ಪ್ರಕಾರ ಇದನ್ನು ಇಷ್ಟಾನುಸಾರವಾಗಿ ಒತ್ತಾಯಿಸುವಂತಿರಲಿಲ್ಲ.

ಶ್ರೀ ಕೆ. ಚೆಂಗಲರಾಯರೆಡ್ಡಿ: ಕೊನೆಗೆ ಈ ವಿಷಯಕ್ಕೂ ಬರುತ್ತೇನೆ. ಸಂವಿಧಾನದ ಹಾಗೂ ಕಾನೂನಾತ್ಮಕ ವಿಷಯಗಳನ್ನೂ ಕೊನೆಯಲ್ಲಿ ಪರಿಶೀಲಿಸುತ್ತೇನೆ. ಆದ್ದರಿಂದ ಇತರ ಮೂಲಭೂತ ವಿಷಯಗಳನ್ನೆಲ್ಲ ಒಪ್ಪಿಕೊಂಡ ನಂತರ ಅಖಿಲ ಭಾರತ ಆಡಳಿತ ಸೇವೆಗಳನ್ನು ಮೈಸೂರು ರಾಜ್ಯಕ್ಕೂ ವಿಸ್ತರಿಸುವ ವಿಷಯಕ್ಕೆ ತಾತ್ವಿಕವಾಗಿ ಸಮ್ಮತಿ ನೀಡುವುದಲ್ಲದೆ ಬೇರೆ ದಾರಿ ಉಳಿದಿರಲಿಲ್ಲ.

ಈಗೇನಾಗಿದೆ ನೋಡಿ, ಈ ತತ್ವವನ್ನು ಅಂಗೀಕರಿಸುವ ಮೊದಲು ನಾವು ಸದನದೊಂದಿಗೆ ಸಮಾಲೋಚಿಸಲಿಲ್ಲವಾದರೂ ಭಾರತದಲ್ಲಿ ಇಂದಿನ ಸ್ಥಿತಿ ಏನಾಗಿದೆ? ಎಲ್ಲ ಹಳೆಯ ಪ್ರಾಂತಗಳೂ ಅನೇಕ ದಶಕಗಳಿಂದ ಇಂಥ ಯಾವುದಾದರೂ ಯೋಜನೆಯ ಅಡಿಯಲ್ಲಿ ಕೆಲಸ ಮಾಡುತ್ತಿವೆ. 'ಬಿ' ಭಾಗದ ರಾಜ್ಯಗಳಿಗೆ ಇದು ಹೊಸದು ಎಂದು ಹೇಳಲಾಯಿತು. ಮದ್ರಾಸ್, ಬಾಂಬೆ, ಬೆಂಗಾಲ್, ಉತ್ತರ ಪ್ರದೇಶ, ಬಿಹಾರ್ ಇವೆಲ್ಲವೂ ತಮ್ಮದೇ ಆದ ಪ್ರಾಂತೀಯ ಸಿವಿಲ್ ಸರ್ವೀಸ್‌ಗಳನ್ನು ಹೊಂದಿದ್ದವು, ಮತ್ತು ಆಗ ಐಸಿಎಸ್ ಎಂದು ಕರೆಯಲಾಗುತ್ತಿದ್ದ ಅಖಿಲ ಭಾರತ ಸೇವೆಗಳ ಯೋಜನೆಯಲ್ಲಿ ಭಾಗಿಯಾಗಿದ್ದವು. ಅದನ್ನೇ ಈಗ ಹೊಸ ಸಂವಿಧಾನದ ಅಡಿಯಲ್ಲಿ ಭಾರತೀಯ ಆಡಳಿತ ಸೇವೆಗಳು ಎಂದು ಪರಿವರ್ತಿಸಲಾಗಿದೆ. ಇದೊಂದೇ ವ್ಯತ್ಯಾಸ. ಪ್ರಾಂತಗಳಲ್ಲಿ ತಮ್ಮದೇ ಆದ ಪ್ರಾಂತೀಯ ಸೇವೆಗಳ ವ್ಯವಸ್ಥೆಯೂ ಇತ್ತು. ಅದು ಹಾಗೇ ಮುಂದುವರೆದಿದೆ. ಮತ್ತು ಅವು ಜೊತೆಜೊತೆಯಲ್ಲಿ ಅಖಿಲ ಭಾರತ ಸೇವೆಗಳನ್ನೂ ಹೊಂದಿದೆ. ಅಂತಹುದೇ ಯೋಜನೆಯನ್ನು ಭಾಗ-ಬಿ ರಾಜ್ಯಗಳಲ್ಲಿ ತರುವ ಪ್ರಯತ್ನವನ್ನು ಈಗ ಮಾಡಲಾಗಿದೆ. ಈ ಯೋಜನೆಯಂತೆ ರಾಜ್ಯಗಳು ತಮ್ಮವೇ ಆದ ಸಿವಿಲ್ ಸರ್ವಿಸ್‌ಗಳನ್ನು ಹೊಂದಿದ್ದರೂ ಅವು ಅಖಿಲಭಾರತ ಆಡಳಿತ ಸೇವೆಗಳಲ್ಲೂ ಭಾಗವಹಿಸಬಹುದು. ಇತರ ಎಲ್ಲ ರಾಜ್ಯಗಳೂ ಇದನ್ನು ಒಪ್ಪಿವೆ. ಹೀಗಿರುವಾಗ ಮೈಸೂರು ರಾಜ್ಯ ಮಾತ್ರ ಇದರಿಂದ ಹೊರಗೆ ನಿಂತು ಅಖಿಲ ಭಾರತ ಸೇವೆಗಳಿಗೂ ನಮಗೂ ಸಂಬಂಧವಿಲ್ಲ ಎಂದು ಹೇಳಲು ಸಾಧ್ಯವೇ?

ಶ್ರೀ ಎ. **ಭೀಮಪ್ಪ ನಾಯಕ:** 312 ನೇ ಅನುಚ್ಛೇದದ ಅನುಸರಣೆ ಯಾಗುವವರೆಗೆ ಸಾಧ್ಯವಿಲ್ಲ.

ಶ್ರೀ **ಕೆ. ಚೆಂಗಲರಾಯರೆಡ್ಡಿ:** ಮಾನ್ಯ ಸದಸ್ಯರು ಸ್ವಲ್ಪ ತಾಳ್ಮೆಯಿಂದಿದ್ದರೆ ಈ ವಿಷಯಕ್ಕೂ ಬರುತ್ತೇನೆ. ನಾನು ಈ ವಿಷಯವನ್ನು ಪರಿಶೀಲಿಸಿದ್ದೇನೆ.

ಈ ಹಿನ್ನೆಲೆಯಲ್ಲಿ ಮೈಸೂರು ಸರ್ಕಾರವು ಇತರ ಪ್ರಾಂತಗಳು ಹಾಗೂ ಉಳಿದ ರಾಜ್ಯಗಳೊಂದಿಗೆ ಮೈಸೂರಿಗೂ ಸಹ ಈ ಯೋಜನೆಯನ್ನು ವಿಸ್ತರಿಸುವುದಕ್ಕೆ ತಾತ್ವಿಕ ಒಪ್ಪಿಗೆ ನೀಡಿತು. ಇದು ರಹಸ್ಯವಾದರೂ ಹೇಳುತ್ತಿದ್ದೇನೆ. ಈವತ್ತಿಗೂ ಕೂಡ ಈ ಇಡೀ ಯೋಜನೆಯ ಬಗ್ಗೆ ಅಂತಿಮ ತೀರ್ಮಾನ ಕೈಗೊಳ್ಳದೆ ಮೈಸೂರು ವಿಳಂಬ ಮಾಡಿತು ಎಂದು ಮೈಸೂರನ್ನು ದೂಷಿಸಲಾಗುತ್ತಿದೆ.

ಶ್ರೀ **ಹೆಚ್.ಬಿ. ಗುಂಡಪ್ಪಗೌಡ:** ಇದರಿಂದ ನನಗೆ ಸಂತೋಷವಾಯಿತು. ಮೈಸೂರು ಇನ್ನು ಮುಂದೆಯೂ ಹೀಗೆ ಮಾಡಬೇಕು.

ಶ್ರೀ **ಕೆ. ಚೆಂಗಲರಾಯರೆಡ್ಡಿ:** ಹೀಗೇ ಆಗುತ್ತಿದೆ. ನಾವು ಈಗಲೂ ಕೇಂದ್ರದೊಂದಿಗೆ ಚರ್ಚೆ ಮಾಡುತ್ತಿದ್ದೇವೆ. ಹೀಗೆ ಮಾಡುವಾಗ ಕೇಂದ್ರವನ್ನು ಅಲ್ಲಗಳೆಯುವುದು ನಮ್ಮ ಉದ್ದೇಶವಲ್ಲ, ಅಂತಹ ಉದ್ದೇಶ ನಮ್ಮ ಮನಸ್ಸಿನಲ್ಲಿ ಇಲ್ಲವೇ ಇಲ್ಲ. ಆದರೆ ಈ ಅಧಿವೇಶನದ ಅವಧಿಯಲ್ಲಿ ಸದನವು ತಾನೇ ಸ್ಪಷ್ಟವಾಗಿ ವ್ಯಕ್ತಪಡಿಸಿರುವಂತೆ ಈ ಸಮಸ್ಯೆ ಕುರಿತಂತೆ ಕೆಲವು ನಿಜವಾದ ಸಂದೇಹಗಳು, ನಿಜವಾದ ಆತಂಕಗಳು ನಿಜವಾದ ತೊಂದರೆಗಳು ಇವೆ. ಈ ಮಧ್ಯದ ಅವಧಿಯಲ್ಲಿ ನಾವು ಕೆಲವೊಂದು ಮನವಿಗಳನ್ನು ಸಲ್ಲಿಸಿದ್ದೆವು. ಕೆಲವು ಪ್ರಶ್ನೆಗಳನ್ನು ಎತ್ತಿದ್ದೇವೆ. ಈ ಸಂಬಂಧವಾದ ವ್ಯವಹಾರ ಇನ್ನೂ ಮುಗಿದಿಲ್ಲ. ಈಗ ಈ ಹಂತದಲ್ಲಿ ನಾವಿದ್ದೇವೆ. ಈ ಯೋಜನೆಯಿಂದ

ನಾವು ಸಂಪೂರ್ಣ ಹೊರತಾಗಿರುವುದು ಸಾಧ್ಯವಿಲ್ಲ ಎಂಬುದನ್ನು ಸಭೆಯ ಗಮನಕ್ಕೆ ತರಬಯಸುತ್ತೇನೆ. ಮೈಸೂರಿನ ಯಾವುದೇ ಸರ್ಕಾರ ಈ ಯೋಜನೆಯಿಂದ ಹೊರತಾಗಿರುವುದಾದರೆ ಅವರು ಹಾಗೆ ಮಾಡಬಹುದು.

ಈಗ ನಮ್ಮ ಮುಂದಿರುವ ಇಡಿಯಾದ ಸಮಸ್ಯೆ ಏನೆಂದರೆ ಮೂಲತತ್ವಕ್ಕಿಂತ ಮುಖ್ಯವಾಗಿ ಅದರ ವಿವಿಧ ವಿವರಗಳಗೆ ಸಂಬಂಧಿಸಿದ್ದು. ಈ ಎಲ್ಲ ವಿವರಗಳನ್ನು ನಿರೂಪಿಸ ಹೊರಟರೆ ಬಹಳ ಹೊತ್ತು ಹಿಡಿಯುತ್ತದೆ. ಆದರೆ ಇದರಲ್ಲಿ ಬಹುವಾಗಿ ಹೇಳಲಾಗುತ್ತಿರುವ ಒಂದು ಅಂಶದ ಬಗ್ಗೆ ಮಾತ್ರ ಹೇಳುತ್ತೇನೆ. ಇದು ಹೇಗೆ ಆಯ್ಕೆ ಮಾಡಲಾಗುತ್ತದೆ ಎಂಬುದಕ್ಕೆ ಸಂಬಂಧಿಸಿದ್ದು ಇಲ್ಲಿ ಈ ಯೋಜನೆಯ ಪ್ರಕಾರ ರಾಜ್ಯದ ಸೇವೆಯಲ್ಲಿರುವ ಎಲ್ಲ ಸಿಬ್ಬಂದಿಯನ್ನೂ ಅಖಿಲ ಭಾರತ ಆಡಳಿತ ಸೇವೆಗೆ ತೆಗೆದುಕೊಳ್ಳಲಾಗುವುದಿಲ್ಲ, ಅದು ಸಾಧ್ಯವೇ ಇಲ್ಲ. ಅದು ಯೋಜನೆಯ ಮೂಲ ಸ್ವರೂಪಕ್ಕೆ ವಿರುದ್ಧವಾದುದು.

ಪ್ರತಿಯೊಂದು ರಾಜ್ಯದಲ್ಲಿಯೂ ಕೆಲವೊಂದು ಹುದ್ದೆಗಳನ್ನು ನಿರ್ವಹಿಸುವುದಕ್ಕಾಗಿ ಆಡಳಿತ ಸೇವೆಗೆ ಸೇರಿದ ಕೆಲವೊಂದು ಮಂದಿ ಇರುತ್ತಾರೆ. ಅಖಿಲ ಭಾರತ ಸೇವೆಯ ಸಿಬ್ಬಂದಿಯೇ ಎಲ್ಲ ಹುದ್ದೆಗಳನ್ನು ನಿರ್ವಹಿಸುವುದು ಸಾಧ್ಯವಿಲ್ಲ. ಯಾವ ಪ್ರಾಂತದಲ್ಲಿಯೂ ಅಂತಹ ವ್ಯವಸ್ಥೆ ಇಲ್ಲ. ನಾನು ಮೊದಲೆ ಹೇಳಿದಂತೆ ಮದ್ರಾಸ್, ಬಾಂಬೆ, ಉತ್ತರಪ್ರದೇಶ ಈಎಲ್ಲ ರಾಜ್ಯಗಳಲ್ಲೂ ಪ್ರಾಂತೀಯ ಸಿವಿಲ್ ಸರ್ವಿಸ್‌ಗಳು ಎಂದು ಕರೆಯಲಾಗುವ ತಮ್ಮದ್ದೇ ಆದ ಸೇವಾ ವ್ಯವಸ್ಥೆ ಹೊಂದಿವೆ. ಇದರಲ್ಲಿನ ಕೆಲವು ಭಾಗದಷ್ಟನ್ನು ಭಾರತೀಯ ಆಡಳಿತ ಸೇವೆಗೆ ಬಿಟ್ಟು ಕೊಡಬೇಕಾಗುತ್ತದೆ. ಆದ್ದರಿಂದ ಯಾವ ರಾಜ್ಯದಲ್ಲಿಯೂ ಇಡೀ ವ್ಯವಸ್ಥೆ ಅಖಿಲ ಭಾರತ ಆಡಳಿತ ಸೇವಾ ವ್ಯವಸ್ಥೆ ಆಗುವುದು ಸಾಧ್ಯವಿಲ್ಲ. ಕೆಲವೊಂದು ಆಯ್ಕೆಗಳನ್ನು ಮಾಡಬೇಕಾಗುತ್ತದೆ. ಈ ಆಯ್ಕೆಯನ್ನು ನೇರ ನೇಮಕಾತಿಯ ಮೂಲಕ ಮಾಡಬೇಕೆ ಅಥವಾ ಈಗಿರುವ ಸಿಬ್ಬಂದಿಯಿಂದಲೇ ಕೆಲವರನ್ನು ಆಯ್ಕೆ ಮಾಡಬೇಕೇ ಎಂಬುದನ್ನು ನೋಡಬೇಕು.

ಜನಾಬ್ ಸೈಯದ್ ಬ್ದುರ್ ರಹಮಾನ್: ಅವರು ನಿಮ್ಮ ಶಿಫಾರಸಿನ ಮೇಲೆ ನೇರವಾಗೇ ತೆಗೆದುಕೊಳ್ಳಬಹುದು.

ಶ್ರೀ ಕೆ. ಚೆಂಗಲರಾಯರೆಡ್ಡಿ: ಶಿಫಾರಸ್ಸುಗಳು ಕೆಲವೊಮ್ಮೆ ಅಪಾಯಕಾರಿಯಾಗಿರುತ್ತವೆ.

ಶ್ರೀ ಎ.ಭೀಮಪ್ಪ ನಾಯಕ: ನಮ್ಮ ಸಿಬ್ಬಂದಿಯನ್ನು ಪರೀಕ್ಷಿಸಿ ಕಳಿಸಿಕೊಡಲು ನಮಗೆ ಆಗುವುದಿಲ್ಲವೆ? ಅವರು ಮಾತ್ರವೇ ನಮ್ಮನ್ನು ಪರೀಕ್ಷಿಸಿ ನಮ್ಮ ಅರ್ಹತೆಯನ್ನು ಕಂಡು ಹಿಡಿಯುವ ಸಾಮರ್ಥ್ಯ ಹೊಂದಿದವರೆ?

ಶ್ರೀ ಕೆ. ಚೆಂಗಲರಾಯರೆಡ್ಡಿ:- ಯಾವುದಾದರೊಂದು ರೀತಿಯ ಆಯ್ಕೆ ಅನಿವಾರ್ಯ. ಇದನ್ನು ಫೆಡರಲ್ ಪಬ್ಲಿಕ್ ಸರ್ವಿಸ್ ಕಮಿಶನ್ನಿನ ಪರವಾಗಿ ಒಂದು ವಿಶೇಷ ನೇಮಕಾತಿ ಮಂಡಳಿಯು ಮಾಡುವುದೋ ಅಥವಾ ಮೈಸೂರು ಸರ್ಕಾರ ಮಾಡುವುದೋ ಅಥವಾ ಇನ್ನಾವುದಾದರೂ ವಿಧಾನದಿಂದ ಈ ಆಯ್ಕೆಯು ನಡೆಯುವುದೇ ಇದೆಲ್ಲವೂ ಅಭಿಪ್ರಾಯಕ್ಕೆ ಸಂಬಂಧಿಸಿದ ವಿಷಯ.

ಆದರೆ ನಮ್ಮ ಮಟ್ಟಿಗೆ ಹೇಳುವುದಾದರೆ ನಾವು ಭಾರತ ಸರ್ಕಾರದೊಂದಿಗೆ ವಾದ ಮಾಡಿದ ಫಲವಾಗಿ ಆಯ್ಕೆಯ ಮಂಡಳಿಯಲ್ಲಿ ಮೈಸೂರು ಸರ್ಕಾರದ ಒಬ್ಬರು ನಾಮ ನಿರ್ದೇಶಕರನ್ನು ಇಟ್ಟುಕೊಳ್ಳುವುದಕ್ಕೆ ಅದು ಸಮ್ಮತಿಸಿತು. ಸಿಬ್ಬಂದಿಯ ಆಯ್ಕೆಯ ವಿಷಯದಲ್ಲಿ ಆಯ್ಕೆ ಮಂಡಳಿಗೆ ನೆರವು ನೀಡುವುದು, ಸಲಹೆ ಕೊಡುವುದು ಈ ನಾಮ ನಿರ್ದೇಶಿತರ ಕೆಲಸ.

ಶ್ರೀ ಎಸ್ ಸಿದ್ದಪ್ಪ:- ಮಂಡಳಿಯಲ್ಲಿ ಎಷ್ಟು ಮಂದಿ ಸದಸ್ಯರಿರುತ್ತಾರೆ?

ಶ್ರೀ **ಕೆ. ಚೆಂಗಲರಾಯರೆಡ್ಡಿ:-** ಮೂರು ಅಥವಾ ನಾಲ್ಕು: ಮಂಡಳಿಯು ಅನೇಕ ಪ್ರಾಂತಗಳಲ್ಲಿ ಆಯ್ಕೆಯ ಕೆಲಸ ನಡೆಸಿದೆ. ಅವರು ವಿವಿಧ ಪ್ರಾಂತ ಹಾಗೂ ರಾಜ್ಯಗಳಿಂದ ಸುಮಾರು ಒಂದು ಸಾವಿರ ಮಂದಿಯನ್ನು ಆಯ್ಕೆ ಮಾಡಿದ್ದಾರೆ. (ಈ ಸಂಖ್ಯೆ ಖಚಿತವಲ್ಲ). ಈಗಿರುವ ಸಿಬ್ಬಂದಿಯಿಂದಲೇ ಈ ಆಯ್ಕೆ ಮಾಡಲಾಗಿದೆ. ಬಹುಶಃ ಯಾವ ಪ್ರಾಂತ ಅಥವಾ ರಾಜ್ಯದಲ್ಲಿಯೂ ಆಯ್ಕೆಯ ಸ್ವರೂಪದ ಬಗ್ಗೆ ಅಥವಾ ಅಳವಡಿಸಿಕೊಂಡ ವಿಧಾನದ ಬಗ್ಗೆ ಸಿವಿಲ್ ಸರ್ವೀಸ್ ಸಿಬ್ಬಂದಿಯಿಂದ ಯಾವುದೇ ದೂರು ಬಂದಿಲ್ಲ ಎಂಬುದನ್ನು ತಿಳಿಸಬಯಸುತ್ತೇನೆ.

ಶ್ರೀ **ಹೆಚ್.ಬಿ. ಗುಂಡಪ್ಪಗೌಡ:-** ಮೈಸೂರಿನಲ್ಲಿ?

ಶ್ರೀ **ಕೆ. ಚೆಂಗಲರಾಯರೆಡ್ಡಿ:-** ಅವರು ಇನ್ನೂ ಮೈಸೂರಿಗೆ ಬಂದಿಲ್ಲ. ಆದರೆ ಎಲ್ಲಿ ಆಯ್ಕೆ ನಡೆದಿದೆಯೋ ಅಲ್ಲಿ ಯಾವುದೇ ಅಸಮಾಧಾನ ವ್ಯಕ್ತವಾಗಿಲ್ಲ ಎಂದು ತಿಳಿದು ಬಂದಿದೆ. ನೂರಾರು ಆಯ್ಕೆಗಳಲ್ಲಿ ಕೇವಲ ಇಬ್ಬರು ಮಾತ್ರ ಭಾರತ ಸರ್ಕಾರಕ್ಕೆ ಅಪೀಲು ಸಲ್ಲಿಸಿದ್ದಾರೆ ಮತ್ತು ಈ ಎರಡು ಪ್ರಕರಣಗಳಲ್ಲಿಯೂ ತೃಪ್ತಿಕರ ಪರಿಹಾರ ಕಂಡು ಕೊಳ್ಳಲಾಗಿದೆ ಎಂದು ತಿಳಿದು ಬಂದಿದೆ.

ಆಡಳಿತಾತ್ಮಕ ಹಂತ, ಸೀನಿಯರ್ ಹಂತ ಹಾಗೂ ಜೂನಿಯರ್ ಹಂತದಲ್ಲಿ ಇರಬೇಕಾದ ಸಂಖ್ಯಾಬಲ ಎಷ್ಟು ಎಂಬುದು ಈಗ ಖಚಿತವಾಗಿದೆ. ಜೂನಿಯರ್ ಹಂತದಿಂದ ಸೀನಿಯರ್ ಹಂತಕ್ಕೆ ಬಡ್ತಿ ನೀಡಲು ಯಾವ ವಿಧಾನ ಅನುಸರಿಸಬೇಕು? ಅಂದರೆ ಶೇಕಡಾ ಪ್ರಮಾಣ ಎಷ್ಟಿರಬೇಕು? ಆಯ್ಕೆಯಾದ ಸಿಬ್ಬಂದಿಯ ಭವಿಷ್ಯದ ಅವಕಾಶಗಳು ಹಾಗೂ ಮತ್ತಿತರ ಅಂಶಗಳನ್ನು ಹೇಗೆ ರಕ್ಷಿಸಬೇಕು ಇವೆಲ್ಲ ಸಂಬಂಧಪಟ್ಟ ವಿವರಗಳಾಗಿದ್ದು ಇನ್ನೂ ನಿರ್ಣಯ ಕೈಗೊಂಡಿಲ್ಲ. ಅಂತಿಮ ನಿರ್ಣಯಕ್ಕೆ ಇನ್ನೂ ಸ್ವಲ್ಪ ಕಾಲಾವಕಾಶ ಬೇಕಾಗಬಹುದು.

ಶ್ರೀ **ಹೆಚ್.ಬಿ. ಗುಂಡಪ್ಪಗೌಡ:-** ಇತರ ರಾಜ್ಯಗಳಿಂದ ವಿರೋಧ ವ್ಯಕ್ತವಾಗದಿರುವುದಕ್ಕೆ ಒಳ್ಳೆಯ ಕಾರಣಗಳಿವೆ. ಒಂದು ಕಡೆ ಕೆಲವು ರಾಜ್ಯಗಳು ಅದೇ ಸ್ಥಾನಮಾನದಲ್ಲಿವೆ. ಕೆಲವು ಬಿ ರಾಜ್ಯಗಳಲ್ಲಿ ಸಿವಿಲ್ ಸರ್ವಿಸ್ ವ್ಯವಸ್ಥೆಯೇ ಇಲ್ಲ. ಇದೊಂದು ದುರದೃಷ್ಟಕರ ಸ್ಥಿತಿ.

ಶ್ರೀ **ಟಿ. ಮರಿಯಪ್ಪ(ಗೃಹಮಂತ್ರಿ)** ತಿರುವಾಯೂರಿನಲ್ಲಿ ತನ್ನದೇ ಆದ ವಿಶೇಷ ಸಿವಿಲ್ ಸರ್ವೀಸ್ ಇದೆ.

ಶ್ರೀ **ಕೆ. ಚೆಂಗಲರಾಯರೆಡ್ಡಿ:-** ತಿರುವಾಯೂರಿನಲ್ಲಿ ಹಾಗೂ ಮೈಸೂರಿನಲ್ಲಿ ಅಲ್ಲಲ್ಲಿಗೇ ವಿಶೇಷವಾದ ಸಿವಿಲ್ ಸರ್ವಿಸ್‌ಗಳಿವೆ.

ಶ್ರೀ ಎಚ್. ಸಿದ್ದವೀರಪ್ಪ:- (ಚಿತ್ರದುರ್ಗ ಜಿಲ್ಲೆ-ಸಾಮಾನ್ಯ) ನಿಮ್ಮ ಭಾಷಣದಲ್ಲಿ ಕೆಲವೊಂದು ವಿಷಯಗಳನ್ನು ಬಹಿರಂಗ ಪಡಿಸುವ ಒಳ್ಳೆಯತನ ತೋರಿದ್ದೀರಿ. 16(4) ನೇ ಅನುಚ್ಛೇದದ ಅನ್ವಯ ಹಿಂದುಳಿದ ವರ್ಗಗಳವರಿಗೆ ನೇಮಕಾತಿಗಳನ್ನು ಅಥವಾ ಹುದ್ದೆಗಳನ್ನು ಮೀಸಲಿಡುವುದಕ್ಕೆ ಅವಕಾಶವಿದೆ. ಇದು ಬಹಳ ಮುಖ್ಯ ವಿಷಯ. ಆದರೆ ಈ ಅನುಚ್ಛೇದವನ್ನೇ ತೆಗೆದುಹಾಕುವ ಬಗ್ಗೆ ಸೂಚನೆಗಳನ್ನು ನೀಡಲಾಗಿದೆ ಎಂಬ ಮಾತುಗಳು ಕೇಳಿ ಬರುತ್ತವೆ. ಆದರೂ ಈ ಸಂವಿಧಾನದಲ್ಲಿ 371 ನೇ ಅನುಚ್ಛೇದವಿರುವ ಅಂಶ ನನಗೆ ಮಾತ್ರ ಗೊತ್ತು. ಇನ್ನೂ ವಿನಾಯಿತಿಯನ್ನು ನೀಡದಿರುವುದರಿಂದ ಈ ಬಗ್ಗೆ ಕೇಂದ್ರವು ಸಂವಿಧಾನದ ಅನ್ವಯ ಏನಾದರೂ ಸೂಚನೆ ನೀಡಿದೆಯೇ? ನಾವು ಈ ಸೂಚನೆಗಳಿಗೆ ಒಳಪಡುತ್ತವೆಯೇ, ಮತ್ತು 16(4) ನೇ ಅನುಚ್ಛೇದಕ್ಕೆ ವಿದಾಯ ಹೇಳುವ ಮಾತು ನಿಜವೇ? ಎಂಬುದನ್ನು ತಿಳಿಸಿ.

ಶ್ರೀ **ಕೆ. ಚೆಂಗಲರಾಯರೆಡ್ಡಿ**:- ಮಾನ್ಯ ಸದಸ್ಯರು ನನ್ನನ್ನು ಬೇರೊಂದೇ ವಿಷಯದ ಕಡೆಗೆ ಎಳೆಯುತ್ತಿದ್ದಾರೆಂದು ಆತಂಕವಾಗುತ್ತಿದೆ. ನಿಜವಾದ ಸ್ಥಿತಿಯನ್ನು ನಾವು ವಿವರಿಸಿದ್ದೇ ಆದರೆ ಈ ನಿರ್ದಿಷ್ಟ ವಿಷಯಕ್ಕೆ ಸಂಬಂಧಿಸಿದಂತೆ ನನ್ನ ಜಾಡು ತಪ್ಪಬಹುದು. ಆದರೆ ಸಂವಿಧಾನದ ಅಡಿಯಲ್ಲಿ ಈ ವಿಷಯಕ್ಕೆ ಸಂಬಂಧಿಸಿದಂತೆ ಅಂತಹ ಯಾವುದೇ ಸೂಚನೆ ಇಲ್ಲವೆಂದು ಸದಸ್ಯರಿಗೆ ನೇರವಾಗಿಯೇ ತಿಳಿಸುತ್ತಿದ್ದೇನೆ. ಕಾಲೇಜು ಮತ್ತಿತರೆಯವುಗಳ ಪ್ರವೇಶಕ್ಕೆ ಸಂಬಂಧಿಸಿದಂತೆ ಮದ್ರಾಸಿನ ಹೈಕೋರ್ಟಿನ ಮುಂದೆ ಬಂದ ಪ್ರಕರಣದಲ್ಲಿ ಅಲ್ಲಿನ ಕೋರ್ಟು ಒಂದು ನಿರ್ಣಯವನ್ನು ನೀಡಿದ್ದು ಅದನ್ನು ಆಧರಿಸಿ ಭಾರತ ಸರ್ಕಾರವು ಮೈಸೂರು ಸರ್ಕಾರಕ್ಕೂ ಹಾಗೂ ಇತರೆ ರಾಜ್ಯ ಸರ್ಕಾರಗಳಿಗೂ ಪತ್ರವೊಂದನ್ನು ಕಳಿಸಿ ಕೋಮು ಆಧಾರದ ಮೇಲೆ ಹಾಗೂ ಕೋಮು ಸರ್ಕಾರಿ ಆದೇಶದ ಅನ್ವಯ ವಿದ್ಯಾರ್ಥಿಗಳಿಗೆ ಕಾಲೇಜುಗಳಲ್ಲಿ ಸೀಟುಗಳನ್ನು ಮೀಸಲಿಡುವುದು ಸಂವಿಧಾನದ ಅವಕಾಶಗಳನ್ನು ಉಲ್ಲಂಘಿಸಿದಂತಾಗಬಹುದು ಎಂದು ತಿಳಿಸಿದೆ ಆದರೆ ಇದನ್ನು ಗಮನದಲ್ಲಿಟ್ಟುಕೊಂಡು ಈ ವಿಷಯದಲ್ಲಿ ನಾವು ಏನು ಮಾಡಿದ್ದೇವೆ ಅಥವಾ ಮಾಡಬೇಕೆಂದಿದ್ದೇವೆ ಎಂಬುದನ್ನು ಅವರಿಗೆ ಬರೆಯಬಹುದು.

ಶ್ರೀ **ಹೆಚ್.ಬಿ. ಗುಂಡಪ್ಪಗೌಡ**:- ಅದು sub judice ಆಗುತ್ತದೆ.

ಶ್ರೀ **ಕೆ. ಚೆಂಗಲರಾಯರೆಡ್ಡಿ**:- ಇದಲ್ಲದೆ ಒಂದು ಪತ್ರ ಬಂದಿದೆ. ಮೈಸೂರಿನ ವಿಷಯ ಹೇಳುವುದಾದರೆ ಈ ವರ್ಷದ ಪ್ರವೇಶಗಳೆಲ್ಲ ಮುಗಿದಿವೆ. ಮದ್ರಾಸಿನಲ್ಲಿರುವಂತಹ ಕಮ್ಯೂನಲ್ ಸರ್ಕಾರಿ ಆದೇಶ ಮೈಸೂರಿನಲ್ಲಿಲ್ಲ. ಹೀಗಾಗಿ ಇಲ್ಲಿನ ಸ್ಥಿತಿಯೇ ಬೇರೆ. ಆದ್ದರಿಂದ ವಿಷಯದ ಈ ನಿರ್ದಿಷ್ಟ ಅಂಶವನ್ನು ಮಾತ್ರ ಗಮನಿಸುತ್ತಿದ್ದೇವೆ. ಅವರು ನೀಡಿರುವ ಪತ್ರ ನಾವು ಪಾಲಿಸಲೇಬೇಕಾದ ನಿರ್ದೇಶನದ ರೂಪದಲ್ಲಿಲ್ಲ. ನಾವು ಪರಿಶೀಲಿಸುವುದಕ್ಕಾಗಿ ಅದು ಕೆಲವೊಂದು ಸೂಚನೆಗಳನ್ನು ನೀಡಿದೆ. ಪ್ರವೇಶಗಳು ಹಾಗೂ ನೇಮಕಾತಿಗೆ ಸಂಬಂಧಿಸಿದಂತೆ ಭಾರತ ಸರ್ಕಾರವು ಮೈಸೂರು ಸರ್ಕಾರಕ್ಕೆ ಪತ್ರ ಬರೆದಿರುವುದು ನಿಜ. ಇದರಲ್ಲಿ 16(1) ನೇ ಅನುಚ್ಛೇದದಲ್ಲಿರುವ ಮೂಲಭೂತ ಹಕ್ಕುಗಳ ವಿಷಯದಲ್ಲಿ ಯಾವುದೇ ವ್ಯತ್ಯಾಸ ಮಾಡಬಾರದು ಎಂಬ ಕಡೆಗೆ ಹಾಗೂ 16(4) ನೇ ಅನುಚ್ಛೇದದಲ್ಲಿರುವಂತೆ ಹಿಂದುಳಿದ ವರ್ಗಗಳಿಗೆ ಸೇವೆಗಳಲ್ಲಿ ಸಾಕಷ್ಟು ಪ್ರಾತಿನಿಧ್ಯ ದೊರಕಿಸುವುದಕ್ಕಾಗಿ ಅವಕಾಶಗಳನ್ನು ಒದಗಿಸುವ ಹಾಗೂ ಅವರ ಹಿತಾಸಕ್ತಿಯನ್ನು ಕಾಪಾಡುವ ಸಲುವಾಗಿ ಸಂಬಂಧಪಟ್ಟ ರಾಜ್ಯಗಳಿಗೆ ತಮ್ಮದೇ ಆದ ನಿಯಮಗಳನ್ನು ರೂಪಿಸುವ ಅಧಿಕಾರ

ಕೊಟ್ಟಿರುವ ಬಗೆಗೆ ಗಮನ ಸೆಳೆಯಲಾಗಿದೆ. ಆದ್ದರಿಂದ 16ನೇ ಅನುಚ್ಛೇದದ ಈ ಎರಡೂ ಉಪಚ್ಛೇದಗಳ ಬಗ್ಗೆ ಮೈಸೂರು ಸರ್ಕಾರದ ಗಮನ ಸೆಳೆಯಲಾಗಿದೆ. ರಾಷ್ಟ್ರಪತಿಯವರು ಹಿಂದುಳಿದ ವರ್ಗಗಳನ್ನು ಸ್ಪಷ್ಟವಾಗಿ ವ್ಯಾಖ್ಯಾನಿಸುವವರೆಗೂ, ನಾವು ಈ ಎಲ್ಲ ವರ್ಷಗಳಲ್ಲಿ ಒತ್ತಾಯಿಸುತ್ತ ಬಂದಂತಹ ಮೀಸಲಾತಿ ಮುಂತಾದುವನ್ನು ಪರಿಶೀಲಿಸಬಹುದು ಮತ್ತು ಈ ಸಂಬಂಧವಾಗಿ ನಾವು ಏನುಮಾಡುತ್ತಿದ್ದೇವೆ ಎಂಬುದನ್ನು ಭಾರತ ಸರ್ಕಾರಕ್ಕೆ ತಿಳಿಸಬೇಕು ಎಂದು ಸೂಚಿಸಲಾಗಿದೆ. ಈ ರೀತಿಯ ಒಂದು ಸೂಚನೆ ನಮಗೆ ಬಂದಿದೆ. ಇದು ನಿರ್ದೇಶನವಲ್ಲ. ಮೈಸೂರು ಸರ್ಕಾರ ಈ ಅಂಶದ ಬಗ್ಗೆ ಇಡಿಯಾಗಿ ಗಮನ ಹರಿಸಿದೆ. ಇದು ಮುಖ್ಯ ವಿಷಯ. ನಮ್ಮ ಮಟ್ಟಿಗೆ ಹೇಳುವುದಾದರೆ ಈ ಒಂದು ನಿರ್ದಿಷ್ಟ ಸಮಸ್ಯೆಯ ಎಲ್ಲ ಸಾಧಕಬಾಧಕಗಳನ್ನು ವಿವರವಾಗಿ ಪರಿಶೀಲಿಸುವವರೆಗೂ ನಾವು ಯಾವುದೇ ನಿರ್ಣಯವನ್ನು ಕೈಗೊಳ್ಳುವುದಿಲ್ಲ ಎಂದು ಸದನಕ್ಕೆ ಭರವಸೆ ನೀಡುತ್ತೇನೆ.

ನಾನು ಇದಕ್ಕೆ ಮೊದಲು ವಿವರಿಸುತ್ತಿದ್ದ ಅಂಶಕ್ಕೆ ಬರುತ್ತೇನೆ. ಮೈಸೂರು ಸರ್ಕಾರದೊಂದಿಗೆ ಸಮಾಲೋಚಿಸದೆ ಮೈಸೂರು ಸರ್ಕಾರದ ಪ್ರತಿನಿಧಿಯೊಂದಿಗೆ ವಿವಿಧ ವಿವರಗಳ ಬಗ್ಗೆ ಮತ್ತೊಮ್ಮೆ ಚರ್ಚಿಸದೆ, ಮತ್ತು ನಾವು ನಮ್ಮ ಆಕ್ಷೇಪಣೆಯಿಲ್ಲ ಎಂದು ಹೇಳದ ಹೊರತು ಈ ವಿಷಯಕ್ಕೆ ಸಂಬಂಧಿಸಿದಂತೆ ಯಾವುದೇ ಅಧಿಸೂಚನೆಯನ್ನಾಗಲಿ ಆದೇಶವನ್ನಾಗಲೀ ತಾನು ಹೊರಡಿಸುವುದಿಲ್ಲ ಎಂದು ಭಾರತ ಸರ್ಕಾರ ನಮಗೆ ಆಶ್ವಾಸನೆ ನೀಡಿದೆ. ಮತ್ತು ಇದನ್ನು ಒಂದು ಅಂತಿಮ ಕಾಯಿದೆಯಾಗಿ ರೂಪಿಸುವ ಏನನ್ನೂ ತಾನು ಮಾಡುವುದಿಲ್ಲ ಎಂದು ಭಾರತ ಸರ್ಕಾರ ತಿಳಿಸಿದೆ. ಇಂತಹ ಒಂದು ಆಶ್ವಾಸನೆ ಭಾರತ ಸರ್ಕಾರದಿಂದ ನಮಗೆ ದೊರೆತಿರುವುದರಿಂದ ಸದಸ್ಯರು ಇದರಲ್ಲಿ ಭರವಸೆ ಇಡಬಹುದು.

ಕಾನೂನು ಸಮಸ್ಯೆಯನ್ನು ಎತ್ತಲಾಗಿದೆ ಮತ್ತು ಭಾರತ ಸಂವಿಧಾನದ 312ನೇ ಅನುಚ್ಛೇದವನ್ನು ನಿರ್ದಿಷ್ಟವಾಗಿ ಉಲ್ಲೇಖ ಮಾಡಲಾಗಿದೆ. ಹೊಸ ಸಂವಿಧಾನವನ್ನು ಪ್ರಾರಂಭಿಸುವ ಮೊದಲೇ ಅಖಿಲ ಭಾರತ ಆಡಳಿತ ಸೇವೆಯನ್ನು ಮೈಸೂರಿಗೂ ಹಾಗೂ ಇತರ ಬಿ ಭಾಗದ ರಾಜ್ಯಗಳಿಗೂ ವಿಸ್ತರಿಸುವ ಪ್ರಸ್ತಾಪ ಮಾಡಲಾಗಿತ್ತು. ಬಿ ಭಾಗದ ರಾಜ್ಯಗಳಿಗೆ ಅನ್ವಯಿಸುವ 312 ನೇ ಅನುಚ್ಛೇದದಲ್ಲಿ ಒಂದು ಅವಕಾಶವನ್ನು ಕಲ್ಪಿಸುವ ದೃಷ್ಟಿಯಿಂದ 1950ರ ಜನವರಿ 26 ರೊಳಗಾಗಿಯೇ ವಿಲಿನೀಕರಣವನ್ನು ಮಾಡಿ ಬಿಡಬೇಕು ಎಂಬುದು ಭಾರತ ಸರ್ಕಾರದ ಆಲೋಚನೆಯಾಗಿತ್ತು. ಅವರ ಮೂಲ ಉದ್ದೇಶ ಅದೇ ಆಗಿತ್ತು. ಆದರೆ ಸಂಬಂಧಪಟ್ಟ ಬಿ ಭಾಗದ ರಾಜ್ಯಗಳಲ್ಲಿ ಜನವರಿ 26 ರೊಳಗಾಗಿ ವಿಲಿನೀಕರಣ ಪೂರ್ಣಗೊಳ್ಳಲಿಲ್ಲ ಎಂಬುದು ಸದನಕ್ಕೆ ತಿಳಿದೇ ಇದೆ. ಅದು ಹಾಗೇ ಉಳಿದು ಬಿಟ್ಟಿತ್ತು. ಈಗ ನಾವು ಆ ಸಮಸ್ಯೆಯ ಬಗ್ಗೆ ಚರ್ಚಿಸುತ್ತಿದ್ದೇವೆ. ಆದ್ದರಿಂದ ಈ ಅಂಶವನ್ನು ಈಗ ಪರಿಶೀಲಿಸಬೇಕು.ಸನ್ಮಾನ್ಯ ಶ್ರೀ ಎ. ಭಿಮಪ್ಪನಾಯಕರವರು 312ನೇ ಅನುಚ್ಛೇದವನ್ನು ಉಲ್ಲೇಖಿಸಿ ಅನುಚ್ಛೇದದ ಪ್ರಕಾರ ರಾಜ್ಯ ಪರಿಷತ್ತುಗಳಲ್ಲಿ 2-3 ನೇ ಬಹುಮತದ ಸಮ್ಮತಿ ಪಡೆಯದ ಹೊರತು ಯಾವುದೆ ಆಲ್ ಇಂಡಿಯಾ ಸರ್ವಿಸ್‌ನ್ನು ಸೃಷ್ಟಿಸುವಂತಿಲ್ಲ ಎಂದು ತಿಳಿಸಿದ್ದಾರೆ. ಕಾನೂನಿನ ಈ ವಿಷಯವನ್ನು ಪರಿಶೀಲಿಸಬೇಕಾಗಿದೆ. ಇದರ ಬಗ್ಗೆ ನಾವು ಯಾವ ನಿಲುವು ತಳೆಯಬಹುದು ಎಂಬುದನ್ನು ನಾನು ಈಗಲೇ ಹೇಳುವುದು ಸಾಧ್ಯವಾಗುತ್ತಿಲ್ಲ. ಮೊದಲ ನೋಟಕ್ಕೆ ಹೇಳುವುದಾದರೆ ಭಾರತ

ಸರ್ಕಾರವು ಮಂಡಿಸಿರುವ ಈ ಯೋಜನೆಯನ್ನು ನಾವು ಒಪ್ಪಿಕೊಳ್ಳಲೇಬೇಕು. ಎಂಬಂತಹ ಕಾನೂನಾತ್ಮಕ ಒತ್ತಡವೇನೂ ಸರ್ಕಾರದ ಈ ಪ್ರಸ್ತಾಪದಲ್ಲಿಲ್ಲ. ಈ ಅಂಶದ ಬಗ್ಗೆ ಗಮನಿಸಬೇಕಾಗಿದೆ. ಇತರ ಎಲ್ಲ ಅಂಶಗಳನ್ನೂ ಗಮನದಲ್ಲಿಟ್ಟುಕೊಂಡು ನಾವು ಯಾವ ನಿಲುವು ತಳೆಯಬಹುದು ಮತ್ತು ನಾವು ಎಲ್ಲಿಯವರೆಗೆ ಇದನ್ನು ಬೆಂಬತ್ತಬಹುದು ಎಂಬ ಬಗ್ಗೆ ಸೂಕ್ಷ್ಮವಾಗಿ ಪರಿಶೀಲಿಸುವುದು ಅಗತ್ಯವಾಗಿದೆ. ಇದರ ಕಾನೂನಾತ್ಮಕ ಸ್ಥಿತಿಯ ಬಗ್ಗೆ ಖಂಡಿತವಾಗಿ ಈಗಲೇ ಹೇಳುವುದು ನನಗೆ ಸಾಧ್ಯವಿಲ್ಲ. ಈ ಬಗ್ಗೆ ಪರಿಶೀಲಿಸಲಾಗುವುದು ಮತ್ತು ಒಂದು ವೇಳೆ ಸಂವಿಧಾನವಿರುದ್ಧ ಹೋಗುವಂತಾದರೆ ಭಾರತ ಸರ್ಕಾರವೂ ಅದರ ಕಡೆ ಗಮನ ಹರಿಸಬೇಕಾಗುತ್ತದೆ ಮತ್ತು ಸಂವಿಧಾನದ ಅಗತ್ಯತೆಗಳಿಗೆ ಅನುಗುಣವಾಗಿರುವ ರೀತಿಯಲ್ಲಿ ಅದು ವ್ಯವಹರಿಸಬೇಕಾಗುತ್ತದೆ. ಆದ್ದರಿಂದ ಈ ವಿಷಯದ ಬಗ್ಗೆ ಭಾರತ ಸರ್ಕಾರದೊಂದಿಗೇ ಮಾತು ಕತೆ ನಡೆಸುವುದು ಅಗತ್ಯ. ಆದ್ದರಿಂದ ಇದು ನಾವೊಬ್ಬರೇ ಅಲ್ಲ ಭಾರತ ಸರ್ಕಾರವೂ ಕೂಡ ಬಗೆಹರಿಸಿಕೊಳ್ಳಬೇಕಾದ ಪ್ರಶ್ನೆಯಾಗಿದೆ. ಈ ವಿಷಯವನ್ನು ಕೂಡಲೇ ಕೈಗೆತ್ತಿಕೊಳ್ಳಲಾಗುವುದು. ಮತ್ತು ಕಾನೂನು ದೃಷ್ಟಿಯಿಂದ ನಾವು ಸರಿಯಾಗಿ ಯಾವ ಸ್ಥಿತಿಯಲ್ಲಿದ್ದೇವೆ ಎಂಬುದನ್ನು ಕಂಡುಕೊಳ್ಳುತ್ತೇವೆ ಎಂದು ಸದನಕ್ಕೆ ಭರವಸೆ ನೀಡುತ್ತೇನೆ. ಮೊದಲೇ ಸೂಚಿಸಿದಂತೆ ಈ ಯೋಜನೆಯು ಹೊಸ ಸಂವಿಧಾನ ಜಾರಿಗೆ ಬರುವ ಮುನ್ನ ಅಂದರೆ ಒಂದೊವರೆ ವರ್ಷದಷ್ಟು ಮೊದಲೇ ಜಾರಿಗೆ ಬರಬೇಕಾಗಿತ್ತು. ಆಯ್ಕೆ ಮಂಡಳಿಯು ಒಂದೂವರೆ ವರ್ಷದಷ್ಟು ಹಿಂದೆಯೇ ಮೈಸೂರಿಗೆ ಬರಬೇಕಾಗಿತ್ತು ಮತ್ತು ಈ ಹೊತ್ತಿಗೆ ಎಲ್ಲ ಹೊಂದಾಣಿಕೆಗಳೂ ಮುಗಿದಿರುತ್ತಿದ್ದವು. ಆದರೆ ಸದಸ್ಯರು ನಾವು ಹಾಗೂ ರಾಜ್ಯ ಪ್ರತಿನಿಧಿಯು ಪ್ರಸ್ತಾಪಿಸಿದಂತಹ ವಿವಿಧ ತೊಂದರೆಗಳ ಕಾರಣದಿಂದ ಇದನ್ನು ಅಂತಿಮವಾಗಿ ತೀರ್ಮಾನಿಸುವುದು ಸಾಧ್ಯವಾಗಿಲ್ಲ. ಈ ಎಲ್ಲ ವಿಷಯವೂ ಇನ್ನೂ ಹಾಗೇ ಬಾಕಿ ಉಳಿದಿದೆ. ಒಂದು ವೇಳೆ ಮಧ್ಯದಲ್ಲಿಯೇ ಇನ್ನೇನಾದರೂ ತೊಡಕುಗಳು ಬರದಿದ್ದರೆ ಅಕ್ಟೋಬರ್ ತಿಂಗಳ ಸುಮಾರಿನಲ್ಲಿ ನೇಮಕಾತಿ ಮಂಡಳಿಯು ತನ್ನ ಮಾಮೂಲು ವೇಳಾ ಪಟ್ಟಿಯ ಪ್ರಕಾರ ಇಲ್ಲಿಗೆ ಬರುವ ನಿರೀಕ್ಷೆ ಇದೆ.

ಶ್ರೀ ಭೀಮಪ್ಪ ನಾಯಕರವರ ಅಭಿಪ್ರಾಯದಂತೆ ಸದನದ ಪೂರ್ವಾನುಮತಿ ಪಡೆಯದೆ ಯಾವುದೇ ಕೆಲಸ ಮಾಡಬಾರದು ಮತ್ತು ಸಾಧಕ ಬಾಧಕಗಳನ್ನು ವಿವರಿಸಿ ಸದನದ ಅನುಮೋದನೆ ಪಡೆಯದ ಹೊರತು ನಾವು ಮುಂದುವರೆಯಕೂಡದು.

ಶ್ರೀ ಎಲ್. ಸಿದ್ದಪ್ಪ:- ನೀವು ಮುಂದುವರೆಯಕೂಡದು ಎಂದಲ್ಲ. ಕೆಲಸ ಆದಮೇಲೆ, ಒಂದು ವೇಳೆ ಅಂತಿಮ ತೀರ್ಮಾನಕ್ಕೆ ಬಂದಾಗ ಅದನ್ನು ಸದನದ ಮುಂದಿಟ್ಟು ಅನುಮೋದನೆ ಪಡೆದುಕೊಳ್ಳಿ.

ಶ್ರೀ ಕೆ. ಚೆಂಗಲರಾಯರೆಡ್ಡಿ:- ಇದಕ್ಕೆ ಸಂಬಂಧಿಸಿದಂತೆ ನಾನು ಇಷ್ಟು ಮಾತ್ರ ಹೇಳಬಲ್ಲೆ. ಬಿ ಭಾಗದ ರಾಜ್ಯಗಳಿಗೆ ಸಂಬಂಧಿಸಿದಂತೆ ಸರ್ಕಾರವು ತತ್ವವನ್ನು ಒಪ್ಪಿಕೊಂಡಿದೆ ಎಂಬುದು ಸದನಕ್ಕೆ ಗೊತ್ತು. ನಾವು ಈ ಯೋಜನೆಯನ್ನು ಇಕ್ಕಳದಿಂದಲೂ ಮುಟ್ಟುವುದಿಲ್ಲ ಇಲ್ಲಿ ನಾವು ಪ್ರತ್ಯೇಕವಾಗೇ ಇರುತ್ತೇವೆ ಎಂಬ ನಿಲುವನ್ನು ತಾಳುವಂತಿಲ್ಲ.

ಶ್ರೀ ಎಲ್. ಸಿದ್ದಪ್ಪ:- ನಿಮಗೆ ಮುಜುಗರ ಉಂಟು ಮಾಡುವುದು ನಮಗೂ ಇಷ್ಟವಿಲ್ಲ. ಈ ಯೋಜನೆಯ ಸಾಧಕಬಾಧಕಗಳನ್ನು ವಿವರಿಸಿದರೆ ಸಾಕು.

**ಶ್ರೀ ಕೆ. ಚೆಂಗಲರಾಯರೆಡ್ಡಿ:-** ಇದು ಬರೀ ಮುಜುಗರ ಅಥವಾ ಸೂಕ್ಷ್ಮದ ಪ್ರಶ್ನೆಯಲ್ಲ. ನನ್ನ ಅಭಿಪ್ರಾಯದಲ್ಲಿ ಈ ಯೋಜನೆಯಿಂದ ಹೊರಗಿರುವುದು ಮೈಸೂರಿನ ಹಿತಾಸಕ್ತಿಯ ದೃಷ್ಟಿಯಿಂದ ಸರಿ ಅಲ್ಲವೇ ಅಲ್ಲ. ನಾವು ಇದಕ್ಕೆ ತಾತ್ವಿಕ ಒಪ್ಪಿಗೆ ನೀಡಿ ಬಿಟ್ಟಿದ್ದೇವೆ. ಆದ್ದರಿಂದ ಇದರಿಂದ ಹೊರಬರುವುದಕ್ಕಾಗುವುದಿಲ್ಲ ಎಂಬ ಅಸಹಾಯಕತೆ ಏನೂ ಇಲ್ಲ. ಇದು ಕೇವಲ ನಮ್ಮ ನಿಲುವಿನ ಪ್ರಶ್ನೆಯಲ್ಲ. ಈ ವಿಷಯವನ್ನು ನಾವು ಪುನರ್ಪರಿಶೀಲಿಸಿ ನಿರ್ಣಯ ಕೈಗೊಳ್ಳುವಂತಹ ಅವಕಾಶ ಸಿಕ್ಕರೆ ಆಗಲೂ ಕೂಡ ನಾನು ಈಗ ನಾವು ತಳೆದಿರುವ ನಿಲುವನ್ನೇ ಅನುಮೋದಿಸುತ್ತೇನೆ. ಎಲ್ಲ ಅಂಶಗಳನ್ನೂ ಪರಿಶೀಲಿಸಿದ ನಂತರ, ಈ ಯೋಜನೆಯಿಂದ ನಾವು ಸಂಪೂರ್ಣವಾಗಿ ಹೊರತಾಗಿ ಉಳಿಯುವುದು ಅಪೇಕ್ಷಣೀಯವಲ್ಲ ಎಂಬ ನಿರ್ಣಯವನ್ನೇ ನಾನು ಕೈಗೊಳ್ಳಬಯಸುತ್ತೇನೆ.

**ಶ್ರೀ ಎ. ಭೀಮಪ್ಪ ನಾಯಕ:-** ಇಲ್ಲಿ ಇಷ್ಟೆಲ್ಲಾ ಅಭಿಪ್ರಾಯಗಳು ವ್ಯಕ್ತವಾದ ನಂತರವೂ?

**ಶ್ರೀ ಕೆ. ಚೆಂಗಲರಾಯರೆಡ್ಡಿ:-** ಈಗ ವ್ಯಕ್ತವಾದಂತಹ ಅಭಿಪ್ರಾಯವನ್ನು ಸರ್ಕಾರ ಒಪ್ಪುವುದಿಲ್ಲ ಎಂದೇ ಹೇಳಬೇಕಾಗುತ್ತದೆ. ಈ ಚರ್ಚೆಯಲ್ಲಿ ಭಾಗವಹಿಸಿದ ಎಲ್ಲ ಸದಸ್ಯರು ಅಷ್ಟೇ ಬಲಯುತವಾಗಿ, ಸಮರ್ಥವಾಗಿ ವ್ಯಕ್ತಪಡಿಸಿದ ಅಭಿಪ್ರಾಯವನ್ನು ಸರ್ಕಾರ ಗಮನಿಸಿದೆ. ತಮ್ಮ ಭವಿಷ್ಯ ಹಾಗೂ ಯೋಜನೆಯ ವಿವಿಧ ವಿವರಗಳಿಗೆ ಸಂಬಂಧಿಸಿದಂತೆ ಮೈಸೂರು ಸಿವಿಲ್ ಸರ್ವಿಸ್ ಅಸೋಸಿಯೇಶನ್ನಿನವರು ಸಲ್ಲಿಸಿದ ಇತ್ತೀಚಿನ ಮನವಿಗಳೂ ಸಹ ಸರ್ಕಾರದ ಗಮನದಲ್ಲಿವೆ.

Interpellation ಸಮಯದಲ್ಲಿ, ಮೈಸೂರು ಸಿವಿಲ್ ಸರ್ವಿಸನ್ನು ಕೇಳುವ ಅಗತ್ಯವಿದೆ ಎಂದು ಮೈಸೂರು ಸರ್ಕಾರ ಭಾವಿಸಿಲ್ಲ ಎಂದು ನಾನು ಹೇಳಿದೆ. ಮೊದಲ ಹಂತದಲ್ಲಿಯೇ ನಾನು ಈ ಸಮಾಲೋಚನೆಯ ಅಗತ್ಯವಿಲ್ಲವೆಂದು ಭಾವಿಸಿದ್ದೆ. ಇದರಲ್ಲಿ ಸಂವಿಧಾನ ಬಾಹಿರವಾದುದಾಗಲೀ, ತಪ್ಪಾಗಲೀ ಏನೂ ಇಲ್ಲ. ಯೋಜನೆಯನ್ನು ಅಂತಿಮವಾಗಿ ತೀರ್ಮಾನಿಸುವ ಮೊದಲು ಮೈಸೂರು ಸಿವಿಲ್ ಸರ್ವಿಸಸ್ ಅಭಿಪ್ರಾಯವನ್ನು ಖಚಿತಪಡಿಸಿಕೊಳ್ಳಬಹುದು ಎಂದು ಒಂದು ಹಂತದಲ್ಲಿ ಸ್ವತಃ ಭಾರತ ಸರ್ಕಾರವೇ ಸೂಚಿಸಿದ್ದಿತು ಮತ್ತು ನಾವೂ ಕೂಡ ಒಂದು ಹಂತದಲ್ಲಿ ಹಾಗೆ ಭಾವಿಸಿದ್ದೆವು. ವಿವರಗಳಿಗೆ ಸಂಬಂಧಿಸಿದಂತೆ ನಾವು ಮೈಸೂರು ಸಿವಿಲ್ ಸರ್ವಿಸ್ ಅಸೋಸಿಯೇಷನ್ ಹಾಗೂ ಅಧಿಕಾರಿಗಳೊಂದಿಗೆ ಸಮಾಲೋಚಿಸಲು ಬಯಸಿದ್ದೆವು. ಈ ವಿಷಯದಲ್ಲಿ ನಾವು ಮುಂದುವರೆಯುವ ಮೊದಲೇ ಸಿವಿಲ್ ಸರ್ವಿಸ್ ಅಸೋಸಿಯೇಶನ್ ತಾನೇ ಮುಂದೆ ಬಂದು ತನ್ನ ಅಭಿಪ್ರಾಯಗಳನ್ನು ತಿಳಿಸಿದೆ. ಇದರಲ್ಲಿ ತಪ್ಪೇನೂ ಇಲ್ಲ. ಯೋಜನೆಯ ಅಂತಿಮ ತೀರ್ಮಾನಕ್ಕೆ ಮೊದಲೇ ಅವರ ಅಭಿಪ್ರಾಯಗಳು ಸಿಕ್ಕಿದ್ದು ನನಗೆ ಸಂತೋಷ. ನಾವು ಈಗಾಗಲೇ ಒಪ್ಪಿಕೊಂಡಿರುವ ತತ್ವದಿಂದ ಹೊರ ಬರುವುದು ಈಗ ಸಾಧ್ಯವಿಲ್ಲ. ಆದರೆ ನಾವು ಅದನ್ನು ಒಪ್ಪಿಕೊಂಡಿರುವುದು ಒಳ್ಳೆಯದೇ ಆಗಿದೆ. ಈ ಯೋಜನೆಯ ಇತರ ವಿವರಗಳ ಅಂತಿಮ ತೀರ್ಮಾನ ಇನ್ನೂ ಆಗಿಲ್ಲ. ಅಂತಿಮ ತೀರ್ಮಾನವಾಗುವ ಮುನ್ನ ಈ ವಿಷಯವನ್ನು ಪರಿಶೀಲಿಸಲು ಸದನಕ್ಕೆ ಅವಕಾಶವಿದೆ. ಈ ವಿಷಯ ಕುರಿತಂತೆ ಸದನದ ಅಭಿಪ್ರಾಯವೇನಿದೆ ಎಂಬುದನ್ನು ಭಾರತ ಸರ್ಕಾರದ ಗಮನಕ್ಕೆ

ತರೋಣ ಮತ್ತು ಈ ಬಗ್ಗೆ ಸಾರ್ವಜನಿಕರ ಹಾಗೂ ಮಾಧ್ಯಮಗಳ ಅಭಿಪ್ರಾಯವೇನಿದೆ ಎಂಬುದನ್ನೂ ತಿಳಿಸೋಣ. ಈ ವಿಷಯ ಸಾಧ್ಯವಾದಷ್ಟು ನಮಗೆ ತೃಪ್ತಿಕರವಾಗಿ ಪರಿಣಮಿಸುವಂತೆ ಮಾಡಲು ಸಕಲ ಪ್ರಯತ್ನಗಳನ್ನೂ ಮಾಡೋಣ. ಈ ಭರವಸೆಯಿಂದ ಸನ್ಮಾನ್ಯ ಸದಸ್ಯರಿಗೆ ಸಮಾಧಾನ ಸಿಕ್ಕಿದೆ ಎಂದು ಭಾವಿಸುತ್ತೇನೆ. ಈ ಭರವಸೆಯ ನಂತರ ಸದಸ್ಯರು ಸದರಿ ನಿರ್ಣಯವನ್ನು ಹಿಂತೆಗೆದುಕೊಳ್ಳಬಹುದು.

ಕೊನೆಯದಾಗಿ ಒಂದೆರಡು ಅಂಶಗಳನ್ನು ತಿಳಿಸಲು ಇಚ್ಛಿಸುತ್ತೇನೆ. ಆ ಮೂರು ವರ್ಷಗಳಲ್ಲಿ ಮೈಸೂರು ಸರ್ಕಾರದಂತೆಯೇ ಇತರ ರಾಜ್ಯಗಳ ಸರ್ಕಾರಗಳು, ಮುಖ್ಯವಾಗಿ ಭಾಗ ಬಿ ರಾಜ್ಯಗಳು ಅನೇಕ ಜಟಿಲ ಸಮಸ್ಯೆಗಳನ್ನು ಎದುರಿಸಬೇಕಾಯಿತು. ಹಿಂದಿನ ದಶಕಗಳಲ್ಲಿ ಯಾವ ಆಡಳಿತಕ್ಕೂ ಕೂಡ ಇಂತಹ ವ್ಯಾಪಕವಾದ, ಜಟಿಲವಾದ ಹಾಗೂ ಮೂಲಭೂತವಾದ ಸಮಸ್ಯೆಗಳು ಎದುರಾಗಿರಲಿಲ್ಲ ಈಗಂತೂ ಪ್ರತಿ ತಿಂಗಳೂ ಪ್ರತಿ ದಿನವೂ ಹೊಸ ಸಮಸ್ಯೆ ಇದ್ದೇ ಇದೆ. ಅತ್ಯಂತ ನಿರ್ಣಾಯಕ ಸ್ಥಿತಿಯಲ್ಲಿ ನಮ್ಮ ಸರ್ಕಾರ ಜವಾಬ್ದಾರಿಯನ್ನು ಹೊತ್ತುಕೊಳ್ಳಬೇಕಿದೆ. ಇದು ದಿನನಿತ್ಯದ ಆಡಳಿತಕ್ಕೆ ಸಂಬಂಧಿಸಿದ್ದಲ್ಲ. ಹೊಸದಾಗಿ ಉದ್ಭವಿಸಿರುವ ಪ್ರಜಾಪ್ರಭುತ್ವದ ಒಳತೋಟಿಗಳನ್ನು ಲಕ್ಷಿಸದೆ ನಡೆಸುವಂತಹ ಆಡಳಿತಕ್ಕೆ ಸಂಬಂಧಿಸಿದ್ದೂ ಅಲ್ಲ. ಕಾಲಾನುಕಾಲಕ್ಕೆ ಹುಟ್ಟಿಕೊಳ್ಳುತ್ತಿರುವ ರಾಜಕೀಯ, ಸಂವಿಧಾನಿಕ ಆರ್ಥಿಕ ಹಾಗೂ ಆಡಳಿತಾತ್ಮಕ ಸಮಸ್ಯೆಗಳನ್ನು ಮೈಸೂರು ಸರ್ಕಾರ ಈಗ ಎದುರಿಸಬೇಕಾಗಿದೆ. ಆದ್ದರಿಂದ ಈ ಸರ್ಕಾರದೊಂದಿಗೆ ಸಹಕರಿಸಬೇಕು ಎಂದು ಸನ್ಮಾನ್ಯ ಸದಸ್ಯರಲ್ಲಿ ನನ್ನ ಕೋರಿಕೆ. ಈ ವಿಷಯ ಕುರಿತಂತೆ ಸಾರ್ವಜನಿಕರಲ್ಲಿ ಅರಿವು ಮೂಡಿಸಬೇಕು ಎಂದೂ ಮಾನ್ಯ ಸದಸ್ಯರಲ್ಲಿ ನನ್ನ ಕೋರಿಕೆ. ನಮ್ಮ ಸರ್ಕಾರದ ದೃಷ್ಟಿಯಿಂದ ಈ ವಿಷಯದಲ್ಲಿ ನಾನು ಉತ್ಸುಕನಾಗಿಲ್ಲದಿದ್ದರೂ ದೇಶದಲ್ಲಿ ಪ್ರಜಾಪ್ರಭುತ್ವದ ಪರಂಪರೆ ಸ್ಥಾಪಿತವಾಗಬೇಕು ಎಂಬ ದೃಷ್ಟಿಯಿಂದ ಉತ್ಸುಕನಾಗಿದ್ದೇನೆ. ಈ ದಿಸೆಯಲ್ಲಿ ವಿವಿಧ ನಿರ್ಣಯಗಳನ್ನು ಕೈಗೊಳ್ಳಬೇಕಿದೆ. ಕೆಲವೊಂದು ಸಂದರ್ಭಗಳಲ್ಲಿ ಕೆಲವೊಂದು ವಿಧಾನಗಳನ್ನು ಅನುಸರಿಸುವಷ್ಟು ಕಾಲಾವಕಾಶ ಇರಲಿಲ್ಲ. ನಿರ್ಣಯ ಕೈಗೊಳ್ಳಲೇಬೇಕಾಗಾಗುತ್ತಿತ್ತು. ಸರ್ಕಾರ ಧೈರ್ಯ ಮಾಡಿ ನಿರ್ಣಯಗಳನ್ನು ಕೈಗೊಂಡ ನಂತರ ಶಾಸನ ಸಭೆಯನ್ನು ಎದುರಿಸಬೇಕಾಗುತ್ತಿತ್ತು. ಇಲ್ಲಿ ಶಾಸಕಾಂಗವನ್ನಾಗಲಿ, ಜನತೆಯನ್ನಾಗಲೀ ಬಿಟ್ಟು ಕೆಲಸ ಮಾಡುವ ಉದ್ದೇಶ ಸರ್ಕಾರದ್ದಾಗಿರುತ್ತಿರಲಿಲ್ಲ. ಆದರೆ ಒಂದು ಪ್ರಜಾಪ್ರಭುತ್ವದ ಸರ್ಕಾರವಾಗಿ ಒಂದು ಜವಾಬ್ದಾರಿಯುತ ಸರ್ಕಾರವಾಗಿ ನಿರ್ಣಯವನ್ನು ಕೈಗೊಳ್ಳುವ ಧೈರ್ಯ ನಮಗಿತ್ತು. ಅನಂತರ ಶಾಸಕಾಂಗ ಹಾಗೂ ಸಾರ್ವಜನಿಕರ ಅಭಿಪ್ರಾಯದ ಎದುರು ನಿಂತು ನಾವು ನಿರ್ಣಯ ಕೈಗೊಂಡಿದ್ದೇವೆ ಇದನ್ನು ಒಪ್ಪುವ ಅಥವಾ ತಿರಸ್ಕರಿಸುವ ಅಧಿಕಾರ ನಿಮಗೇ ಸೇರಿದ್ದು ಎನ್ನುತ್ತಿದ್ದೆವು. ಅದು ತಿರಸ್ಕೃತವಾಗಿದ್ದರೆ ನಾವು ಯಾರೂ ಒಂದು ನಿಮಿಷಕೂಡ ಈ ಅಧಿಕಾರ ಸ್ಥಾನದಲ್ಲಿ ಇರುವುದಕ್ಕಾಗುತ್ತಿರಲಿಲ್ಲ. ಈ ಮಾತಿನಲ್ಲಿ ಯಾವುದೇ ಉದ್ಧಟತನವಿಲ್ಲ ಎಲ್ಲ ಪ್ರಜಾಪ್ರಭುತ್ವದ ರಾಷ್ಟ್ರಗಳಲ್ಲಿಯೂ ಈ ರೀತಿ ಆಗುತ್ತದೆ. ಎಲ್ಲ ಪ್ರಜಾಪ್ರಭುತ್ವ ರಾಷ್ಟ್ರಗಳಲ್ಲಿಯೂ ಕೆಲವು ಮುಖ್ಯ ವಿಷಯಗಳ ಬಗ್ಗೆ ಶಾಸಕಾಂಗದ ಅನುಮೋದನೆ ಪಡೆದುಕೊಳ್ಳುವ ಮೊದಲೇ ನಿರ್ಣಯ ಕೈಗೊಳ್ಳಬೇಕಾಗುತ್ತದೆ. ಅನಂತರ ಅದನ್ನೇ ಸ್ಥಿರೀಕರಿಸುವುದೋ ಅಥವಾ ತಿರಸ್ಕರಿಸುವುದೋ ಎಂದು ಶಾಸಕಾಂಗದ ಮುಂದಿಡಲಾಗುತ್ತದೆ. ಇದೇನೂ ಹೊಸ ವಿಧಾನವಲ್ಲ ಅಥವಾ

ಪ್ರಜಾಪ್ರಭುತ್ವದ ತತ್ವಗಳನ್ನೂ, ಪರಂಪರೆಯನ್ನೂ ಉಲ್ಲಂಘಿಸುವಂತಹ ವಿಧಾನವೂ ಅಲ್ಲ. ಸಂಸ್ಥಾಪಿತವಾದಂತಹ ಪ್ರಜಾಪ್ರಭುತ್ವದ ಪರಂಪರೆಗಳನ್ನು ಈ ವಿಧಾನ ಯಾವ ರೀತಿಯಲ್ಲೂ ಕೆಡಿಸುವುದಿಲ್ಲ.

ಅಪಮೌಲ್ಯನದಂತಹ ಬಹುಮುಖ್ಯ ವಿಷಯದ ಬಗ್ಗೆ ಭಾರತ ಸರ್ಕಾರ ನಿರ್ಣಯ ತೆಗೆದುಕೊಂಡಿತು. ಇಡೀ ಭಾರತದ ಆರ್ಥಿಕ ಸ್ಥಿತಿ ಇದರ ಮೇಲೆ ಅವಲಂಬಿಸಿತ್ತು. ಈ ಬಗ್ಗೆ ನಿರ್ಣಯ ಕೈಗೊಳ್ಳಲೇಬೇಕಿತ್ತು. ನಿರ್ಣಯ ಕೈಗೊಂಡ ನಂತರ ಶಾಸಕಾಂಗದ ಮುಂದೆ ಬಂದು 'ನಾವು ನಿರ್ಣಯ ಕೈಗೊಂಡಿದ್ದೇವೆ, ಇದಕ್ಕೆ ತಮ್ಮ ಅನುಮೋದನೆ ಬೇಕು ಎಂದು ಕೇಳಿದರು. ಇನ್ನೊಂದು ನಿದರ್ಶನ ನೋಡಿ, ಕೊರಿಯಾದ ಘಟನೆ ಕುರಿತಂತೆ ಭಾರತ ಸರ್ಕಾರದ ನಿಲುವನ್ನು ಗಮನಿಸಿ. ಮಾನ್ಯ ಪ್ರಧಾನಮಂತ್ರಿಗಳು.........

ಶ್ರೀ ಎಲ್. ಸಿದ್ದಪ್ಪ:- ಒಂದು ಒಪ್ಪಂದವನ್ನು ಪೂರ್ಣಗೊಳಿಸುವ ಮೊದಲು, ಶಾಸಕಾಂಗವು ಕೋರಿಕೊಂಡ ಪಕ್ಷದಲ್ಲಿ ದಯವಿಟ್ಟು ನಮ್ಮನ್ನು ವಿಶ್ವಾಸಕ್ಕೆ ತೆಗೆದುಕೊಳ್ಳಿ.

ಶ್ರೀ ಕೆ. ಚೆಂಗಲರಾಯರೆಡ್ಡಿ:- ಶಾಸಕಾಂಗದ ಹಕ್ಕುಗಳನ್ನು ಅಲಕ್ಷಿಸುವುದು ಸರ್ಕಾರದ ಅಪೇಕ್ಷೆಯಲ್ಲ. ಶಾಸಕಾಂಗದೊಂದಿಗೆ ಸಮಾಲೋಚಿಸದೆ ಅಂತಿಮ ನಿರ್ಣಯ ಕೈಗೊಳ್ಳುವ ಉದ್ದೇಶವೂ ಸರ್ಕಾರಕ್ಕಿಲ್ಲ. ಆದರೆ ಕೆಲವೊಂದು ಸಂದರ್ಭಗಳಲ್ಲಿ ನಿರ್ಣಯ ಕೈಗೊಳ್ಳುವ ಜವಾಬ್ದಾರಿಯನ್ನು ಸರ್ಕಾರ ವಹಿಸಿಕೊಳ್ಳಬೇಕಾಗುತ್ತದೆ. ಅನಂತರ ಶಾಸಕಾಂಗದ ಮುಂದೆ ಬರುತ್ತದೆ. ಇದೇ ವಿಧಾನ ಅನುಸರಿಸಬೇಕು ಎಂದು ನಾನು ಹೇಳುತ್ತಿಲ್ಲ. ಆದರೆ ಕೆಲವು ಸಲ ಹಾಗೆ ಮಾಡಬೇಕಾಗುತ್ತೆ. ಕೆಲಸ ಮುಂದುವರೆಯಬೇಕಾದರೆ ಇದು ಅಗತ್ಯ. ಇದಕ್ಕೆ ಬ್ರಿಟನ್ನಿನ ಹಾಗೂ ಅಮೆರಿಕಾ ಸಂಯುಕ್ತ ಸಂಸ್ಥಾನದ ಸಂವಿಧಾನಗಳಲ್ಲಿಯೂ ಇತರ ದೇಶಗಳಲ್ಲಿಯೂ ನೂರಾರು ನಿದರ್ಶನಗಳಿವೆ. ನಿರ್ಣಯ ಕೈಗೊಂಡ ನಂತರ ಅನುಮೋದನೆ ಅಥವಾ ತಿರಸ್ಕರಣೆಗಾಗಿ ಶಾಸಕಾಂಗದ ಮುಂದೆ ಬಂದಿರುವುದಕ್ಕೆ ಅನೇಕ ನಿದರ್ಶನಗಳಿವೆ. ಪ್ರಸ್ತುತ ಸಂಧರ್ಭದಲ್ಲಿಯೂ ತಾತ್ವಿಕವಾಗಿ ನಾವು ಒಪ್ಪಿಗೆ ನೀಡಿದ್ದೇವೆ. ಈಗಾಗಲೇ ನಾನು ಹೇಳಿದಂತೆ ವಿವರಗಳನ್ನು ಕುರಿತಂತೆ ಅಂತಿಮವಾಗಿ ಯಾವುದೂ ಇತ್ಯರ್ಥವಾಗಿಲ್ಲ. ಇನ್ನೊಂದು ಅಂಶವನ್ನು ನಾನು ಪ್ರಸ್ತಾಪಿಸಲು ಬಯಸುತ್ತೇನೆ. ಇದು ಕೇಂದ್ರ ಮತ್ತು ರಾಜ್ಯಗಳ ಸಂಬಂಧ ಕುರಿತ ಅಂಶ. ನಾವು ಅಂದರೆ ಮೈಸೂರು ಸರ್ಕಾರ ಈ ಎಲ್ಲ ವರ್ಷಗಳಲ್ಲೂ ಯಾವುದೋ ಒಂದು ವ್ಯವಸ್ಥೆಯ ಅನುಸಾರ ನಡೆದುಕೊಂಡು ಬಂದಿದ್ದೇವೆ. ಈ ಸಮಸ್ಯೆಗಳನ್ನು ಕುರಿತಂತೆ ನಮ್ಮ ನಿಲುವು ಸ್ಪಷ್ಟವಾಗಿದೆ, ಯಾವುದೇ ರೀತಿಯ ಸಂದೇಹ ಇಲ್ಲಿಲ್ಲ. ಮುಖ್ಯ ತತ್ವ ಅಂದರೆ ಇಡಿಯಾಗಿ ಭಾರತದ ಹಿತಾಸಕ್ತಿಯನ್ನು ಕಾಪಾಡಿಕೊಳ್ಳುವುದು ಎಂಬ ಬಗ್ಗೆ ನಾವು ನಿರ್ಣಯ ಕೈಗೊಂಡಿದ್ದೇವೆ. ನಾವು ನಮ್ಮ ಅಧಿಕಾರಗಳನ್ನು ಬಿಟ್ಟುಕೊಡುತ್ತಿದ್ದೇವೆ ಎಂದು ಒಂದು ಹಂತದಲ್ಲಿ ಅನ್ನಿಸಿದರೂ ನಾವು ತಿಳಿದೇ ಆ ಕೆಲಸ ಮಾಡಿದ್ದೇವೆ. ಈಗ ಒಂದು ರೀತಿಯ ಟೀಕೆ ಶುರುವಾಗಿದ್ದು ಅದು ದಿನೇದಿನೇ ಹೆಚ್ಚು ದನಿ ಪಡೆಯುತ್ತಾ ಸಾಗಿದೆ.

ಶ್ರೀ ಎಚ್.ಬಿ. ಗುಂಡಪ್ಪಗೌಡ:- ಸ್ಪಷ್ಟವಾಗಿ ಕೇಳುವಂತಾಗಿದೆ.

ಶ್ರೀ ಕೆ. ಚೆಂಗಲರಾಯರೆಡ್ಡಿ:-ಈ ರೀತಿಯ ನಿಲುವಿನಿಂದ ಮೈಸೂರು ರಾಜ್ಯಕ್ಕೆ ಬಹಳ ಹಾನಿಯಾಗಿದೆ, ಮೈಸೂರು ಹೆಸರೇ ಇಲ್ಲದಂತಾಗಿದೆ ಎಂಬ ನಿಲುವು ಸರಿಯಲ್ಲ. ಈ ದಿನ ಭಾರತದ ಉಳಿದ ರಾಜ್ಯಗಳಿಗಿಂತ ಮೈಸೂರಿನ ಸ್ಥಿತಿ ಕಳಪೆಯಾಗೇನೂ ಇಲ್ಲ. ರಾಜಕೀಯ ನೆಲೆಯಲ್ಲಾಗಲೀ,

ಸಂವಿಧಾನಾತ್ಮಕ ಅಥವಾ ಆಡಳಿತಾತ್ಮಕ ನೆಲೆಯಲ್ಲಾಗಲೀ ಮೈಸೂರಿನ ಸ್ಥಾನಮಾನ ಯಾವುದೇ ಬಿ ಭಾಗ ರಾಜ್ಯಗಳಿಗೆ ಸಮಾನವಾಗಿದೆ ಅಷ್ಟೇ ಅಲ್ಲ ಇಡೀ ಭಾರತದ ಇತರೆಲ್ಲ ರಾಜ್ಯಗಳಿಗೂ ಸರಿಸಮಾನವಾಗಿದೆ. ನಾವೆಲ್ಲ ಈಗ ಒಟ್ಟಿಗೆ ಈಜುತ್ತಿದ್ದೇವೆ ಅಥವಾ ಒಟ್ಟಿಗೆ ಮುಳುಗುತ್ತಿದ್ದೇವೆ. ಇದು ಕೇಂದ್ರ ಮತ್ತು ರಾಜ್ಯಗಳ ನಡುವಿನ ವಿವಾದವಾಗುವುದು ಬೇಡ. ಈ ವಿವಾದವನ್ನು ಯಾವುದೇ ಅಪಾಯದ ಹೆದರಿಕೆಯಿಲ್ಲದೆ ಅಥವಾ ಉತ್ಸಾಹದಿಂದ ಪ್ರಸ್ತಾಪಿಸುವ ಹಂತವನ್ನು ನಾವಿನ್ನೂ ತಲುಪಿಲ್ಲ. ನಮ್ಮದೆ ದೇಶದಲ್ಲಿ ಆ ದೃಷ್ಟಿಯಿಂದ ಈ ವಿಷಯವನ್ನು ಪರಿಶೀಲಿಸುವಂತಹ ಹಂತವನ್ನು ನಾವಿನ್ನೂ ತಲುಪಿಲ್ಲ. ವಿಲೀನೀಕರಣ ಮುಂತಾದವುಗಳಿಂದಾಗಿ ನಮ್ಮ ಹಕ್ಕುಗಳನ್ನು ಬಿಟ್ಟುಕೊಟ್ಟಂತಾಗಿದೆ, ರಾಜ್ಯಗಳಿಗೆ ಒಂದು ರೀತಿಯ ಹಾನಿಯಾಗಿದೆ ಎಂದು ನಮಗೆ ಅನೇಕ ಬಾರಿ ಅನ್ನಿಸುವುದುಂಟು. ಆದರೆ ನಿಮ್ಮ ಕಾಲ ಕೆಲಗಿನ ನೆಲವನ್ನೇ ಅಗೆಯುವುದು ಇದಕ್ಕೆ ಪರಿಹಾರವಲ್ಲ. ವಾಸ್ತವಾಂಶ ಏನೆಂಬದುನ್ನು ಗ್ರಹಿಸಿಕೊಂಡು, ಇಲ್ಲಿ ಏನಾಗುತ್ತದೆ ಎಂಬುದನ್ನು ಭಾರತ ಸರ್ಕಾರದ ಗಮನಕ್ಕೆ ತಂದು ಸರಿಪಡಿಸಿಕೊಳ್ಳವುದು ಸರಿಯಾದ ದಾರಿ. ಒಂದು ವೇಳೆ ಕೇಂದ್ರದ ಒತ್ತಡ ಅಧಿಕವಾದರೆ- ದೇವರ ದಯೆಯಿಂದ ಹಾಗಾಗದಿರಲಿ - ಆದರೂ ಕೇಂದ್ರದಲ್ಲಿ ನಾಯಕತ್ವದ ಬದಲಾವಣೆಯಿಂದ ಪರಿಸ್ಥಿತಿ ಬಹಳ ಹದಗೆಟ್ಟರೆ ಅಥವಾ ಇನ್ನೇನಾದರೂ ಕಾರಣದಿಂದ ದೇಶದ ಇನ್ನಾವುದೇ ಭಾಗದಲ್ಲಿ ನಾವೆಲ್ಲ ಒಟ್ಟಾಗಿ ಇರುವುದು ಸಾಧ್ಯವೇ ಇಲ್ಲ ಎಂಬಂತಹ ಸ್ಥಿತಿ ಏರ್ಪಟ್ಟರೆ, ಅಂತಹ ಸಂದರ್ಭದಲ್ಲಿ ನಾನು ಈಗಾಗಲೇ ಹೇಳಿದಂತೆ ಜನಮತ ಇದ್ದೇ ಇದೆ; ನಾಯಕತ್ವ ಇದೆ, ಸಂವಿಧಾನದ ನೆಲೆಯಲ್ಲಿ ಹೋರಾಟ ನಡೆಸಬಹುದಾಗಿದೆ, ಮತಪೆಟ್ಟಿಗೆ ಇದೆ. ಈ ವ್ಯವಸ್ಥೆಯಲ್ಲಿ ತಲೆದೋರಬಹುದಾದ ಅನಿಷ್ಟಗಳನ್ನು ಸರಿಪಡಿಸುವುದಕ್ಕೆ ಸಂವಿಧಾನಾತ್ಮಕವಾದ ಅನೇಕ ಉಪಾಯಗಳಿವೆ. ಒಂದುವೇಳೆ ಸಂವಿಧಾನವೇ ತಪ್ಪಿದರೆ, ಅದನ್ನು ಸರಿಯಾಗಿ ರೂಪಿಸದಿದ್ದರೆ ಸರಿಪಡಿಸುವುದಕ್ಕೆ ಪ್ರಜಾಪ್ರಭುತ್ವವಿದೆ. ಆದ್ದರಿಂದ ಈ ಸಮಸ್ಯೆಗಳನ್ನು ನಾವು ಎದುರಿಸೋಣ. ಕಾಲಕಳೆದಂತೆ ಒಂದೊಂದಾಗಿ ವಿವಾದಗಳು, ಜಟಿಲತೆಗಳು ತಲೆದೋರುತ್ತ ಹೋದಂತೆ ಅವನ್ನು ನಾವು ಎದುರಿಸಬಲ್ಲೆವು. ಈ ದಿನ ಏನೋ ಒಂದೆರಡು ಸಂಗತಿಗಳು ನಡೆದಿರಬಹುದು, ಒಂದೆರಡು ವಿವಾದಗಳು ತಲೆದೋರಿರಬಹುದು, ಇದರಿಂದ ನಾವು ಎಲ್ಲವೂ ಹಾಳಾಗಿದೆ, ಸರಿಪಡಿಸಲಾಗದಷ್ಟು [illegible]ಹೋಗಿದೆ ಎಂದು ತಲೆಕೆಡಿಸಿಕೊಳ್ಳುವ ಅಗತ್ಯವಿಲ್ಲ. ನಾವು ಅಷ್ಟೊಂದು ಹೇಡಿಗಳಲ್ಲ, ಧೈರ್ಯವಾಗಿರೋಣ. ಎದುರಾದಂತಹ ಸಮಸ್ಯೆಗಳನ್ನು ಕೇವಲ ರಾಜ್ಯದ ದೃಷ್ಟಿಯಿಂದಲ್ಲದೆ ಇಡೀ ಭಾರತದ ಹಿತಾಸಕ್ತಿಯನ್ನು ಗಮನದಲ್ಲಿಟ್ಟುಕೊಂಡು ಎದುರಿಸೋಣ. ಈ ಮಾತುಗಳೊಂದಿಗೆ ಪ್ರಸ್ತುತ ನಿಲುವಳಿಯನ್ನು ಹಿಂತೆಗೆದುಕೊಳ್ಳಬೇಕು ಎಂದು ನಾನು ಮತ್ತೊಮ್ಮೆ ಸನ್ಮಾನ್ಯ ಸದಸ್ಯರಲ್ಲಿ ಮನವಿ ಮಾಡಿಕೊಳ್ಳುತ್ತೇನೆ. (ಜೋರಾಗಿ ಚಪ್ಪಾಳೆ).

ಶ್ರೀ ಎ. ಭೀಮಪ್ಪ ನಾಯಕ: ಮಾನ್ಯರೇ, ಈ ನಿಲುವಳಿಯಿಂದಾಗಿ ನಮ್ಮ ನಾಯಕರು ಇಡೀ ಭಾರತಕ್ಕೆ ಸಂಬಂಧಿಸಿದಂತೆ ಹಾಗೂ ನಿರ್ದಿಷ್ಟವಾಗಿ ಮೈಸೂರು ರಾಜ್ಯಕ್ಕೆ ಸಂಬಂದಿಸಿದಂತೆ ಅನೇಕ ಮುಖ್ಯ ವಿಷಯಗಳನ್ನು ಪ್ರಸ್ತಾಪಿಸುವಂತಾಗಿದ್ದು ಬಹಳ ಸಂತೋಷ ತಂದಿದೆ. ಇಷ್ಟೆಲ್ಲ ಹೇಳಿಯೂ ಅವರು ಈ ನಿಲುವಳಿಯನ್ನು ಒಪ್ಪಿಕೊಳ್ಳದಿದ್ದರೂ ಈ ನಿಲುವಳಿಯ ತಾತ್ವಿಕತೆ ಹಾಗೂ ಉದ್ದೇಶವನ್ನು ಅವರು ಒಪ್ಪಿಕೊಂಡಿದ್ದಾರೆ. ಆದ್ದರಿಂದ......(ಈ ನಿರ್ಣಯವನ್ನು ಸದನದ ಅನುಮತಿಯ ಮೇರೆಗೆ ಹಿಂತೆಗೆದುಕೊಳ್ಳಲಾಯಿತು).

# 4. ಸಂತಾಪ ಸೂಚಕ ನಿರ್ಣಯ

## ಶ್ರೀ ಸರ್ದಾರ್ ವಲ್ಲಭಬಾಯ್ ಪಟೇಲ್ ನಿಧನರಾದ ಸಂದರ್ಭದಲ್ಲಿ

## ವಿಧಾನ ಸಭಾ ಕಲಾಪ ಜನವರಿ 18. 1951.

ಮುಖ್ಯಮಂತ್ರಿ ಶ್ರೀ ಕೆ. ಚೆಂಗಲರಾಯರೆಡ್ಡಿಯವರು ಸಂತಾಪ ಸೂಚಕ ನಿರ್ಣಯವನ್ನು ಮಂಡಿಸಿದರು:-

ಶ್ರೇಷ್ಠರಾಗಿದ್ದ ವಲ್ಲಭಭಾಯ್ ಪಟೇಲ್‌ರವರು ಕಳೆದ ವರ್ಷ ಡಿಸೆಂಬರ್ 15 ರಂದು ನಿಧನರಾದರು. ಇಡೀ ದೇಶವೇ ಶೋಕಸಾಗರದಲ್ಲಿ ಮುಳುಗಿದೆ. ದೇಶ ವಿದೇಶಗಳ ನಾಯಕರು ವಲ್ಲಭಬಾಯ್ ಪಟೇಲ್ ಅವರ ಭವ್ಯ ಕಾರ್ಯ ಹಾಗೂ ಕ್ರಿಯಾಶೀಲ ಸೇವೆಯನ್ನು ಸ್ತುತಿಸಿ ಶೋಕಪೂರ್ಣ ಶ್ರದ್ಧಾಂಜಲಿ ಅರ್ಪಿಸಿದ್ದಾರೆ.

ಸರ್ದಾರ್ ಪಟೇಲ್ ಅವರು ದೇಶಕ್ಕೆ ಸಲ್ಲಿಸಿದ ಅಸಾಧಾರಣ ಸೇವೆಯನ್ನು ಸ್ಮರಿಸಿ ದೇಶದಾದ್ಯಂತ ಗೌರವ ಪೂರ್ಣ ಶ್ರದ್ಧಾಂಜಲಿ ನಡೆಯುತ್ತಿದೆ. ಸರ್ದಾರ್ ಪಟೇಲರ ಜೀವನ ಸಾಧನೆಗಳ ಪ್ರತಿಯೊಂದು ವಿವರವನ್ನೂ ಇಲ್ಲಿ ನಿರೂಪಿಸುವ ಅಗತ್ಯವಿಲ್ಲ. ಸರ್ದಾರ್ ಪಟೇಲರು 1916 ರಲ್ಲಿ ದೇಶ ಪಿತ ಮಹಾತ್ಮಾಗಾಂಧಿಯವರ ಪ್ರಭಾವದ ಮೋಡಿಗೆ ಸಿಲುಕಿದರು. ಆಗಿನಿಂದಲೂ ಅವರು ಮಹಾತ್ಮಗಾಂಧಿಯವರ ನಿಷ್ಠಾವಂತ ಕಾರ್ಯಕರ್ತರಾಗಿ ದುಡಿದರು.ಅವರು ಗಾಂಧೀಜಿಯವರ ನಾಯಕತ್ವದಲ್ಲಿ ಕಾಂಗ್ರೆಸ್ಸಿಗೆ ಹಾಗೂ ದೇಶಕ್ಕೆ ಸಲ್ಲಿಸಿದ ಸೇವೆಯ ವಿಷಯ ನಮಗೆಲ್ಲರಿಗೂ ತಿಳಿದಿದೆ. 1922ರಲ್ಲಿ ಅವರು ಭಾರತದ ರಾಷ್ಟ್ರೀಯ ಕಾಂಗ್ರೆಸ್ಸಿನ ಪ್ರಧಾನ ಕಾರ್ಯದರ್ಶಿ ಆಗಿದ್ದರು ಈ ದೇಶಕ್ಕೆ ಸ್ವಾತಂತ್ರ್ಯ ತಂದು ಕೊಡುವಲ್ಲಿ ಬಹುಮುಖ್ಯ ಪಾತ್ರ ವಹಿಸಿದ ಕಾಂಗ್ರೆಸ್ ಸಂಸ್ಥೆಯನ್ನು ಬೆಳೆಸುವಲ್ಲಿ ಅವರು ವಿವಿಧ ಹುದ್ದೆಗಳಲ್ಲಿದ್ದುಕೊಂಡು ದುಡಿದರು. ಆದರೆ ಸುಮಾರು 1928 ಅಥವಾ 1929 ರಲ್ಲಿ ಬಾರ್ಡೋಲಿ ಸತ್ಯಾಗ್ರಹದ ಸಂಬಂಧವಾಗಿ ಅವರು ವಹಿಸಿದ ಅಸಾಧಾರಣ ನಾಯಕತ್ವದಿಂದಾಗಿ ಅವರ ಹೆಸರು ಪ್ರಸಿದ್ಧಿಗೆ ಬಂದಿತು. ಬಹಳ ಸಂಕಷ್ಟದ ಪರಿಸ್ಥಿತಿಗಳನ್ನೆದುರಿಸಿ ಬಾರ್ಡೋಲಿ ರೈತ ಚಳುವಳಿಗೆ ವಿಜಯವಾಗುವಂತೆ ಅವರು ಹೋರಾಡಿದರು. ಇದು ದೇಶದ ರೈತರ ಏಳಿಗೆಯ ಬಗ್ಗೆ ಅವರಿಗಿದ್ದ ಆಳವಾದ ಕಾಳಜಿಯ ದ್ಯೋತಕವಾಗಿದೆ. ಈ ಸಂದರ್ಭದಲ್ಲಿಯೇ ಮಹಾತ್ಮಾಗಾಂಧಿಯವರು ಅವರಿಗೆ ಸರ್ದಾರ್ ಎಂಬ ಬಿರುದನ್ನು ದಯಪಾಲಿಸಿದರು. ಅವರು ಬಾರ್ಡೋಲಿ ಸತ್ಯಾಗ್ರಹವನ್ನು ನಡೆಸಿದ ರೀತಿಯಿಂದ ದೇಶದ ಮಹಾನಾಯಕರಾಗಲು ಅವರಲ್ಲಿದ್ದಂತಹ ಗುಣಗಳು ಎಲ್ಲರ ಅರಿವಿಗೆ ಬಂದವು. ಅವರು ರೈತರಲ್ಲಿ ಧೈರ್ಯವನ್ನು ತುಂಬಿದ ರೀತಿ ಹಾಗೂ ಹೋರಾಟವನ್ನು ನಡೆಸಿದ ರೀತಿ ಈ ದೇಶದ ಇತಿಹಾಸದಲ್ಲಿ ಗಮನಾರ್ಹ ಅಧ್ಯಾಯವಾಗಿ ದಾಖಲಾಗಿದೆ. ಅವರು ಹೇಗೆ ಹಂತ ಹಂತವಾಗಿ ಈ ಸತ್ಯಾಗ್ರಹವನ್ನು ಬೆಳೆಸಿದರೆಂದರೆ, ಅಂಜುಗುಳಿಗಳು ಮತ್ತು ತಮ್ಮ ಆಸ್ತಿಪಾಸ್ತಿಗಳನ್ನು ಸರ್ಕಾರವು ವಶಪಡಿಸಿಕೊಳ್ಳಬಹುದು ಎಂದು ಭಯ ಭೀತರಾಗಿದ್ದ ರೈತರುಗಳೂ ಸಹ ಸರ್ದಾರ್ ಕಡೆಗೆ ಓಗೊಟ್ಟು ಚಳುವಳಿಯಲ್ಲಿ ಭಾಗವಹಿಸಿ ಯಶಸ್ಸಿನತ್ತ ಮುನ್ನಡೆದರು. ಇದಾದ ನಂತರವೂ ಅನೇಕ ಸತ್ಯಾಗ್ರಹಗಳಲ್ಲಿ ಸರ್ದಾರರು ಬಹು ಮುಖ್ಯ ಪಾತ್ರ ವಹಿಸಿದರು. ನಾಗಪುರ ಧ್ವಜ

ಸತ್ಯಾಗ್ರಹ, ಬರ್ಸಾಡ್ ಸತ್ಯಾಗ್ರಹ ಮೊದಲಾದುವನ್ನು ಇಲ್ಲಿ ಉದಾಹರಿಸಬಹುದು. 1931ರಲ್ಲಿ ಅವರು ಭಾರತದ ರಾಷ್ಟ್ರೀಯ ಕಾಂಗ್ರೆಸ್ಸಿನ ಅಧ್ಯಕ್ಷರಾಗಿ ಚುನಾಯಿತರಾದರು. ಅಧ್ಯಕ್ಷ ಭಾಷಣವನ್ನು ಮಾಡುತ್ತಾ ಅವರು ತಮ್ಮನ್ನು ಒಬ್ಬ ರೈತ ಹಾಗೂ ಈ ದೇಶದ ಗ್ರಾಮೀಣ ಜನತೆಯ ಕಲ್ಯಾಣದ ಬಗ್ಗೆ ತೀವ್ರ ಕಾಳಜಿ ಹೊಂದಿರುವಂತಹ ವ್ಯಕ್ತಿ ಎಂದು ಬಣ್ಣಿಸಿಕೊಂಡರು. ಅವರು ಮಿತ ಭಾಷಿ. ಅವರು ಏನೇ ಮಾಡಿದರೂ ವ್ಯವಸ್ಥಿತವಾಗಿ ಮಾಡುತ್ತಿದ್ದರು. ಅಂದಿನ ಅವರ ಅಧ್ಯಕ್ಷ ಭಾಷಣವೂ ಸಹ ಸಂಕ್ಷಿಪ್ತವಾಗಿತ್ತು. ಆಲೋಚನೆಯ ಹೊಳವುಗಳಿಂದ ತುಂಬಿತ್ತು. ಆದಾದ ನಂತರ ಅವರು ಅನೇಕ ವರ್ಷಗಳವರೆಗೆ ಭಾರತದ ರಾಷ್ಟ್ರೀಯ ಕಾಂಗ್ರೆಸ್ಸಿನ ಸಂಸದೀಯ ಸಮಿತಿಯ ಉಪಾಧ್ಯಕ್ಷರಾಗಿದ್ದರು. 1939ರಲ್ಲಿ ಅನೇಕ ಪ್ರಾಂತಗಳಲ್ಲಿ ಕಾಂಗ್ರೆಸ್ ಸಚಿವ ಸಂಪುಟಗಳು ಸ್ಥಾಪಿತವಾದಾಗ ಎಲ್ಲ ಪ್ರಾಂತಗಳ ಸರ್ಕಾರೀ ಚಟುವಟಿಕೆಗಳೊಂದಿಗೆ ಸಕಲ ಸಂಪರ್ಕ ಹೊಂದಿದ್ದರು ಮತ್ತು ಅಲ್ಲಿನ ಚಟುವಟಿಕೆಗಳನ್ನು ಎಷ್ಟು ಉತ್ಕೃಷ್ಟವಾಗಿ ನಿಯಂತ್ರಿಸುತ್ತಿದ್ದರೆಂದರೆ ಆ ದಿನಗಳಲ್ಲಿ ಸ್ವಲ್ಪ ಕಾಲದವರೆಗೆ ಮಾತ್ರವೇ ಆಡಳಿತ ನಡೆಸಿದ ಕಾಂಗ್ರೆಸ್ ಸಚಿವ ಸಂಪುಟಗಳು ಅತ್ಯಂತ ಸಮರ್ಥವಾಗಿ ಸರ್ಕಾರವನ್ನು ನಡೆಸಿಕೊಂಡು ಹೋದ ಕೀರ್ತಿಗೆ ಪಾತ್ರವಾದವು.

ಸ್ವಾತಂತ್ರ್ಯ ಬರುವುದಕ್ಕೆ ಮೊದಲು ಸರ್ದಾರರು ನಡೆಸಿದ ಇಂತಹ ಇನ್ನೂ ಅನೇಕ ಚಟುವಟಿಕೆಗಳ ಬಗ್ಗೆ ಇಲ್ಲಿ ನಾನು ಹೆಚ್ಚಿಗೆ ಹೇಳುವುದಿಲ್ಲ. ಆದರೆ ಇಷ್ಟು ಮಾತ್ರ ಹೇಳಬಹುದು. ತಮ್ಮ ಎಲ್ಲ ಕಾರ್ಯಚಟುವಟಿಕೆಗಳಲ್ಲಿ ಹಾಗೂ ಹೋರಾಟದ ಆದ್ಯಂತವೂ ಅವರು ಅಸಾಧಾರಣವಾದ ತ್ಯಾಗಶೀಲತೆಯನ್ನು ದೃಢ ನಿರ್ಧಾರವನ್ನು ಹಾಗೂ ಅತ್ಯುನ್ನತ ಮಟ್ಟದ ಧೈರ್ಯವನ್ನು ಪ್ರದರ್ಶಿಸಿದರು. ಅವರಲ್ಲಿದ್ದಂತಹ ವಸ್ತುಸ್ಥಿತಿಯ ಅರಿವು, ದೂರದರ್ಶಿತ್ವ ಹಾಗೂ ಸಮಸ್ಯೆಗಳನ್ನು ನಿರ್ವಹಿಸುವಲ್ಲಿನ ಚಾಕಚಕ್ಯತೆ ಪ್ರಸಿದ್ಧವಾಗಿವೆ. ಸ್ವಾತಂತ್ರ್ಯ ಸಂಗ್ರಾಮಕ್ಕೆ ಹೋರಾಡಿದ ವ್ಯಕ್ತಿಗಳಲ್ಲಿ ಮಹಾತ್ಮಗಾಂಧಿಜಿಯವರ ನಂತರ ಹೇಳಬಹುದಾದ ಹೆಸರು ಪಟೇಲರದ್ದು. ಸ್ವಾತಂತ್ರ್ಯಕ್ಕಾಗಿ ಹೋರಾಡಿದವರು ಉತ್ತಮ ಆಡಳಿತಗಾರರಾಗಬಲ್ಲರೇ ಎಂಬ ಸಂದೇಹ ಜನತೆಯಲ್ಲಿದ್ದಾಗ, ಅಂತಹ ಸಂದೇಹವನ್ನು ಹೋಗಲಾಡಿಸುವ ರೀತಿಯ ಅತ್ಯುನ್ನತ ಆಡಳಿತ ಸಾಮರ್ಥ್ಯವನ್ನು ಪಟೇಲರು ಪ್ರದರ್ಶಿಸಿದರು. ಪಳಗಿದ ಆಡಳಿತಗಾರರು, ಸರ್ಕಾರದ ಕೆಲಸಗಳಲ್ಲಿ ಅನುಭವಶಾಲಿಗಳಾದವರು ಹಾಗೂ ಸಚಿವಾಲಯದ ಜನರೂ ಕೂಡ ಒಬ್ಬ ಆಡಳಿತಗಾರನಾಗಿ ಸರ್ದಾರ್ ಅವರು ಅಸಾಧಾರಣ ಸಾಮರ್ಥ್ಯ ಹೊಂದಿದ್ದರು ಎಂದು ಹೇಳಿರುವುದನ್ನು ಕೇಳಿದ್ದೇನೆ. ಸರ್ದಾರ್ ಪಟೇಲರಲ್ಲಿ ಅಂತಹ ಅದ್ಭುತ ಸಾಮರ್ಥ್ಯ ಹೇಗೆ ಬಂದಿತು ಎಂದು ನೋಡಿದವರು ಬೆರಗಾಗುತ್ತಿದ್ದರು. ಸ್ವಾತಂತ್ರ್ಯ ಸಂದರ್ಭದಲ್ಲಿ ಈ ದೇಶದಲ್ಲಿ ಪ್ರತ್ಯೇಕೀಕರಣಕ್ಕಾಗಿ ವಿವಿಧ ಶಕ್ತಿಗಳು ಹೋರಾಡುತ್ತಿದ್ದವು. ಇಂತಹ ಸಂದರ್ಭದಲ್ಲಿ ದೃಢವಾದ ನೆಲೆಯಲ್ಲಿ ಶಾಂತಿ ಹಾಗೂ ಭದ್ರತೆಯನ್ನು ಹೇಗೆ ಕಾಪಾಡಿಕೊಳ್ಳಲು ಸಾಧ್ಯ, ಭಾರತಕ್ಕೆ ಸ್ವಾತಂತ್ರ್ಯವನ್ನು ಭದ್ರವಾಗಿ ಕಾಪಾಡಿಕೊಳ್ಳುವುದು ಬಹಳ ಕಷ್ಟವಾಗಬಹುದು ಎಂಬ ಸಂದೇಹ ಭಾರತದಲ್ಲಿ ಮಾತ್ರವೇ ಅಲ್ಲ ಜಗತ್ತಿನಾದ್ಯಂತ ಇತ್ತು. ಆದರೆ ಈ ದೇಶದಲ್ಲಿ ಶಾಂತಿ ಹಾಗೂ ಭದ್ರತೆಯನ್ನು ಸ್ಥಾಪಿಸುವಲ್ಲಿ ಯಶಸ್ವಿಯಾದ ಪಟೇಲ್ ಅವರಿಗೆ ಪ್ರತಿಯೊಬ್ಬರೂ ಋಣಿಗಳಾಗಿರಬೇಕು. ಅತ್ಯಂತ ವಿಷಮ ಸಂದರ್ಭಗಳಲ್ಲಿ ಸರ್ದಾರರು ದೃಢವಾಗಿ ವರ್ತಿಸಿದರು ಅವರ ಸದೃಢ ಸಂಕಲ್ಪಶಕ್ತಿಯಿಂದಾಗಿ ಎಲ್ಲ ಕಠಿಣ ಪರಿಸ್ಥಿತಿಗಳನ್ನೂ ನಿಭಾಯಿಸಲು ಸಾಧ್ಯವಾಯಿತು. ದೇಶದಲ್ಲಿ ಶಾಂತಿ ಸ್ಥಾಪನೆಯಾಯಿತು.

ಕಳೆದ ಮೂರು ವರ್ಷಗಳಲ್ಲಿ ಉದ್ಭವಿಸಿದ ಸಮಸ್ಯೆಗಳಲ್ಲಿ ಬಹು ಮುಖ್ಯವಾದವುಗಳೆಂದರೆ ನಿರಾಶ್ರಿತರ ಸಮಸ್ಯೆ. ಕೋಮು ಗಲಭೆಗಳಿಂದ ಉದ್ಭವಿಸಿದ ತೊಂದರೆಗಳು ಮತ್ತು ಇನ್ನಿತರ ಜಟಿಲ ಅಂಶಗಳಿಂದ ಉದ್ಭವಿಸಿದಂತಹ ಸಮಸ್ಯೆಗಳು. ಈ ಎಲ್ಲ ಸಂದರ್ಭಗಳಲ್ಲಿ ಸರ್ದಾರರ ಅಸಾಧಾರಣ ಪರಿಶ್ರಮ ಹಾಗೂ ಮಾರ್ಗದರ್ಶನದಿಂದಾಗಿ ದೇಶದಲ್ಲಿ ಶಾಂತಿಯು ಭದ್ರವಾಗಿ ನೆಲೆಯೂರುವುದು ಸಾಧ್ಯವಾಯಿತು. ಸರ್ದಾರರ ಬಹು ಮುಖ್ಯ ಕೊಡುಗೆ ಎಂದರೆ ಭಾರತವನ್ನು ಒಂದು ದೇಶವಾಗಿ ಸಂಘಟಿಸಿದ್ದು, ಆರು ನೂರು ಚಿಲ್ಲರೆ ಭಾರತೀಯ ರಾಜ್ಯಗಳನ್ನು ಭಾರತದ ಉಳಿದ ಭಾಗಗಳೊಂದಿಗೆ ಏಕೀಕರಣಗೊಳಿಸಿದ್ದು. ಅವರ ಈ ಎಣೆಯಿಲ್ಲದ ಸಾಧನೆಗೆ ಇಡೀ ಭಾರತವೇ ಋಣಿಯಾಗಿದೆ. ಯಾವುದೇ ದೇಶದ ಇತಿಹಾಸದಲ್ಲಿಯೂ ಅದು ಪ್ರಾಚೀನವೇ ಆಗಿರಲಿ, ಅರ್ವಾಚೀನವೇ ಆಗಿರಲಿ ಈ ಸಾಧನೆಗೆ ಸರಿಸಾಟಿಯಾದ ಸಾಧನೆ ನಡೆದಿಲ್ಲ. ಅನೇಕರ ಅಭಿಪ್ರಾಯದಂತೆ ಅಶೋಕ ಅಥವಾ ಅಕ್ಬರ್ ಅವರಿಂದ ಸಾಧ್ಯವಾಗದಂತಹ ಕೆಲಸವನ್ನು ಸರ್ದಾರ್ ಪಟೇಲ್ ಅವರು ಅಸಾಧಾರಣ ರೀತಿಯಲ್ಲಿ ಸಾಧಿಸಿದರು. ಭಾರತದ ರಾಜ್ಯಗಳನ್ನು ಒಗ್ಗೂಡಿಸುವಲ್ಲಿ ಅವರು ತೋರಿಸಿದ ಕುಶಲತೆ ಹಾಗೂ ಪ್ರತಿಭೆಗಳು ಅಪ್ರತಿಮ. ಅವರು ರಾಜರಾಗಲಿ, ರೈತರಾಗಲಿ, ಸಾಮಾನ್ಯ ಪ್ರಜೆಗಳಾಗಿರಲಿ, ಅವರ ಮನಸ್ಸಿಗೆ ತೃಪ್ತಿಯಾಗುವ ರೀತಿಯಲ್ಲಿ ಸರ್ದಾರರು ಸಮಸ್ಯೆಯನ್ನು ಬಗೆಹರಿಸುತ್ತಿದ್ದರು. ಅವರು ಹುಡುಕುತ್ತಿದ್ದ ಪರಿಹಾರಗಳು ಪ್ರತಿಯೊಬ್ಬರಿಗೂ ಸಮಾಧಾನ ಉಂಟು ಮಾಡುವಂತಿರುತ್ತಿದ್ದವು. ಸರ್ದಾರರ ಪ್ರಯತ್ನಗಳಿಂದಾಗಿ ಭಾರತವು ರಾಜಕೀಯವಾಗಿ, ಆಡಳಿತಾತ್ಮಕವಾಗಿ ಹಾಗೂ ಇನ್ನೂ ಅನೇಕ ದೃಷ್ಟಿಗಳಿಂದ ಒಂದು ದೇಶ ಎಂದು ಸಂತೋಷವಾಗಿ ಹೇಳಿಕೊಳ್ಳುವ ಹೆಮ್ಮೆ ನಮಗೆ ಪ್ರಾಪ್ತವಾಗಿದೆ.

ಎಲ್ಲ ರಾಜ್ಯಗಳಿಗೂ ಅನ್ವಯಿಸುವಂತೆ ಜನವರಿ 26 ರಂದು ಉದ್ಘಾಟಿಸಲ್ಪಟ್ಟ ಭಾರತದ ಸಂವಿಧಾನಕ್ಕೂ ಸಹ ಸರ್ದಾರ್ ವಲ್ಲಭಭಾಯ್ ಪಟೇಲ್ ಅವರ ಪ್ರಯತ್ನ ಹಾಗೂ ಪರಿಶ್ರಮಗಳೇ ಕಾರಣ.

ಮೈಸೂರಿನ ವಿಷಯ ಹೇಳುವುದಾದರೆ ಈ ರಾಜ್ಯದ ಬಗ್ಗೆ ಪಟೇಲ್ ಅವರು ತೀವ್ರ ಆಸಕ್ತಿ ಹೊಂದಿದ್ದರು. ಈ ರಾಜ್ಯದಲ್ಲಿ ಆಗಾಗ್ಗೆ ತಲೆದೋರಿದ ಸಮಸ್ಯೆಗಳ ಬಗ್ಗೆ ಕಾಳಜಿ ಹೊಂದಿದ್ದರು. ಅವರು ಮೊದಲ ಸಲ ಮೈಸೂರು ರಾಜ್ಯಕ್ಕೆ ಭೇಟಿ ನೀಡಿದ್ದು 1938 ರಲ್ಲಿ. ಆಗ ಮೈಸೂರು ಕಾಂಗ್ರೆಸ್ ಸಂಸ್ಥೆಯು ಜವಾಬ್ದಾರಿ ಸರ್ಕಾರಕ್ಕಾಗಿ ಹೋರಾಟ ನಡೆಸಿತ್ತು. ಈ ಹೋರಾಟ ವಿಷಮ ಸ್ಥಿತಿ ತಲುಪಿದಾಗ ಮಹಾತ್ಮಾ ಗಾಂಧೀಜಿಯವರು ಮೈಸೂರು ರಾಜ್ಯದ ಆಡಳಿತ ಹಾಗೂ ಮೈಸೂರು ಕಾಂಗ್ರೆಸ್ಸಿನ ನಡುವೆ ಸಂಧಾನವೇರ್ಪಡಿಸಲು ಸರ್ದಾರ್ ವಲ್ಲಭಭಾಯಿ ಪಟೇಲ್ ಹಾಗೂ ಮತ್ತೊಬ್ಬ ಸಮರ್ಥ ಕಾರ್ಯಕರ್ತರಾಗಿದ್ದ ಆಚಾರ್ಯ ಕೃಪಲಾನಿ ಅವರನ್ನು ಕಳುಹಿಸಿಕೊಟ್ಟರು. ಇಲ್ಲಿಗೆ ಬಂದ ಪಟೇಲರು ಕಾಂಗ್ರೆಸ್ ಹಾಗೂ ಮೈಸೂರು ಸರ್ಕಾರದ ನಡುವೆ ಸಂಧಾನ ಮಾಡಿಸುವುದರಲ್ಲಿ ಯಶಸ್ವಿಯಾದರು. ಇನ್ನೂ ಅನೇಕ ಸಂದರ್ಭಗಳಲ್ಲಿ ಮೈಸೂರಿನ ಸಮಸ್ಯೆಗಳ ಪರಿಹಾರಕ್ಕೆ ಪಟೇಲರು ಸಹಾಯ ಮಾಡಿದರು. ಸ್ವಾತಂತ್ರ್ಯ ಬಂದು, ಮೈಸೂರು ರಾಜ್ಯದಲ್ಲಿ ಜವಾಬ್ದಾರಿ ಸರ್ಕಾರದ ಸ್ಥಾಪನೆಯಾದ ನಂತರ ಸರ್ದಾರ ಪಟೇಲರನ್ನು ನಾವು ಸಹಾಯ ಮತ್ತು ಮಾರ್ಗದರ್ಶನಕ್ಕಾಗಿ ಕೋರಿದಾಗಲೆಲ್ಲ ಅವರು ನೆರವಾಗಿದ್ದಾರೆ. ಅವರು

ಕೊಟ್ಟಂತಹ ಸಲಹೆಗಳು ಮೈಸೂರಿನ ಪಾಲಿಗೆ ಅತ್ಯಂತ ದೂರದರ್ಶಿತ್ವದಿಂದ ಕೂಡಿದ ಉತ್ತಮ ಸಲಹೆಗಳಾಗಿದ್ದವು. ಮೈಸೂರಿನ ಬಗ್ಗೆ ಅವರಿಗೆ ವಿಶೇಷವಾದ ಒಲವಿತ್ತು. ಮೆಚ್ಚುಗೆಯಿತ್ತು. ತಮ್ಮ ಬದುಕಿನ ಕೊನೆಯವರೆಗೂ ಅವರು ಮೈಸೂರಿನ ಬಗ್ಗೆ ಬಹು ಉನ್ನತವಾದ ಗೌರವ ಹಾಗೂ ವಾತ್ಸಲ್ಯಗಳನ್ನು ಹೊಂದಿದ್ದರು. ಅವರು ನಿಧನರಾಗುವುದಕ್ಕೆ ಕೆಲವೇ ದಿನಗಳ ಮುಂಚೆಯೂ ಸಹ ಮೈಸೂರಿನ ಬಗ್ಗೆ ಚಿಂತಿಸುತ್ತಿದ್ದರು. ಮೈಸೂರಿನ ಸಮಸ್ಯೆಗಳ ಬಗ್ಗೆ ಕಾಳಜಿ ವ್ಯಕ್ತ ಪಡಿಸಿ, ಏನು ಮಾಡಿದರೆ ಸರಿ ಹೋಗಬಹುದು ಎಂಬುದಾಗಿ ಸಂಬಂಧಪಟ್ಟವರಿಗೆ ಸೂಚನೆಗಳನ್ನೂ ಕೊಟ್ಟಿದ್ದರು. ಮೈಸೂರು ಜನತೆ ನಿಜಕ್ಕೂ ಸರ್ದಾರ್ ಪಟೇಲರಿಗೆ ಋಣಿಗಳು.

ಮಹಾನ್ ದೇಶಭಕ್ತ, ರಾಜನೀತಿಜ್ಞ, ಅಸಾಧಾರಣ ನಾಯಕ ಹಾಗೂ ಸಂಘಟನಕಾರರಾಗಿದ್ದ ಪಟೇಲರು ವಿಧಿವಶರಾಗಿದ್ದು ಅತ್ಯಂತ ದುಃಖಕರ ಅಂತಹ ಸಾಮರ್ಥ್ಯದ ಮತ್ತೊಬ್ಬ ನಾಯಕ ಸಿಗುವುದು ದುರ್ಲಭ.

ಸರ್ದಾರ್ ಪಟೇಲರಿಲ್ಲದಿದ್ದಲ್ಲಿ ಈ ದೇಶವು ಗಳಿಸಿದ ಸ್ವಾತಂತ್ರ್ಯಕ್ಕೆ ಅಪಾಯವಿತ್ತು ಎಂದು ಅನೇಕರು ಹೇಳಿದ್ದನ್ನು ಕೇಳಿದ್ದೇನೆ. ಅವರ ನಿಧನದಿಂದ ನಮಗೆ ಅಪಾರ ದುಃಖವಾಗಿದೆ. ನಿಜ, ನಾವು ತಬ್ಬಲಿಗಳಾದಂತೆ ಅನ್ನಿಸುತ್ತದೆ. ಆದರೆ ಇಂತಹ ಸಂದರ್ಭದಲ್ಲಿ ಅವರು ಬಿಟ್ಟು ಹೋದಂತಹ ಕೆಲಸವನ್ನು ನಾವು ಕೈಲಾದ ಮಟ್ಟಿಗೂ ನೆರವೇರಿಸಿಕೊಂಡು ಹೋಗಲು ಶ್ರಮಿಸಬೇಕು.

ನಮ್ಮ ಹೃದಯ ಪೂರ್ವಕ ಸಂತಾಪವನ್ನು ಮೃತರ ಕುಟುಂಬಕ್ಕೆ ತಿಳಿಸುವುದು ನಮ್ಮ ಕರ್ತವ್ಯ. ಮುಖ್ಯವಾಗಿ ಸರ್ದಾರರ ನಿಷ್ಠಾವಂತ ಪುತ್ರಿ ಮಣಿಬೆನ್ ಪಟೇಲ್ ಅವರಿಗೆ ನಮ್ಮ ಸಂತಾಪ ತಿಳಿಸಬೇಕು. ಸರ್ದಾರರ ನಿಧನದಿಂದ ಅತ್ಯಂತ ಹೆಚ್ಚಿನ ನಷ್ಟವಾಗಿರುವುದು ಮಣಿಬೆನ್ ಪಟೇಲ್ ಅವರಿಗೆ.

ಪಂಡಿತ ನೆಹರೂ ಸಹ ಒಬ್ಬ ಸಮರ್ಥ ಸಹೋದ್ಯೋಗಿಯನ್ನು ಕಳೆದುಕೊಂಡಿದ್ದಾರೆ. ಈ ಸಂದರ್ಭದಲ್ಲಿ ಜಟಿಲ ಸಮಸ್ಯೆಗಳನ್ನು ಎದುರಿಸಲು ಪಂಡಿತ ನೆಹರೂ ಅವರಿಗೆ ಇಡೀ ದೇಶವೇ ಸಹಕಾರ ನೀಡಬೇಕಾಗಿದೆ. ಈ ಮಾತುಗಳೊಂದಿಗೆ ಸಂತಾಪ ಸೂಚಕ ನಿರ್ಣಯವನ್ನು ಸದನದ ಮುಂದೆ ಮಂಡಿಸುತ್ತಿದ್ದೇನೆ.

## 5. ಸದನದಲ್ಲಿ ಪಕ್ಷ ರಾಜಕೀಯದ ಬಗ್ಗೆ ಚರ್ಚೆ

## ವಿಧಾನ ಸಭಾ ಕಲಾಪ - 19 ಜನವರಿ 1951

ಸ್ಪೀಕರ್:- ಪಕ್ಷ ರಾಜಕೀಯದ ವಿಷಯವನ್ನು ಇಲ್ಲಿ ಚರ್ಚಿಸುವುದು ಅಗತ್ಯ ಎಂದು ಸನ್ಮಾನ್ಯ ಸದಸ್ಯರು ಭಾವಿಸುತ್ತಾರೆಯೆ?

ಜನಾಬ್ ಜಿ ಮೊಹಮದ್ ಇಮಾಂ:- ಪಕ್ಷದ ರಾಜಕೀಯಕ್ಕೂ ಸರ್ಕಾರಕ್ಕೂ ನಿಕಟ ಸಂಬಂಧವಿದೆ. ಸರ್ಕಾರವನ್ನು ನಡೆಸುತ್ತಿರುವುದು ಶ್ರೀ ಕೆ. ಚೆಂಗಲರಾಯರೆಡ್ಡಿಯವರಾಗಲೀ, ಶ್ರೀ ಹೆಚ್. ಸಿ. ದಾಸಪ್ಪನವರಾಗಲೀ ಅಲ್ಲ. ಇದನ್ನು ನಡೆಸುತ್ತಿರುವುದು ಅಧಿಕಾರದಲ್ಲಿರುವ ಪಕ್ಷ.

ಶ್ರೀ ಕೆ. ಚೆಂಗಲರಾಯರೆಡ್ಡಿ (ಸನದನ ನಾಯಕರು):- ಕ್ರಮಬದ್ಧತೆಯ ದೃಷ್ಟಿಯಿಂದ ನೋಡುವುದಾದರೆ ಒಂದು ಜವಾಬ್ದಾರಿ ಸರ್ಕಾರದ ವ್ಯವಸ್ಥೆಯಲ್ಲಿ ಪಕ್ಷದ ಕೆಲಸದಲ್ಲಿ ತಲೆದೋರುವಂಥ ವಿಷಯಗಳನ್ನೆಲ್ಲ ಈ ಸದನದಲ್ಲಿ ಚರ್ಚಿಸಬಹುದು ಎಂದು ನನಗನ್ನಿಸುವುದಿಲ್ಲ. ಒಂದು ಪಕ್ಷದ ಕಾರ್ಯಾಚರಣೆಯು ಬೀರುವ ಒಟ್ಟು ಪರಿಣಾಮಗಳ ಬಗ್ಗೆ ಚರ್ಚಿಸಬಹುದು. ಅದರ ಬಗ್ಗೆ ಯಾವ ಆಕ್ಷೇಪಣೆಯೂ ಇಲ್ಲ. ಒಂದು ಪಕ್ಷವು ನಿರ್ದಿಷ್ಟ ವ್ಯಕ್ತಿಯೊಬ್ಬರನ್ನು ಆ ಪಕ್ಷದ ನಾಯಕರಾಗಿ ಆಯ್ಕೆ ಮಾಡಿದ್ದರೆ ಒಂದು ವೇಳೆ ಪಕ್ಷವು ಮತ್ತೊಬ್ಬ ವ್ಯಕ್ತಿಯನ್ನು ನಾಯಕನಾಗಿ ಆಯ್ಕೆ ಮಾಡಲು ನಿರ್ಧರಿಸಿದರೆ ಇತ್ಯಾದಿ. ಇಂಥವುಗಳನ್ನು ಸದನದಲ್ಲಿ ಚರ್ಚಿಸುವ ಅಗತ್ಯವಿಲ್ಲ. ಒಂದು ಸಚಿವ ಸಂಪುಟವನ್ನು ರಚಿಸಬೇಕಾಗಿದ್ದಾಗ ಮತ್ತು ಬಹುಮತದ ಪಕ್ಷವು ಒಬ್ಬ ನಾಯಕನನ್ನು ಆಯ್ಕೆ ಮಾಡಿದಾಗ, ಅಂತಹ ಆಯ್ಕೆ ಮಾಡಲು ಆ ಪಕ್ಷಕ್ಕೆ ಇರುವ ಅಧಿಕಾರ ಅಥವಾ ಸ್ವಾಮ್ಯತೆಯ ಬಗ್ಗೆ ಚರ್ಚಿಸುವ ಜವಾಬ್ದಾರಿ ಈ ಸದನಕ್ಕೆ ಸೇರಿದ್ದಲ್ಲ. ಇದು ಸ್ಪಷ್ಟವಾಗಿದೆ. ಜವಾಬ್ದಾರಿ ಸರ್ಕಾರಗಳು ಕಾರ್ಯ ನಿರ್ವಹಿಸುತ್ತಿರುವ ವಂತಹ ಯಾವುದೇ ಪ್ರಜಾಪ್ರಭುತ್ವದಲ್ಲಿಯೂ ಇಂತಹ ವಿಷಯಗಳನ್ನು ಸದನದ ನೆಲೆಯಲ್ಲಿ ಚರ್ಚಿಸುವಂತಹ ಪೂರ್ವ ನಿದರ್ಶನಗಳಿಲ್ಲ. ಈ ಸಂದರ್ಭದಲ್ಲಿ ಏನಾಗಿದೆ? ಬಹುಮತದ ಪಕ್ಷಕ್ಕೆ ಈ ರಾಜ್ಯದ ಆಡಳಿತವನ್ನು ನಡೆಸಿಕೊಂಡು ಹೋಗುವ ಕಾರ್ಯಭಾರವನ್ನು ಒಪ್ಪಿಸಲಾಗಿದೆ. ಕೆಲವೊಂದು ಬೆಳವಣಿಗೆಗಳನ್ನು ಪಕ್ಷವು ಎದುರಿಸಬೇಕಾಯಿತು. ಪಕ್ಷ ಆ ಅಂಶಗಳನ್ನು ಪರಿಶೀಲಿಸಿದೆ ಮತ್ತು ನಿರ್ಧಾರಕ್ಕೆ ಬಂದಿದೆ. ಆಡಳಿತ ನಡೆದುಕೊಂಡು ಹೋಗುತ್ತಿದೆ. ಆ ವಿಷಯವನ್ನು ಕುರಿತು ಸದನದಲ್ಲಿ ಚರ್ಚಿಸುವುದು ಸರಿಯಲ್ಲ ಎಂದು ನನ್ನ ಭಾವನೆ. ಇಂತಿಂತಹ ಬೆಳವಣಿಗೆಗಳಿಂದಾಗಿ ಆಡಳಿತಕ್ಕೆ ತೊಂದರೆಯಿದೆ ಎಂದು ಸಾಮಾನ್ಯ ರೀತಿಯಲ್ಲಿ ಹೇಳುವ ಅಧಿಕಾರ ಸನ್ಮಾನ್ಯ ಸದಸ್ಯರಿಗೆ ಇರಬಹುದು. ಸಾಧಾರಣ ವಿಷಯವೆಂಬಂತೆ ಹೇಳಬಹುದೇ ಹೊರತು ಪಕ್ಷದ ಕಾರ್ಯ ನಿರ್ವಹಣೆಯ ವಿವರಗಳ ಬಗ್ಗೆ ಚರ್ಚಿಸಬೇಕಿಲ್ಲ. ಇದೆಲ್ಲ ಎಲ್ಲರಿಗೂ ಚೆನ್ನಾಗಿ ತಿಳಿದಿರುವ ಅಂಶ. ಇತರ ಅನೇಕ ರಾಜ್ಯಗಳಲ್ಲಿ, ಸದನದಲ್ಲಿ ಬಹುಮತವಿರುವಂತಹ ಪಕ್ಷಗಳು ನಾಯಕರನ್ನು ಬದಲಾವಣೆ ಮಾಡಿದ ಅನೇಕ ನಿದರ್ಶನಗಳಿವೆ. ಆದರೆ ನನಗೆ ತಿಳಿದಿರುವ ಮಟ್ಟಿಗೆ ಇಂತಹ ವಿಷಯಗಳನ್ನು ಸದನದ ನೆಲೆಯಲ್ಲಿ ಚರ್ಚಿಸಿದಂತಹ

ಯಾವ ಪೂರ್ವ ನಿದರ್ಶನವೂ ಇಲ್ಲ. ಆದ್ದರಿಂದ ಯಾವ ವಿಷಯದ ಬಗ್ಗೆ ಟೀಕಿಸಬಹುದು ಯಾವ ವಿಷಯದ ಬಗ್ಗೆ ಟೀಕಿಸಕೂಡದು ಎಂಬ ಬಗ್ಗೆ ನಾವು ಖಚಿತ ಗೆರೆ ಹಾಕಿಕೊಳ್ಳುವ ಅಗತ್ಯವಿದೆ. ಈಗ ಆಡಳಿತವನ್ನು ನಡೆಸುತ್ತಿರುವ ಬಹುಮತದ ಪಕ್ಷದಲ್ಲಿ ಏನಾಗಿದೆ ಎಂಬುದರ ವಿವರಗಳನ್ನು ಮಾನ್ಯ ಸದಸ್ಯರು ಚರ್ಚಿಸುವುದಕ್ಕೆ ಅವಕಾಶವಿಲ್ಲ ಎಂದು ಅನ್ನಿಸುತ್ತದೆ. ಈ ವಿಷಯದಲ್ಲಿ ಒಂದು ಖಚಿತ ರೂಲಿಂಗ್‌ನ ಅಗತ್ಯವಿದೆ.

**ಜನಾಬ್ ಜೆ ಮೊಹಮದ್ ಇಮಾಂ:-** ನಾನು ವಿಷಯದ ಸಾಮಾನ್ಯ ಅಂಶದ ಬಗೆಗಷ್ಟೇ ಮಾತಾಡುತ್ತೇನೆ. ಯಾರು ಪರವಾಗಿ ಮತ ಹಾಕಿದರು. ಯಾರು ವಿರುದ್ಧವಾಗಿ ಮತ ಹಾಕಿದರು ಎಂಬ ವಿವರಗಳಿಗೆ ಹೋಗುವುದಿಲ್ಲ. ಆಗಬಹುದೆ?

## 6. ಕಾಮಗಾರಿ ಕೆಲಸಗಳ ವೆಚ್ಚಗಳನ್ನು ಕುರಿತು

### ವಿಧಾನಸಭಾ ಕಲಾಪ. 19 ಜನವರಿ 1951

**ಶ್ರೀ ಕೆ. ಚೆಂಗಲರಾಯರೆಡ್ಡಿಯವರು:-** ಸನ್ಮಾನ್ಯ ಗೃಹ ಮಂತ್ರಿಗಳು ಹೇಳಿದ ಅಂಶಗಳಿಗೆ ಪೂರಕವಾಗಿ ನಾನು ಇನ್ನೂ ಕೆಲವು ಮಾತುಗಳನ್ನು ಹೇಳಬಯಸುತ್ತೇನೆ. ಹಣಕಾಸು ವಿಲಿನೀಕರಣ ನಡೆದಾಗ ಹಾಗೂ ಮಿಲಿಟರಿಯನ್ನು ಕೇಂದ್ರಕ್ಕೆ ವರ್ಗಾಯಿಸುವ ಕೆಲಸ ನಡೆದಾಗ ಅದರಲ್ಲಿ 'Indian Standard Force' ಎಂದು ಏನು ಹೇಳುತ್ತೇವೆ. ಅವು ಮಾತ್ರ ಸೇರಿದ್ದವು. ಭಾರತ ಸರ್ಕಾರವು ಮಂಜೂರು ಮಾಡಿದ Standard Forces ಗಳಲ್ಲದೆ ನಮ್ಮ ಸೈನ್ಯದಲ್ಲಿ B Force ಎಂಬುವೂ ಇವೆ. ಹೀಗಾಗಿ ನಾವು ನಮ್ಮ ಸೇನೆಯನ್ನು ಕೇಂದ್ರಕ್ಕೆ ವರ್ಗಾಯಿಸಿದಾಗ B Force ಗಳ ಹೊಣೆಗಾರಿಕೆಯನ್ನು ನಾವೇ ವಹಿಸಿಕೊಳ್ಳಬೇಕಾಯಿತು. ಮತ್ತು ಅವುಗಳ ಅನುಪಾಲನೆಯ ವಿಷಯ ಕೇಂದ್ರಕ್ಕೆ ಸೇರಲಿಲ್ಲ. ಇದರಿಂದ ಸೇವೆಯ ಕೆಲವು ಘಟಕಗಳು ನಮ್ಮಲ್ಲಿಯೇ ಉಳಿದುಕೊಂಡಿವೆ. ಬಹುತೇಕವಾಗಿ ಇವೆಲ್ಲವೂ ಬಾಡಿಗಾರ್ಡ್ ಕಟ್ಟಡಗಳು ಹಾಗೂ ಇನ್ನಿತರ ಕಟ್ಟಡಗಳಲ್ಲಿರುವಂಥವೇ ಆಗಿವೆ. ಇದು ವಿಷಯ. ಆದ್ದರಿಂದ ಸೇವೆ ಹಾಗೂ ಸೇನೆಗೆ ಸಂಬಂಧಿಸಿದ ಕಟ್ಟಡಗಳ ವರ್ಗಾವಣೆ ನಡೆದಾಗ Standard Force ಗಳು ಹಾಗೂ B Force ಗಳನ್ನು ಒಳಗೊಂಡ ಇಡೀ ಸೈನ್ಯವನ್ನು ಹಾಗೂ ಅದಕ್ಕೆ ಸಂಬಂಧಿಸಿದ ಕಟ್ಟಡಗಳನ್ನು ಭಾರತ ಸರ್ಕಾರಕ್ಕೆ ವರ್ಗಾಯಿಸಬಹುದು ಎಂದು ಅರ್ಥವಲ್ಲ. ಒಂದು ವೇಳೆ ಹಾಗೇನಾದರೂ ಆಗಿದ್ದಿದ್ದರೆ ಆ ಕಟ್ಟಡಗಳನ್ನೂ ಕೂಡ ಕೇಂದ್ರಕ್ಕೆ ವರ್ಗಾಯಿಸುವ ಬಗ್ಗೆ ಯೋಚಿಸಬಹುದಿತ್ತು. ಅದರ ವೆಚ್ಚವನ್ನು ಅರಮನೆ ನಿರ್ವಹಿಸುತ್ತಿತ್ತೋ ಅಥವಾ ಇನ್ನಾರು ನಿರ್ವಹಿಸುತ್ತಿದ್ದರು ಎಂಬುದು ಮುಖ್ಯವಾಗುತ್ತಿರಲಿಲ್ಲ. ಆದರೆ ಸಂದರ್ಭ ಹೀಗಿರಲಿಲ್ಲ. ಆದ್ದರಿಂದ B Force ಗಳ ಅನುಪಾಲನೆಯ ಹೊಣೆಗಾರಿಕೆ ನಮ್ಮ ಪಾಲಿಗೇ ಉಳಿದಿದೆ ಮತ್ತು ಬಾಡಿಗಾರ್ಡ್‌ಗಳಿರುವ ಕಟ್ಟಡಗಳು ಮೈಸೂರು ಸರ್ಕಾರದ ಅಧೀನದಲ್ಲಿಯೇ ಉಳಿಯುತ್ತವೆ. ಇದು ಮೊದಲ ಅಂಶ.

ಎರಡನೆಯ ಅಂಶವೇನೆಂದರೆ - ಆ ಕಟ್ಟಡಗಳನ್ನು ಅರಮನೆಯ ವೆಚ್ಚದಲ್ಲಿ ಕಟ್ಟಲಾಗಿದ್ದಿತು. ಸರ್ಕಾರ ಆ ಕಟ್ಟಡಗಳ ನಿರ್ಮಾಣಕ್ಕೆ ಹಣ ಕೊಟ್ಟಿಲ್ಲ. ಒಂದೋ ಎರಡೋ ಕಟ್ಟಡಗಳನ್ನು ಸರ್ಕಾರ ಕೊಂಡುಕೊಂಡಿದೆ. ಅದೆಲ್ಲವನ್ನೂ ಲೆಕ್ಕಕ್ಕೆ ತೆಗೆದುಕೊಳ್ಳಲಾಗಿದೆ. ಈಗ ನಾವು ಕೊಂಡುಕೊಂಡಿರುವಂತಹ ಕಟ್ಟಡಗಳು ಅರಮನೆಯ ವೆಚ್ಚದಲ್ಲಿ ನಿರ್ಮಿತವಾದವು ಎಂದು ತಿಳಿದುಬಂದಿದೆ. ಸೇನೆಯ ವರ್ಗಾವಣೆ ನಡೆದಾಗ ಮೈಸೂರು ಸರ್ಕಾರವು B Force ಗಳನ್ನು ವಹಿಸಿಕೊಂಡಿತು. ಅರಮನೆಗೂ ಇದಕ್ಕೂ ಸಂಬಂಧವಿಲ್ಲ.

ನಾವು B Force ಗಳನ್ನು ಮತ್ತು ಅದಕ್ಕೆ ಸಂಬಂಧಿಸಿದ ಕಟ್ಟಡಗಳನ್ನು ನಮ್ಮ ವಶಕ್ಕೆ ತೆಗೆದುಕೊಂಡಾಗ, ಈ ಕಟ್ಟಡಗಳನ್ನು ಅರಮನೆಯ ವೆಚ್ಚದಲ್ಲಿ ಕಟ್ಟಿದ್ದರಿಂದ ಸರ್ಕಾರವು ಅವುಗಳನ್ನು ಖರೀದಿಸಿ ತನ್ನ ವಶಕ್ಕೆ ತೆಗೆದುಕೊಳ್ಳಬೇಕೆಂಬ ಅಹವಾಲನ್ನು ಅರಮನೆ ಮಂಡಿಸಿರುವುದು ಸಹಜವಾಗಿಯೇ ಇದೆ. ಅನಂತರ ನಾವು ಈ ಕಟ್ಟಡಗಳ ಬೆಲೆಯೇನು, ಅರಮನೆ ಎಷ್ಟು ಖರ್ಚು ಮಾಡಿತ್ತು ಎಂಬುದನ್ನು ನಿರ್ಧರಿಸುವ ಕ್ರಮವನ್ನು ಕೈಗೊಂಡೆವು. ಮಾತುಕತೆಯ ನಂತರ ಬೆಲೆಯನ್ನು ನಿಗದಿಸಲಾಯಿತು.

ಮೂರನೆಯದಾಗಿ, ಅರಮನೆಗೆ ಸೇರಿದ ಈ ಕಟ್ಟಡಗಳು ಅರಮನೆಯ ವೆಚ್ಚದಲ್ಲಿ ನಿರ್ಮಿತವಾದ್ದರಿಂದ ನಾವು ಅವುಗಳನ್ನು ಖರೀದಿಸಬೇಕಾಯಿತು. ಆದರೆ ಇದರಿಂದ ನಷ್ಟವೇನೂ ಆಗಿಲ್ಲ. ನಾವು ವಿಷಯವನ್ನು ಪರಿಶೀಲಿಸಿದ್ದೇವೆ. ಈ ಕಟ್ಟಡಗಳ ಸಲುವಾಗಿ 23 ಲಕ್ಷ ರೂ.ಗಳನ್ನು ನೀಡುತ್ತಿದ್ದೇವೆ. ಒಂದು ವೇಳೆ ನಾವು ಈ ಕಟ್ಟಡಗಳನ್ನು ಮಾರಿದರೆ ಅಥವಾ ಇನ್ನಿತರ ಉದ್ದೇಶಗಳಿಗೆ ಬಳಸುವುದಾದರೆ ನಮಗೆ 23 ಲಕ್ಷ ರೂ.ಗಳಿಗಿಂತ ಹೆಚ್ಚು ಸಿಗುವುದರಲ್ಲಿ ಸಂದೇಹವಿಲ್ಲ. ನಾವು ಒಂದು ವೇಳೆ ಇವುಗಳನ್ನು ಮಾರಿದರೆ 5 ರಿಂದ 7 ಲಕ್ಷ ರೂ.ಗಳಷ್ಟು ಲಾಭ ದೊರೆಯುವುದೆಂದು ಅಂದಾಜು ಮಾಡಲಾಗಿದೆ. ಬಹುಶಃ ನಾವು ಈ ಕಟ್ಟಡಗಳನ್ನು ಮಾರುತ್ತೇವೆ ಇಲ್ಲವೇ ಇನ್ನಿತರ ಉದ್ದೇಶಗಳಿಗೆ ಬಳಸಿಕೊಳ್ಳುತ್ತೇವೆ. B Force ನ್ನು ಸಂಪೂರ್ಣವಾಗಿ ಹಾಗೇ ಮುಂದುವರೆಸಿಕೊಂಡು ಬರಲಾಗುವುದಿಲ್ಲ ಎಂಬ ಅಂಶವನ್ನು ಬಜೆಟ್ ಅಧಿವೇಶನದಲ್ಲಿ ಸದನಕ್ಕೆ ತಿಳಿಸಲಾಗುವುದು. ಮುಂದಿನ ವರ್ಷದಿಂದ ನಮಗೆ ಎರಡು ದಳಗಳಷ್ಟಿದ್ದರೆ ಸಾಕು. ಇಲ್ಲದಿದ್ದಲ್ಲಿ ನಾವು ಈ ಸಲುವಾಗಿ 12 ರಿಂದ 16 ಲಕ್ಷ ರೂ.ಗಳಷ್ಟು ಖರ್ಚು ವಹಿಸಿಕೊಳ್ಳಬೇಕಾಗುತ್ತದೆ. ಪ್ರಸ್ತುತ ವರ್ಷದಲ್ಲಿ ನಾವು ಈ ಸಲುವಾಗಿ 8 ಲಕ್ಷ ರೂ.ಗಳನ್ನು ತೆಗೆದಿರಿಸಿದ್ದೇವೆ. ನಾವು ತಕ್ಷಣವೇ ಎಲ್ಲವನ್ನೂ ಕಡಿಮೆ ಮಾಡುವುದು ಸಾಧ್ಯವಿಲ್ಲ. ಭಾರತ ಸರ್ಕಾರ, ನಮ್ಮ ಸರ್ಕಾರ ಹಾಗೂ ಮಹಾರಾಜರ ನಡುವೆ ಆಗಿರುವ ಒಪ್ಪಂದದ ಪ್ರಕಾರ ನಾವು B Force ಗಳಲ್ಲಿ ಕೇವಲ ಎರಡು ಕಂಪನಿಗಳನ್ನು ಮಾತ್ರ ಉಳಿಸಿಕೊಂಡು ಉಳಿದದ್ದೆನ್ನೆಲ್ಲ ವಿಭಜಿಸಬಹುದೆಂದು ಇತ್ಯರ್ಥವಾಗಿದೆ. ಇದರಿಂದ ನಮಗೆ ಇದುವರೆಗೆ ತಗಲುತ್ತಿದ್ದ 16 ಲಕ್ಷ ರೂ.ಗಳಿಗೆ ಪ್ರತಿಯಾಗಿ ಮುಂದಿನ ವರ್ಷದ ಕೊನೆಯಿಂದ 3 ಲಕ್ಷ ರೂ. ವೆಚ್ಚ ಮಾತ್ರ ತಗಲುತ್ತದೆ. B ಬಲಗಳಲ್ಲಿ ನಾವು ಇಷ್ಟನ್ನು ಕಡಿಮೆ ಮಾಡಿದಾಗ ಕಟ್ಟಡಗಳನ್ನು ಇತರೆ ಉದ್ದೇಶಗಳಿಗೆ ಬಳಸಿಕೊಳ್ಳಬಹುದು ಇಲ್ಲವೆ ಕಟ್ಟಡಗಳನ್ನು ಮಾರಿ ಹಣ ಪಡೆಯಬಹುದು.

ಈ ವ್ಯವಹಾರದ ಕೆಲವು ವಿವರಗಳು ಹೀಗಿವೆ. ಒಟ್ಟಿನಲ್ಲಿ ಈ ವ್ಯವಹಾರದಲ್ಲಿ ಸರ್ಕಾರ ಯಾವುದೇ ನಷ್ಟವನ್ನು ವಹಿಸಿಕೊಳ್ಳಬೇಕಾಗಿಲ್ಲ ಎಂಬುದಾಗಿ ಸದನಕ್ಕೆ ಭರವಸೆ ನೀಡುತ್ತೇನೆ.

ಶ್ರೀ ಬಿ. ಹುಚ್ಚೇಗೌಡ: ಈ ವ್ಯವಹಾರವನ್ನು ಬುಕ್ ಮೌಲ್ಯಕ್ಕೆ ಅನುಗುಣವಾಗಿ ಮಾಡಲಾಗಿದೆಯೋ ಅಥವಾ ಅಂದಾಜು ಮೌಲ್ಯಕ್ಕೆ ಅನುಗುಣವಾಗಿ ಮಾಡಲಾಗಿದೆಯೋ?

ಶ್ರೀ ಕೆ. ಚೆಂಗಲರಾಯರೆಡ್ಡಿ:- ಲೋಕೋಪಯೋಗಿ ಇಲಾಖೆಯು ಅಂದಾಜು ಮಾಡಿದ ಮೌಲ್ಯವು ಅಧಿಕವಾಗಿದ್ದಿತು. ನಾವು ಅರಮನೆಯೊಂದಿಗೆ ಮಾತುಕತೆ ನಡೆಸಿ ಕಡಿಮೆ ಬೆಲೆ ನಿರ್ಧರಿಸಿದೆವು.

## 7. ರಾಜಪ್ರಮುಖರ ಭಾಷಣದ ಮೇಲೆ ವ್ಯಕ್ತವಾದ ಟೀಕೆಗಳು

### ವಿಧಾನಸಭಾ ಕಲಾಪ - 19, ಜನವರಿ 1951

ಕೆ. ಚೆಂಗಲರಾಯರೆಡ್ಡಿಯವರು-(ಸದನದ ನಾಯಕರು)

ಮಾನ್ಯ ಸಭಾಪತಿಯವರೇ, ಇಷ್ಟು ಹೊತ್ತಾದ ಮೇಲೆ ದೀರ್ಘ ಭಾಷಣ ಮಾಡಿ ಸದನದ ತಾಳ್ಮೆಯನ್ನು ಪರೀಕ್ಷಿಸುವುದು ಸರಿಯಲ್ಲ ಎಂದು ನನ್ನ ಭಾವನೆ.

ರಾಜಪ್ರಮುಖರು ತಮ್ಮ ಭಾಷಣದಲ್ಲಿ ಉಲ್ಲೇಖಿಸಲೇಬೇಕಾಗಿದ್ದ ಕೆಲವು ಅಂಶಗಳನ್ನು ಬಿಟ್ಟುಬಿಟ್ಟಿದ್ದಾರೆ ಎಂದು ಅವರ ಭಾಷಣ ಸಂಬಂಧವಾಗಿ ಟೀಕೆಗಳು ವ್ಯಕ್ತವಾದವು. ಆದರೆ ರಾಜಪ್ರಮುಖರ ಭಾಷಣದ ವ್ಯಾಪ್ತಿಯೇನು ಎಂಬ ಬಗ್ಗೆ ಸದನಕ್ಕೆ ಅದರಲ್ಲಿಯೂ ಕೆಲವರಿಗೆ ಸಾಕಷ್ಟು ತಿಳಿದಿಲ್ಲವೇನೋ ಎಂದು ಅನ್ನಿಸುತ್ತಿದೆ. ರಾಜಪ್ರಮುಖರ ಭಾಷಣದಲ್ಲಿ ಸರ್ಕಾರದ ಆಡಳಿತವನ್ನು ಕುರಿತು ಎಲ್ಲ ಅಂಶಗಳನ್ನೂ ಒಳಪಡಿಸಿಕೊಳ್ಳುವುದು ಸಾಧ್ಯವಿಲ್ಲ. ಅದು ರಾಜಪ್ರಮುಖರ ಭಾಷಣದ ಉದ್ದೇಶವೂ ಅಲ್ಲ. ಸದನವು ಮುಂದೆ ಚರ್ಚಿಸಬೇಕಾದ ವಿಷಯಗಳನ್ನು ಸೂಚಿಸುವುದು ರಾಜಪ್ರಮುಖರ ಭಾಷಣದ ಉದ್ದೇಶ. ಇದಕ್ಕೆ ಸಂಬಂಧಿಸಿದಂತೆ ಅವರು ಉದ್ಘಾಟನಾ ಭಾಷಣ ಮಾಡುತ್ತಾರೆ ಮತ್ತು ಪ್ರಾಸಂಗಿಕವಾಗಿ ಸರ್ಕಾರದ ನೀತಿಯ ಕೆಲವು ಮುಖ್ಯಾಂಶಗಳ ಉಲ್ಲೇಖ ಮಾಡುತ್ತಾರೆ.

ಸಂಸತ್ತನ್ನು ಉದ್ಘಾಟಿಸುವ ಸಂದರ್ಭದಲ್ಲಿ ರಾಷ್ಟ್ರಪತಿಯವರು ಮಾಡುವ ಭಾಷಣಗಳನ್ನು ಓದಿದವರಿಗೆ ಹಾಗೂ ವಿವಿಧ ರಾಜ್ಯಗಳ ವಿಧಾನಸಭಾ ಕಲಾಪಗಳನ್ನು ಉದ್ಘಾಟಿಸಿ ರಾಜ್ಯಪಾಲರುಗಳು ಮಾಡುವ ಭಾಷಣಗಳನ್ನು ತಿಳಿದವರಿಗೆ ನಾವೂ ಕೂಡ ಅದೇ ಪರಂಪರೆಯನ್ನು ಉಳಿಸಿಕೊಂಡು ಬಂದಿದ್ದೇವೆ, ಆದರಿಂದ ಕಿಂಚಿತ್ತೂ ವಿಚಲಿತರಾಗಿಲ್ಲ ಎಂಬ ಅಂಶ ಸ್ಪಷ್ಟವಾಗುತ್ತದೆ. ನಮ್ಮ ಹೊಸ ಸಂವಿಧಾನದ ಉದ್ಘಾಟನೆಯಾದ ನಂತರ ವಿದಾನಸಭೆಯ ಮೊದಲ ಅಧಿವೇಶನದಲ್ಲಿ ರಾಜಪ್ರಮುಖರು ಮಾಡಿದ ಭಾಷಣವನ್ನು ಕುರಿತಂತೆ ಭಾಷಣ ತುಂಬ ದೀರ್ಘವಾಯಿತು. ಅದು ಆದಷ್ಟು ಚಿಕ್ಕದಾಗಿ ಚೊಕ್ಕವಾಗಿ ಇರಬೇಕಿತ್ತು ಎಂಬ ಟೀಕೆ ವ್ಯಕ್ತವಾಯಿತು. ಇದನ್ನು ಗಮನದಲ್ಲಿಟ್ಟುಕೊಂಡು ಭಾಷಣಗಳು ಸಾಧ್ಯವಾದಷ್ಟು ಸಂಕ್ಷಿಪ್ತವಾಗಿರುವಂತೆ ನಾವು ನೋಡಿಕೊಳ್ಳುತ್ತಿದ್ದೇವೆ ವಿಧಾನ ಸಭೆಯ ಅಧಿವೇಶನದಲ್ಲಿ ಚರ್ಚೆ ನಡೆಸಬೇಕಾದ ವಿಷಯಗಳ ಸೂಚನೆ ಹಾಗೂ ಕೆಲವು ಬಹುಮುಖ್ಯ ಅಂಶಗಳ ಉಲ್ಲೇಖವಷ್ಟೆ ಅವರ ಭಾಷಣದಲ್ಲಿರುತ್ತದೆ. ಆದ್ದರಿಂದ ಅವರ ಭಾಷಣದಲ್ಲಿ ಕೆಲವು ಅಂಶಗಳ ಉಲ್ಲೇಖವಿರಲಿಲ್ಲ ಎಂಬ ಟೀಕೆ ಸರಿಯಾದುದಲ್ಲ. ಈ ಆಧಾರದ ಮೇಲೆ ಅವರ ಭಾಷಣವನ್ನು ನೀವು ಟೀಕಿಸುವಂತಿಲ್ಲ ಮತ್ತು ಅವರ ಭಾಷಣದಲ್ಲಿ ಇಂತಿಂತಹ ವಿಷಯಗಳಿರಲಿಲ್ಲ ಎಂದು ಚಿಂತಿಸುವಂತಿಲ್ಲ. ನಾವು ಈಗ ಒಂದು ಮಧ್ಯ ಮಾರ್ಗ ಅನುಸರಿಸುತ್ತಿದ್ದೇವೆ. ರಾಜಪ್ರಮುಖರ, ರಾಜ್ಯಪಾಲರ ಅಥವಾ ರಾಷ್ಟ್ರಪತಿಯವರ ಭಾಷಣದಲ್ಲಿ ಏನೇನು ಅಂಶಗಳಿರಬೇಕು ಎಂಬ ಬಗ್ಗೆ ಸೂಕ್ತ ಸಂಪ್ರದಾಯಗಳನ್ನು ಭದ್ರವಾಗಿ ಸ್ಥಾಪಿಸಲು ಇನ್ನೂ ಸ್ವಲ್ಪ ಕಾಲಾವಕಾಶ ಬೇಕಾಗುತ್ತದೆ ಮತ್ತು ಇಂತಹ ಭಾಷಣಗಳ ಮೇಲಿನ ಚರ್ಚೆಯ ವ್ಯಾಪ್ತಿ ಎಷ್ಟಿರಬೇಕು ಎಂಬುದನ್ನು ಕೂಡ ನಿರ್ಧರಿಸಬೇಕಾಗಿದೆ. ಕಾಲಕ್ರಮೇಣ ಈ ವಿಷಯವಾಗಿ ನಾವು ಸೂಕ್ತವಾದ ಹಾಗೂ ಆರೋಗ್ಯಕರವಾದ ಸಂಪ್ರದಾಯಗಳನ್ನು

ಸ್ಥಾಪಿಸುವುದು ಸಾಧ್ಯವಾಗಬಹುದು ಎಂದು ಆಶಿಸುತ್ತೇನೆ. ಆದರೆ ಒಂದು ಮಾತನ್ನಂತೂ ಸ್ಪಷ್ಟಪಡಿಸಬಹುದು. ಈ ಭಾಷಣಗಳು ಆಡಳಿತದ ವರದಿಗಳಂತೆ ಇರಲು ಸಾಧ್ಯವಿಲ್ಲ ಅಥವಾ ಹಿಂದಿನ ವ್ಯವಸ್ಥೆಯಲ್ಲಿ ಇದ್ದಂತೆ ಪ್ರಜಾಪ್ರತಿನಿಧಿ ಸಭೆಯನ್ನುದ್ದೇಶಿಸಿ ದಿವಾನರು ಮಾಡುತ್ತಿದ್ದ ಭಾಷಣಗಳ ಸ್ವರೂಪದಲ್ಲಿರಲೂ ಸಾಧ್ಯವಿಲ್ಲ.

ಈ ಚರ್ಚೆಯಲ್ಲಿ ಭಾಗವಹಿಸಿದಂತಹ ವಿವಿಧ ಸದಸ್ಯರುಗಳು ಹೇಳಿದ ಎಲ್ಲ ಅಂಶಗಳನ್ನೂ ಇಲ್ಲಿ ಉಲ್ಲೇಖಿಸಲು ಸಾಧ್ಯವಾಗದು. ಮಾನ್ಯ ಸದಸ್ಯರಲ್ಲಿ ಬಹಳಷ್ಟು ಮಂದಿ ಸನ್ಮಾನ್ಯ ಗೃಹ ಸಚಿವರು ಹಾಗೂ ಸನ್ಮಾನ್ಯ ಹಣಕಾಸು ಸಚಿವರು ತಮ್ಮ ಭಾಷಣದಲ್ಲಿ ಹೇಳಿದ ಅಂಶಗಳನ್ನು ಪ್ರಸ್ತಾಪಿಸಿದ್ದಾರೆ. ಇನ್ನೂ ಕೆಲವು ಸದಸ್ಯರು ಹಾಗೂ ಈ ನಿರ್ಣಯವನ್ನು ಮಂಡಿಸಿದವರೂ ಕೂಡ ಕೆಲವೊಂದು ಅಂಶಗಳನ್ನು ಹೇಳಿದ್ದಾರೆ. ಆದ್ದರಿಂದ ಪುನಃ ಅದೇ ಅಂಶಗಳನ್ನು ನಾನು ಪ್ರಸ್ತಾಪಿಸುವುದಿಲ್ಲ. ಸನ್ಮಾನ್ಯ ಸದಸ್ಯ ಜನಾಬ್ ಮೊಹಮದ್ ಇಮಾಂ ಅವರು ಮಂಡಿಸಿದ ತಿದ್ದುಪಡಿಯಲ್ಲಿ ಪ್ರಸ್ತಾಪಿಸಿದ ನಾಲ್ಕು ಮುಖ್ಯ ಅಂಶಗಳ ಬಗ್ಗೆ ಮಾತ್ರ ನಾನು ಪ್ರಸ್ತಾಪಿಸುತ್ತೇನೆ. ಆಹಾರ ಉತ್ಪಾದನೆಯಲ್ಲಿ ಏರಿಕೆ ಹಾಗೂ ಆಹಾರ ಹತೋಟಿ ಕ್ರಮಗಳನ್ನು ಮುಂದುವರೆಸಿದ್ದರ ಸಂಬಂಧವಾಗಿ ಹೆಚ್ಚುತ್ತಿರುವ ತೊಂದರೆಗಳನ್ನು ಅವರು ವಿಶೇಷವಾಗಿ ಉಲ್ಲೇಖಿಸಿದ್ದಾರೆ. ಈ ವಿಷಯ ಕುರಿತು ಸನ್ಮಾನ್ಯ ಗೃಹ ಮಂತ್ರಿಗಳು ಸದನಕ್ಕೆ ಕೆಲವು ಮಾಹಿತಿಗಳನ್ನು ನೀಡಿದ್ದಾರೆ. ಸರ್ಕಾರದ ಈ ಬಹು ಮುಖ್ಯ ಕಾರ್ಯಕ್ರಮಕ್ಕೆ ಸಂಬಂಧಿಸಿದಂತೆ ಇನ್ನೂ ವಿವರವಾದ ಮಾಹಿತಿಯನ್ನು ಕೊಡುವುದು ಈ ಹಂತದಲ್ಲಿ ಸಾಧ್ಯವಿಲ್ಲ. ನಾನು ಇಷ್ಟು ಮಾತ್ರ ಹೇಳಬಲ್ಲೆ, ಸರ್ಕಾರ ಈ ಎರಡು- ಮೂರು ವರ್ಷಗಳಲ್ಲಿ ಯಾವುದಾದರೂ ಸಮಸ್ಯೆಗೆ ಅತಿ ಹೆಚ್ಚು ಗಮನ ನೀಡಿರುವುದಾದರೆ ಅದು ಆಹಾರ ಹೆಚ್ಚು ಬೆಳೆಯಿರಿ ಎಂಬ ಕಾರ್ಯಕ್ರಮಕ್ಕೆ ಸಂಬಂಧಿಸಿದ್ದು ಆಗಿದೆ. ಆಹಾರ ಹೆಚ್ಚು ಬೆಳೆಯಿರಿ ಎಂಬ ಕಾರ್ಯಕ್ರಮಕ್ಕೆ ಮೈಸೂರು ಸರ್ಕಾರ ಮಾತ್ರವೇ ಅಲ್ಲ, ಕೇಂದ್ರ ಸರ್ಕಾರವೂ ಕೂಡ ಅತ್ಯುನ್ನತ ಆದ್ಯತೆ ನೀಡಿದೆ. ಈ ಯೋಜನೆಗೆ ಸಂಬಂಧಿಸಿದಂತೆ ಮಾತ್ರ ಭಾರತ ಸರ್ಕಾರ ಯಾವಾಗಲೂ ಅತ್ಯಂತ ಉದಾರವಾಗಿಯೇ ಇದೆ. ಅವರು ತಮ್ಮದೇ ಆದ ಹಣಕಾಸು ತೊಂದರೆಗಳನ್ನು ಗಮನದಲ್ಲಿಟ್ಟುಕೊಂಡು ಉದಾರವಾದ ಅನುದಾನಗಳನ್ನು ಕೊಡುತ್ತಿದ್ದಾರೆ. ವಿವಿಧ ರಾಜ್ಯಗಳಿಗೆ ನೆರವು ನೀಡುತ್ತಿದ್ದಾರೆ. ಮೈಸೂರು ಸರ್ಕಾರ ಮೂರು ವರ್ಷದ ಕಾರ್ಯಕ್ರಮವೊಂದನ್ನು ಹಾಕಿಕೊಂಡಿದೆ. ಮತ್ತು ಭಾರತ ಸರ್ಕಾರದೊಂದಿಗೆ ಸಮಾಲೋಚಿಸಿದ ನಂತರ ಈ ಕಾರ್ಯಕ್ರಮವನ್ನು ಅತ್ಯಂತ ಚುರುಕಾಗಿ ಅನುಸರಿಸುತ್ತಿದೆ ಮತ್ತು ರಾಜಪ್ರಮುಖರು ಭಾಷಣದಲ್ಲಿ ತಿಳಿಸಿದಂತೆ ಈ ಉದ್ದೇಶಕ್ಕಾಗಿ ಕೇಂದ್ರಕ್ಕಾಗಿ ಕೇಂದ್ರದಿಂದ ದೊರೆತಿರುವ ನೆರವಿನ ಜೊತೆಗೆ ನಮ್ಮ ಸಂಪನ್ಮೂಲಗಳನ್ನೂ ಸೇರಿಸಿಕೊಂಡು ನಾವು ಮುಂದೆ ಹೆಜ್ಜೆ ಹಾಕಿದ್ದೇವೆ ಇದರಲ್ಲಿ ಸ್ವಲ್ಪಮಟ್ಟಿನ ಯಶಸ್ಸೂ ಸಿಕ್ಕಿದೆ. ಮುಂಬರುವ ದಿನಗಳಲ್ಲಿ ಈ ಯೋಜನೆಯ ಫಲಿತಾಂಶ ಇನ್ನೂ ಸ್ಪಷ್ಟವಾಗಿ ಗೋಚರಿಸಲಿದೆ. ನಿಜಾಂಶ ಹೀಗಿರುವಾಗ, ಆಹಾರ ಉತ್ಪಾದನೆ ಹೆಚ್ಚಿಸುವ ವಿಷಯದಲ್ಲಿ ಹೆಚ್ಚು ಹೆಚ್ಚಿನ ತೊಂದರೆಗಳು ಎದುರಾಗುತ್ತಿವೆ ಎಂದು ಸನ್ಮಾನ್ಯ ಜನಾಬ್ ಮೊಹಮ್ಮದ್ ಇಮಾಂ ಅವರು ಏಕೆ ಹೇಳುತ್ತಿದ್ದಾರೋ ಅರ್ಥವಾಗುತ್ತಿಲ್ಲ. ಅವರು ಹೇಳಿದ್ದು ವಾಸ್ತವಾಂಶಕ್ಕೆ ಹೊರತಾಗಿದೆ. ಇದು ನ್ಯಾಯಯುತವಾದ ಟೀಕೆಯಲ್ಲ. ಈ ವಿಷಯಕ್ಕೆ ಸಂಬಂಧಿಸಿದ ಈ ನಿರ್ದಿಷ್ಟ ಅಂಶದ ಬಗ್ಗೆ ಇನ್ನಷ್ಟು ವಿವರಗಳನ್ನು ನೀಡುವ ಕಾಲಾವಕಾಶ ಇದ್ದಿದ್ದರೆ ಚೆನ್ನಾಗಿತ್ತು. ಕಳೆದ ಸಲ ಹೆಚ್ಚು ಆಹಾರ

ಬೆಳೆಯುವ ಯೋಜನೆಯ ವಿವಿಧ ಅಂಶಗಳಿಗೆ ಸಂಬಂಧಿಸಿದಂತೆ ಪೂರ್ಣ ವಿವರಗಳನ್ನು ಕೊಡುವ ವರದಿಯನ್ನು ಸದಸ್ಯರೆಲ್ಲರಿಗೂ ಕೊಡಲಾಗಿತ್ತು ಅಂತ ಅದುಕೊಂಡಿದ್ದೇನೆ. ಕೃಷಿ ಸುಧಾರಣೆಯ ಸಂಬಂಧವಾಗಿ ಕೈಗೊಂಡಿರುವ ನೀರಾವರಿ ಮುಂತಾದ ಕ್ರಮಗಳ ವಿವರಗಳೆಲ್ಲವೂ ಆ ವರದಿಯಲ್ಲಿವೆ. ಆ ವರದಿಯನ್ನು ಸನ್ಮಾನ್ಯ ಸದಸ್ಯರು ಮತ್ತೊಮ್ಮೆ ಓದುವ ಕ್ರಮ ತೆಗೆದುಕೊಂಡಿದ್ದೆ ಆದರೆ.....

**ಜನಾಬ್ ಜೆ. ಮೊಹಮ್ಮದ್ ಇಮಾಂ:-** ನನ್ನ ಹತ್ತಿರ ಅದರ ಪ್ರತಿ ಇದೆ.

**ಶ್ರೀ ಕೆ. ಚೆಂಗಲರಾಯರೆಡ್ಡಿಯವರು:-** ಸನ್ಮಾನ್ಯ ಸದಸ್ಯರು "Mysore on the march" ಎಂಬ ಬ್ರೊಷರ್ ವಿಷಯ ಹೇಳುತ್ತಿದ್ದಾರೆ. ಆದರೆ ನಾನು ಹೇಳುತ್ತಿರುವುದು ಕಳೆದ ಸಲ ವಿತರಿಸಲಾದ 'ಮೂರು ವರ್ಷದ ಕಾರ್ಯಕ್ರಮದ' ವರದಿ ಕುರಿತು ಹೆಚ್ಚು ಆಹಾರ ಬೆಳೆಯುವ ಯೋಜನೆಯಲ್ಲಿ ನಾವು ಏನೇನು ಮಾಡುತ್ತಿದ್ದೇವೆ ಎಂಬುದರ ಎಲ್ಲ ವಿವರಗಳೂ ಅದರಲ್ಲಿ ಸಿಗುತ್ತವೆ. ನೀರಾವರಿ ಯೋಜನೆಯಲ್ಲಿ ಪುನರುಜ್ಜೀವನ ಗೊಳಿಸಲಾಗಿರುವ ಕೆರೆಗಳ ವಿವರ, ಕಾಲುವೆ ದುರಸ್ತಿಗಳ ವಿವರ ಮೊದಲಾದ ಎಲ್ಲ ವಿವರಗಳೂ ಇದರಲ್ಲಿ ಸಿಗುತ್ತವೆ.

**ಶ್ರೀ ಎಲ್. ಸಿದ್ದಪ್ಪ:-** ಉಪಕರಣಗಳನ್ನು ಕೊಳ್ಳುವವರಿಗೆ ರಿಯಾತಿಗಳನ್ನು ದೊರಕಿಸುವ ವಿಷಯ ಏನಾಗಿದೆ?

**ಚೆಂಗಲರಾಯರೆಡ್ಡಿಯವರು:-** ಅದರ ವಿವರಗಳೂ ಕೂಡ ಇಲ್ಲಿವೆ.

**ಶ್ರೀ ಎಲ್. ಸಿದ್ದಪ್ಪನವರು:-** ಇದಕ್ಕೆ ಸಂಬಂಧಿಸಿದಂತೆ ನನಗೆ ಸ್ಪಷ್ಟೀಕರಣ ಬೇಕು. ಶಿವಮೊಗ್ಗದ ಒಂದಿಬ್ಬರು ವ್ಯಕ್ತಿಗಳು ಟ್ರಾಕ್ಟರ್‌ಗಳ ಖರೀದಿಗಾಗಿ ಅರ್ಜಿ ಸಲ್ಲಿಸಿದ್ದಾರೆ. ಆದರೆ ಸರ್ಕಾರದವರು ಇದಕ್ಕೆ ಯಾವ ನೆರವನ್ನೂ ನೀಡುತ್ತಿಲ್ಲ ಮತ್ತು ಇತರ ಕಡೆಯಿಂದ ಕೊಳ್ಳುವುದಕ್ಕೆ ಸಾಲವನ್ನೂ ಕೊಡುತ್ತಿಲ್ಲ ಎಂದು ತಿಳಿದು ಬಂದಿದೆ ಇಲಾಖೆ ಟ್ರ್ಯಾಕ್ಟರ್‌ಗಳನ್ನೇ ಕೊಳ್ಳಬೇಕೆಂದು ಒತ್ತಾಯಿಸುತ್ತಿರುವುದಾಗಿ ತಿಳಿದುಬಂದಿದೆ. ಅದನ್ನು ತೆಗೆದುಕೊಂಡರೆ ತೆಗೆದುಕೊಳ್ಳಿ ಇಲ್ಲದಿದ್ದರೆ ಬಿಡಿ ಅಂತ ಹೇಳುತ್ತಾರೆ. ಇದು ನಿಜವೆ?

**ಶ್ರೀ ಟಿ. ಮರಿಯಪ್ಪನವರು:-** ಸರ್ಕಾರವು ಹೊರಡಿಸಿರುವ ಏಕೈಕ ಆದೇಶವೆಂದರೆ ನಮ್ಮದೇ ಟ್ರ್ಯಾಕ್ಟರ್‌ಗಳನ್ನು Hire purchase ವ್ಯವಸ್ಥೆಯ ಅನ್ವಯ ನೀಡುವುದಕ್ಕೆ ಸಂಬಂಧಿಸಿದ್ದು. ನಮ್ಮಲ್ಲಿ ನಮ್ಮದೇ ಟ್ರ್ಯಾಕ್ಟರ್‌ಗಳಿವೆ. ಅವುಗಳನ್ನು Hire purchase ನಲ್ಲಿ ಕೊಡುತ್ತೇವೆ.

**ಕೆ. ಚೆಂಗಲರಾಯರೆಡ್ಡಿಯವರು:-** ಈ ಹಂತದಲ್ಲಿ ಆ ಎಲ್ಲ ವಿವರಗಳಿಗೆ ನಾನು ಹೋಗುವುದಿಲ್ಲ. ಆದರೆ ಮಾನ್ಯ ಸದಸ್ಯರು ತಡೆ ಒಡ್ಡಿದ್ದರಿಂದ ನಾನು ಇದುವರೆಗೆ ಯಾವ ವಿಷಯವನ್ನು ಹೇಳುತ್ತಿದ್ದೇನೋ ಅದನ್ನು ಸಮರ್ಥಿಸಿಕೊಳ್ಳುವುದಕ್ಕೆ ಸಹಾಯಕವಾಗಿದೆ. ಹೆಚ್ಚು ಆಹಾರ ಬೆಳೆಯುವುದಕ್ಕೆ ಸಂಬಂಧಿಸಿದಂತೆ ನಾವು ಹಾಕಿಕೊಂಡಿರುವ ವಿವರವಾದ ಕಾರ್ಯಕ್ರಮದ ಬಗ್ಗೆ ಹೇಳುತ್ತಿದ್ದೆ. ಇದನ್ನು ಎಷ್ಟು ಸಾಧ್ಯವೋ ಅಷ್ಟರವರೆಗೆ ಜಾರಿಗೆ ತರಲಾಗುತ್ತಿದೆ. ಈ ಹಿನ್ನೆಲೆಯಲ್ಲಿ ಆಹಾರ ಉತ್ಪಾದನೆಯನ್ನು ಹೆಚ್ಚಿಸುವ ವಿಷಯದಲ್ಲಿ ನಮ್ಮ ತೊಂದರೆಗಳನ್ನು ಹೆಚ್ಚಿಸಿಕೊಳ್ಳುತ್ತಿದ್ದೇವೆ

ಎಂಬ ಮಾತು ಆಧಾರರಹಿತವಾದದ್ದು. ಈ ಒಂದು ಬಹು ಮುಖ್ಯ ವಿಷಯದ ಬಗ್ಗೆ ನಮ್ಮ ಇತ್ತೀಚಿನ ಪ್ರಗತಿ ಏನಿದೆ ಎಂಬುದನ್ನು ತೋರಿಸುವ ಒಂದು ವಿವರಣ ಪತ್ರವನ್ನೂ ಸಹ ಸಾಧ್ಯವಾದಷ್ಟು ಬೇಗ ಒದಗಿಸುವ ಪ್ರಯತ್ನ ಮಾಡುತ್ತೇವೆ ಎಂಬ ಭರವಸೆಯನ್ನು ನೀಡಬಯಸುತ್ತೇನೆ.

ಇದಾದ ನಂತರ, ನಿಂತ್ರಣಗಳನ್ನು ಹೇರಿರುವ ಹಾಗೂ ಮುಂದುವರೆಸಿಕೊಂಡು ಬಂದಿರುವ ಬಗ್ಗೆಯೂ ಸದಸ್ಯರುಗಳು ತಮ್ಮ ಅಭಿಪ್ರಾಯ ತಿಳಿಸಿದ್ದಾರೆ. ಸನ್ಮಾನ್ಯ ಆಹಾರ ಸಚಿವರು ಹೇಳಿದಂತೆ ಆಹಾರ ನಿಯಂತ್ರಣದ ವಿಷಯ ಭಾರತದಂತಹ ಮಿಲಿಯಾಂತರ ಜನಸಂಖ್ಯೆಯುಳ್ಳ ದೇಶದಲ್ಲಿ ಹಾಗೂ ಈ ವ್ಯವಸ್ಥೆಯ ಕಲ್ಪನೆ ಇಲ್ಲದಿರುವಂತಹ ದೇಶದಲ್ಲಿ ಪ್ರಿಯವಾಗುವುದು ಸಾಧ್ಯವಿಲ್ಲ. ಈ ವ್ಯವಸ್ಥೆಯ ನಿರ್ವಹಣೆ ಬಹಳ ಕಷ್ಟಕರ. ಆದರೂ ಕೂಡ ನಾವು ಕೆಲವೊಂದು ಮೂಲ ವಿಚಾರಗಳನ್ನು ಗಮನದಲ್ಲಿಟ್ಟುಕೊಳ್ಳಬೇಕಾಗುತ್ತದೆ. ಸನ್ಮಾನ್ಯ ಗೃಹ ಸಚಿವರು ಹೇಳಿದಂತೆ ನಾವು ಕೇವಲ ಒಂದು ಭಾಗದ ಜನರ ಹಿತದೃಷ್ಟಿಯನ್ನು ಗಮನಿಸಿದರೆ ಸಾಲದು ದೇಶದ ಜನತೆಯನ್ನು ಗಮನದಲ್ಲಿಟ್ಟುಕೊಳ್ಳಬೇಕು. ಆಹಾರದ ತೀವ್ರ ಕೊರತೆ ಇದ್ದು, ಲಭ್ಯವಿರುವುದನ್ನು ಸಮಾನವಾಗಿ ಹಂಚಬೇಕಾಗಿರುವಾಗ ಏನೇ ತೊಂದರೆ, ಪರಿಮಿತಿಗಳಿದ್ದಾಗ್ಯೂ, ತಾತ್ಕಾಲಿಕವಾಗಿ ಯಾದರೂ ಆಹಾರ ನಿಯಂತ್ರಣ ವ್ಯವಸ್ಥೆಯನ್ನು ತರಲೇಬೇಕಾಗುತ್ತದೆ. ಈ ವಿಷಯದ ಬಗ್ಗೆ ಇತರ ಕಡೆಗಳಲ್ಲಿಯೂ ಬಿಸಿಬಿಸಿ ಚರ್ಚೆ ನಡೆದಿದೆ. ವಿವಿಧ ರಾಜ್ಯಗಳಲ್ಲಿ ಹಾಗೂ ಕೇಂದ್ರದಲ್ಲಿ ಸರ್ಕಾರವನ್ನು ನಡೆಸುತ್ತಿರುವವರು ಭಾರತದ ರಾಷ್ಟ್ರೀಯ ಕಾಂಗ್ರೆಸ್ ಹಾಗೂ ಅದರ ಪ್ರತಿನಿಧಿಗಳು. ಕೇಂದ್ರದಲ್ಲಿಯೂ ಸಹ ಈ ವಿಷಯ ಕುರಿತು ಚರ್ಚೆ ನಡೆದಿದೆ. ನಾಸಿಕ್‌ನಲ್ಲಿ ನಡೆದ ಭಾರತದ ರಾಷ್ಟ್ರೀಯ ಕಾಂಗ್ರೆಸ್ ಅಧಿವೇಶನದಲ್ಲಿಯೂ ಇದರ ಚರ್ಚೆ ನಡೆದಿದೆ. ಹತೋಟಿಯನ್ನು ಮುಂದುವರಿಸಬೇಕೇ, ಬಿಡಬೇಕೆ ಎಂಬ ಬಗ್ಗೆ ತೀವ್ರ ಭಿನ್ನಾಭಿಪ್ರಾಯ ವ್ಯಕ್ತವಾಯಿತು. ಪ್ರಸ್ತುತ ಸನ್ನಿವೇಶದಲ್ಲಿ ಹತೋಟಿಯನ್ನು ಮುಂದುವರೆಸಬೇಕು ಎಂದು ಅಲ್ಪ ಬಹುಮತದಿಂದ ನಿರ್ಧಾರವಾಯಿತು. ಏನೇ ಆದರೂ ಹತೋಟಿಗಳನ್ನು ಮುಂದುವರೆಸಬೇಕು ಎಂಬುದು ಭಾರತ ಸರ್ಕಾರದ ಘೋಷಿತ ನೀತಿಯಾಗಿದೆ. ಈ ವಿಷಯಕ್ಕೆ ಸಂಬಂಧಿಸಿದಂತೆ ಭಾರತ ಸರ್ಕಾರವು ಇಂತಹ ದೃಢವಾದ ನೀತಿ ಹೊಂದಿರುವಾಗ ಬೇರೆ ಯಾವ ರಾಜ್ಯವೇ ಆಗಲೀ ತನ್ನದೇ ಆದ ಸ್ವತಂತ್ರ ನೀತಿಯನ್ನು ರೂಪಿಸುವುದು ಎಷ್ಟರಮಟ್ಟಿಗೆ ಸಾಧ್ಯ ಮತ್ತು ಎಷ್ಟರಮಟ್ಟಿಗೆ ಅಪೇಕ್ಷಣೀಯ ಎಂಬ ಪ್ರಶ್ನೆಯನ್ನು ನಮಗೆ ನಾವೇ ಕೇಳಿಕೊಳ್ಳಬೇಕಾಗಿದೆ. ಇದು ಸಾಧ್ಯವೇ ಇಲ್ಲ ಎಂಬುದು ಒಂದು ಅಂಶವಾದರೆ ಅದರಿಂದ ಏನೂ ಪ್ರಯೋಜನವಾಗದು ಎಂಬುದು ಇನ್ನೊಂದು ಅಂಶ. ಭಾರತ ಸರ್ಕಾರಕ್ಕಿಂತ ಭಿನ್ನವಾದ ನೀತಿಯನ್ನು ಅಳವಡಿಸಿಕೊಳ್ಳಲು ನಾವು ನಿರ್ಧರಿಸಿದ ಕ್ಷಣದಲ್ಲಿಯೇ ಬಾರತ ಸರ್ಕಾರವು ನಮ್ಮ ಬಗೆಗಿನ ಎಲ್ಲ ಜವಾಬ್ದಾರಿಗಳನ್ನು ಕಳಚಿಕೊಳ್ಳುತ್ತದೆ ಮತ್ತು ಹೆಚ್ಚು ಆಹಾರ ಬೆಳೆಯುವ ಯೋಜನೆಗೆ ಅನುದಾನ ನೀಡುವುದಾಗಲೀ, ಆಹಾರ ಧಾನ್ಯಗಳ ವಿತರಣೆಯ ವೆಚ್ಚಕ್ಕೆ ಸಹಾಯಧನ ನೀಡುವುದಾಗಲೀ, ಕೊರತೆ ರಾಜ್ಯ ಎಂಬ ಕಾರಣಕ್ಕೆ ಅಗತ್ಯವಿರುವಷ್ಟು ಹಂಚಿಕೆ ಮಾಡುವುದಾಗಲೀ ಮೊದಲಾದ ಯಾವುದೇ ರೀತಿಯ ನೆರವನ್ನೂ ಯಾವುದೇ ಕಾರಣಕ್ಕೂ ನೀಡುವುದಿಲ್ಲ. "ನೀವು ನಿಮ್ಮದೇ ಆದ ರೀತಿಯನ್ನು ಅನುಸರಿಸುವುದಾದರೆ ನಿಮಗಿಷ್ಟ ಬಂದ ಹಾಗೆ ಮಾಡಿ, ನಾವು ಯಾವ ಸಹಾಯವನ್ನೂ ಮಾಡುವುದಿಲ್ಲ ಎಂದು ಅವರು ಹೇಳುತ್ತಾರೆ. ಆದ್ದರಿಂದ ನಾವು ಅಖಿಲ ಭಾರತ ವ್ಯವಸ್ಥೆಯಲ್ಲಿಯೇ ಕೆಲಸ ಮಾಡಬೇಕಾಗುತ್ತದೆ. ಇಂತಹ ಮೂಲ ಭೂತ

ನೀತಿಗಳಿಗೆ ಸಂಬಂಧಿಸಿದಂತೆ ಅಖಿಲ ಭಾರತ ನೀತಿಗೆ ಅನುಗುಣವಾಗಿ ನಾವು ಇರದಿದ್ದರೆ ಅನುಕೂಲಕ್ಕಿಂತ ಅನಾನುಕೂಲವೇ ಹೆಚ್ಚುತ್ತದೆ. ಕೇಂದ್ರದಲ್ಲಿಯೂ ಸಹ ನಿಯಂತ್ರಣದ ಪರವಾಗಿಲ್ಲದವರ ಸಂಖ್ಯೆ ಗಮನಾರ್ಹವಾಗಿಯೇ ಇದೆ. ಸನ್ಮಾನ್ಯ ಸದಸ್ಯರಾದ ಎಚ್.ಎಂ. ಚೆನ್ನಬಸಪ್ಪನವರು ತಿಳಿಸಿದಂತೆ ಈ ಬಗ್ಗೆ ನಾವು ಎಚ್ಚರಿಕೆಯಿಂದ ನಡೆದುಕೊಳ್ಳಬೇಕು. ನಿಯಂತ್ರಣವನ್ನು ಬಿಟ್ಟುಬಿಡುವುದು ನಮ್ಮ ಅಪೇಕ್ಷೆ ಎಂದಿಟ್ಟುಕೊಂಡರೂ ನಾವು ಇಷ್ಟು ದೀರ್ಘಕಾಲ ನಿರ್ಮಾಣ ಮಾಡಿದ ಆರ್ಥವ್ಯವಸ್ಥೆ ಹದಗೆಡದ ಹಾಗೆ ನೋಡಿಕೊಳ್ಳಬೇಕು. ಸನ್ಮಾನ್ಯ ಗೃಹಸಚಿವರು ಹೇಳಿದಂತೆ ಮದ್ರಾಸ್ ರಾಜ್ಯದಲ್ಲಿ ಈ ಸಂಬಂಧವಾಗಿ ಸ್ವಲ್ಪಮಟ್ಟಿನ ಪ್ರಯೋಗ ನಡೆದಿದೆ. 1947ರ ಅಂತ್ಯದಲ್ಲಿ ನಮ್ಮಲ್ಲಿಯೇ ಅಂತಹದೊಂದು ಪ್ರಯೋಗ ಮಾಡಿದೆವು. ಶ್ರೀ ಗುಂಡಪ್ಪಗೌಡರು ತಿಳಿಸಿದಂತೆ, ಹತೋಟಿಯಿಂದ ಉಂಟಾಗುವ ತೊಂದರೆಗಳನ್ನು ಎದುರಿಸುವುದಕ್ಕಿಂತ ಹತೋಟಿಗಳನ್ನು ತೆಗೆದು, ಹತೋಟಿಗಳನ್ನು ತೆಗೆದಾಗ ಉಂಟಾಗುವ ಅನಾನುಕೂಲಗಳನ್ನು ಎದುರಿಸುವುದೇ ಸರಿ ಎಂಬುದೇ ಮಹಾತ್ಮಾಜಿಯವರ ಅಭಿಪ್ರಾಯ ಆಗಿತ್ತು. ಇದು ಅವರ ಅಭಿಪ್ರಾಯ. ನಾವು ಪ್ರಯತ್ನಿಸಿದೆವು, ಭಾರತ ಸರ್ಕಾರ ಪ್ರಯತ್ನಿಸಿತು, ಎಲ್ಲ ರಾಜ್ಯ ಸರ್ಕಾರಗಳೂ ಪ್ರಯತ್ನಿಸಿದವು; ಫಲವೇನು? ಆರು ತಿಂಗಳಲ್ಲಿ ಪರಿಸ್ಥಿತಿ ಎಷ್ಟು ಭಯಾನಕವಾಯಿತೆಂದರೆ ಮಹಾತ್ಮಾಜಿಯವರ ಅಭಿಪ್ರಾಯವನ್ನು ಬದಿಗಿಟ್ಟು ಅನೇಕ ರಾಜ್ಯಗಳು ಪುನಃ ಒಂದಲ್ಲ ಒಂದು ರೀತಿಯ ನಿಯಂತ್ರಣವನ್ನು ವಿಧಿಸಬೇಕಾಯಿತು. ಒಂದು ಮಾತ್ರ ನಿಶ್ಚಿತ. ಒಂದು ವೇಳೆ ನಿಯಂತ್ರಣವನ್ನು ತೆಗೆದಿದ್ದೆ ಆದರೆ ಏರುವ ಬೆಲೆಗಳ ಭಾರೀ ಹೊಡೆತ ಅನುಭವಿಸಬೇಕಾದವರು ಕಡು ಬಡವರಾದಂತಹ ಜನರು. ಶ್ರೀಮಂತನು ಅಧಿಕ ದರ ಕೊಟ್ಟು ಖರೀದಿಸಬಲ್ಲ. ಆದರೆ ಬಡವನಿಗೆ ಆ ಶಕ್ತಿ ಇರುವುದಿಲ್ಲ. ಇನ್ನೂ ಅನೇಕ ವಿಧದ ಅನುಕೂಲಗಳು ಅವನ ಪಾಲಿಗಿರುವುದಿಲ್ಲ. ಹಸಿವೆಯಿಂದ ನರಳಬೇಕಾಗುತ್ತದೆ. ಈ ಅಪಾಯವಿದೆ. ದುಡಿಯುವ ಜನರು, ಕೃಷಿ ಕಾರ್ಮಿಕರು ಮುಂತಾದವರೇ ಇದರ ಕಠಿಣ ಪರಿಣಾಮಗಳಿಗೆ ತುತ್ತಾಗುವ ಜನ. ಆದ್ದರಿಂದ ಹತೋಟಿಯನ್ನು ತೆಗೆಯುವ ಮೊದಲು ನಾವು ಒಂದೆರಡು ಸಲವಲ್ಲ ಅನೇಕ ಸಲ ಯೋಚಿಸಬೇಕಾಗುತ್ತದೆ. ಅಷ್ಟಕ್ಕೂ ಈ ನಿಯಂತ್ರಣ ಕ್ರಮವನ್ನು ಆರಂಭಿಸಿದ್ದು ಈ ಸರ್ಕಾರವೇನಲ್ಲ.

**ಶ್ರೀ ಎಚ್.ಬಿ. ಗುಂಡಪ್ಪಗೌಡ:-** ಯಾವ ಸರ್ಕಾರವಾದರೆ ಏನು? ಈ ಅನುಭವವಾದ ನಂತರ ನಾವು ಪ್ರಯತ್ನಿಸಬಹುದಲ್ಲ?

**ಶ್ರೀ ಕೆ. ಚೆಂಗಲರಾಯರೆಡ್ಡಿ:-** ಇದು ಆರಂಭವಾಗಿದ್ದು 1943ರಲ್ಲಿ. ಈ ನೀತಿಯನ್ನು ನಿರ್ಧರಿಸಿದಾಗ ಶ್ರೀ ಎಲ್. ಸಿದ್ದಪ್ಪನವರೂ ಕೂಡ ಸರ್ಕಾರದ ಒಬ್ಬ ಸದಸ್ಯರಾಗಿದ್ದರು. ಎರಡು ಮೂರು ವರ್ಷಗಳವರೆಗೆ ಈ ನೀತಿಯನ್ನು ಮುಂದುವರೆಸಿಕೊಂಡು ಬರಬೇಕಾಯಿತು.ಭಾರತದಾದ್ಯಂತದ ಎಲ್ಲ ಸರ್ಕಾರಗಳೂ ಕೂಡ ಈ ನಿಯಂತ್ರಣ ಕಾರ್ಯಕ್ರಮವನ್ನು ಮುಂದುವರೆಸಿಕೊಂಡು ಬರುವ ನೀತಿಯ ಪರವಾಗಿದ್ದಾರೆ. ಆದ್ದರಿಂದ ಮೈಸೂರು ಸರ್ಕಾರದ ಕಡೆಗೆ, ಈಗಿನ ಮಂತ್ರಿಮಂಡಲದ ಕಡೆಗೆ ಬೆರಳುಮಾಡಿ ನಿಯಂತ್ರಣ ವಿಧಿಸುವುದಕ್ಕೆ ಇವರೇ ಜವಾಬ್ದಾರರು ಎಂದು ಹೇಳುವುದು ನ್ಯಾಯವಲ್ಲ.

**ಜನಾಬ್ ಜೆ. ಮೊಹಮದ್ ಇಮಾಂ:-** ಯಾರೂ ಕೂಡ ಆ ರೀತಿ ಹೇಳಿದಂತಿಲ್ಲ.

ಶ್ರೀ **ಕೆ. ಚೆಂಗಲರಾಯರೆಡ್ಡಿ:-** ಆದರೆ ನೀವು ನಿಮ್ಮ ತಿದ್ದುಪಡಿಯಲ್ಲಿ ಈ ನಿಯಂತ್ರಣ ಕ್ರಮಗಳನ್ನು ಹೇರಿರುವ ಬಗ್ಗೆ ವಿಷಾದವಾಗಿದೆ ಎಂದು ಹೇಳಿದಿರಿ. ನಾನು ಹೇಳುವುದೇನೆಂದರೆ ಇದನ್ನು ಮೊದಲಬಾರಿಗೆ ನಾವು ಹೇರಲಿಲ್ಲ. ನಾವು ಅದನ್ನು ಮುಂದುವರೆಸಿಕೊಂಡು ಬಂದಿದ್ದೇವೆ.

ಜನಾಬ್ ಜೆ. ಮೊಹಮ್ಮದ್ ಇಮಾಂ:- ನಾನು ಬೆಲ್ಲದ ಮೇಲೆ ನಿಯಂತ್ರಣ ಹೇರಿರುವ ಬಗ್ಗೆ ಹೇಳಿದೆ.

**ಕೆ. ಚೆಂಗಲರಾಯರೆಡ್ಡಿ:-** ಆ ಸಂಬಂಧವಾಗಿಯೂ ಕೂಡ ನೀವು ಈ ಮಂತ್ರಿಮಂಡಲವನ್ನಾಗಲೀ, ಈ ರಾಜ್ಯ ಸರ್ಕಾರವನ್ನಾಗಲೀ ಟೀಕಿಸುವುದು ಸರಿಯಲ್ಲ. ಬೆಲ್ಲದ ಮೇಲೆ ನಿಯಂತ್ರಣ ಹೇರಿದ್ದೂ ಕೂಡ ಕೇಂದ್ರ ಸರ್ಕಾರವೇ. ಅದು ಹೇಗಾಯಿತು ಎಂಬುದನ್ನು ಹೇಳುತ್ತೇನೆ. ನಾಗರೀಕ ಸರಬರಾಜುಗಳಿಗೆ ಸಂಬಂಧಿಸಿದಂತೆ ಭಾರತೀಯ ಸಂವಿಧಾನದ ಪ್ರಕಾರ ರಾಜ್ಯಗಳಿಗೆ ಸ್ವಾಯತ್ತತೆ ಇದೆ. ಇಷ್ಟಾದರೂ ಕೂಡ ನಾಲ್ಕು ತಿಂಗಳ ಹಿಂದೆ ಭಾರತದ ಎಲ್ಲ ಭಾಗಗಳ ಪ್ರತಿನಿಧಿಗಳೂ ಸರ್ವಾನುಮತದಿಂದ ಜಾರಿಗೊಳಿಸಿದ ಸಂಸತ್ತಿನ ಒಂದು ವಿಶೇಷ ಕಾಯಿದೆಯ ಫಲವಾಗಿ ಕೇಂದ್ರ ಸರ್ಕಾರಕ್ಕೆ ಈ ಒಂದು ಅಧಿಕಾರ ಸಿಕ್ಕಿತು, ಅಲ್ಲಿ ಒಂದೇ ಒಂದು ಭಿನ್ನ ದನಿಯಿರಲಿಲ್ಲ. ಇಡೀ ದೇಶದ ಎಲ್ಲ ಪ್ರತಿನಿಧಿಗಳೂ ಒಕ್ಕೊರಲಿನಿಂದ, ಒಮ್ಮನಸ್ಸಿನಿಂದ ಮತ ನೀಡಿ ಕೇಂದ್ರ ಸರ್ಕಾರಕ್ಕೆ ಅಂತಹ ಅಧಿಕಾರವನ್ನು ದೊರಕಿಸಿದರು. ಇಡೀ ದೇಶದ, ಇಡೀ ಪ್ರತಿನಿಧಿಗಳಿಂದ ಸಂಸತ್ತಿನಲ್ಲಿ ಕೇಂದ್ರ ಸರ್ಕಾರಕ್ಕೆ ಈ ಅಧಿಕಾರ ದೊರೆತ ಫಲವಾಗಿ ಈ ಬೆಲ್ಲದ ನಿಯಂತ್ರಣವೂ ಜಾರಿಗೆ ಬಂತು. ಹೀಗಿರುವಾಗ ನೀವು ಮೈಸೂರು ಸರ್ಕಾರವನ್ನು ಹೇಗೆ ದೂರುತ್ತೀರಿ? ಈ ಸರ್ಕಾರ ಹೀಗೆ ಮಾಡಿದೆ ಎಂದು ಹೇಗೆ ವ್ಯಥೆ ವ್ಯಕ್ತಪಡಿಸುತ್ತೀರಿ? ಆದ್ದರಿಂದ ಈ ವಿಷಯದ ಬಗ್ಗೆ ಈ ಸರ್ಕಾರವನ್ನು ಟೀಕಿಸುವುದು ಸರಿಯಲ್ಲ. ಬೆಲ್ಲದ ನಿಯಂತ್ರಣ ಅದರ ಬೆಲೆಗೆ ಸಂಬಂಧಿಸಿದ್ದೇ ಹೊರತು ಅದರ ಸಾಗಾಟಕ್ಕೆ ಸಂಬಂಧಿಸಿದ್ದಲ್ಲ. ನಿಯಂತ್ರಣ ಕ್ರಮಗಳನ್ನು ಟೀಕಿಸಿದ ಸದಸ್ಯರಿಗೆ ನಾನು ಭರವಸೆ ಕೊಡುವುದೇನೆಂದರೆ, ಮೈಸೂರು ಸರ್ಕಾರದ ಮಟ್ಟಿಗೆ ಹೇಳುವುದಾದರೆ ಕೇಂದ್ರ ಸರ್ಕಾರ ಯಾವ ಯಾವಾಗ ನಿಯಂತ್ರಣ ಆಜ್ಞೆಗಳನ್ನು ಜಾರಿಗೆ ತಂದಿತೋ ಅವಾಗೆಲ್ಲ ಇದರಿಂದುಟಾಗುವ ತೊಂದರೆಗಳನ್ನು ಈ ಸರ್ಕಾರ ತಪ್ಪದೆ ಕೇಂದ್ರ ಸರ್ಕಾರದ ಗಮನಕ್ಕೆ ತಂದಿದೆ. ನಾವು ಇಂತಹ ಅನೇಕ ಅಂಶಗಳನ್ನು ಕೇಂದ್ರ ಸರ್ಕಾರದ ಗಮನಕ್ಕೆ ತಂದಿದ್ದೇವೆ. ಒಂದೆರಡು ಅಂಶಗಳಲ್ಲಿ ನಾವು ಯಶಸ್ವಿಯೂ ಆಗಿದ್ದೇವೆ. ಅಷ್ಟೇ ಅಲ್ಲ ಈಗಲೂ ಕೂಡ ಬೆಲ್ಲದ ನಿಯಂತ್ರಣಕ್ಕೆ ಸಂಬಂಧಿಸಿದಂತೆ ಉಂಟಾಗಿರುವ ಕೆಲವು ತೊಂದರೆಗಳ ಬಗ್ಗೆ ಸರ್ಕಾರದೊಂದಿಗೆ ವ್ಯವಹಾರ ನಡೆಸುತ್ತಿದ್ದೇವೆ.

ಜನಾಬ್ ಜೆ. ಮೊಹಮ್ಮದ್ ಇಮಾಂ:- ಹಾಗಿದ್ದರೆ ನೀವು ನಮ್ಮ ಅಭಿಪ್ರಾಯವನ್ನು ಒಪ್ಪಿದ್ದೀರಿ ಎಂದಾಯಿತು.

ಶ್ರೀ ಹೆಚ್.ಸಿ. ದಾಸಪ್ಪ:- ನೀವು ನಮ್ಮ ಅಭಿಪ್ರಾಯವನ್ನು ಒಪ್ಪಿದ್ದೀರಿ (ನಗು)

ಶ್ರೀ **ಕೆ. ಚೆಂಗಲರಾಯರೆಡ್ಡಿ:-**ಇಂತಹ ವಿಷಯಗಳಲ್ಲಿ ನಮಗೆ ಸಂಪೂರ್ಣ ಸ್ವಾಯತ್ತತೆಯಿದೆ ಎಂಬುದನ್ನು ನಾನು ಈ ಸದನದ ಸನ್ಮಾನ್ಯ ಸದಸ್ಯರ ಹಾಗೂ ಮೈಸೂರು ರಾಜ್ಯದ ಜನತೆಯ ಗಮನಕ್ಕೆ ತಂದು ನಿಯಂತ್ರಣ ಕ್ರಮಗಳನ್ನು ಕುರಿತಂತೆ ನನ್ನ ಮಾತುಗಳನ್ನು ಮುಗಿಸುತ್ತಿದ್ದೇನೆ.

ಆದರೆ ಬೆಲ್ಲವೇ ಆಗಲಿ, ಸಕ್ಕರೆಯೇ ಆಗಲಿ, ಆಹಾರ ಅಥವಾ ಇನ್ನಾವುದೇ ಅಗತ್ಯ ವಸ್ತುವೇ ಆಗಲಿ, ಆ ಬಗ್ಗೆ ಭಾರತ ಸರ್ಕಾರದ ಸಾಮಾನ್ಯ ನೀತಿ ಏನಿದೆಯೋ ಅದರಂತೆ ನಾವು ನಡೆದುಕೊಳ್ಳಬೇಕಾಗುತ್ತದೆ. ಇಂತಹ ವಿಷಯಗಳ ಬಗ್ಗೆ ಅಖಿಲ ಭಾರತ ನೀತಿ ರೂಪುಗೊಂಡಿದೆ ಎಂಬುದನ್ನು ಮರೆತು ಸಂಬಂಧಪಟ್ಟ ರಾಜ್ಯದ ಸರ್ಕಾರವನ್ನು ಟೀಕಿಸುವುದು ನ್ಯಾಯವಲ್ಲ. ನಾನು ಇದನ್ನೂ ಹೇಳಬೇಕು.....

**ಜನಾಬ್ ಜೆ. ಮಹಮ್ಮದ್ ಇಮಾಂ:-** ನನಗೆ ಇನ್ನಷ್ಟು ಮಾತಾಡಲು ಸದನದ ನಾಯಕರು ಅನುಮತಿ ನೀಡುತ್ತಾರೆ ಎಂದು ಭಾವಿಸುತ್ತೇನೆ. ನಾವು ಬಹಳ ಇಕ್ಕಟ್ಟಿನ ಪರಿಸ್ಥಿತಿಯಲ್ಲಿದ್ದೇವೆ. ಒಂದು ವೇಳೆ ಕೇಂದ್ರ ಸರ್ಕಾರವು ಅಳವಡಿಸಿಕೊಂಡ ಕ್ರಮದಿಂದಾಗಿ ಏನಾದರೂ ತೊಂದರೆಯಾದರೆ ನಾವು ಯಾರಿಗೆ ಮನವಿ ಮಾಡಿಕೊಳ್ಳಬೇಕು? ಯಾವ ಮೂಲಕ ಮಾಡಿಕೊಳ್ಳಬೇಕು? ಅಂತಹ ಮನವಿಯನ್ನು ನಾವು ನಮ್ಮ ಸರ್ಕಾರದ ಮೂಲಕವೇ ಮಾಡಿಕೊಳ್ಳಬೇಕಷ್ಟೆ. ಈ ದೃಷ್ಟಿಯಿಂದ ಈ ತಿದ್ದುಪಡಿ ನಿಲುವನ್ನು ಆರಂಭಿಸಲಾಯಿತೇ ಹೊರತು ಸರ್ಕಾರ ಅದನ್ನು ಅಪಾರ್ಥ ಮಾಡಿಕೊಳ್ಳಬಾರದು. ಇದು ಟೀಕೆಯೇ ಆಗಿರಬಹುದು. ಆದರೆ ಟೀಕೆಗಳೆಂದರೆ ಆಡಳಿತದ ಬಗ್ಗೆ ನಾವು ವ್ಯಕ್ತಪಡಿಸುವ ಅಭಿಪ್ರಾಯಗಳು ಎಂದರ್ಥ. ಈ ಟೀಕೆಯ ಮನೋಧರ್ಮವನ್ನು ಸರ್ಕಾರ ಅರ್ಥ ಮಾಡಿಕೊಳ್ಳಬೇಕು ಮತ್ತು ಇದನ್ನು ಕೇಂದ್ರಕ್ಕೆ ತಿಳಿಸುವ ಬಗ್ಗೆ ಅಗತ್ಯ ಕ್ರಮ ಕೈಗೊಳ್ಳಬೇಕು.

**ಕೆ. ಚೆಂಗಲರಾಯರೆಡ್ಡಿ:-** ಮಾನ್ಯರೇ, ನಿಮ್ಮ ಮನೋಭಾವವನ್ನು ನಾನು ಸ್ವಾಗತಿಸುತ್ತೇನೆ. ಆದರೆ ಇಲ್ಲಿ ತಿದ್ದುಪಡಿ ಇದೆ. ಇದರ ಬಗ್ಗೆ ನಾನು ಮಾತಾಡಲೇ ಬೇಕು. ನಾನು ಈಗಾಗಲೇ ಹೇಳಿದಂತೆ ಈ ವಿಷಯದ ವಿವಿಧ ಅಂಶಗಳನ್ನು ಕುರಿತು ನಾವು ಭಾರತ ಸರ್ಕಾರದ ಗಮನಕ್ಕೆ ತರುತ್ತಲೇ ಇದ್ದೇವೆ. ಸನ್ಮಾನ್ಯ ಸದಸ್ಯರು ವ್ಯಕ್ತಪಡಿಸಿದ ಅಭಿಪ್ರಾಯಗಳನ್ನು ನಾವು ಅಲಕ್ಷಿಸುತ್ತೇವೆ ಮತ್ತು ಯಾವ ಕ್ರಮವನ್ನೂ ಕೈಗೊಳ್ಳುವುದಿಲ್ಲ ಎಂದು ಅರ್ಥವಲ್ಲ. ಈ ವಿಷಯಕ್ಕೆ ಸಂಬಂಧಿಸಿದಂತೆ ಯಾವ ಅಭಿಪ್ರಾಯ ಭೇದವೂ ಇಲ್ಲ.

ಜನಾಬ್ ಇಮಾಂ ಅವರು ತಮ್ಮ ತಿದ್ದುಪಡಿ ನಿಲುವಳಿಯಲ್ಲಿ, ರಾಜ್ಯದ ನೀರಾವರಿ, ಕೈಗಾರಿಕೆ, ಕೃಷಿ, ಆರ್ಥಿಕ ವ್ಯವಸ್ಥೆ, ಶಿಕ್ಷಣ ಹಾಗೂ ಇತರ ಅಭಿವೃದ್ಧಿ ಕುರಿತಂತೆ ಅದರ ಪ್ರಗತಿಪರ ಮುನ್ನಡೆಯ ಬಗ್ಗೆ ಸಚಿವರು ಸಾಕಷ್ಟು ಕ್ರಮಗಳನ್ನು ಕೈಗೊಂಡಿಲ್ಲ ಎಂದು ಹೇಳಿದರು. ಇಂತಹ ಸಾರಾಸಗಟು ಅಭಿಪ್ರಾಯ ಸರಿಯಲ್ಲ.

**ಜನಾಬ್ ಜೆ. ಮೊಹಮ್ಮದ್ ಇಮಾಂ:-** ಸಮಯವಿಲ್ಲದ ಕಾರಣ, ಅದನ್ನು ನಾನು ಮುಂದಿನ ಸಂದರ್ಭಕ್ಕೆ ಮೀಸಲಾಗಿಟ್ಟಿದ್ದೇನೆ (ನಗು).

**ಕೆ. ಚೆಂಗಲರಾಯರೆಡ್ಡಿ:-** ಇದೊಂದು ಸಾರಾಸಗಟು ಹೇಳಿಕೆ. ಸನ್ಮಾನ್ಯ ಸದಸ್ಯರು ಇದನ್ನು ಪುರಾವೆಗಳಿಂದ ಸ್ಪಷ್ಟಪಡಿಸಿಲ್ಲ. ಆದರೆ ಅವರು ಪೂರ್ತಿಯಾಗಿ ವಿಷಯುವನ್ನು ನಿರೂಪಿಸಿಲ್ಲವಾದ್ದರಿಂದ ಅವರು ಹೇಳಿದ್ದು ಆಧಾರ ರಹಿತ ಎಂಬುದನ್ನು ತೋರಿಸಲು ಸದನದ ವೇಳೆಯನ್ನು ನಾನು ಹಾಳುಮಾಡುವುದಿಲ್ಲ. ಅವರು ಅಂತಿಮ ನಿರ್ಧಾರಕ್ಕೆ ಬರುವ ಮೊದಲು ಕಳೆದ ಮೂರು ವರ್ಷಗಳಲ್ಲಿ ಈ ಸರ್ಕಾರ ಏನೇನು ಕೆಲಸ ಮಾಡಿದೆ ಎಂಬುದನ್ನು ಒಂದು ಸಲ ಪರಿಶೀಲಿಸಬೇಕು ಎಂದು ಮತ್ತೊಮ್ಮೆ ಅವರನ್ನು ನಾನು ವಿನಂತಿಸಿಕೊಳ್ಳುತ್ತೇನೆ. ಈ ಮೂರು

ವರ್ಷಗಳ ಅವಧಿಯಲ್ಲಿ ಈ ಎಲ್ಲ ಇಲಾಖೆಗಳಲ್ಲಿಯೂ ಸರ್ಕಾರವು ಕೀರ್ತಿ ತರುವಂತಹ ಕೆಲವು ಸಾಧನೆಗಳನ್ನು ಮಾಡಿದೆ ಎಂದಷ್ಟೇ ನಾನು ಹೇಳಬಲ್ಲೆ. ಅದೃಷ್ಟಕ್ಕೆ ಅಗತ್ಯವಾದಷ್ಟು ಹಣವಿತ್ತು. ಈ ಹಣವನ್ನು ಎಲ್ಲ ಇಲಾಖೆಗಳಲ್ಲಿಯೂ ನಾವು ವಿನಿಯೋಗಿಸಿದ್ದೇವೆ. ಗಮನಾರ್ಹ ಪ್ರಗತಿಯಾಗಿದೆ. ಆದರೆ ಹಿಂದಿನ ಮೂರು ವರ್ಷಗಳಲ್ಲಿ ಮಾಡಿದ್ದರ ಐದನೇ ಒಂದು, ಆರನೇ ಒಂದು ಅಥವಾ ಹತ್ತನೇ ಒಂದು ಭಾಗದಷ್ಟನ್ನಾದರೂ ನಾವು ಮುಂಬರುವ ವರ್ಷದಲ್ಲಿ ಮಾಡುವುದು ಸಾಧ್ಯವಿಲ್ಲ. ಇದಕ್ಕೆ ಹಣಕಾಸು ಕೊರತೆ ಕಾರಣ ಎಂದು ಹೇಳಬೇಕಾಗಿದೆ. ಶಿಕ್ಷಣ ಕ್ಷೇತ್ರವನ್ನೇ ನೋಡಿ. ಎಷ್ಟು ಶಾಲೆಗಳು, ಕಾಲೇಜುಗಳನ್ನು ಆರಂಭಿಸಲಾಗಿದೆ ಎಂಬುದನ್ನು ನೋಡಿ. ಎಷ್ಟು ತಾಂತ್ರಿಕ ಸಂಸ್ಥೆಗಳ ಸ್ಥಾಪನೆಯಾಗಿದೆ ನೋಡಿ. ರಾಜ್ಯದಲ್ಲಿ ಕಳೆದ ಮೂರು ವರ್ಷಗಳಲ್ಲಿ ಆಗಿರುವ ಕೆಲಸವನ್ನು ಕಳೆದ ದಶಕದಲ್ಲಿ ಆಗಿರುವುದರೊಂದಿಗೆ ಹೋಲಿಸಿ. ವಿದ್ಯುದೀಕರಣವನ್ನೇ ನೋಡಿ, ಎಷ್ಟು ಸ್ಥಳಗಳಿಗೆ ವಿದ್ಯುಚ್ಛಕ್ತಿ ದೊರೆತಿದೆ? ಎಷ್ಟು ಹಳ್ಳಿಗಳಲ್ಲಿ ವಿದ್ಯುತ್ ಬಂದಿದೆ? ಎಷ್ಟು ನೀರಾವರಿ ಪಂಪುಗಳನ್ನು ಒದಗಿಸಿದೆ? ನಾವು ಅಧಿಕಾರಕ್ಕೆ ಬರುವ ಮೊದಲಿನ ದಶಕದ ಅಂಕಿ ಅಂಶಗಳಿಗೂ ಈಗಿನ ಅಂಕಿ ಅಂಶಗಳಿಗೂ ಹೋಲಿಸಿ. ಮಾನ್ಯ ಸದಸ್ಯರು ಅಂಕಿ ಅಂಶಗಳನ್ನು ತಿಳಿಸಲಿ, ಅಂಕಿ ಅಂಶಗಳನ್ನು ಸದನದ ಮುಂದಿಡಲಿ, ಆಮೇಲೆ ಏನು ಹೇಳುತ್ತಾರೋ ಹೇಳಲಿ.

ಹೆಚ್.ಸಿ. ದಾಸಪ್ಪ: ನೋಡುವುದೇ ಬೇಡ ಎಂದು ನಿರಾಕರಿಸುವ ಮನುಷ್ಯನಿಗಿಂತ ಹೆಚ್ಚು ಕುರುಡ ಮತ್ತೊಬ್ಬನಿಲ್ಲ.

ಜನಾಬ್ ಜೆ. ಮಹಮ್ಮದ್ ಇಮಾಂ:- ನಾವು ಅಧಿಕಾರಕ್ಕೆ ಬರುವ ಮೊದಲು 1936-37ರಲ್ಲಿ 5,868 ಪ್ರೈಮರಿ ಶಾಲೆಗಳಿದ್ದವು. ನಾವು ಅಧಿಕಾರಕ್ಕೆ ಬಂದನಂತರ 8,000 ಚಿಲ್ಲರೆಯಷ್ಟು ಪ್ರೈಮರಿ ಶಾಲೆಗಳಿವೆ. ಅಂದರೆ ನಾವು 2500 ಶಾಲೆಗಳಷ್ಟನ್ನು ನೀಡಿದೆವು. 1949-50ರಲ್ಲಿ 10,000 ಪ್ರೈಮರಿ ಶಾಲೆಗಳಿದ್ದವು. ಅಂದರೆ ಕೇವಲ 2000 ಶಾಲೆಗಳ ಸೇರ್ಪಡೆಯಾಗಿದೆ ಆದ್ದರಿಂದ ಹಿಂದಿನ ಸಚಿವ ಮಂಡಲ ಏನೂ ಮಾಡಲಿಲ್ಲ ಎಂದರ್ಥವಲ್ಲ.

ಶ್ರೀ ಕೆ. ಚೆಂಗಲರಾಯರೆಡ್ಡಿ:- ಮಾನ್ಯ ಸದಸ್ಯರು ಅವರ ಅಂಕಿಅಂಶಗಳನ್ನು ಮುಂದಿಡಲಿ, ನಾವು ನಮ್ಮ ಅಂಕಿ ಅಂಶಗಳನ್ನು ಮುಂದಿಡುತ್ತೇವೆ. ಎರಡನ್ನೂ ಹೋಲಿಸಿ ತೀರ್ಮಾನ ಕೊಡೋಣ. ನಾವು ಶಾಲಾ ಕಾಲೇಜುಗಳನ್ನು ಕೊಟ್ಟಿದ್ದೇವೆ, ವಿದ್ಯುತಚ್ಛಕ್ತಿ ಕೊಟ್ಟಿದ್ದೇವೆ, ಕೆರೆಗಳ ಪುನರುಜ್ಜೀವನ ಮಾಡಿದ್ದೇವೆ. ಇತರ ಕಡೆಗಳಿಂದಲೂ ಇವುಗಳಿಗಾಗಿ ತೀವ್ರ ಬೇಡಿಕೆ ಇದೆ. ನಮ್ಮ ತೊಂದರೆ ಇದೇ. ನೀವು ಅದನ್ನು ಅಲ್ಲಿ ಕೊಟ್ಟಿದ್ದೀರಿ, ಇದನ್ನು ಇಲ್ಲಿ ಕೊಟ್ಟಿದ್ದೀರಿ, ಅದನ್ನು ನಮಗೆ ಕೊಟ್ಟಿಲ್ಲ ಇತ್ಯಾದಿ. ನಮ್ಮ ಕ್ರಿಯಾಶೀಲ ಕಾರ್ಯಕ್ರಮದಿಂದಾಗಿಯೇ ಇಂತಹ ಅಸಮಾಧಾನ ಸೃಷ್ಟಿಯಾಗಿದೆ (ಶ್ರೀ ಎಚ್.ಬಿ. ಗುಂಡಪ್ಪಗೌಡ-ಅತ್ಯುತ್ತಮ). ನಾವು ಏನು ಮಾಡಿದ್ದೇವೋ ಅದರ ಬಗ್ಗೆ ಒಳ್ಳೆಯ ಮಾತಿಲ್ಲ, ಆದರೆ ಇನ್ನೂ ಏನು ಮಾಡಬೇಕಾಗಿದೆಯೋ ಅದರ ಬಗ್ಗೆ ಅಥವಾ ಈಗಿನ ಹಣಕಾಸು ಪರಿಸ್ಥಿತಿಯಲ್ಲಿ ಯಾವುದನ್ನು ಮಾಡಲು ಸಾಧ್ಯವೇ ಇಲ್ಲವೋ ಅದರ ಬಗ್ಗೆ ಬೇಕಾದಷ್ಟು ಟೀಕೆ ಇದೆ.

ಮಿಲಿಟರಿ ಸಿಬ್ಬಂದಿಯ ವಿಷಯ ಹಾಗೂ ವರ್ಗಾವಣೆಯಾಗ ಇಲಾಖೆಗಳ ಕುರಿತಂತೆಯೂ ಹೇಳಲಾಯಿತು. ಈ ವಿಷಯದ ಬಗ್ಗೆ ನಾನು ಹೆಚ್ಚಿಗೆ ಹೇಳಬೇಕಾದ್ದೇನೂ ಇಲ್ಲ. ಮಿಲಿಟರಿಗೆ ಸಂಬಂಧಿಸಿದಂತೆ ಸನ್ಮಾನ್ಯ ಸಚಿವರು ಕೆಲವು ವಿವರಗಳನ್ನು ಕೊಟ್ಟಿದ್ದಾರೆ. ಸನ್ಮಾನ್ಯ ಸದಸ್ಯರಾದ ಶ್ರೀ ಎಲ್. ಲಿಂಗಪ್ಪ ಹಾಗೂ ಇನ್ನಿತರರು ಹಣಕಾಸು ವಿಲಿನೀಕರಣ ಒಪ್ಪಂದಕ್ಕೆ ಸಂಬಂಧಿಸಿದ ಉಪಬಂಧದ ಬಗ್ಗೆ ನಮ್ಮ ಗಮನ ಸೆಳೆದಿದ್ದಾರೆ ಇದನ್ನು ನಾವು ಸ್ಪಷ್ಟವಾಗಿ ಗಮನದಲ್ಲಿಟ್ಟು ಕೊಂಡಿದ್ದೇವೆ. ಈ ಬಗ್ಗೆ ಭಾರತ ಸರ್ಕಾರಕ್ಕೆ ಮನದಟ್ಟು ಮಾಡಿಕೊಡುವ ಯಾವ ಅವಕಾಶವನ್ನೂ ನಾವು ಬಿಟ್ಟಿಲ್ಲ ಎಂಬುದನ್ನು ಸದನದ ಗಮನಕ್ಕೆ ತರಬಯಸುತ್ತೇನೆ. ಕೇಂದ್ರಕ್ಕೆ ಒಪ್ಪಿಸಿದ ಇಲಾಖೆಗಳನ್ನು ಕುರಿತಂತೆ ಅವುಗಳಿಗೆ ವರ್ಗಾಯಿಸಿದ ಸಿಬ್ಬಂದಿಯ ಹೊಣೆ ಹೊತ್ತು ಕೊಳ್ಳಬೇಕು ಹಾಗೂ ಒಪ್ಪಂದದಲ್ಲಿರುವ ಉಪಬಂಧವು ಏನು ಹೇಳುತ್ತದೋ ಅದರಂತೆಯೇ ಅವರನ್ನು ನೋಡಿಕೊಳ್ಳಬೇಕು ಎಂಬ ನಿಲುವನ್ನೇ ನಾವು ಯಾವಾಗಲೂ ಪ್ರತಿಪಾದಿಸಿದ್ದೇವೆ ರೈಲ್ವೆ, ಆದಾಯ ತೆರಿಗೆ ಇಲಾಖೆ ಹಾಗೂ ಕೇಂದ್ರಕ್ಕೆ ಒಪ್ಪಿಸಿದ ಇನ್ನಿತರ ಇಲಾಖೆಗಳಿಗೆ ಸಂಬಂಧಿಸಿದಂತೆ ನಾನು ಹಿಂದೆ ಏನು ಹೇಳಿದ್ದೇನೋ ಅದು ಈಡೇರಿದೆ. ಈ ಇಲಾಖೆಗಳಲ್ಲಿರುವವರ ಅವಕಾಶ ನಿಜಕ್ಕೂ ಸುಧಾರಿಸಿದೆ. ರಾಜ್ಯ ಹಾಗೂ ರೈಲ್ವೆಗಳ ಸಚಿವರು ಇನ್ನೇನೇನು ಇತರ ಸೌಲಭ್ಯಗಳನ್ನು ಕೊಡಬೇಕಾಗಿದೆಯೋ ಅವುಗಳನ್ನು 1950ರ ಏಪ್ರಿಲ್‌ನಿಂದ ಹಿಮ್ಮೊಗ್ರವಾಗಿ ಜಾರಿಗೆ ತರಲಾಗುವುದು ಎಂದು ಹೇಳಿದ್ದಾರೆ. ಇದು ಪುನಃ ನಮಗೆ ಸಮಸ್ಯೆ. ಅವರ ಅವಕಾಶಗಳು ಸುಧಾರಿಸಿದವು. ಈಗ ನಮ್ಮ ಇಲಾಖೆಗಳಲ್ಲಿರುವವರು "ನಮಗೂ ಅದೇ ರೀತಿಯ ತುಟ್ಟಿಭತ್ಯೆ ಕೊಡಿ, ನಮಗೂ ಅದೇ ವೇತನ ಶ್ರೇಣಿ ಕೊಡಿ, ಅವರಿಗೆ ಕೊಡುವ ಎಲ್ಲ ಸೌಲಭ್ಯಗಳನ್ನೂ ನಮಗೂ ಕೊಡಿ" ಎಂದು ಕೇಳುತ್ತಿದ್ದಾರೆ. ಕೇಂದ್ರಕ್ಕೆ ಒಪ್ಪಿಸಿದ ಇಲಾಖೆಗಳು ಸುಧಾರಿಸುವುದಾದರೆ ನಮ್ಮನ್ನೇಕೆ ಆಲಕ್ಷಿಸಿದ್ದೀರಿ ಎನ್ನುತ್ತಿದ್ದಾರೆ. ಇದೊಂದು ದೊಡ್ಡ ತಲೆನೋವು. ನಾವು ಒಂದು ಕಡೆ ನಮ್ಮ ಹಣಕಾಸು ಪರಿಸ್ಥಿತಿಯನ್ನು ಗಮನದಲ್ಲಿಟ್ಟುಕೊಳ್ಳಬೇಕು, ಇನ್ನೊಂದು ಕಡೆ ಸೇವೆಯಲ್ಲಿರುವ ಉದ್ಯೋಗಿಗಳ ಸಹಜವಾದ ಬೇಡಿಕೆಗಳಿಗೂ ಮಾನ್ಯತೆ ನೀಡಬೇಕು. ನಾನು ಕಳೆದ ಸಂದರ್ಭದಲ್ಲಿ ತಳೆದ ನಿಲುವನ್ನು ಸಮರ್ಥಿಸಿಕೊಳ್ಳುತ್ತಾ, ಈ ಇಲಾಖೆಗಳಿಗೆ ಸಂಬಂಧಿಸಿದಂತೆ ನಾನು ನೀಡಿದ ಭರವಸೆಗಳು ಈಡೇರಿವೆ ಎಂದು ತಿಳಿಸಬಯಸುತ್ತೇನೆ. ಆದರೆ ಮಿಲಿಟರಿ ಇಲಾಖೆಗೆ ಸಂಬಂಧಿಸಿದಂತೆ ತೊಂದರೆಯಾಯಿತು. ಅದನ್ನು ನಾನು ಒಪ್ಪಿಕೊಳ್ಳುತ್ತೇನೆ. ಇದನ್ನು ನಾವು ಎಡಬಿಡದೆ ದೃಢವಾಗಿ ಭಾರತ ಸರ್ಕಾರದ ಗಮನಕ್ಕೆ ತರುತ್ತಿದ್ದೇವೆ, ಈ ಅಧ್ಯಾಯ ಇನ್ನೂ ಮುಗಿದಿಲ್ಲ. ಭಾರತ ಸರ್ಕಾರದೊಂದಿಗೆ ಈ ಸಂಬಂಧವಾದ ವ್ಯವಹಾರ ಇನ್ನೂ ನಡೆದಿದೆ. ಈ ಮಧ್ಯದಲ್ಲಿ ನಾವು ನಮ್ಮ ಕೈಲಾದ ಪ್ರಯತ್ನವನ್ನೆಲ್ಲ ಮಾಡುತ್ತಿದ್ದೇವೆ. ಸೈನ್ಯದಿಂದ ಹೊರಗೆ ಹಾಕಲಾದ ಕೆಲವು ಸಿವಿಲ್ ಅಧಿಕಾರಿಗಳು ಹಾಗೂ ಇನ್ನಿತರ ಕೆಲವರನ್ನು ನಾವು ಪೋಲಿಸ್ ಇಲಾಖೆಗೆ ತೆಗೆದುಕೊಂಡಿದ್ದೇವೆ. ತೆಗೆದುಹಾಕಲಾದ ಕೆಲವರನ್ನು ಭಾರತ ಸರ್ಕಾರದ ಕೆಲವು ಇಲಾಖೆಗಳಲ್ಲಿ ವಿಲೀನಗೊಳಿಸಿಕೊಳ್ಳಲು ಸಕಲ ಪ್ರಯತ್ನ ಮಾಡುವುದಾಗಿ ಭಾರತ ಸರ್ಕಾರವೂ ಕೂಡ ತಿಳಿಸಿದೆ. ಅಂಥವರ ಪುನರ್ವಸತಿಗಾಗಿ ಹಣಕಾಸು ನೆರವನ್ನು ನೀಡಲು ಸಹ ತಾನು ಸಿದ್ಧ ಎಂದು ಭಾರತ ಸರ್ಕಾರ ತಿಳಿಸಿದೆ. ಇವೆಲ್ಲದರ ಬಗ್ಗೆ ಭಾರತ ಸರ್ಕಾರ ಭರವಸೆ ನೀಡಿದೆ ಮತ್ತು ನಾವೂ ಕೂಡ ಆ ಬಗ್ಗೆ ತೀವ್ರವಾಗಿ ಗಮನ ಇಟ್ಟಿದ್ದೇವೆ. ಈ ರೀತಿ ತೆಗೆದು ಹಾಕುವ ಕ್ರಿಯೆ ಎಲ್ಲ

ಬಿ ಭಾಗದ ರಾಜ್ಯಗಳಲ್ಲಿಯೂ ನಡೆದಿದೆ. 'ಬಿ' ಭಾಗದ ರಾಜ್ಯಗಳಲ್ಲಿ ಮಾತ್ರವೇ ಸೈನ್ಯವಿದ್ದಿತು. ರಕ್ಷಣಾ ವಿಷಯಕ್ಕೆ ಸಂಬಂಧಿಸಿದಂತೆ ನಾವು ಅಧಿಕಾರ ವಹಿಸಿಕೊಳ್ಳುವ ಮುಂಚೆಯೇ ರಾಜ್ಯವು ಕೇಂದ್ರಕ್ಕೆ ಒಪ್ಪಿಗೆ ನೀಡಿತ್ತು ಎಂಬುದು ಸದನಕ್ಕೆ ತಿಳಿದಿರಬಹುದು. ಇದಾಗಿದ್ದು 1947ರ ಸೆಪ್ಟೆಂಬರ್ ತಿಂಗಳ ಸುಮಾರಿನಲ್ಲಿ ರಕ್ಷಣೆ, ವಿದೇಶಾಂಗ ವ್ಯವಹಾರ ಹಾಗೂ ಸಂಪರ್ಕ ವಿಷಯಗಳನ್ನು ನಾವು ಅಧಿಕಾರಕ್ಕೆ ಬರುವ ಮೊದಲೇ ಕೇಂದ್ರದೊಂದಿಗೆ ಸೇರಿಸಲಾಗಿತ್ತು. ನಾವು ಬಂದನಂತರ ಅದಕ್ಕೆ ಸಂಬಂಧಿಸಿದ ವಿವರಗಳ ಬಗ್ಗೆ ಮಾತ್ರ ವ್ಯವಹಸಿರಿಸಿದ್ದೇವೆ. ತಾತ್ವಿಕ ಅನುಮೋದನೆ ಮೊದಲೇ ನಡೆದುಹೋಗಿತ್ತು. ಭಾರತ ಸರ್ಕಾರದ ನಿಲುವು ಹೀಗಿದೆ. ಇಲಾಖೆಗಳನ್ನು ಕೇಂದ್ರದೊಂದಿಗೆ ಸೇರಿಸಿದ ನಂತರ ಸಂಖ್ಯೆಯನ್ನು ಕಡಿಮೆ ಮಾಡುವುದೋ ಅಥವಾ ಮರುವ್ಯವಸ್ಥೆ ಅಥವಾ ವಿಸ್ತರಣೆ ಮಾಡುವುದೋ, ಅಗತ್ಯವಾದರೆ ಹಾಗೆ ಮಾಡುವ ಸ್ವಾತಂತ್ರ್ಯ ಭಾರತ ಸರ್ಕಾರಕ್ಕೆ ಇರಬೇಕು. ಉದಾಹರಣೆಗೆ ಆದಾಯ ತೆರಿಗೆ ಇಲಾಖೆ ಮತ್ತು ಇತರ ಇಲಾಖೆಗಳು ವಿಸ್ತರಿಸಬಹುದು. ಅವಕ್ಕೆ ಇನ್ನಷ್ಟು ಖರ್ಚು ಮಾಡಬಹುದು. ಸೈನ್ಯದ ವಿಷಯದಲ್ಲಿ ಮಿತವ್ಯಯ ಮಾಡಬೇಕಾಗಬಹುದು. ಸೈನ್ಯವನ್ನು ಯಾಂತ್ರೀಕರಿಸುವ ಹಾಗೂ ಸುಧಾರಿಸುವ ಉದ್ದೇಶ ಅವರಿಗಿದೆ. ಈ ಸಾಮಾನ್ಯ ನೀತಿಗೆ ಅನುಗುಣವಾಗಿ ಅವರು ಮೈಸೂರು ರಾಜ್ಯದ ಸೈನ್ಯ ಹಾಗೂ ತಿರುವಾಂಕೂರು ರಾಜ್ಯದ ಸೈನ್ಯದ ವಿಷಯದಲ್ಲಷ್ಟೇ ಅಲ್ಲ ಇತರ ಸೈನ್ಯಗಳ ವಿಷಯದಲ್ಲಿಯೂ ಸಂಖ್ಯೆಯನ್ನು ಕಡಿಮೆ ಮಾಡಬೇಕಾಗಿದೆ. ಇದು ಈಗ ಎಲ್ಲ ಕಡೆಯೂ ಇರುವ ಸ್ಥಿತಿ. ಆದರೆ ನಮ್ಮ ಸೇನೆಯಲ್ಲಿರುವ ಸೋದರರಿಗೆ ಸಂಬಂಧಿಸಿದಂತೆ ಅವರ ಹಿತಾಸಕ್ತಿಯನ್ನು ರಕ್ಷಿಸುವುದಕ್ಕಾಗಿ ಸಕಲ ಪ್ರಯತ್ನವನ್ನೂ ನಾವು ಮಾಡುತ್ತೇವೆ ಎಂಬ ಭರವಸೆಯನ್ನು ಈ ಸದನದಲ್ಲಿ ಕೊಡಬಯಸುತ್ತೇನೆ. ಅಗತ್ಯಬಿದ್ದಲ್ಲಿ ನಾವು ಭಾರತ ಸರ್ಕಾರದೊಂದಿಗೆ ಹೋರಾಡಬೇಕು, ಜಗಳವಾಡಬೇಕು ಎಂದು ಸನ್ಮಾನ್ಯ ಮಿತ್ರ ಜನಾಬ್ ಮೊಹಮ್ಮದ್ ಇಮಾಂ ಅವರು ಹೇಳಿದರು. ಹಾಗೆ ಮಾಡುವುದಾಗಿ ನಾನು ಅವರಿಗೆ ಭರವಸೆ ಕೊಡುತ್ತೇನೆ. ಹಣಕಾಸು ವಿಲಿನೀಕರಣಕ್ಕೆ ಸಂಬಂಧಿಸಿದಂತೆಯೂ ಸಹ ಮೈಸೂರು ರಾಜ್ಯವೇ ಬಹಳ ಚೌಕಾಶಿ ನಡೆಸಿದ್ದು ಹಾಗೂ ಮೈಸೂರು ರಾಜ್ಯವೇ ಬಹಳ ಲಾಭಗಳಿಸಿದ್ದು ಎಂದು ಇತರ ಸರ್ಕಾರಗಳ ಕೆಲವು ಪ್ರತಿನಿಧಿಗಳು ಹೇಳುತ್ತಿದ್ದಾರೆ.

ನಾನು ಇನ್ನೊಂದೆರಡು ವಿಷಯಗಳನ್ನು ಉಲ್ಲೇಖಿಸಿ ನನ್ನ ಮಾತುಗಳನ್ನು ಮುಗಿಸುತ್ತೇನೆ. ಈ ತಿದ್ದುಪಡಿಯಲ್ಲಿ "ಮೈಸೂರಿನ ಸಮಗ್ರತೆಯನ್ನು ಕಾಪಾಡಿಕೊಳ್ಳುವಲ್ಲಿ ನಾವು ವಿಫಲರಾಗಿದ್ದೇವೆ ಎಂದಿರುವ ಮಾತುಗಳು ನನಗೆ ಬಹಳ ವಿಸ್ಮಯ ಉಂಟುಮಾಡಿವೆ. ಮೈಸೂರು ರಾಜ್ಯ ಭಾರತ ದೇಶದ ಭೂಪಟದಲ್ಲಿದೆಯೋ ಅಥವಾ ಆ ಭೂಪಟದಿಂದ ಮಾಯವಾಗಿದೆಯೋ ಎಂಬ ಪ್ರಶ್ನೆಯನ್ನು ಸನ್ಮಾನ್ಯ ಸದಸ್ಯರಿಗೆ ಕೇಳಬಯಸುತ್ತೇನೆ. ಸುಮಾರು 600 ಚಿಲ್ಲರೆ ರಾಜ್ಯಗಳಲ್ಲಿ ಕೇವಲ ಒಂದೋ ಎರಡೋ ರಾಜ್ಯಗಳು ಮಾತ್ರ ಭಾರತದ ಭೂಪಟದಲ್ಲಿ ಗೌರವಾನ್ವಿತ ಸ್ಥಾನವನ್ನು ಪಡೆದಿದ್ದು ಅದರಲ್ಲಿ ಮೈಸೂರು ರಾಜ್ಯವು ಒಂದಾಗಿದೆ. (hear, hear) ತಿರುವಾಂಕೂರು ಮತ್ತು ಕೊಚಿನ್‌ಗಳೂ ಕೂಡ ಒಂದೇ ರಾಜ್ಯವಾಗಿವೆ. ಮೈಸೂರು, ಹೈದ್ರಾಬಾದ್ ಹಾಗೂ ಕಾಶ್ಮೀರ ಈ ಮೂರು ರಾಜ್ಯಗಳು ಮಾತ್ರವೇ ಈಗ ಭಾರತದ ಸಂವಿಧಾನದ ಕೆಳಗೆ ಕೆಲಸ ಮಾಡುತ್ತಿರುವಂಥವು. ಕಾಶ್ಮೀರದ್ದೇ ಒಂದು ಪ್ರತ್ಯೇಕ ಸ್ಥಿತಿ. ಅದರ ಬಗ್ಗೆ ನಾನು ಹೇಳಬಯಸುವುದಿಲ್ಲ. ಹೈದ್ರಾಬಾದ್‌ನಲ್ಲಿ ಪ್ರಜಾಪ್ರಭುತ್ವ ಇನ್ನೂ ವಿಕಾಸಗೊಂಡಿಲ್ಲ. ಆದರೆ ಹಳೆಯ ಪ್ರಾಂತಗಳ

ಸ್ಥಾನಮಾನದ ನೆಲೆಯಲ್ಲಿಯೇ ಈಗಲೂ ಇರುವ ಏಕೈಕ ರಾಜ್ಯವೆಂದರೆ ಮೈಸೂರು. ಮೈಸೂರಿನ ಈ ಸಮಗ್ರತೆಯನ್ನು ಕಾಪಾಡಿಕೊಳ್ಳುವಂಥ ನೀತಿಯನ್ನು ಅನುಸರಿಸಿದ್ದಕ್ಕೆ ಬಂದ ಟೀಕೆ ಇದೇ ಏನು? ಈ ಪ್ರಶ್ನೆಯನ್ನು ನಾನು ಸದನಕ್ಕೆ ಹಾಕುತ್ತಿದ್ದೇನೆ. "ಮೈಸೂರು ರಾಜ್ಯದ ಸ್ಥಾನಮಾನವನ್ನು ನಾವು ಕಾಪಾಡಿಕೊಂಡಿಲ್ಲ" ಎಂಬ ಮಾತಿನ ಬಗ್ಗೆಯೂ ನಾನು ಈಗ ಹೇಳಿದ ಮಾತೇ ಸ್ವಲ್ಪ ಮಟ್ಟಿಗೆ ಅನ್ವಯಿಸುತ್ತದೆ. ಆದರೆ, ಹಳೆಯ ವ್ಯವಸ್ಥೆಯಲ್ಲಿ ನಮ್ಮ ಕೈಯಲ್ಲಿ ಅನೇಕ ಅಧಿಕಾರಗಳಿದ್ದವು, ಅನೇಕ ಇಲಾಖೆಗಳ ನಿರ್ವಹಣೆಯನ್ನು ನಾವು ನೋಡಿಕೊಳ್ಳುತ್ತಿದ್ದೆವು, ಇದರಲ್ಲಿ ಅನೇಕವನ್ನು ಈಗ ಬಿಟ್ಟುಕೊಟ್ಟಿದ್ದೇವೆ, ಈ ಸಂಬಂಧವಾದ ಕೆಲಸಗಳಿಗೆ ಕೇಂದ್ರವನ್ನೇ ಕೇಳಬೇಕಾಗಿದೆ ಎಂಬ ವಾದವನ್ನು ಮುಂದಿಡಬಹುದು. ಹೌದು, ಸ್ವಲ್ಪಮಟ್ಟಿಗೆ ಹೀಗಾಗಿರುವುದು ನಿಜ. ಸನ್ಮಾನ್ಯ ಸದಸ್ಯ ಜವಾಬ್ ಹನೀಫ್ ಹಾಗೂ ಇನ್ನಿತರರು ಹೇಳಿದಂತೆ ನಾವು 'ಬಿ' ಭಾಗದ ರಾಜ್ಯಗಳ ಕೆಲವೊಂದು ಹಕ್ಕು ಹಾಗೂ ಕರ್ತವ್ಯಗಳನ್ನು ಒಂದೇ ಸಂವಿಧಾನದೊಂದಿಗೆ ಅಂದರೆ ಭಾರತದ ಸಂವಿಧಾನದೊಂದಿಗೆ ಹಂಚಿಕೊಳ್ಳಬೇಕಾಗಿದೆ. ಅವರೆಲ್ಲರೂ ಕೂಡ ಸರ್ದಾರ್ ವಲ್ಲಭಾಯ್ ಪಟೇಲ್ ಅವರಿಗೆ ಅಪಾರ ಗೌರವ ವ್ಯಕ್ತಪಡಿಸಿದ್ದಾರೆ. ಸರ್ದಾರ್ ಅವರನ್ನು ನಾವು ಹೊಗಳುವುದು ಭಾರತಕ್ಕೆ ಸ್ವಾತಂತ್ರ್ಯ ತಂದುಕೊಟ್ಟವರು ಎಂಬುದಕ್ಕೆ ಮಾತ್ರವೇ ಅಲ್ಲ, ಭಾರತವನ್ನು ಒಂದುಗೂಡಿಸಿದವರು ಎಂಬ ಕಾರಣಕ್ಕಾಗಿಯೂ ಸಹ ಹೊಗಳುತ್ತೇವೆ. ಇಂತಹ ಒಂದುಗೂಡಿಕೆಗಾಗಿ, ಇಡೀ ಭಾರತಕ್ಕೆ ಒಂದೇ ಸಂವಿಧಾನವನ್ನು ರೂಪಿಸಿದ್ದಕ್ಕಾಗಿ ನಾವು ಕೆಲವೊಂದು ಪರಿಸ್ಥಿತಿಗಳನ್ನು ಒಪ್ಪಿಕೊಳ್ಳಲೇಬೇಕಾಗಿದೆ.

ಸಧ್ಯದ ದೃಷ್ಟಿಯಿಂದ, ನಮಗೆ ನಾವು ನಮ್ಮ ಹಕ್ಕುಗಳನ್ನು ಬಿಟ್ಟುಕೊಟ್ಟು ಬಿಟ್ಟಿದ್ದೇವೆ ಎಂದೆನ್ನಿಸಿದರೂ ದೂರದೃಷ್ಟಿಯಿಂದ ನೋಡುವುದಾದರೆ ಒಟ್ಟಾಗಿ ಭಾರತದ ವಿಶಾಲ ಹಿತದೃಷ್ಟಿಯಿಂದ ಹಾಗೂ ಅಂತಿಮವಾಗಿ ರಾಜ್ಯದ ಹಿತದೃಷ್ಟಿಯಿಂದ ನೋಡಿದಾಗ ನಾವು ಏನಾದರೂ ತಪ್ಪು ಮಾಡಿದ್ದೇವೆ ಎಂದೆನ್ನಿಸುವುದಿಲ್ಲ. ಒಂದು ವೇಳೆ ನಮ್ಮ ಮಂತ್ರಿಮಂಡಲದ ಮೇಲಿನ ಆರೋಪ ಇದೇ ಆಗಿರುವುದಾದರೆ ಅದನ್ನು ನಾವು ಈಗಷ್ಟೇ ಅಲ್ಲ ಮುಂದೆ ಎಂದಾದರೂ ಈ ಆರೋಪ ಮಾಡಿದರೂ ಸಹ ಅದನ್ನು ಎದುರಿಸಲು ಹಾಗೂ ಸಮರ್ಥಿಸಿಕೊಳ್ಳಲು ಸಿದ್ಧರಿದ್ದೇವೆ. ಈ ಟೀಕೆಯಲ್ಲಿ ಕೊನೆಯದಾದ ಹಾಗೂ ಬಹಳ ಕ್ರೂರವಾದ ಅಪಾದನೆ ಎಂದರೆ ನಾವು ಪ್ರಜಾಪ್ರಭುತ್ವದ ತತ್ವಗಳಿಗೆ ಅನುಗುಣವಾಗಿ ಆಡಳಿತ ನಡೆಸುತ್ತಿಲ್ಲ ಎಂಬುದು. ಮೈಸೂರು ರಾಜ್ಯಕ್ಕೆ ಪ್ರಜಾಪ್ರಭುತ್ವವನ್ನು ತಂದುಕೊಡುವುದಕ್ಕಾಗಿ ಎಣೆಯಿಲ್ಲದಷ್ಟು ಶ್ರಮಿಸಿದ ಈ ಕಾಂಗ್ರೆಸ್ ಪಕ್ಷಕ್ಕೆ ಈಗ ಪ್ರಜಾಪ್ರಭುತ್ವದ ತತ್ವಗಳನ್ನು ಉಲ್ಲಂಘಿಸಿದ ಪಾಪವನ್ನು ಹೊರಿಸಲಾಗುತ್ತಿದೆ.

ಜನಾಬ್ ಜೆ. ಮೊಹಮದ್ ಇಮಾಂ:- ನನ್ನ ಸ್ನೇಹಿತರು ನಾನು ಸಲ್ಲಿಸಿದ ಸೇವೆಯನ್ನು ಮರೆಯುತ್ತಿದ್ದಾರೆ.

ಕೆ. ಚೆಂಗಲರಾಯರೆಡ್ಡಿ:- ನಾನು ಅವರ ವಿರುದ್ಧ ಯಾವುದೇ ಆರೋಪ ಹೊರಿಸುತ್ತಿಲ್ಲ. ಇರುವ ಸಂಗತಿಯನ್ನಷ್ಟೇ ಹೇಳುತ್ತಿದ್ದೇನೆ. ಪ್ರಜಾಸತ್ತಾತ್ಮಕವಲ್ಲದ ವ್ಯವಸ್ಥೆಯಲ್ಲಿನ ಕೆಲಸಕ್ಕೆ ಹೊಂದಿಕೊಂಡಿದ್ದ ಹಾಗೂ ಪ್ರಜಾಸತ್ತಾತ್ಮಕ ವ್ಯವಸ್ಥೆಯನ್ನು ತರಲು ಶಕ್ತಿಮೀರಿ ದುಡಿಯದಿದ್ದ ಸನ್ಮಾನ್ಯ ಸದಸ್ಯರುಗಳು ಈಗ ಪ್ರಜಾಪ್ರಭುತ್ವದ ತತ್ವಗಳಿಗೆ ಅನುಸಾರವಾಗಿ ಆಡಳಿತವನ್ನು ನಡೆಸುತ್ತಿಲ್ಲ ಎಂಬ ಆರೋಪವನ್ನು ನಮ್ಮ ಮೇಲೆ ಹೊರಿಸುತ್ತಿದ್ದಾರೆ. ಇದು ನಿಜಕ್ಕೂ ಬಹಳ ವಿಚಿತ್ರವಾಗಿದೆ. ಅವರು ಮಾತನ್ನು

ಎರಡೂ ರೀತಿಯಲ್ಲಿ ತಿರುಗಿಸುತ್ತಾರೆ. ನಾವು ಅವರೊಂದಿಗೆ ಸಮಾಲೋಚಿಸುವಂಥ ಕ್ರಮ ಕೈಗೊಂಡರೆ ನಾವು ಅವರನ್ನು ಸಮಾಧಾನಪಡಿಸುವುದಕ್ಕಾಗಿ ಹಾಗೂ ಅವರ ಬೆಂಬಲವನ್ನು ಗಳಿಸುವ ಸಲುವಾಗಿ ಹಾಗೆ ಮಾಡುತ್ತಿದ್ದೇವೆಂದು ಹೇಳುತ್ತಾರೆ. ಉದಾಹರಣೆಗೆ ಸ್ಥಾಯೀ ಸಮಿತಿಗಳ ವಿಷಯವನ್ನೇ ತೆಗೆದುಕೊಳ್ಳಿ- ಜನರ ಪ್ರತಿನಿಧಿಗಳೊಂದಿಗೆ ನಾವು ಸಂಪರ್ಕ ಇಟ್ಟುಕೊಳ್ಳಬೇಕು ಮತ್ತು ನೀತಿ ನಿರೂಪಣೆಯ ವಿಷಯಕ್ಕೆ ಅವರ ಸಲಹೆಗಳನ್ನು ಪಡೆಯಬೇಕು ಎಂಬ ಸದುದ್ದೇಶದಿಂದ ಈ ಸಮಿತಿಗಳನ್ನು ಸ್ಥಾಪಿಸಲಾಯಿತು. ನಾವು ಈ ಸಮಿತಿಗಳನ್ನು ಸ್ಥಾಪಿಸಿದ್ದು ರಾಜ್ಯದಲ್ಲಿ ಇತ್ತೀಚಿನ ರಾಜಕೀಯ ಬೆಳವಣಿಗೆಗಳಾಗುವುದಕ್ಕೂ ಮೊದಲೇ ಹೊರತು ನಮ್ಮ ಟೀಕಾಕಾರರು ಕಲ್ಪಿಸಿಕೊಂಡಂತೆ ಅಥವಾ ಯೋಚಿಸಿದಂತೆ ಆಮೇಲಲ್ಲ. ಹಾಗಲ್ಲವೇ ಅಲ್ಲ. ಈ ನಿರ್ಣಯವನ್ನು ಬಹಳ ಮೊದಲೇ ತೆಗೆದುಕೊಳ್ಳಲಾಗಿತ್ತು. ಈ ಸದನದಲ್ಲಿ ವಿಶ್ವಾಸವಿಡುವುದಾದರೆ ಈ ನಿರ್ಣಯವನ್ನು ತಿಂಗಳ ಹಿಂದೆ ನಾನು ದೆಹಲಿಯಲ್ಲಿದ್ದಾಗಲೇ ಕೈಗೊಳ್ಳಲಾಗಿತ್ತು. ನನಗನ್ನಿಸುವಂತೆ ಅಲ್ಲಿ ಅವರು ಸಂಸತ್ತಿನಲ್ಲಿ ತೆಗೆದುಕೊಂಡ ನಿರ್ಣಯದ ಮೂಲಕ ಈ ರೀತಿಯ ಸಮಿತಿಗಳನ್ನು ಸ್ಥಾಪಿಸಿದ್ದಾರೆ ಮತ್ತು ಪ್ರತಿಯೊಂದು ಸಚಿವ ಶಾಖೆಗೂ ಅಂತಹ ಸಮಿತಿಗಳಿವೆ. ಇದು ಬಹು ಒಳ್ಳೆಯ ವ್ಯವಸ್ಥೆ ಎಂದು ನನಗನ್ನಿಸುತ್ತದೆ. ಆಗಿನಿಂದಲೂ ನಾವು ಈ ರೀತಿಯ ಸಮಿತಿಗಳ ಬಗ್ಗೆ ಯೋಚಿಸುತ್ತಿದ್ದೆವು. ಸೆಪ್ಟೆಂಬರ್ ಅಥವಾ ಅಕ್ಟೋಬರ್ ತಿಂಗಳಲ್ಲಿ ನಿರ್ಣಯಿಸಿದೆವು. ಅಲ್ಲದೆ, ಈಗಾಗಲೇ ಸನ್ಮಾನ್ಯ ಹಣಕಾಸು ಸಚಿವರು ತಿಳಿಸಿದಂತೆ ಈ ರೀತಿಯ ಅಂದಾಜು ಸಮಿತಿಗಳನ್ನು ಸ್ಥಾಪಿಸಿದ್ದರಲ್ಲಿ ನಾವೇ ಮೊದಲಿಗರು. ಬಹಳಷ್ಟು ರಾಜ್ಯಗಳಲ್ಲಿ ಇಂತಹ ಸಮಿತಿಗಳಿಲ್ಲ. ಕೇಂದ್ರವು ಈ ಕೆಲಸ ಮಾಡಿದೆ. ಪ್ರಜಾಪ್ರಭುತ್ವದ ತತ್ವಗಳ ಪ್ರತಿಪಾದನೆಯ ದೃಷ್ಟಿಯಿಂದ ಇದು ಬಹಳ ಮುಖ್ಯವಾದ ಸಮಿತಿ, ಹೀಗಿರುವಾಗ ನಾವು ಪ್ರಜಾಪ್ರಭುತ್ವದ ತತ್ವಗಳ ಪ್ರಕಾರ ಕೆಲಸ ಮಾಡುತ್ತಿಲ್ಲ ಎಂದು ಆರೋಪಿಸಲಾಗುತ್ತಿದೆ. ನಾವು ಸದನವನ್ನು ವಿಶ್ವಾಸಕ್ಕೆ ತೆಗೆದುಕೊಳ್ಳುತ್ತಿಲ್ಲ ಎಂದು ಆರೋಪಿಸಲಾಗುತ್ತಿದೆ. ನಾವು ಸದನವನ್ನು ವಿಶ್ವಾಸಕ್ಕೆ ತೆಗೆದುಕೊಳ್ಳುತ್ತಿಲ್ಲ ಎಂದು ಹೇಳುವುದಕ್ಕೆ ಭಾರತೀಯ ಆಡಳಿತ ಸೇವೆ ಹಾಗೂ ಭಾರತೀಯ ಪೋಲಿಸ್ ಸೇವಾ ಯೋಜನೆಗಳನ್ನು ಮೈಸೂರು ರಾಜ್ಯಕ್ಕೆ ವಿಸ್ತರಿಸಿದ ಒಂದೇ ಒಂದು ವಿಷಯವನ್ನು ಸಮರ್ಥನೆಯಾಗಿ ಕೊಡಲಾಗಿದೆ. ಹಣಕಾಸು ವಿಲೀನೀಕರಣಕ್ಕೂ ನಾವು ಸದನದ ಪೂರ್ವ ಅನುಮೋದನೆ ಪಡೆದುಕೊಳ್ಳಲಿಲ್ಲ ಎಂದು ಶ್ರೀ ಎಲ್. ಸಿದ್ದಪ್ಪ ಅವರು ಹೇಳಿದರು. ಕಳೆದ ಸಭೆಯಲ್ಲಿ ನಾನು ಈ ಅಂಶವನ್ನು ಸ್ಪಷ್ಟಪಡಿಸಿದ್ದೇನೆ. ಪ್ರಜಾಪ್ರಭುತ್ವದ ರಾಷ್ಟ್ರಗಳಲ್ಲಿ ತುರ್ತು ವಿಷಯಗಳ ಬಗ್ಗೆ ವ್ಯವಹರಿಸುವಾಗ ಶಾಸಕರ ಸಭೆಯ ಪೂರ್ವಾನುಮೋದನೆಯನ್ನು ಪಡೆದುಕೊಳ್ಳುವುದು ಯಾವಾಗಲೂ ಸಾಧ್ಯವಾಗದಿರಬಹುದು. ಇದು ಪ್ರಜಾಪ್ರಭುತ್ವದ ಶಕ್ತಿಗಿರುವ ಅನುಕೂಲ. ಅದೇ ಸಂದರ್ಭದಲ್ಲಿ ಇದು ಪ್ರಜಾಪ್ರಭುತ್ವದ ದೌರ್ಬಲ್ಯ ಎಂದು ನೀವು ಹೇಳಬಹುದು. ಒಂದು ಅರ್ಥದಲ್ಲಿ ಪ್ರಜಾಸತ್ತಾತ್ಮಕ ಸರ್ಕಾರಗಳು ಬಲವಾದ ಸರ್ಕಾರಗಳು. ಏಕೆಂದರೆ ನಿರ್ಣಯವನ್ನು ಕೈಗೊಂಡು ಅನಂತರ ಸದನದ ಮುಂದೆ ಮಂಡಿಸುವ ಧೈರ್ಯ ಅವುಗಳಿಗಿರುತ್ತದೆ ದೇಶದ ಬಹುಮತವಿರುವ ಪಕ್ಷದ ಬೆಂಬಲ ಪಡೆದಿರುವಂಥ ಜವಾಬ್ದಾರಿಯುತ ಸಚಿವರುಗಳು ಯುದ್ಧಕ್ಕೆ ಹೋಗುವ, ಶಾಂತಿ ಒಪ್ಪಂದಗಳನ್ನು ಮಾಡಿಕೊಳ್ಳುವ, ಹಣದ ಅಪಮೌಲ್ಯನ ಮಾಡುವ ಮೊದಲಾದ ವಿಷಯಗಳಲ್ಲಿ ನಿರ್ಣಯಗಳನ್ನು ಪರಿಸ್ಥಿತಿಯ ತುರ್ತನ್ನು ಗಮನದಲ್ಲಿಟ್ಟುಕೊಂಡು ಕೈಗೊಳ್ಳಲಾಗಿದೆ. ಇದನ್ನು ನೀವು ಒಪ್ಪಬಹುದು ಅಥವಾ ತಿರಸ್ಕರಿಸಬಹುದು ಎಂದು ಹೇಳಿದಂತಹ ನಿದರ್ಶನಗಳು ಇತರ ದೇಶಗಳ ಇತಿಹಾಸದಲ್ಲಿಯೂ

ಕಂಡುಬರುತ್ತವೆ. ಒಂದು ವೇಳೆ ಸದನವು ನಿರ್ಣಯವನ್ನು ತಿರಸ್ಕರಿಸಿದರೆ ಅವರು ಅಧಿಕಾರವನ್ನು ತ್ಯಜಿಸಬೇಕಾಗುತ್ತದೆ. ಇಂತಹ ವಿಷಯಗಳು ಪ್ರಜಾಪ್ರಭುತ್ವದ ತತ್ವಗಳನ್ನು ಮೀರಿದಂತಲ್ಲ ಎಂಬ ಅಂಶವನ್ನು ನನ್ನ ಸ್ನೇಹಿತರಿಗೆ ಹೇಳಬಯಸುತ್ತೇನೆ. ಇದು ಹೊಸದೇನೂ ಅಲ್ಲ. ಈ ಅಂಶವನ್ನು ನಾನು ಸಂಪೂರ್ಣವಾಗಿ ಸ್ಪಷ್ಟಪಡಿಸಿದ್ದೇನೆ. ನಾವು ಪರಿಸ್ಥಿತಿಯ ತುರ್ತಿಗನುಗುಣವಾಗಿ ಕ್ರಮ ಕೈಗೊಳ್ಳಬೇಕಾಗುತ್ತದೆ. ಅನಂತರ ಸದನದ ಅನುಮೋದನೆ ಪಡೆದುಕೊಳ್ಳಬೇಕಾಗುತ್ತದೆ. ಮೈಸೂರು ರಾಜ್ಯದಲ್ಲಿ ಉತ್ತಮ ಸಂಪ್ರದಾಯಗಳನ್ನು ಹಾಗೂ ಪ್ರಜಾಸತ್ತಾತ್ಮಕ ರೂಢಿಗಳನ್ನು ಸ್ಥಾಪಿಸಲು ನಾವು ಸಕಲ ಪ್ರಯತ್ನವನ್ನು ಮಾಡುತ್ತಿದ್ದೇವೆ. ಇಲ್ಲಿ ನಾವು ಕಳೆದ ಕೆಲವು ವರ್ಷ ಬಹು ಮುಖ್ಯವಾದ ಹಾಗೂ ಜಟಿಲವಾದ ಅನೇಕ ಸಮಸ್ಯೆಗಳನ್ನು ಎದುರಿಸಬೇಕಾಯಿತು. ಕಳೆದ ಎರಡು ದಶಕಗಳಲ್ಲಿ ಬಹುಶಃ ಯಾವುದೇ ಆಡಳಿತಕ್ಕೂ ಅಷ್ಟು ವ್ಯಾಪಕವಾದಂತಹ ಸಮಸ್ಯೆಗಳು ಎದುರಾಗಿರಲಾರವು. ಕಾಂಗ್ರೆಸ್ ಸಂಸ್ಥೆ ಭೂಮಿಯ ಮೇಲೆ ಸ್ವರ್ಗವನ್ನು ಸ್ಥಾಪಿಸುತ್ತದೆ ಎಂಬ ನಿರೀಕ್ಷೆ ಇದ್ದಿರಬಹುದು. ಜನರ ನಿರೀಕ್ಷೆಗಳನ್ನು ಪರಿಪೂರ್ಣವಾಗಿ ಈಡೇರಿಸಲು ಯಾವೊಂದು ಸರ್ಕಾರಕ್ಕೂ ಸಾಧ್ಯವಾಗಿಲ್ಲ. ಇಂತಹ ಸಮಸ್ಯೆಗಳನ್ನು ಒಂದೆರಡು ವರ್ಷಗಳಲ್ಲಿ ಪರಿಹರಿಸಲು ಸಾಧ್ಯವಿಲ್ಲ. ವಿವಿಧ ರೀತಿಯಲ್ಲಿ ತಮ್ಮ ಜೀವನ ಮಟ್ಟಗಳ ಸುಧಾರಣೆಯಾಗಬೇಕು ಎಂದು ಅಪೇಕ್ಷಿಸುವಂಥವರಿಗೆ ಸರಿಯಾದ ಸಮಾಧಾನ ಸಿಗಬೇಕಾದರೆ ಹಲವಾರು ವರ್ಷಗಳ ಕಾಲಾವಕಾಶ ಅಗತ್ಯವಾಗುತ್ತದೆ. ಈ ಎಲ್ಲದಕ್ಕೆ ನಮಗೆ ಕಾಲಾವಕಾಶ ಬೇಕು. ಈ ಎರಡು ಮೂರು ವರ್ಷಗಳ ಅವಧಿಯಲ್ಲಿ ನಾವು ನಮ್ಮ ಕೈಲಾದದ್ದನ್ನು ಮಾಡಿದ್ದೇವೆ. ಆದರೆ ನಮ್ಮ ಮಿತಿಗಳೇನು ಎಂಬುದು ನಮಗೆ ಗೊತ್ತಿದೆ. ವಿಳಂಬವಾಗಿದೆ ಎಂಬ ಟೀಕೆ ಇದೆ. ಆದರೆ ಈ ವಿಳಂಬಕ್ಕೆ ನಾವು ಹೊಸ ವ್ಯವಸ್ಥೆಯಲ್ಲಿ ಕೆಲಸ ಮಾಡಬೇಕಾಗಿರುವುದು ಒಂದು ಕಾರಣ. ಅನೇಕ ವಿಷಯಗಳಲ್ಲಿ ನಾವು ಭಾರತ ಸರ್ಕಾರದೊಂದಿಗೆ ಮಾತನಾಡಬೇಕಾಗುತ್ತದೆ, ಚರ್ಚಿಸಬೇಕಾಗುತ್ತದೆ ಇದು ಒಂದು ಹಂತ ತಲುಪುವವರೆಗೂ ನಾವು ಕ್ರಮ ಕೈಗೊಳ್ಳುವಂತಿಲ್ಲ. ಇಂತಹ ವಿಳಂಬಗಳಿಗೆ ಪ್ರಜಾಪ್ರಭುತ್ವ ಪದ್ಧತಿಯೇ ಕಾರಣ. ನಮ್ಮ ದೇಶದಲ್ಲಿ ಪ್ರಜಾಪ್ರಭುತ್ವ ಹೇಗೆ ಕೆಲಸ ಮಾಡುತ್ತದೆ ಎಂಬ ಬಗ್ಗೆ ಮತ್ತಾವ ಸಂದರ್ಭದಲ್ಲಾದರೂ ಮಾತಾಡೋಣ, ಸ್ವಾರಸ್ಯಕರವಾಗಿರುತ್ತದೆ. ನಾವು ಪ್ರಜಾಪ್ರಭುತ್ವದ ಸರಿಯಾದ ವ್ಯವಸ್ಥೆಗಳನ್ನೂ, ಸರಿಯಾದ ಸಂಪ್ರದಾಯಗಳನ್ನು ಇನ್ನೂ ಸ್ಥಾಪಿಸಿಲ್ಲ. ಇದಕ್ಕೆ ಸಹಜವಾಗಿಯೇ ಸ್ವಲ್ಪ ಕಾಲಾವಕಾಶ ಬೇಕು. ಇಂತಹ ವ್ಯವಸ್ಥೆ ಮತ್ತು ಸಂಪ್ರದಾಯಗಳು ಸ್ಥಾಪನೆಯಾಗುವವರೆಗೆ ನಾವು ಈ ವಿಷಯಗಳಲ್ಲಿ ಬಹಳ ಸೂಕ್ಷ್ಮವಾಗಿ ವ್ಯವಹರಿಸಬೇಕು, ಎಷ್ಟೋ ಸಂದರ್ಭಗಳಲ್ಲಿ ವಿಳಂಬಗಳಾಗುತ್ತವೆ. ನಾವು ನಿರಂಕುಶವಾದ ಅಥವಾ ಸರ್ವಾಧಿಕಾರದ ಅಥವಾ ಬ್ಯೂರೋಕ್ರಾಟಿಕ್ ಸರ್ಕಾರ ನಡೆಸುತ್ತಿದ್ದೇವೆ ಎಂದು ಅರ್ಥವಲ್ಲ.

ಶ್ರೀ ಎಲ್. ಸಿದ್ದಪ್ಪ: ನೀವು ಚುರುಕಾಗಿ ನಿರ್ಣಯ ಕೈಗೊಳ್ಳುವುದಾದರೆ ಕೆಲವೊಂದು ತಪ್ಪುಗಳಾದರೂ ಪರವಾಗಿಲ್ಲ.

**ಶ್ರೀ ಕೆ. ಚೆಂಗಲರಾಯರೆಡ್ಡಿ:-** ಒಂದೆರಡು ವಿಷಯಗಳಲ್ಲಿ ತುಂಬ ವಿಳಂಬವಾಗಿದೆ. ನನಗೆ ಅದರ ಅರಿವಿದೆ. ನಾವು ಈಗ ಯಾವ ವ್ಯವಸ್ಥೆಯಲ್ಲಿ ಕೆಲಸ ಮಾಡುತ್ತಿದ್ದೇವೊ ಅದೇ ಕೆಲವೊಂದು ವಿಳಂಬಗಳಿಗೆ ಕಾರಣ. ಆದರೆ ಪ್ರತಿಯೊಂದು ವಿಳಂಬಕ್ಕೂ ಈ ವ್ಯವಸ್ಥೆಯೇ ಕಾರಣವಲ್ಲ.

ಒಟ್ಟಿನಲ್ಲಿ ಸನ್ಮಾನ್ಯ ಸದಸ್ಯ ಜನಾಬ್ ಇಮಾಂ ಅವರು ಮಂಡಿಸಿದ ತಿದ್ದುಪಡಿಯನ್ನು ಅಂಗೀಕರಿಸುವುದಕ್ಕೆ ಯಾವುದೇ ಸಮರ್ಥನೆಯಿಲ್ಲ ಎಂದು ನನಗನ್ನಿಸುತ್ತದೆ. ಸನ್ಮಾನ್ಯ ಸದಸ್ಯ ಶ್ರೀ ಗೋವಿಂದರೆಡ್ಡಿಯವರು ರಾಜಪ್ರಮುಖರ ಭಾಷಣದ ಸಂಬಂಧವಾಗಿ ಮಂಡಿಸಿದ ವಂದನಾರ್ಪಣಾ ನಡವಳಿಯನ್ನು ಸದನವು ಅನುಮತಿಸುತ್ತದೆ ಎಂದು ಭಾವಿಸುತ್ತೇನೆ.

## 8. ಸಾಮಾನ್ಯ ಆಡಳಿತಕ್ಕೆ ಸಂಬಂಧಿಸಿದಂತೆ ಪೂರಕ ಮೊತ್ತವನ್ನು ಸರ್ಕಾರಕ್ಕೆ ನೀಡುವ ಸಂಬಂಧವಾದ ನಿರ್ಣಯ.

### ವಿಧಾನಸಭಾ ಕಲಾಪ-27, ಜನವರಿ 1951

**ಶ್ರೀ ಕೆ. ಚೆಂಗಲರಾಯರೆಡ್ಡಿಯವರು:-** ಈ ನಿಲುವಳಿಯು "The changes that will come in the course of payment during the year" ಎಂಬ ಪದಗಳನ್ನು ಒಳಗೊಂಡಿದೆ. ಅಂದರೆ ಸಂದಾಯಗಳನ್ನು ಅನಂತರ ಮಾಡಬೇಕು ಎಂದು ಅರ್ಥ. ಸಂದಾಯವನ್ನು ಈಗಾಗಲೇ ಮಾಡಿಲ್ಲ. ವರ್ಷದಲ್ಲಿ ಕ್ರಮೇಣವಾಗಿ ಸಂದಾಯವನ್ನು ಮಾಡುವ ದೃಷ್ಟಿಯಿಂದ ಈ ಪೂರಕ ಅನುದಾನ ಬೇಡಿಕೆಯನ್ನು ಮಂಡಿಸಲಾಗಿದೆ.

ಎರಡನೆಯದಾಗಿ ಮಾನ್ಯರೆ, ಈ ಎಲ್ಲ ವೆಚ್ಚಗಳನ್ನು ನಾವು ಯಾವ ಮೂಲಗಳಿಂದ ಪೂರೈಸುತ್ತೇವೆ ಎಂಬುದನ್ನು ತಿಳಿಸಬೇಕೆಂದು ಸನ್ಮಾನ್ಯ ಸದಸ್ಯರಾದ ಜನಾಬ್ ಮೊಹಮದ್ ಇಮಾಂ ಅವರು ಕೇಳಿದ್ದಾರೆ. ಇದು ಬಹಳ ದೊಡ್ಡ ಪ್ರಶ್ನೆ. ಇದು ವಾಸ್ತವವಾಗಿ ಸರ್ಕಾರದ ರೀತಿ ನೀತಿಗಳ ವಿಷಯದ ಚರ್ಚೆಯನ್ನು ಒಳಗೊಳ್ಳುತ್ತದೆ. ಸನ್ಮಾನ್ಯ ಹಣಕಾಸು ಸಚಿವರು ಸೂಕ್ತ ಹಂತದಲ್ಲಿ ಅಥವಾ ಹಣ ವಿನಿಯೋಗ ವಿಧಾಯಕವನ್ನು ಮಂಡಿಸುವ ಹಂತದಲ್ಲಿ ಈ ವಿಷಯಗಳ ಸಂಬಂಧವಾಗಿ ಇನ್ನಷ್ಟು ವಿವರಗಳನ್ನು ಕೊಡುತ್ತಾರೆ ಬಡ್ಜೆಟ್ಟನ್ನು ಸಿದ್ಧಪಡಿಸುವ ರೀತಿ ನೀತಿಗಳು ವಿವಿಧ ರೀತಿಯಲ್ಲಿರುತ್ತವೆ ಎಂಬ ಅಂಶವನ್ನು ಸದಸ್ಯರು ಗಮನದಲ್ಲಿಟ್ಟುಕೊಳ್ಳಬೇಕು. ಹಿಂದೆ ಸರ್ಕಾರದಲ್ಲಿದ್ದ ಸಚಿವರಿಗೆ ಈ ವಿಷಯಗಳನ್ನು ಹೇಗೆ ನಿರ್ವಹಿಸುತ್ತಾರೆ ಎಂಬುದು ಗೊತ್ತಿರುತ್ತದೆ. ಜನಾಬ್ ಇಮಾಂ ಅವರಿಗೆ ಇದು ಗೊತ್ತಿದೆ. ಶ್ರೀ ಸಿದ್ದಪ್ಪನವರಿಗೊ ಗೊತ್ತಿದೆ ಮತ್ತು ಶ್ರೀ ಗುಂಡಪ್ಪಗೌಡರಿಗೂ ಗೊತ್ತಿದೆ.

**ಶ್ರೀ ಎಲ್. ಸಿದ್ದಪ್ಪನವರು:-** ಅದು ಹಳೆಯ ಸಂವಿಧಾನದ ಪ್ರಕಾರ ಇತ್ತು.

**ಹೆಚ್. ಬಿ. ಗುಂಡಪ್ಪಗೌಡ:-** ಇಷ್ಟು ದೊಡ್ಡ ಮೊಬಲಗುಗಳಿರುತ್ತಿರಲಿಲ್ಲ.

**ಶ್ರೀ ಕೆ. ಚೆಂಗಲರಾಯರೆಡ್ಡಿಯವರು:-** ಸನ್ಮಾನ್ಯ ಸದಸ್ಯರು ಎಷ್ಟು ಖರ್ಚು ಹೊರಹೋಗುತ್ತದೆ, ಎಷ್ಟು ವಸೂಲಾಗುತ್ತದೆ, ಇದರಲ್ಲಿ ಎಷ್ಟು ನೇರವಾದ ಅನುದಾನದ ಸ್ವರೂಪದಲ್ಲಿದೆ ಎಂಬುದನ್ನು ನೋಡುವಷ್ಟು ಶ್ರಮವಹಿಸಿದ್ದರೆ ನಮ್ಮ ಮೇಲೆ ಆರೋಪ ಹೊರಿಸುವ ಮೊದಲೇ ತಮ್ಮ ಅಭಿಪ್ರಾಯವನ್ನು ಬದಲಾಯಿಸಿಕೊಳ್ಳಲು ಸಾಧ್ಯವಾಗುತ್ತಿತ್ತು. ಸನ್ಮಾನ್ಯ ಸದಸ್ಯರು ದಯವಿಟ್ಟು ಅಂಕಿ ಅಂಶಗಳನ್ನು ನೋಡಬೇಕು. ಅದೆಲ್ಲವನ್ನೂ ಒಟ್ಟುಗೂಡಿಸಿ, ಇದರಲ್ಲಿ ಎಷ್ಟು ಭಾಗ ಮುಂಗಡಗಳ ರೂಪದಲ್ಲಿದೆ, ಎಷ್ಟು ಭಾಗ ಅಲ್ಪಾವಧಿ ಮುಂಗಡ ರೂಪದ್ದು, ಎಷ್ಟು ಭಾಗ ಖಾಯಂ ರೂಪವಾಗಿದ್ದು ಕಾಲಕ್ರಮೇಣ ವಸೂಲಾಗುವಂಥದ್ದು ಎಂಬುದನ್ನು ನೋಡಬಹುದು. ಅವರು ಈ ಅಂಕಿ ಅಂಶಗಳನ್ನು ಪರಿಶೀಲಿಸುವ ತೊಂದರೆ ತೆಗೆದುಕೊಂಡಿದ್ದರೆ ಖಂಡಿತವಾಗಿಯೂ.......

**ಶ್ರೀ ಎಲ್. ಸಿದ್ದಪ್ಪ:** ಸರ್ಕಾರವು ಈ ಎಲ್ಲ ವಿವರಗಳನ್ನು ಒದಗಿಸಬೇಕಿತ್ತು.

ಶ್ರೀ ಕೆ. ಚೆಂಗಲರಾಯರೆಡ್ಡಿ:- ಪೂರಕ ಅನುದಾನಗಳನ್ನು ಮಂಡಿಸುವ ಸಂದರ್ಭದಲ್ಲಿ ಸರ್ಕಾರ ಈ ಎಲ್ಲ ವಿವರಗಳನ್ನು ಒದಗಿಸುತ್ತದೆ ಎಂದು ನನಗನ್ನಿಸುವುದಿಲ್ಲ. ಸನ್ಮಾನ್ಯ ಸದಸ್ಯರು ಸ್ವಲ್ಪ ತೊಂದರೆ ತೆಗೆದುಕೊಳ್ಳಬೇಕು. ಎಲ್ಲವನ್ನೂ ರೆಡಿಮೇಡ್ ಆಗಿ ಕೊಡಬೇಕು ಎಂದು ನಿರೀಕ್ಷಿಸಬಾರದು. ಸನ್ಮಾನ್ಯ ಸದಸ್ಯರಿಗೆ ಆಡಳಿತ ವರದಿ, ಬಜೆಟ್ ಅಂಕಿ ಅಂಶಗಳು, ಪ್ರೋಲಿಸ್ ಲೆಕ್ಕಪತ್ರ ಸಮಿತಿ ವರದಿಗಳು ಹಾಗೂ ಇನ್ನಿತರೆ ಸಾಹಿತ್ಯವನ್ನು ಒದಗಿಸಲಾಗಿದೆ. ಇದನ್ನು ನೋಡದೆ, ಸರ್ಕಾರವು ಎಲ್ಲ ದೊಡ್ಡ ಮತ್ತು ಸಣ್ಣ ಅಂಶಗಳಿಗೂ ಈ ವಿವರಗಳನ್ನು ನಿರೂಪಿಸಬೇಕು ಎಂದು ಹೇಳುವುದು ನ್ಯಾಯವಲ್ಲ.

ಶ್ರೀ ಎಲ್ ಸಿದ್ದಪ್ಪ:- ಬೆಳಗಿನ ಆಯ್ಕೆ ಸಮಿತಿಗಳಲ್ಲಿ ನಮ್ಮನ್ನು ಈಗಾಗಲೇ ಸಾಕಷ್ಟು ಹೀಯಾಳಿಸಲಾಗಿದೆ. ನಮಗೆ ಸೂಚನೆ ನೀಡಲಾಗಿದೆ.

ಶ್ರೀ ಕೆ. ಚೆಂಗಲರಾಯರೆಡ್ಡಿ – ಸನ್ಮಾನ್ಯ ಸದಸ್ಯರು ನಾನು ಇವಕ್ಕೆ ಪ್ರತಿ ಪ್ರಶ್ನೆಯನ್ನು ಕೇಳುವಂತೆ ಮಾಡುತ್ತಿದ್ದರೆ. ಸನ್ಮಾನ್ಯ ಸದಸ್ಯರು ಸರ್ಕಾರದಲ್ಲಿದ್ದು ಇದನ್ನೆಲ್ಲ ಮಾಡುತ್ತಿರುವಾಗ ವಿರೋಧಿ ಗುಂಪಿನಲ್ಲಿದ್ದರೆ?

ಶ್ರೀ ಹೆಚ್.ಬಿ. ಗುಂಡಪ್ಪಗೌಡ:- ಇದು ಹೊಸ ಸಂವಿಧಾನ. ಈಗ ಪ್ರಜಾಪ್ರಭುತ್ವ ನಡೆಯುತ್ತಿದೆ.

ಕೆ. ಚೆಂಗಲರಾಯರೆಡ್ಡಿ: ಒಳ್ಳೆಯದು. ಕಾಲಕಾಲಕ್ಕೆ ಹಾಗೂ ಸದನದ ಅಧಿವೇಶನದ ಸಮಯದಲ್ಲಿ ಒದಗಿಸಿರುವ ವಿವಿಧ ರೀತಿಯ ವಿವರಗಳನ್ನು, ವರದಿಗಳನ್ನು ಓದುವಷ್ಟು ಶ್ರಮವನ್ನು ಸನ್ಮಾನ್ಯ ಸದಸ್ಯರು ವಹಿಸಿದ್ದಾರೆ. ಇದರಲ್ಲಿ ಎಷ್ಟು ಭಾಗ ಮರುವಸೂಲಾಗಬಹುದಾದ ಮುಂಗಡದ ರೂಪದಲ್ಲಿದೆ ಎಂಬುದು ಕೂಡಲೇ ಗೊತ್ತಾಗುತ್ತಿತ್ತು. ಆಗ ಅವರ ಅಭಿಪ್ರಾಯವನ್ನು ಖಂಡಿತವಾಗಿಯೂ ಬದಲಾಯಿಸಿಕೊಳ್ಳುತ್ತಿದ್ದರು. ಉದಾಹರಣೆಗೆ "ಮುಂಗಡಗಳು ಮತ್ತು ಸಾಲಗಳು ಎಂಬ ಶೀರ್ಷಿಕೆಯ ಕೆಳಗೆ ಸಿಲ್ಕ್ ಖರೀದಿಗಾಗಿ ಸುಮಾರು 25,00,000 ದಷ್ಟು ಹಣವನ್ನು ಕೇಳಲಾಗಿದೆ. ಇದು ತಾತ್ಕಾಲಿಕ ರೂಪದ ಸಂದಾಯ. ನಾವು ಮುಂಗಡ ನೀಡಿ ಸಿಲ್ಕ್ ಪಡೆಯುತ್ತೇವೆ. ಅದನ್ನು ಕಳುಹಿಸಿ ಬಹುಶಃ ಸ್ವಲ್ಪ ಲಾಭದೊಂದಿಗೆ ಹಣವನ್ನು ಹಿಂದಿರುಗಿ ಪಡೆಯುತ್ತೇವೆ.

ಶ್ರೀ ಜಿ.ಎ. ಆಚಾರ್ಯ:- ನಿಜವಾದ ಲಾಭವನ್ನು ನಾವು ಬಡ್ಡಿಯೊಂದಿಗೆ ಹಿಂದಿರುಗಿ ಪಡೆಯುತ್ತೇವೆ.

ಶ್ರೀ ಕೆ. ಚೆಂಗಲರಾಯರೆಡ್ಡಿ:- ನಾವು ಬಜೆಟ್ ಅಂದಾಜುಗಳನ್ನು ಸಿದ್ಧಪಡಿಸುವಾಗ, ಯಾವಾಗಲೂ ಮುಕ್ತಾಯ ಶಿಲ್ಕಿಗಾಗಿ ಸ್ವಲ್ಪ ಹಣ ಒದಗಿಸುತ್ತೇವೆ. ನಾವು ಬಜೆಟ್ ಮಾಡಿದಷ್ಟು ಹಣವನ್ನು ಪೂರ್ತಿಯಾಗಿ ಖರ್ಚು ಮಾಡದಿದ್ದಲ್ಲಿ ಅಷಟರಮಟ್ಟಿಗೆ ನಮ್ಮ ಮುಕ್ತಾಯ ಶಿಲ್ಕಿನ ಮೊಬಲಗು ಹೆಚ್ಚಾಗಿರುತ್ತದೆ. ಉದಾಹರಣೆಗೆ ಒಂದೋ ಎರಡೊ ಬಾಬ್ತುಗಳ ವಿಷಯದಲ್ಲಿ ಬಜೆಟ್ ಆದ ಎಲ್ಲ ಹಣವನ್ನೂ ಉಳಿಸಲು ಸಾಧ್ಯವಾಗಿರುವುದಿಲ್ಲ, ಮೊಬಲಗು ಮುಗಿದುಹೋಗಿರುತ್ತದೆ. ಅಂತಹ ಬಾಬ್ತುಗಳಿಗೆ ನಾವು ಅನುದಾನವನ್ನು ಕೋರುತ್ತಿದ್ದೇವೆ. ಸಹಜವಾಗಿಯೇ ಹಿಂದಿನ ವರ್ಷದ ಮುಕ್ತಾಯ ಶಿಲ್ಕಿನಿಂದ ಹಣವನ್ನು ಪಡೆಯಲಾಗುತ್ತದೆ. ಸನ್ಮಾನ್ಯ ಸದಸ್ಯರು ಟೀಕೆಗಳನ್ನು ಮಾಡುವುದಕ್ಕೆ ಮೊದಲು ಸ್ವಲ್ಪ ಮೌನವಾಗಿದ್ದು ಯೋಚಿಸಿದರೆ ಅದು ಅವರಿಗೇ ಒಳ್ಳೆಯದು ಮತ್ತು ಸದನಕ್ಕೂ ಒಳ್ಳೆಯದು.

ಸದ್ಯಕ್ಕೆ ಇದಕ್ಕಿಂತ ಹೆಚ್ಚು ಹೇಳಬೇಕೆಂದು ಅನ್ನಿಸುವುದಿಲ್ಲ. ಈ ನಿಲುವಳಿಯನ್ನು ನಾವು ಮಂಡಿಸುತ್ತಿರುವುದರ ಪ್ರಧಾನ ಉದ್ದೇಶವೇನೆಂದರೆ ಚುನಾವಣೆಗಳಿಗೆ ಸಂಬಂಧಿಸಿದ ವೆಚ್ಚಗಳು. ನಾವು ಬಜೆಟ್ ಅಂದಾಜನ್ನು ಸಿದ್ಧಪಡಿಸುತ್ತಿರುವಾಗ ಚುನಾವಣೆಗಳನ್ನು ಯಾವಾಗ ನಡೆಸಬಹುದು ಎಂಬುದು ಖಚಿತವಾಗಿ ಗೊತ್ತಿರಲಿಲ್ಲ. ನಾವು ಬಜೆಟ್ಟಿನಲ್ಲಿ ಒದಗಿಸಿದ್ದು ಕೇವಲ ಸಾಂಕೇತಿಕ ಅನುದಾನ ಮಾತ್ರವಾಗಿದ್ದು ವರ್ಷದಲ್ಲಿ ಕ್ರಮೇಣ ಎದುರಿಸಲಾಗಬಹುದಾದ ಖರ್ಚಿನ ಬಾಬ್ತುಗಳನ್ನು ಮಾತ್ರ ಅದು ಸೂಚಿಸುತ್ತಿತ್ತು. ಆ ಸಮಯದಲ್ಲಿ ಚುನಾವಣೆಗಳಿಗೆ ನಿಖರವಾಗಿ ಎಷ್ಟು ಮೊಬಲಗು ಬೇಕಾಗುತ್ತದೆ ಎಂಬುದನ್ನು ನಿರ್ಧರಿಸುವುದು ಸಾಧ್ಯವಿರಲಿಲ್ಲ. ವಿರೋಧಿ ಗುಂಪಿನಲ್ಲಿರುವ ಸನ್ಮಾನ್ಯ ಸದಸ್ಯರಿಗೆ ಈ ಸಾಂಕೇತಿಕ ಅನುದಾನ ಮೊಬಲಗು ಎಷ್ಟು ಎಂಬುದು ತಿಳಿದಿರಬಹುದು. ನಾವು ಇನ್ನೂ ಮತದಾರರ ಪಟ್ಟಿಯನ್ನು ಮುದ್ರಿಸಬೇಕಾಗಿದೆ, ಚುನಾವಣಾ ಕಮಿಷನರ್ ಹಾಗೂ ಭಾರತ ಸರ್ಕಾರದೊಂದಿಗೆ ಮಾತುಕತೆ ನಡೆಸಿ ಭಾರತ ಸರ್ಕಾರ ಎಷ್ಟು ಖರ್ಚನ್ನು ವಹಿಸಿಕೊಳ್ಳುತ್ತದೆ, ನಾವು ಎಷ್ಟು ಖರ್ಚನ್ನು ವಹಿಸಿಕೊಳ್ಳಬೇಕು ಎಂಬುದನ್ನು ನಿರ್ಧರಿಸಬೇಕಾಗಿದೆ. ನಾವು ಈ ಬಗ್ಗೆ ಸುದೀರ್ಘಕಾಲ ಮಾತುಕತೆ ನಡೆಸಿ ಭಾರತ ಸರ್ಕಾರವೇ ಇಡೀ ಖರ್ಚನ್ನು ವಹಿಸಿಕೊಳ್ಳಬೇಕೆಂದು ಒತ್ತಾಯಿಸುತ್ತಿದ್ದೇನೆ . ಅನಂತರ ಅವರು ಮುಕ್ಕಾಲು ಭಾಗದಷ್ಟು ಖರ್ಚು ವಹಿಸಿಕೊಳ್ಳಬೇಕು. ನಾವು ಕಾಲು ಭಾಗದಷ್ಟು ವಹಿಸಿಕೊಳ್ಳುತ್ತೇವೆ ಎಂದು ಕೇಳಿದೆವು. ಅಂತಿಮವಾಗಿ ಅವರು ಶೇ. 50 ರಷ್ಟನ್ನು ನಾವು ಶೇ. 50 ರಷ್ಟನ್ನು ವಹಿಸಿಕೊಳ್ಳುವುದೆಂದು ನಿರ್ಧಾರವಾಗಿದೆ. ಏಕೆಂದರೆ ಚುನಾವಣೆಗಳು ಲೋಕಸಭೆ ಹಾಗೂ ಸ್ಥಳೀಯ ವಿಧಾನಸಭೆ-ಇವೆರಡಕ್ಕೂ ನಡೆಯಲಿದೆ. ಆದ್ದರಿಂದ ಚುನಾವಣಾ ಮತದಾರರ ಪಟ್ಟಿಯನ್ನು ಪ್ರಕಟಿಸುವ ವೆಚ್ಚ ಸುಮಾರು 8 ಲಕ್ಷ ರೂ.ಗಳಷ್ಟಾಗುತ್ತದೆ ಮತ್ತು ವಾಸ್ತವ ಚುನಾವಣಾ ವೆಚ್ಚ ಸುಮಾರು 12 ಲಕ್ಷ ರೂ.ಗಳಾಗಬಹುದು.

ಶ್ರೀ ಎಲ್. ಸಿದ್ದಪ್ಪ:- ಪ್ರಜಾಪ್ರಭುತ್ವ ಬಹಳ ದುಬಾರಿಯ ವಿಷಯ.

ಶ್ರೀ ಕೆ. ಚೆಂಗಲರಾಯರೆಡ್ಡಿ:- ಹೌದು, ಪ್ರಜಾಪ್ರಭುತ್ವ ದುಬಾರಿಯ ವಿಷಯ. ಯಾರೋ ಹೇಳಿದೆ ಹಾಗೆ ಈ ವಯಸ್ಕ ಮತದಾನ ಒಂದು ಲಕ್ಷುರಿ, ಇದೆಲ್ಲ ಪ್ರಜಾಪ್ರಭುತ್ವದಲ್ಲಿರುವಂಥದ್ದೆ.

ಈ ವರ್ಷ ನವೆಂಬರ್ ಕೊನೆ ಅಥವಾ ಡಿಸೆಂಬರ್ ಮೊದಲ ಭಾಗದಲ್ಲಿ ಚುನಾವಣೆಗಳು ನಡೆಯುತ್ತವೆ ಎಂದು ರಾಷ್ಟ್ರಪತಿಯವರು ತಿಳಿಸಿದ್ದಾರೆ.

ಶ್ರೀ ಹೆಚ್.ಬಿ. ಗುಂಡಪ್ಪಗೌಡ (ಹಾಸನ ಜಿಲ್ಲೆ-ಸಾಮಾನ್ಯ):- ಅಂತರರಾಷ್ಟ್ರೀಯ ಪರಿಸ್ಥಿತಿ. ....ಗೆ ಒಳಪಟ್ಟು......

ಶ್ರೀ ಕೆ. ಚೆಂಗಲರಾಯರೆಡ್ಡಿ:- ನಾವು ಯೋಜನೆ ಹಾಕಬಹುದು. ಆದರೆ Plans of men and mice are subjected to vicissitudes ನಾವೇನೂ ಮಾಡುವಂತಿಲ್ಲ. ಈಗಿರುವ ಪ್ರಾಕಾರ ಈ ವರ್ಷದ ನವೆಂಬರ್ ಅಂತ್ಯ ಅಥವಾ ಡಿಸೆಂಬರ್‌ನೊಳಗಾಗಿ ಚುನಾವಣೆಗಳನ್ನು ನಡೆಸಬೇಕಾಗಿದೆ. ಬಹಳ ಅಲ್ಪಕಾಲದಲ್ಲಿಯೇ ನಾವು ವಯಸ್ಕ ಮತದಾನವನ್ನಾಧರಿಸಿ ಮತದಾರರ ಪಟ್ಟಿಯನ್ನು ಸಿದ್ಧಪಡಿಸಿದ್ದೇವೆ. ಹಾಗೂ ಪಟ್ಟಿಗಳು ಸಿದ್ಧವಾಗಿವೆ, ಈ ಕೆಲಸಕ್ಕೆ 8 ಲಕ್ಷ ರೂ. ವೆಚ್ಚವಾಗಿದೆ. ನಾವು ವಾಸ್ತವವಾಗಿ ಈ ಮೊತ್ತವನ್ನು ಸಂದಾಯ ಮಾಡಿಲ್ಲ ಎಂದು ಮತ್ತೊಮ್ಮೆ ಹೇಳಬಯಸುತ್ತೇನೆ ಇದನ್ನು ಮುದ್ರಕರಿಗೆ ಮುಂಗಡವಾಗಿ ಸಂದಾಯ ಮಾಡಲಾಗಿದೆ. ಸಮಯದ

ಒತ್ತಡ, ಮುಂತಾದ ಅನೇಕ ಅನಾನುಕೂಲತೆಗಳ ನಡುವೆಯೂ ಅವರು ಇದನ್ನು ಮುದ್ರಿಸಿಕೊಟ್ಟಿದ್ದಾರೆ. ಇದಕ್ಕೆ ಸದನದ ಅನುಮೋದನೆ ದೊರೆತರೆ ಅವರಿಗೆ ಸಂದಾಯ ಮಾಡಲು ಅನುಕೂಲವಾಗುತ್ತದೆ. ಈ ಬಗ್ಗೆ ಯಾದರೂ ಭಿನ್ನಾಭಿಪ್ರಾಯವಿಲ್ಲ ಎಂದು ಭಾವಿಸುತ್ತೇನೆ.

ಶ್ರೀ ಎಲ್. ಸಿದ್ದಪ್ಪ:- ವಿವರಣ ಟಿಪ್ಪಣಿಯಲ್ಲಿ ಈ ರೀತಿ ಹೇಳಲಾಗಿದೆ. "ಕಮಿಶನರ್ ಹಾಗೂ ಅವರ ಕಛೇರಿ ಸಿಬ್ಬಂದಿಯ ನೇಮಕಾತಿಗೆ 1950ರ ಜುಲೈನಲ್ಲಷ್ಟೆ ಅನುಮೋದನೆ ಸಿಕ್ಕಿತು. ಈಗಿನ ಮಂಜೂರಾತಿ ಕೇವಲ ಆರು ತಿಂಗಳಿಗೆ ಮಾತ್ರ ಇರುತ್ತದೆ. ಬಜೆಟ್‌ನಲ್ಲಿ ಅವಕಾಶ ಒದಗಿಸಲಾಗಿಲ್ಲ." ಈ ವಾಯಿದೆ ಕಳೆದ ಮೇಲಾದರೂ ತಾವು ಇದನ್ನು ತೆಗೆದುಹಾಕಿಬಿಡಿ.

ಶ್ರೀ ಕೆ. ಚೆಂಗಲರಾಯರೆಡ್ಡಿ:- ಅದನ್ನು ಈಗ ಮಾರ್ಚ್ ಕೊನೆಯವರೆಗೆ ವಿಸ್ತರಿಸಲಾಗಿದೆ ಇದೊಂದು ಹೊಸ ಯೋಜನೆ. ಆದ್ದರಿಂದ ಇದನ್ನು ಜಾರಿಗೆ ತರಲು ಬಯಸಿದೆವು.

ಶ್ರೀ ಎಲ್. ಸಿದ್ದಪ್ಪನವರು:- ನನಗೆ ತಿಳಿದಮಟ್ಟಿಗೆ ಈ ಅನುಕೂಲಗಳೆಲ್ಲ ಇರುವಾಗ ಮತ್ತು ಒಬ್ಬ ಕಮಿಷನರು ಪ್ರತ್ಯೇಕವಾಗಿ ನೇಮಕವಾಗಿರುವಾಗ ಮಾನ್ಯ ಮಂತ್ರಿಗಳು ಮತ್ತು ಇತರ ದೊಡ್ಡ ದೊಡ್ಡ ಅಧಿಕಾರಿಗಳು ಪದೇ ಪದೇ ದೆಹಲಿಗೆ ಹೋಗುವುದಕ್ಕೆ ಅವಶ್ಯಕತೆ ಏನಿದೆ; ಇಂಟರ್‌ನ್ಯಾಶನಲ್ ಕಾನ್‌ಫರೆನ್ಸ್‌ಗಳು ಎಷ್ಟೋ ಆಗುತ್ತವೆ. ಅಲ್ಲಿ ಮುಖ್ಯಾಧಿಕಾರಿಗಳು ಹೋಗುವಾಗ ಇರುವ ಬಾಕಿ ಕೆಲಸಗಳನ್ನು ನೋಡಿಕೊಂಡು ಬನ್ನಿ ಎಂದು ಅವರಿಗೇ ಹೇಳಬಹುದು. ಈ ರೀತಿ ಮಾಡಿ ಹಣದ ಖರ್ಚನ್ನು ಕಡಿಮೆ ಮಾಡುವುದನ್ನು ಬಿಟ್ಟು ಈಗಿನ ಸಂದರ್ಭದಲ್ಲಿ ಸಿಬ್ಬಂದಿಯನ್ನು ಹೆಚ್ಚು ಮಾಡುವುದು ಸೂಕ್ತವಲ್ಲ. ಅದನ್ನು ನಿಲ್ಲಿಸಬೇಕು.

ಶ್ರೀ ಹೆಚ್.ಬಿ. ಗುಂಡಪ್ಪಗೌಡರು:- ಈಗ ತಾವು ಒಬ್ಬ ಆಫೀಸರನ್ನು ನೇಮಕ ಮಾಡಿದ್ದೀರಿ. ಆದ್ದರಿಂದ ಅದರ ಅಗತ್ಯವಿದೆ ಎಂದು ದೃಢಪಡಿಸಬೇಕಾಗಿದೆ. ಅವರ ಹುದ್ದೆಯ ಹೆಸರು ಮತ್ತು ಖಾಯಂ ಆಗಿ ಇರತಕ್ಕ ಜಾಗ ಸರಿಯಾಗಿ ಗೊತ್ತಾಗಿಲ್ಲ. ಅವರು ಡೆಲ್ಲಿಯಲ್ಲಿ ಎಷ್ಟು ದಿನ ಇರುತ್ತಾರೆ ಮತ್ತು ಬೆಂಗಳೂರಿನಲ್ಲಿ ಎಷ್ಟು ದಿನ ಇರುವರು ಎಂಬುದು ತಿಳಿಯದು. ಈಗ ನಮ್ಮಲ್ಲಿ ಹಣವಿಲ್ಲ. ಆದರೆ ಆಫೀಸರುಗಳನ್ನು ದೆಹಲಿಗೆ ಆಗಾಗ ಕಳಿಸುತ್ತಿದ್ದೀರಿ. It all depends upon what sort of officers you get. ಈಗ ಕಮೀಷನರ್ ವಿಚಾರ ಮಾತ್ರ ಹೇಳುತ್ತಿಲ್ಲ. ತಾವು ಹೈಲೆವೆಲ್ ಟಾಕ್ಸ್‌ನಲ್ಲಿರುವಾಗ ಮತ್ತು ದೊಡ್ಡ ತೀರ್ಮಾನಕ್ಕೆ ಬರುವಾಗ ಎಷ್ಟೋ ಇಂಟರ್ ಮಿಡಿಯರಿ ಆಫೀಸರುಗಳು ಇಲ್ಲಿಂದ ಹೊರಕ್ಕೆ ಹೋಗಿ ಬರುತ್ತಿರುತ್ತಾರೆ. ಆದರೆ ಅವರು ಏನು ಕೆಲಸ ಮಾಡಿಕೊಂಡು ಬರುತ್ತಿದ್ದಾರೆ, ಅದಕ್ಕೆ ತಕ್ಕ ಅವಶ್ಯಕತೆ ಇದೆಯೆ ಅದರಲ್ಲಿ ಕೊಂಚ ಭಾಗವಾದರೂ ಕಡಿಮ ಮಾಡಲು ಸಾಧ್ಯವಿಲ್ಲವೇ ಎಂಬ ಸಮಾಚಾರ ನಮಗೆ ಬೇಕಾಗಿದೆ. ಅದನ್ನು ತಿಳಿಸಲು ಏನೂ ಕಷ್ಟವಿಲ್ಲ. ಇನ್ನೊಂದು ವಿಚಾರ ಈಗ ಇತರ ಸರ್ಕಾರಗಳೂ ಕೂಡ ಹೀಗೆ ಅವರ ಆಫೀಸರುಗಳನ್ನು ಡೆಲ್ಲಿಯಲ್ಲಿಟ್ಟಿವೆಯೆ? ಅವರಿಗೆ ಮನೆ ಬಾಡಿಗೆ ವಗೈರೆ ಕೊಡಲಾಗುತ್ತಿದೆಯೆ?

ಶ್ರೀ ಕೆ. ಚೆಂಗಲರಾಯರೆಡ್ಡಿ:- ಮನೆ ಬಾಡಿಗೆ ಕೊಡುತ್ತಿಲ್ಲ. ನಾನು ಒಂದು ಹೇಳಿಕೆ ಕೊಟ್ಟುಬಿಡುತ್ತೇನೆ. ನಾನು ಹೇಳಿಕೆ ನೀಡಿದ ನಂತರವೂ ಸನ್ಮಾನ್ಯ ಸದಸ್ಯರು ಏನಾದರೂ ಹೇಳುವುದಿದ್ದರೆ ಹೇಳುಬಹುದು. ಆದರೆ ನನ್ನ ಹೇಳಿಕೆಯ ನಂತರ ಬಹುತೇಕ ಸಂದೇಹಗಳು ದೂರವಾಗುತ್ತವೆ ಎಂಬ ಭರವಸೆ ನನಗಿದೆ.

ಶ್ರೀ ಎಲ್. ಸಿದ್ದಪ್ಪ:- ನಾವು ನ್ಯಾಯಯುತವಾದ ಜನ.

ಶ್ರೀ ಕೆ. ಚೆಂಗಲರಾಯರೆಡ್ಡಿ:- ನಾನು ಹೇಳುವುದನ್ನು ಕೇಳಿ ಎಲ್ಲ ನ್ಯಾಯಯುತ ಜನರಿಗೂ ಸಮಾಧಾನ ಸಿಗುತ್ತದೆ ಎಂದು ಸಂತೋಷಿಸುತ್ತೇನೆ. ಆದರೆ ವಿರೋಧಕ್ಕಾಗಿಯೇ ವಿರೋಧ ಎಂಬುದಿದೆಯಲ್ಲ.

ಶ್ರೀ ಜನಾಬ್ ಜೆ. ಮೊಹಮದ್ ಇಮಾಂ: ಈ ಅಭಿಪ್ರಾಯವನ್ನು ನಾನು ಆಕ್ಷೇಪಿಸುತ್ತೇನೆ.

ಶ್ರೀ ಕೆ. ಚೆಂಗಲರಾಯರೆಡ್ಡಿ:- ನಾನು ಶ್ರೀ ಸಿದ್ದಪ್ಪ ಹಾಗೂ ಶ್ರೀ ಗುಂಡಪ್ಪಗೌಡ ಅವರ ವಿಷಯಕ್ಕೆ ಸಂಬಂಧಿಸಿದಂತೆ ಹೇಳುತ್ತಿದ್ದೆ.

ಶ್ರೀ ಹೆಚ್.ಬಿ. ಗುಂಡಪ್ಪಗೌಡ:- ಈ ಹೇಳಿಕೆಯನ್ನು ನಾನು ತೀವ್ರವಾಗಿ ಪ್ರತಿಭಟಿಸುತ್ತೇನೆ.

ಶ್ರೀ ಟಿ. ಮರಿಯಪ್ಪ (ಗೃಹ ಸಚಿವರು):- ವಿರೋಧಕ್ಕಾಗಿಯೇ ವಿರೋಧ ಮಾಡಿದರೂ ಯಾವ ಆಕ್ಷೇಪಣೆ ಇಲ್ಲ. ಮಾನ್ಯ ಸದಸ್ಯರಿಗೆ ಹಾಗೆ ಮಾಡುವ ಸಕಲ ಸ್ವಾತಂತ್ರ್ಯವೂ ಇದೆ.

ಶ್ರೀ ಕೆ. ಚೆಂಗಲರಾಯರೆಡ್ಡಿ:- ವಿರೋಧಕ್ಕಾಗಿ ವಿರೋಧ ಎಂಬ ಒಂದು ಮಾನ್ಯತೆ ಪಡೆದ ಸಂಸದೀಯ ಸಂಪ್ರದಾಯವೇ ಇದೆ ಎಂಬುದು ಸನ್ಮಾನ್ಯ ಮಿತ್ರರಿಗೆ ಗೊತ್ತು. ಆದರಲ್ಲಿ ತಪ್ಪೇನೂ ಇಲ್ಲ.

ಶ್ರೀ ಜನಾಬ್ ಜೆ. ಮೊಹಮದ್ ಇಮಾಂ:- ಆದರೆ ನಾವು ವಿರೋಧಕ್ಕಾಗಿಯೇ ವಿರೋಧ ಮಾಡುತ್ತಿದ್ದೇವೆ ಎಂದು ನಮ್ಮನ್ನು ಉಲ್ಲೇಖಿಸಿಯೇ ಏಕೆ ಹೇಳಬೇಕು?

ಶ್ರೀ ಕೆ. ಚೆಂಗಲರಾಯರೆಡ್ಡಿ:- ಮಾನ್ಯ ಸದಸ್ಯರಿಗೆ ಸಮಾಧಾನವಾಗಲಿ ಎಂದು ಸುಮ್ಮನಾಗುತ್ತೇನೆ. ಈ ಹೇಳಿಕೆಯನ್ನು ನಾನು ಈಗ ಅಲ್ಲಗೆಳೆಯಲು ಹೋಗುವುದಿಲ್ಲ.

ಸ್ಪೆಷಲ್ ಡ್ಯೂಟಿ ಕಮಿಷನರ್‌ರ ಹೊಸ ಹುದ್ದೆಯನ್ನು ಸೃಷ್ಟಿಮಾಡಿ ಅನಾವಶ್ಯಕವಾಗಿ ಸರ್ಕಾರದವರು ಹಣ ಖರ್ಚು ಮಾಡುತ್ತಿದ್ದಾರೆಂದು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಶ್ರೀ ಹುಚ್ಚೇಗೌಡರು ಯಾರೋ ಕೆಲವರಿಗೆ ಜಾಗಗಳನ್ನು ಕೊಡುವುದಕ್ಕಾಗಿ ಏನೋ ಒಂದು ಅನುಕೂಲವಾದ ನೀತಿ ಅನುಸರಿಸಿ ಈ ಉದ್ಯೋಗ ಕಲ್ಪಿಸಿದ್ದಾರೆ ಎಂದು ಆಪಾದನೆ ಮಾಡಿದ್ದಾರೆ. ಈ ಒಂದು ಅಧಿಕಾರಿಗಾಗಿ ಏನೋ ವಿಪರೀತ ಹಣ ಖರ್ಚಾಗುತ್ತಿದೆ ಎಂಬ ಅಪಾದನೆ ಬಂದಿದೆ. ಆದರೆ ಹಾಗೆ ಆದರೆ ಇದರಿಂದ ಉಳಿತಾಯವಾಗುತ್ತಿದೆ ಎಂದು ಸಮರ್ಥನೆ ಮಾಡುತ್ತೇನೆ. ಉಳಿತಾಯ ಮಾಡಬೇಕೆಂಬ ಉದ್ದೇಶವಿದೆ ಎಂದು ಹೇಳಬೇಕಾಗಿದೆ. ಪರಿಸ್ಥಿತಿ 1912 ನೆಯ ಇಸವಿಯಿಂದ ಪೂರ್ಣ ಬದಲಾವಣೆಯಾಗಿದೆ ಎಂದು ಎಲ್ಲರಿಗೂ ಗೊತ್ತಿರುವ ವಿಷಯ. ಬರಬರುತ್ತಾ ಈ ಮೂರು ವರ್ಷಗಳಿಂದ ಪ್ರಾಂತ ಸರ್ಕಾರಗಳಿಗೂ ಮತ್ತು ಕೇಂದ್ರ ಸರ್ಕಾರಕ್ಕೂ ಸಂಬಂಧ ಹೆಚ್ಚುತ್ತಿದೆ. ಒಂದೊಂದು ಇಲಾಖೆಯಲ್ಲಿ ಸಹ ಅನೇಕ ವಿಷಯಗಳಲ್ಲಿ ಕೇಂದ್ರ ಸರ್ಕಾರಕ್ಕೂ ಮತ್ತು ಪ್ರಾಂತ ಸರ್ಕಾರಗಳಿಗೂ ನಾಲ್ಕಾರುಹಂತಗಳಲ್ಲಿ ವಿಚಾರ ವಿನಿಮಯವಾಗಿ ಕೊನೆಯ ತೀರ್ಮಾನಕ್ಕೆ ಬರಬೇಕಾಗಿದೆ. ಉದಾಹರಣೆಗೆ ಎಲ್ಲವನ್ನೂ ಕೊಡಬೇಕಾಗಿಲ್ಲ.

ಆಹಾರ ನೀತಿ, ಆಹಾರ ಹಂಚಿಕೆ ಇವೆಲ್ಲಾ ಮುಖ್ಯವಾದುವು. ಇನ್ನೂ ಹಾಗೆಯೇ ಹಣಕಾಸಿನ ಸ್ಥಿತಿ. ಅಷ್ಟೇ ಅಲ್ಲದೆ ಈ ಮೂರು ವರ್ಷಗಳಿಂದ ರಾಜ್ಯಾಂಗಕ್ಕೆ ಸಂಬಂಧಪಟ್ಟ ವಿಷಯಗಳು, ಹೊಸ ರಾಜ್ಯಾಂಗ ಬಂದ ಮೇಲೆ ಲೆಜಿಸ್ಲೇಷನ್‌ಗೆ ಸಂಬಂಧಪಟ್ಟ ವಿಷಯ, ಇಂಟಿಗ್ರೇಷನ್ ವಿಷಯ, ಅದರಿಂದ ಉದ್ಭವವಾಗುವ ಪ್ರಶ್ನೆಗಳು ಇವು ಬಹಳವಾಗಿ ಜಾಸ್ತಿಯಾಗುತ್ತಿವೆ. ಇದಿಷ್ಟೇ ಎಂದು ಹೇಳುವುದಕ್ಕೆ ಸಾಧ್ಯವಿಲ್ಲ. ಮಾನ್ಯ ಮಿತ್ರರು ಮಂತ್ರಿಗಳಾಗಿದ್ದಾಗ ಇಂಥ ಪರಿಸ್ಥಿತಿ ಏನೂ ಒದಗುತ್ತಿರಲಿಲ್ಲ ಕೇಂದ್ರದ ಪ್ರತಿನಿಧಿಯಾಗಿ ಇಲ್ಲಿ ರೆಸಿಡೆಂಟ್ ಇರುತ್ತಿದ್ದರು. ಆದ್ದರಿಂದ ಅವರಿಗೆ ಇಲ್ಲೇ ಅನೇಕ ವಿಚಾರಗಳನ್ನು ಇತ್ಯರ್ಥಪಡಿಸಿಕೊಳ್ಳಲು ಅವಕಾಶವಿತ್ತು ನಮಗೆ ಅದರ ಅನುಭವ ಅಷ್ಟಿಲ್ಲ. ಆದ್ದರಿಂದ ಸ್ವಲ್ಪ ಹೇಳಿದ್ದಾರೆ. ಈಗ ಅನೇಕ ವಿಷಯಗಳು ಇತ್ಯರ್ಥವಾಗಬೇಕಾಗಿದೆಯೆಂಬುದು ನಿರ್ವಿವಾದವಾದ ಮಾತು. ಕೈಗಾರಿಕೆಗಳಿಗೆ ಬೇಕಾಗಿರುವ ವಸ್ತುಗಳಿಗಾಗಿ ಪದೇ ಪದೇ ಇಂಪೋರ್ಟು ಲೈಸನ್ಸ್ ತೆಗೆದುಕೊಳ್ಳಬೇಕಾಗಿದೆ ಅದು 15 ದಿವಸ ಒಂದು ತಿಂಗಳು ತಡವಾದರೆ ಲಕ್ಷಾಂತರ ರೂಪಾಯಿಗಳ ನಷ್ಟವಾಗುತ್ತದೆ, ಹಾಗೆ ಆಗಿರುವ ಉದಾಹರಣೆಗಳಿವೆ. ಚೇಂಬರ್ ಆಫ್ ಕಾಮರ್ಸ್‌ನಿಂದ ಲೈಸೆನ್ಸ್ ಇತ್ಯಾದಿ ವ್ಯಾಪಾರಕ್ಕೆ ಸಂಬಂಧಪಟ್ಟ ವಿಷಯಗಳಲ್ಲಿ ಕೇಂದ್ರ ಸರ್ಕಾರದೊಂದಿಗೆ ಪತ್ರ ವ್ಯವಹಾರ ನಡೆದು ತೀರ್ಮಾನವಾಗುವುದು ತಡವಾಗುವುದರಿಂದ ಕೇಂದ್ರಕ್ಕೆ ಸೌಕರ್ಯ ಕಡಿಮೆಯಾಗುವುದಲ್ಲದೆ ಕೈಗಾರಿಕೆಗೂ ಧಕ್ಕೆ ಬರುತ್ತದೆ ಆದ್ದರಿಂದ ಒಬ್ಬ ಆಫೀಸರನ್ನು ಇಟ್ಟು ಜಾಗ್ರತೆ ಕೆಲಸ ಕಾರ್ಯಗಳು ನಡೆಯಲು ಅನುಕೂಲಪಡಿಸಬೇಕೆಂದು ಪತ್ರ ಬಂದಿದೆ ನಮ್ಮ ಅನುಭವದಲ್ಲಿ ಹೀಗೆ ಅನೇಕ ವಿಷಯಗಳನ್ನು ತೀರ್ಮಾನ ಮಾಡಬೇಕಾದ ಪ್ರಸಂಗ ಬಂದಿದೆ. ಅನೇಕ ವಿಚಾರಗಳನ್ನು ಸ್ಪೆಷಲ್ ಡ್ಯೂಟಿ ಕಮಿಷನರ್ ಮೂಲಕ ಇತ್ಯರ್ಥ ಮಾಡಲು ಅನುಕೂಲವಾಗಿದೆ. ಮಿನಿಸ್ಟೀರಿಯಲ್ ಸ್ಟೇಷನಲ್ಲಿರುವ ಲಯೇಶನ್ ಆಫೀಸನ್ನು ಖಾಯಂ ಆಗಿ ಮಾಡಬೇಕೆಂದು ಯೋಚನೆ ಮಾಡಿ ನಾವು 1918 ರಲ್ಲಿ ಅಧಿಕಾರಕ್ಕೆ ಬಂದಾಗ ಪ್ರಸ್ತಾಪ ಮಾಡಿದೆವು. ಅದಕ್ಕೆ ಕೇಂದ್ರ ಸರ್ಕಾರದವರು ಅಂಬ್ಯಾಸಿಡರ್ ಎಂಬ ಪದ ಉಪಯೋಗಿಸಿದ್ದಾರೆ ಕೇಂದ್ರ ಸರ್ಕಾರ ಹಾಗೆ ಮಾಡಬೇಕೆಂದು ಅಪೇಕ್ಷೆ ಪಟ್ಟರೆ 23 ಅಂಬ್ಯಾಸಿಡರುಗಳಿರಬೇಕಾಗುತ್ತದೆ, ಆದ್ದರಿಂದ ಅನಾನುಕೂಲ ಅದಕ್ಕೆ ಸಿಬ್ಬಂದಿ ಅಭಾವವೂ ಇದೆ, ಆದ್ದರಿಂದ ಒಪ್ಪುವುದಕ್ಕಾಗುವುದಿಲ್ಲ ಎಂದು ಎರಡು ಮೂರು ಸಲ ಅಭಿಪ್ರಾಯ ಸೂಚಿಸಿದ್ದಾರೆ. ಆದ್ದರಿಂದ ನಾವು ಲಯೇಶನ್ ಆಪೀಸರ್‌ನ್ನು ನೇಮಕ ಮಾಡಬೇಕೆಂಬ ವಿಚಾರವನ್ನು ಕೈಬಿಡಬೇಕಾಗಿ ಬಂತು. ಮೂರು ತಿಂಗಳು, ಆರು ತಿಂಗಳು, ಒಂದು ವರ್ಷ ಆದರೂ ಅನೇಕ ಸಮಸ್ಯೆಗಳು ಇತ್ಯರ್ಥವಾಗದೆ ಹೆಚ್ಚಿನ ಅವಶ್ಯಕತೆ ಕಂಡುಬಂದುದರ ಮೇಲೆ ಆ ರೀತಿ ಮಾಡಲಾಯಿತು. ಹಾಗೆ ಮಾಡುವುದು ಸೂಕ್ತವೆಂದು ಖಚಿತವಾದ ಅಭಿಪ್ರಾಯ ಬಂದಿದೆ.

ಇನ್ನೊಂದು ವಿಷಯ ಹೇಳಿದರು. ಅಲ್ಲಿ ಒಬ್ಬ ಪ್ರತ್ಯೇಕ ಆಫೀಸರಿರುವಾಗ ಏಕೆ ಮಂತ್ರಿಗಳು, ಅಧಿಕಾರಿಗಳು, ಸೆಕ್ರೆಟರಿಗಳು ಹೋಗಬೇಕು? ಅಲ್ಲಿರುವ ಅಧಿಕಾರಿಗಳೇ ಬೇಕಾದ ಕೆಲಸ ಮಾಡಬಹುದು ಎಂದು ಹೇಳಿದರು. ಹೀಗೆ ಇಲ್ಲಿನ ಆಫೀಸರುಗಳು ಹೋಗಬೇಕಾದ ಪ್ರಸಂಗ ತಪ್ಪಿಸುವ ಸಲುವಾಗಿಯೇ ಅಲ್ಲಿ ಕಮಿಷನರನ್ನು ನೇಮಕ ಮಾಡಿರುವಾಗ ಹಲವಾರು ಸಂದರ್ಭಗಳಲ್ಲಿ ಮಂತ್ರಿಗಳು ಹೋಗಬೇಕಾದ ಅವಶ್ಯಕತೆ ತಪ್ಪಿಹೋಯಿತು. ಕೆಲವು ಸಮ್ಮೇಳನಗಳಿಗೂ ಪ್ರತಿನಿಧಿಗಳನ್ನು ಕಳುಹಿಸುವ ಪ್ರಸಂಗ ತಪ್ಪಿಹೋಯಿತು. ಅವರೇ ಆ ಕೆಲಸವನ್ನು ಮಾಡಲು ಅವಕಾಶವಾಯಿತು. ಇದರಿಂದ ನನ್ನ ಅಭಿಪ್ರಾಯದಲ್ಲಿ, ಅನುಭವದಲ್ಲಿ ಅದು ತಿಂಗಳಲ್ಲಿ

ಹತ್ತಾರು ಸಲ ಬೇರೆ ಅಧಿಕಾರಿಗಳು ಹೋಗಿ ಟಿ.ಎ., ಡಿ.ಎ., ಪಡೆಯುವ ಸಂದರ್ಭ ತಪ್ಪಿ ಹಣಕಾಸಿನ ಉಳಿತಾಯವಾಗಿದೆ. ಆದ್ದರಿಂದ ಈ ಆಫೀಸರ ನೇಮಕದಿಂದ ಸರ್ಕಾರಕ್ಕೆ ಹೆಚ್ಚು ಹಣ ಖರ್ಚಾಗಿದೆಯೆಂದು ಹೇಳುವ ಹಾಗಿಲ್ಲ. ಲೆಕ್ಕ ಕೊಡುವುದಾದರೆ ಪ್ರಾಯಶಃ ಆರು ತಿಂಗಳಿಂದ ಹತ್ತು ಸಾವಿರ ರೂಪಾಯಿಗಳು ಬೇರೆ ಅಧಿಕಾರಿಗಳಿಗೆ ಟಿ.ಎ., ಡಿ. ಎ., ಗಳಿಗಾಗಿ ಖರ್ಚಾಗುತ್ತಿದ್ದುದು ಬಹಳಮಟ್ಟಿಗೆ ಉಳಿತಾಯವಾಗಿದೆಯೆಂದು ಖಚಿತವಾಗಿ ಹೇಳಬಲ್ಲೆ.

ಆಮೇಲೆ ಇದರಿಂದ ತೊಂದರೆಯಾಗುತ್ತಿದೆಯೆಂದು ಹೇಳಿದ್ದಾರೆ. ಜನರ ದುಡ್ಡನ್ನು ಅನ್ಯಾಯ ಮಾಡಬೇಕೆಂಬ ಉದ್ದೇಶದಿಂದ ಈ ಕೆಲಸಕ್ಕೆ ಕೈಹಾಕಿಲ್ಲ. ಸಚಿವರು ಸೆಕ್ರೆಟರಿಗಳು ಮತ್ತು ಇಲಾಖೆಗಳ ಮುಖ್ಯಾಧಿಕಾರಿಗಳು ದೆಹಲಿಗೆ ಹೋಗುವುದನ್ನು ಆದಷ್ಟು ಕಡಿಮೆ ಮಾಡುವುದಕ್ಕಾಗಿಯೆ ಇವರನ್ನು ನೇಮಕ ಮಾಡಿರುವುದು, ಖರ್ಚನ್ನು ಖೋತಾಮಾಡಿ ಮಿತವ್ಯಯ ಮಾಡುವ ದೃಷ್ಟಿಯನ್ನಿಟ್ಟುಕೊಂಡೇ ಮಾಡಿರುವುದು. ಪದೇ ಪದೇ ದೆಹಲಿಗೆ ಹೋಗುವುದರಿಂದ ಆಕ್ಷೇಪಣೆ ಬರುತ್ತದೆ, ಖರ್ಚು ಹೆಚ್ಚಾಗುತ್ತದೆ ಎಂಬುದನ್ನು ಮನಸ್ಸಿನಲ್ಲಿಟ್ಟುಕೊಂಡು ಇದನ್ನು ತಪ್ಪಿಸುವುದಕ್ಕೆ ಏರ್ಪಾಡು ಮಾಡಿದ್ದೇವೆಯೇ ಹೊರತು ಬೇರೆಯಲ್ಲ. ಸಕಾರಣವಾಗಿದೆಯೇ ಇಲ್ಲವೇ ಎಂದು ಯೋಚನೆ ಮಾಡಿಲ್ಲ. ಮೊದಲೇ ಯೋಚನೆ ಮಾಡಿಲ್ಲವೆಂದು ಶ್ರೀ ಹುಚ್ಚೇಗೌಡರು ಟೀಕೆ ಮಾಡಿದರು ಅದು ಸರಿಯಲ್ಲ. ಮೂರು ವರ್ಷಗಳ ಹಿಂದೆಯೇ ಯೋಚನೆ ಮಾಡಿದ್ದೆವು. ಒಬ್ಬ ಅಧಿಕಾರಿಯನ್ನು ಅಲ್ಲೇ ಖಾಯಂ ಆಗಿ ಇಡಬೇಕಾಗಿಲ್ಲ. ಏಕೆಂದರೆ ಹಾಗೆ ಮಾಡಿದರೆ ಅವರಿಗೆ ಅಲ್ಲಿ ಒಂದು ಕಟ್ಟಡ ಸಿಬ್ಬಂದಿ ಮುಂತಾದವನ್ನು ಗೊತ್ತುಮಾಡಬೇಕಾಗುತ್ತದೆ. ಅದಕ್ಕೆಲ್ಲಾ ಹೆಚ್ಚು ಖರ್ಚಾಗುತ್ತದೆ. ಆದ ಕಾರಣ ಈ ಅಧಿಕಾರಿಗಳು ಅವಶ್ಯ ಬಿದ್ದಾಗ ಅಲ್ಲಿಗೆ ಹೋಗುವುದಕ್ಕೆ ಮುಂಚೆ ಇಲ್ಲಿ ಸಚಿವರನ್ನೂ ಇಲಾಖೆಗಳ ಮುಖ್ಯಾಧಿಕಾರಿಗಳನ್ನೂ, ಸೆಕ್ರೆಟರಿಗಳನ್ನೂ, ಅವರು ವಿಚಾರಿಸಿ ಯಾವ ಯಾವ ವಿಚಾರ ಯಾವ ಯಾವ ಸ್ಟೇಜಿನಲ್ಲಿದೆ, ಯಾವುದು ತೀರ್ಮಾನವಾಗದೆ ಉಳಿದಿದೆ,ಏನು ತೀರ್ಮಾನವಾಗಬೇಕು ಎಂಬುದನ್ನೆಲ್ಲಾ ವಿಚಾರಿಸಿ ತಿಳಿದುಕೊಂಡು ಅಲ್ಲಿ ಸೆಕ್ರೆಟೇರಿಯಟ್ ಮಟ್ಟದಲ್ಲಿ ಏನೇನು ತೀರ್ಮಾನವಾಗಬೇಕೋ ಅದನ್ನು ಅಲ್ಲಿಯ ಸೆಕ್ರೆಟರಿಗಳನ್ನು ಕಂಡು ಬೇಗ ಇತ್ಯರ್ಥಪಡಿಸಿಕೊಂಡು ಯಾವ ಯಾವುದು ಸಚಿವರುಗಳಿಂದ ತೀರ್ಮಾನವಾಗಬೇಕೋ ಅದಕ್ಕೆ ತಕ್ಕ ಏರ್ಪಾಡುಗಳನ್ನೂ ಸಿದ್ಧತೆಗಳನ್ನು ಮಾಡುತ್ತಾರೆ. ಇದರಿಂದ ಕೆಲಸಗಳು ಎಷ್ಟೋ ಸುಲಲಿತವಾಗಿಯೂ ಶೀಘ್ರವಾಗಿಯೂ ಆಗುವುದಕ್ಕೆ ಸಹಾಯವಾಗಿದೆಯೆಂದು ಧೈರ್ಯವಾಗಿ ಹೇಳಬಲ್ಲೆ.

ಈ ಹೊತ್ತಿನ ವಿಚಾರವೊಂದನ್ನು ಹೇಳುತ್ತೇನೆ. ಬರುವ 11ನೆಯ ತಾರೀಖು ಮುಖ್ಯ ಮಂತ್ರಿಗಳ ಸಮ್ಮೇಳನ ದೆಹಲಿಯಲ್ಲಿ ನಡೆಯಬೇಕಾಗಿದೆ. ಅಲ್ಲಿ 'ಬಿ' ಸಂಸ್ಥಾನಗಳ ವಿಚಾರ, ಆರ್ಥಿಕ ವಿಲೀನೀಕರಣ ಮುಂತಾದ ಬಹು ಮುಖ್ಯ ವಿಚಾರಗಳು ಚರ್ಚೆಯಾಗಿ ಪರಿಶೀಲನೆಯಾಗಿ ಅಖೈರು ತೀರ್ಮಾನಕ್ಕೆ ಬರಬೇಕಾಗಿದೆ ಹೀಗೆಯೇ ಇನ್ನೂ ಕೆಲವು ಬಹು ಮುಖ್ಯ ವಿಷಯಗಳಿವೆ. ಈಗಾಗಲೇ ಈ ವಿಚಾರಗಳ ಸಂಬಂಧವಾಗಿ ಈ ಅಧಿಕಾರಿಗಳಿಗೆ ಸೂಕ್ತ ಸೂಚನೆಗಳನ್ನು ಕೊಟ್ಟಿದ್ದೇನೆ. ಅವರು ಪೂರ್ವಭಾವಿಯಾಗಿ ಅಲ್ಲಿಗೆ ಹೋಗಿ ಸೆಕ್ರೆಟೇರಿಯಟ್ ಮಟ್ಟದಲ್ಲಿ ಏನೇನು ಮಾಡಬೇಕೋ ಅದೆಲ್ಲವನ್ನೂ ಮಾಡಿದ್ದರೆ, ನಾನು ಹೋಗಿ ಏಳೆಂಟು ದಿನಗಳು ಅಲ್ಲಿರುವುದಕ್ಕೆ ಬದಲಾಗಿ ಎಲ್ಲ ಕೆಲಸಗಳನ್ನು ಒಂದೆರಡೇ ದಿನಗಳಲ್ಲಿ ಮುಗಿಸಿ ವಾಪಸ್ಸು ಬರಬಹುದು. ಈಗ ನಾನು ಹತ್ತನೆಯ

ತಾರೀಖು ಅಲ್ಲಿಗೆ ಹೋದರೂ ಸಾಕು ಬೇಗ ಕೆಲಸವಾಗುತ್ತದೆ. ಅದಕ್ಕಾಗಿ ಅವರು 4ನೆಯ ತಾರೀಖು ಹೋಗುತ್ತಾರೆ. ದೆಹಲಿಯಲ್ಲಿ ಅನೇಕ ವಿಷಯಗಳು ಸೆಕ್ರೆಟೇರಿಯಟ್ ಮಟ್ಟದಲ್ಲೇ ತೀರ್ಮಾನವಾಗುತ್ತವೆ. ಮುಕ್ಕಾಲುಪಾಲು ಕೆಲಸಗಳೆಲ್ಲವೂ ಸೆಕ್ರೆಟೇರಿಯಟ್ ಮಟ್ಟದಲ್ಲೇ ಫೈಸಲಾಗುತ್ತವೆ. ಆದ ಕಾರಣ ಇಂಥ ಒಬ್ಬರು ಅಧಿಕಾರಿಗಳಿರಬೇಕು. ಈಗಿನ ಸಂದರ್ಭದಲ್ಲಿ ಪತ್ರ ವ್ಯವಹಾರ ಎಷ್ಟೇ ನಡೆದರೂ ಬೇಗ ಮುಗಿಯುವುದಿಲ್ಲ, ಹನುಮಂತನ ಬಾಲ ಬೆಳೆದ ಹಾಗೆ ಬೆಳೆಯುತ್ತಲೇ ಹೋಗುತ್ತದೆ ಇದಕ್ಕೆ ಮೊದಲು ಮೊಖ್ತಾ ಒಬ್ಬರು ಹೋದರೆ ಕೆಲಸ ಕಾರ್ಯಗಳು ಬೇಗ ಆಗುತ್ತದೆ. ಇಂತಹ ನಿದರ್ಶನಗಳು ಎಷ್ಟೋ ಇವೆ. ಆದರೆ 365 ದಿನಗಳೂ ಅಲ್ಲೇ ಇರಬೇಕೆಂದು ನಾವು ಏರ್ಪಾಡು ಮಾಡಿಲ್ಲ ಅಲ್ಲಿ 15 ದಿನ ಇರುತ್ತಾರೆ, ಪುನಃ ವಾಪಸ್ಸು ಬಂದು ಇಲ್ಲಿ 15 ದಿನ ಇರುತ್ತಾರೆ. ಆ ಮೇಲೆ ಪುನಃ ಅಲ್ಲಿ ಕೆಲಸಗಳಿದ್ದರೆ ಹೋಗಿ ಚರ್ಚಿಸಲು ಅನುಕೂಲವಾಗುತ್ತದೆ. ಈ ಹುದ್ದೆ ಬಹಳ ದಿವಸ ಇರುತ್ತದೆಂದು ಹೇಳುವುದಕ್ಕೆ ಆಗುವುದಿಲ್ಲ. ಹೊಸ ರಾಜ್ಯಾಂಗ ಜಾರಿಗೆ ಬಂದ ಮೇಲೆ ಅನೇಕ ಪ್ರಾಮುಖ್ಯ ವಿಚಾರಗಳು, ರಾಜ್ಯಾಂಗಕ್ಕೆ ಮತ್ತು ಆರ್ಥಿಕ ವಿಚಾರಗಳಿಗೆ ಸಂಬಂಧಪಟ್ಟ ವಿಚಾರಗಳು ತೀರ್ಮಾನವಾಗಬೇಕಾಗಿದೆ. ತೀರ್ಮಾನವಾಗುವುದರಲ್ಲಿವೆ. ಇವೆಲ್ಲವೂ ತೀರ್ಮಾನದ ಮೇಲೆ ಏನಿದ್ದರೂ ಬರಿಯ ಸಾಮಾನ್ಯ ಆಡಳಿತಕ್ಕೆ ಸಂಬಂಧಪಟ್ಟ ವಿಚಾರಗಳಿರುತ್ತವೆ. ಆಗ ಇಂತಹ ಒಬ್ಬರು ಅಧಿಕಾರಿಗಳು ಅವಶ್ಯಕತೆ ಇರುವುದಿಲ್ಲ. ಈ ಕಾರಣದಿಂದಲೇ ಈ ಹುದ್ದೆಯ ಅವಧಿಯನ್ನು ಆರು ತಿಂಗಳೆಂದು ಗೊತ್ತುಮಾಡಿದ್ದು. ಅವಶ್ಯಕತೆ ಬಂದುದರಿಂದ ಇನ್ನೂ ಮೂರು ತಿಂಗಳು ಮಾತ್ರ ಈ ಹುದ್ದೆ ಇರಬೇಕೆಂದು ಮಾಡಿದ್ದೇವೆ. ಇನ್ನೂ ಮುಂದೆ ಇದನ್ನು ಮುಂದುವರೆಸಿಕೊಂಡು ಹೋಗಬೇಕೆಂಬ ಉದ್ದೇಶವಿಲ್ಲ ಹಾಗೂ ಏನಾದರೂ ಒಂದೆರಡು ವಿಷಯಗಳು ತೀರ್ಮಾನವಾಗದೆ ನಿಂತುಹೋದರೆ ನಮ್ಮ ಸಂಸ್ಥಾನದ ಪರವಾಗಿ ಪಾರ್ಲಿಮೆಂಟಿಗೆ ಸದಸ್ಯರಾಗಿ ಹೋಗಿರುವ ಏಳು ಮಂದಿ ಸದಸ್ಯರಿದ್ದಾರೆ, ಅವರಿಗೆ ಅದನ್ನು ವಹಿಸಿ ಎಷ್ಟು ಮಟ್ಟಿಗೆ ಮಾಡಬಹುದೆಂದು ಯೋಚನೆ ಮಾಡುತ್ತೇವೆ. ಅವರಿಗೆ ವಿಷಯವನ್ನು ತಿಳಿಸಿದರೆ ಅವರು ಪಾರ್ಲಿಮೆಂಟಿನಲ್ಲಿ ಅವಶ್ಯಕತೆ ಬಿದ್ದರೆ ಚರ್ಚೆ ಮಾಡಬಹುದು ಅಥವಾ ಅಲ್ಲಿ ಮಂತ್ರಿಗಳನ್ನು ಕಂಡು ಮಾತನಾಡಬಹುದು ಆದರೆ ಕೆಲವು ರಹಸ್ಯ ವಿಚಾರಗಳಿರುತ್ತವೆ ಅವುಗಳನ್ನು ಈ ರೀತಿ ಮಾಡುವುದಕ್ಕಾಗುವುದಿಲ್ಲ. ಅಲ್ಲದೆ ಈ ಪಾರ್ಲಿಮೆಂಟಿನ ಸದಸ್ಯರು ದೆಹಲಿಯಲ್ಲಿ ಒಂದೊಂದು Season ನಲ್ಲಿ ಮಾತ್ರ ಇರುತ್ತಾರೆ. ಬೇರೆ ಕಾಲಗಳಲ್ಲಿರುವುದಿಲ್ಲ. ಹೀಗೆ ಎಲ್ಲ ದೃಷ್ಟಿಯಿಂದಲೂ ಈ ಹುದ್ದೆಯನ್ನು ಹಂಗಾಮಿಯೆಂದು ಗೊತ್ತುಮಾಡಿದ್ದೇವೆ.

ಇನ್ನು ನಮ್ಮ ಸರ್ಕಾರದಲ್ಲಿ ಸೆಕ್ರೆಟರಿಗಳ ಸಂಖ್ಯೆ ಜಾಸ್ತಿ ಎಂದು ಕೆಲವರು ಹೇಳಿದರು. ವಿನಾಕಾರಣ ಯಾವ ಹುದ್ದೆಯನ್ನೂ ಮಾಡಲೇ ಇಲ್ಲ. ಎಲ್ಲೆಲ್ಲಿ ಅವಶ್ಯಕತೆಯಿದೆಯೋ ಅಲ್ಲಿ ಮಾತ್ರ ಮಾಡಿದ್ದೇವೆ. ಬರಿಯ ಖೋತಾ ಮಾಡಬೇಕೆಂಬ ಒಂದೇ ದೃಷ್ಟಿಯನ್ನು ಇಟ್ಟುಕೊಂಡು ಕೆಲಸ ಮಾಡುವುದಕ್ಕಾಗುವುದಿಲ್ಲ. ಅವಶ್ಯಕತೆ ಬಂದರೆ ಮಾಡಲೇ ಬೇಕಾಗುತ್ತದೆ. ಒಂದು ಉದಾಹರಣೆಯನ್ನು ಹೇಳುತ್ತೇನೆ. ರೈಲ್ವೆ ಅಡ್ವೈಜರಾಗಿ ಶ್ರೀ ನಂದಾರವರನ್ನು ನೇಮಕ ಮಾಡಿದೆವು. ಇದರಿಂದ ನಮ್ಮ ಸಂಸ್ಥಾನಕ್ಕೆ ಎಷ್ಟೋ ಲಕ್ಷರೂಪಾಯಿ ಉಳಿತಾಯವಾಗಿದೆ. ಅವರು ಇಲ್ಲಿ ಎರಡು ವರ್ಷ ಕಾಲ ಇದ್ದರೂ ಕೂಡ ಆರ್ಥಿಕ ವಿಲಿನೀಕರಣದಲ್ಲಿ ಅವರ ಪ್ರಯತ್ನದ ಫಲವಾಗಿ

ನಮಗೆ ಶಾಶ್ವತವಾಗಿ ಎರಡು ಲಕ್ಷ ರೂಪಾಯಿಗಳು ಉಳಿತಾಯವಾಗುತ್ತದೆ. ಅವರ ಮೇಲೆ ನಾವು ಖರ್ಚು ಮಾಡಿದ್ದು ಕೇವಲ 25 ಸಾವಿರ ರೂಪಾಯಿ ಇದಕ್ಕೆ ಪ್ರತಿಫಲವಾಗಿ ನಮಗೆ 25 ಲಕ್ಷರೂಪಾಯಿ ಲಾಭವಾಗಿದೆ. ಹಾಗೆ ಇನ್ನೂ ಅನೇಕ ಉದಾಹರಣೆಗಳನ್ನು ಕೊಡಬಲ್ಲೆ. ಸದ್ಯಕ್ಕೆ ಈ ಒಂದು ಉದಾಹರಣೆ ಮಾತ್ರ ಹೇಳಿದ್ದೇನೆ.

ಇನ್ನೊಂದು ವಿಷಯ. ಜನಾಬ್ ಇಮಾಂರವರು ಎಲೆಕ್ಟೋರಲ್ ರೋಲ್ಸ್ ವಿಚಾರ ಹೇಳುತ್ತಿದ್ದಾಗ revising authorities ಆಗಿ ಬೇರೆ ಅಧಿಕಾರಿಗಳನ್ನು ನೇಮಕ ಮಾಡಿದರೆ ಕೆಲಸ ಸುಲಲಿತವಾಗಿ ನಡೆಯುತ್ತದೆಂದು ಹೇಳಿದರು. ಹೀಗೆ ಕೇಳಿದಾಗ ಅವರ ಮನಸ್ಸಿನಲ್ಲಿ ರಿಟ್ರೆಂಚ್‌ಮೆಂಟ್ ವಿಚಾರ ಇರಲಿಲ್ಲವೆ?

**ಶ್ರೀ ಹೆಚ್.ಬಿ. ಗುಂಡಪ್ಪಗೌಡರು:–** ಅವಶ್ಯಕತೆ ಇಲ್ಲದಿರುವ ಹುದ್ದೆಗಳ ವಿಚಾರ ನಾವು ಮಾತನಾಡುತ್ತಿರುವುದು.

**ಶ್ರೀ ಕೆ. ಚೆಂಗಲರಾಯರೆಡ್ಡಿಯವರು:–** ಅವಶ್ಯಕತೆಯಿದ್ದರೆ ಮಾಡಬೇಕೆಂಬ ಬಗ್ಗೆ ಸಮರ್ಥನೆಕೊಟ್ಟು ಅವರು ಮಾತನಾಡಿದ್ದಾರೆ. ಈ ಹುದ್ದೆಗೆ ಅವಶ್ಯಕತೆ ಇತ್ತು, ಇದರಿಂದ ಆಡಳಿತಕ್ಕೆ ಹೆಚ್ಚು ಖರ್ಚಾಗುವುದಕ್ಕೆ ಬದಲು ಇದರಿಂದ ಕಡಿಮೆ ಖರ್ಚಾಗಿದೆ. ಇದು ಹೊಸ ಹುದ್ದೆಯಾದುದರಿಂದ ಈ ಡಿಮ್ಯಾಂಡನ್ನು ಸಭೆಯ ಮುಂದೆ ಈಗ ತರಲಾಗಿದೆ ಈ ಹುದ್ದೆ ಮಾಡಿದುದರಿಂದ ಬೇರೆ ಕಡೆ ಉಳಿತಾಯವಾಗಿದೆ. ಪ್ರಯಾಣ ಭತ್ಯದ ಬಾಬಿನಲ್ಲಿ ಕಡಿಮೆಯಾಗಿರಬಹುದು. ಆದ ಕಾರಣ ಇದರಿಂದ ಹೆಚ್ಚು ಖರ್ಚೆಂದು ಹೇಳುವುದು ಸರಿಯಲ್ಲವೆಂದು ನಾನು ಹೇಳಬೇಕಾಗಿದೆ.

ಇನ್ನೊಂದು ವಿಚಾರ. ಈಗ ಇರತಕ್ಕ ಸೆಕ್ರೆಟರಿಗಳ ಸಂಖ್ಯೆ ಬಹಳ ಜಾಸ್ತಿ ಎಂದು ಹೇಳಿದರು. ಕೇಂದ್ರ ಸರ್ಕಾರದಲ್ಲಿ ಒಂದೊಂದು ಮಿನಿಸ್ಟ್ರಿಗೆ ಒಬ್ಬ ಸೆಕ್ರೆಟೆರಿ, ಒಬ್ಬ ಅಸಿಸ್ಟೆಂಟ್ ಸೆಕ್ರೆಟರಿ, ಮೂರು ಜನ ಅಂಡರ್ ಸೆಕ್ರೆಟೆರಿಗಳು, ಜಾಯಿಂಟ್ ಸೆಕ್ರೆಟೆರಿಗಳು ಹೀಗೆಲ್ಲಾ 10-15 ಜನ ಇರುತ್ತಾರೆ.

**ಶ್ರೀ ಹೆಚ್.ಬಿ. ಗುಂಡಪ್ಪಗೌಡರು:–**ಕೇಂದ್ರ ಸರ್ಕಾರದ ವಿಚಾರ ತೆಗೆದುಕೊಳ್ಳಬೇಡಿ.

**ಶ್ರೀ ಕೆ. ಚೆಂಗಲರಾಯರೆಡ್ಡಿಯವರು:–**ನಾವು ಅದನ್ನೇ ಅನುಸರಿಸಬೇಕೆಂದು ನಾನು ಹೇಳುತ್ತಿಲ್ಲ. ಇಲ್ಲಿ ಒಬ್ಬಿಬ್ಬರು ಸೆಕ್ರೆಟೆರಿಗಳನ್ನು ಜಾಸ್ತಿಯಾಗಿ ನೇಮಕ ಮಾಡಿರುವುದು ನಿಜ. ಕೇಂದ್ರ ಸರ್ಕಾರದವರಿಗೂ ನಮಗೂ ಇರತಕ್ಕ ಸಂಬಂಧದಲ್ಲಿ ಆ ವಿಷಯಗಳನ್ನೆಲ್ಲಾ ನೋಡಿಕೊಳ್ಳುವುದಕ್ಕೆ ಆ ಇಬ್ಬರು ಸೆಕ್ರೆಟರಿಗಳನ್ನು ಹೆಚ್ಚಿಗೆ ಇಟ್ಟುಕೊಳ್ಳಬೇಕಾದ ಸ್ಥಿತಿಯಲ್ಲಿದ್ದೆವು ಎಂದು ಹೇಳುತ್ತೇನೆ. ಅದೂ ಅಲ್ಲದೆ ಹಿಂದಿನ ಮಂತ್ರಿಮಂಡಲ ಇದ್ದಾಗ ಆ ಅಚ್ಚುಕಟ್ಟಿನಲ್ಲಿ ಎಷ್ಟು ಕೆಲಸ ನಡೆಯುತ್ತಾ ಇತ್ತು. ಈಗ ಎಷ್ಟು ಕೆಲಸ ನಡೆಯುತ್ತಾ ಇದೆ, ನಾವು ಎಷ್ಟು ಕಾಗದ ಪತ್ರಗಳನ್ನು ವಿಲೇಮಾಡುತ್ತಿದ್ದೇವೆ ಎಂಬ ಸಮಾಚಾರವನ್ನು ಬೇಕಾದರೆ ಹೇಳುತ್ತೇನೆ. ಹಿಂದೆ ಇದ್ದ ಸೆಕ್ರೆಟೆರಿಗಳು ಎಷ್ಟು ಕಾಗದ ಪತ್ರಗಳನ್ನು ವಿಲೇಮಾಡುತ್ತಿದ್ದರು. ಈಗ ಸೆಕ್ರಟರಿಗಳ ಸಂಖ್ಯೆ ಜಾಸ್ತಿಯಾಗಿರುವ ಸಮಯದಲ್ಲಿ ಎಷ್ಟು ಎಂದು ನೋಡಿದರೆ ಹಿಂದಿಗಿಂತಲೂ ಬಹಳ ಹೆಚ್ಚಾಗಿ ವಿಲೇ ಆಗುತ್ತದೆಯೇ ಹೊರತು ಕಮ್ಮಿಯಲ್ಲ ಎಂದು ಹೇಳುತ್ತೇನೆ.

ಶ್ರೀ ಎಚ್.ಬಿ. **ಗುಂಡಪ್ಪಗೌಡರು:**- ಸರ್ಕಾರಕ್ಕೆ ಬರುವ ಪ್ರತಿಯೊಂದು ಅರ್ಜಿಯನ್ನು ಲೆಕ್ಕಕ್ಕೆ ತೆಗೆದು ಕೊಳ್ಳಬೇಡಿ. ಆ ರೀತಿ ಲೆಕ್ಕ ಹಾಕಿದರೆ ಬಹಳ ಹೆಚ್ಚಾಗುತ್ತದೆ.

ಶ್ರೀ **ಕೆ. ಚೆಂಗಲರಾಯರೆಡ್ಡಿ:**- ಬಂದಂಥ ಅರ್ಜಿಗಳಿಗೆ ಜವಾಬು ಕೊಡುವುದಿಲ್ಲ ಎಂದು ಒಂದು ಕಡೆ ಆಕ್ಷೇಪಣೆ ಇದೆ. ಪ್ರಾಸಂಗಿಕವಾಗಿ ಹೇಳುತ್ತೇನೆ, ಜವಾಬು ಕೊಡುವುದಿಲ್ಲ ಎಂಬುದು ಒಂದು ದೊಡ್ಡ ಅಪವಾದ ನಿಜ. ಪೋಸ್ಟಲ್ 'ಇನ್‌ಟಿಗ್ರೇಷನ್ ಆಗ ನೋಡೀ ಫ್ರೀ ಪೋಸ್ಟಲ್ ಸರ್ವೀಸ್ ಹೋಯಿತು. ಒಂದಾಣೆ ಅಥವಾ ಎರಡಾಣೆ ಸ್ಟಾಂಪು ಹಚ್ಚಿ ಜವಾಬು ಕೊಡಬೇಕಾಗುತ್ತದೆ. ಅಂದ ಮಾತ್ರಕ್ಕೇ ಅದನ್ನು ಗಮನದಲ್ಲಿಟ್ಟು ಕೊಳ್ಳುವುದಿಲ್ಲ.

ಶ್ರೀ ಹೆಚ್.ಬಿ. **ಗುಂಡಪ್ಪಗೌಡ:**- ಮೊದಲೇ ಸ್ಟ್ಯಾಂಪ್ ಕಳುಹಿಸದಿದ್ದರೆ ಜವಾಬು ಏಕೆ ಕೊಡಬೇಕು?

ಶ್ರೀ **ಕೆ. ಚೆಂಗಲರಾಯರೆಡ್ಡಿ:**- ಆದರೆ ಕೊಡಬೇಕಲ್ಲ.

ಶ್ರೀ ಹೆಚ್.ಬಿ. **ಗುಂಡಪ್ಪಗೌಡ:**- ಅದಕ್ಕೆ ಜವಾಬು ಕೊಡಬೇಕಾದ ಅಗತ್ಯವಿಲ್ಲ.

ಶ್ರೀ **ಕೆ. ಚೆಂಗಲರಾಯರೆಡ್ಡಿ:**-ನಾವು ಎಷ್ಟು ಕಾಗದ ಪತ್ರಗಳೊಂದಿಗೆ ವ್ಯವಹರಿಸಿದ್ದೇವೆ ಎಂಬುದನ್ನು ಅಂಕಿ ಅಂಶಗಳ ಸಮೇತ ಸಾಬೀತು ಮಾಡಬಲ್ಲೆ. ಕೊನೆಯಪಕ್ಷ ಅವುಗಳನ್ನು ಕಡತದಲ್ಲಿಯಾದರೂ ಹಾಕಬೇಕಾಗುತ್ತದೆ (ನಗು). ಇದು ವ್ಯಕ್ತಿಗಳಿಗೆ ಹುದ್ದೆಗಳನ್ನು ಕಲ್ಪಿಸುವುದಕ್ಕೆ ಸಂಬಂಧಿಸಿದ್ದಲ್ಲ. ಇಂತಹ ಯಾವುದೋ ಒಂದು ಕ್ಷುಲ್ಲಕ ಕಾರಣಕ್ಕಾಗಿ ನಾವು ಇದನ್ನೆಲ್ಲ ಮಾಡುತ್ತಿಲ್ಲ. ವಿರೋಧಿ ಗುಂಪಿನಲ್ಲಿರುವ ಸನ್ಮಾನ್ಯ ಸದಸ್ಯರು ಸ್ಥಿತಿ ಏನು ಎಂಬುದನ್ನು ಅರ್ಥ ಮಾಡಿಕೊಳ್ಳುತ್ತಾರೆ ಎಂಬ ದೃಷ್ಟಿಯಿಂದ ಇದನ್ನೆಲ್ಲ ಹೇಳುತ್ತಿದ್ದೇನೆ.

ಅಂತೂ ಕಾಗದ ಬರೆದರೆ ಜವಾಬೇ ಕೊಡುವುದಿಲ್ಲ ಎಂದು ಆಕ್ಷೇಪಣೆ ಮಾಡುತ್ತಾರೆ. ನಿಮ್ಮ ಸ್ವಂತ ಕ್ಷೇಮಕ್ಕೋಸ್ಕರವೇ ಸ್ಟಾಂಪ್ ಇಟ್ಟು ಕಾಗದ ಬರೆಯಿರಿ, ಜವಾಬು ಕೊಡುತ್ತೇನೆ ಎಂದರೆ ನಗುತ್ತಾರೆ.

ಯಾವುದೋ ಒಂದೆರಡು ಸೆಕ್ರೆಟರಿಗಳ ಜಾಗವನ್ನು ಜಾಸ್ತಿ ಮಾಡಿದ್ದೇವೆ ಎಂದು ಅದನ್ನು ಹಿಡಿದುಕೊಂಡು ಅಲ್ಲಾಡಿಸುತ್ತಿದ್ದೀರಿ. ವಜಾ ಮಾಡಿರುವುದನ್ನು ಏಕೆ ಗಮನಿಸುವುದಿಲ್ಲ? ಇನ್‌ಸ್ಪೆಕ್ಟರ್ ಜನರಲ್ ಆಫ್ ಪ್ರಿಸನ್ಸ್, ಅದನ್ನು ಬೇಕಾಗಿಲ್ಲ ಎಂದು ವಜಾ ಮಾಡಿದ್ದೇವೆ. ಕಮಿಷನರ್ ಆಫ್ ಲ್ಯಾಂಡ್ ರೆಕಾರ್ಡ್ಸ್ ಬೇಕಾಗಿಲ್ಲ ಎಂದು ಹೇಳಿ ಸೂಪರಿಂಟೆಂಡೆಂಟ್ ಆಫ್ ಲ್ಯಾಂಡ್ ರಿಕಾರ್ಡ್ಸ್ ಸಾಕೆಂದು ಮಾಡಿದ್ದೇವೆ. ನಿಮ್ಮ ಆಡಳಿತ ಎಲ್ಲಿ ಈ ರೀತಿ ಮಾಡಿತು ಎಂಬುದರ ಉದಾಹರಣೆಗಳನ್ನು ನಾನು ಕೊಡಬಲ್ಲೆ. ನೀವು ನಿಮ್ಮ ಆಡಳಿತದಲ್ಲಿ ಏನು ಮಾಡಿದ್ದೀರೋ ಅದನ್ನು ನಾನು ಅದೇ ರೀತಿ ಹಿಂದಿರುಗಿಸಬೇಕಲ್ಲವೆ? ಆಡಳಿತ ನಡೆದುಕೊಡು ಹೋಗಬೇಕಾದರೆ ಹಾಗೂ ಅಧಿಕಾರಿಗಳಿಗೆ ಸರಿಯಾದ ಸ್ಥಾನ ಕಲ್ಪಿಸಬೇಕಾದರೆ ಕೆಲವು ಸಂದರ್ಭಗಳಲ್ಲಿ ಹಾಗೆ ಮಾಡಬೇಕಾಗುತ್ತದೆ ಒಂದು ಹಂತದಲ್ಲಿ ಇನ್‌ಸ್ಪೆಕ್ಟರ್ ಜನರಲ್ ಆಫ್ ಪ್ರಿಸನ್ಸ್ ಎಂಬ ಹುದ್ದೆಯನ್ನು ಯಾಕೆ ಕಲ್ಪಿಸಲಾಯಿತು? ಅದರ ಉತ್ತರ ನಿಮಗೆ ಗೊತ್ತಿದೆ.

ಶ್ರೀ ಹೆಚ್.ಸಿ. ದಾಸಪ್ಪ:- ಯಾರ ಅನುಕೂಲಕ್ಕಾಗಿ.

ಶ್ರೀ ಎಲ್. ಸಿದ್ದಪ್ಪ:- ಅಡಿಶನಲ್ ಸೆಕ್ರೆಟರಿ ಹುದ್ದೆಯನ್ನು ಸೃಷ್ಟಿಸಿದ್ದು ಯಾಕಾಗಿ?

ಶ್ರೀ ಕೆ. ಚೆಂಗಲರಾಯರೆಡ್ಡಿ:- ಹಿಂದಿನ ಆಡಳಿತ ಇನ್‌ಸ್ಪೆಕ್ಟರ್ ಜನರಲ್ ಆಫ್ ಪ್ರಿಸನ್ಸ್ ಹುದ್ದೆಯನ್ನು ಹೇಗೆ ಸೃಷ್ಟಿಸಿತು ಎಂಬುದು ನನಗೆ ಗೊತ್ತು.

ಶ್ರೀ ಹೆಚ್.ಬಿ. ಗುಂಡಪ್ಪಗೌಡ:- ನಮ್ಮ ಸ್ನೇಹಿತರ ಸಂಖ್ಯೆ ಬಹಳ ಹೆಚ್ಚಾಗಿಬಿಟ್ಟಿತು, ಅವರನ್ನು ನಿಭಾಯಿಸುವುದಾಗುತ್ತಿರಲಿಲ್ಲ, ಅದಕ್ಕೇ........(ನಗು).

ಶ್ರೀ ಕೆ. ಚೆಂಗಲರಾಯರೆಡ್ಡಿ:- ನೀವು ನಮ್ಮನ್ನು ಜೈಲಿನಲ್ಲಿಟ್ಟು ಹುದ್ದೆಯನ್ನು ಸೃಷ್ಟಿಸಿದ್ದು ಏಕೆ?

ಹೆಚ್.ಎಂ.ಚನ್ನಬಸಪ್ಪ(ಮೈಸೂರು ಜಿಲ್ಲೆ-ಸಾಮಾನ್ಯ):- ಕೆಲಸಕ್ಕಿಂತ ಅಧಿಕಾರಿಗಳ ಸಂಖ್ಯೆ ಹೆಚ್ಚಿದೆ ಎಂಬ ದೂರಿನ ಬಗ್ಗೆ ಸನ್ಮಾನ್ಯ ಸಚಿವರು ಏನಾದರೂ ಹೇಳುವಿವುದಿದೆಯೆ?

ಶ್ರೀ ಕೆ. ಚೆಂಗಲರಾಯರೆಡ್ಡಿ:- ನಾನು ಅದಕ್ಕೆ ಉತ್ತರ ಕೊಡುತ್ತೇನೆ. ನಾವು ಅಧಿಕಾರ ವಹಿಸಿಕೊಂಡಾಗ ಒಬ್ಬ ಆಹಾರ ಸರಬರಾಜು ನಿರ್ದೇಶಕರಿರಬೇಕಾದ ಕಡೆ ಮೂರು ನಿರ್ದೇಶಕರಿದ್ದರು. ಅದರ ಅಗತ್ಯವೆಲ್ಲಿತ್ತು? ಇದರ ಕಾರಣಗಳು ಸನ್ಮಾನ್ಯ ಸದಸ್ಯ ಎಲ್. ಸಿದ್ದಪ್ಪನವರಿಗೆ ಗೊತ್ತು ಮತ್ತು ನನಗೆ ಗೊತ್ತು.

ಎಲ್. ಸಿದ್ದಪ್ಪ:-ಯಾವುದೋ ಒಂದೆರಡು ಸಂದರ್ಭಗಳಲ್ಲಿ ಮಾಡಿದ್ದನ್ನು ಹೇಳುತ್ತಿದ್ದೀರಿ.

ಕೆ. ಚೆಂಗಲರಾಯರೆಡ್ಡಿ:-ವಿಶೇಷ ನೆಪಗಳನ್ನು ಹೇಳಬೇಡಿ. ಇದರ ಕಾರಣಗಳು ನನಗೆ ಗೊತ್ತು. ಸನ್ಮಾನ್ಯ ಸದಸ್ಯರಿಗೆ ಗೊತ್ತು. ನಾವು ಬಂದಾಗ ಆಹಾರ ಸರಬರಾಜು ನಿರ್ದೇಶಕರ ಎರಡು ಹುದ್ದೆಗಳನ್ನು ರದ್ದು ಮಾಡಿದೆವು. ಈಗ ಒಬ್ಬ ಆಹಾರ ಸರಬರಾಜು ನಿರ್ದೇಶಕರಿದ್ದು ಅತ್ಯಂತ ವಿಶೇಷ ಹಾಗೂ ಕಷ್ಟಕರ ಸನ್ನಿವೇಶಗಳಲ್ಲಿ ಆಹಾರ ಸಮಸ್ಯೆಗೆ ಸಂಬಂಧಿಸಿದಂತೆ ಹಿಂದಿನ ಆಡಳಿತದ ಸಂದರ್ಭದಲ್ಲಿದ್ದುದಕ್ಕಿಂತ ಅತ್ಯಂತ ಕಠಿಣ ಸನ್ನಿವೇಶದಲ್ಲಿ ಕಾರ್ಯನಿರ್ವಹಿಸುತ್ತಿದ್ದಾರೆ. ನಾವು ಗ್ರಾಮೀಣ ಅಭಿವೃದ್ಧಿ ಅಧಿಕಾರಿಗಳ ಹುದ್ದೆಯನ್ನು ರದ್ದುಪಡಿಸಿದ್ದೇವೆ. ಈಗ ಗ್ರಾಮೀಣ ಅಭಿವೃದ್ಧಿ ಅಧಿಕಾರಿಗಳ ಕೆಲಸವನ್ನು ಸಹಕಾರಿ ಸಂಘಗಳ ರಿಜಿಸ್ಟ್ರಾರ್ ಕೆಲಸದೊಂದಿಗೆ ವಿಲೀನಗೊಳಿಸಿದ್ದೇವೆ. ಇಂತಹ ನಿದರ್ಶನಗಳನ್ನು ನಾನು ಕೊಡಬಲ್ಲೆ. ಎಲ್ಲಿ ಅಗತ್ಯವಿದೆಯೋ ಅಲ್ಲಿ ನಾವು ಹುದ್ದೆಗಳನ್ನು ಸೃಷ್ಟಿಸುತ್ತಿದ್ದೇವೆ ಎಲ್ಲಿ ಅನಗತ್ಯವೋ ಅಲ್ಲಿ ರದ್ದುಪಡಿಸುತ್ತಿದ್ದೇವೆ. ಒಂದು ದೊಡ್ಡ ಆಡಳಿತವನ್ನು ನಡೆಸಿಕೊಂಡು ಹೋಗುವ ಸಂದರ್ಭದಲ್ಲಿ ಅಲ್ಲೊ ಇಲ್ಲೋ ಒಬ್ಬರೋ ಇಬ್ಬರೋ ಹೆಚ್ಚಿನ ಅಧಿಕಾರಿಗಳಿರಬಹುದು. ಆಡಳಿತವನ್ನು ಸರಿಯಾದ ನೆಲೆಯಲ್ಲಿಡುವುದು ಅದರ ಉದ್ದೇಶ. ಇದು ಯಾವುದೇ ಆಡಳಿತದಲ್ಲಿ ಸಾಮಾನ್ಯವಾಗಿ ಕಂಡುಬರುವಂಥದ್ದೇ.....

One swallow does not make a summer. ಒಬ್ಬರೋ ಇಬ್ಬರೋ ಅಧಿಕಾರಿಗಳನ್ನು ನಾವು ಕೈಬಿಟ್ಟು ಅದಕ್ಕೆ ಪ್ರತಿಯಾಗಿ 100 ಜನ ಅಧಿಕಾರಿಗಳನ್ನು ಇಟ್ಟುಕೊಳ್ಳಬೇಕಾಗುತ್ತದೆ.

ಶ್ರೀ ಹೆಚ್.ಬಿ. ಗುಂಡಪ್ಪಗೌಡ:- ನಾವು ಈ ಅಧಿಕಾರಿಯ ವಿಷಯದಲ್ಲಿ ಕಾಳಜಿಪಡುತ್ತಿದ್ದೇವೆ.

ಶ್ರೀ ಎಲ್. ಸಿದ್ದಪ್ಪ:- ಇತರ ರಾಜ್ಯಗಳಲ್ಲಿ ಈ ಅಧಿಕಾರಿ ಇದ್ದಾರೆಯೇ ಎಂಬುದಕ್ಕೆ ಸನ್ಮಾನ್ಯ ಸಚಿವರು ಉತ್ತರ ನೀಡಲಿಲ್ಲ.

ಶ್ರೀ ಕೆ. ಚೆಂಗಲರಾಯರೆಡ್ಡಿ:- ಕೆಲವೊಂದು ವಿಷಯಗಳನ್ನು ಇತರ ರಾಜ್ಯಗಳವರು ನಮ್ಮಿಂದ ಕಲಿಯುತ್ತಿದ್ದಾರೆ. ಕೆಲವು ವಿಷಯಗಳನ್ನು ಅವರಿಂದ ನಾವು ಕಲಿಯುತ್ತಿದ್ದೇವೆ. ಇತರ ಸರ್ಕಾರಗಳು ಇದನ್ನು ಮಾಡಲು ಬಯಸಿದ್ದು ನನಗೆ ಗೊತ್ತು. ಅವರು ಪ್ರಯತ್ನಿಸಿದರು, ಆದರೆ ತೊಂದರೆಗಳನ್ನು ನಿವಾರಿಸಿಕೊಳ್ಳುವುದು ಸಾಧ್ಯವಾಗಲಿಲ್ಲ. ಅವರು ಕತ್ತಲೆಯಲ್ಲಿ ತಡಕಾಡುತ್ತಿದ್ದರು. ನಮ್ಮ ಪ್ರಯೋಗವನ್ನು ನೋಡಿದ ನಂತರ ಅವರೂ ಆ ರೀತಿ ಮಾಡಬಯಸಿದರು. ತಿರುವಾಂಕೂರಿನಲ್ಲಿ ಆರು ತಿಂಗಳ ಅವಧಿಗೆ ಒಬ್ಬ ಸಂಪರ್ಕ ಅಧಿಕಾರಿಯನ್ನು ನೇಮಿಸಲಾಯಿತು. ಆತನಿಗೆ ಸಚಿವರ ಸ್ಥಾನಮಾನವಿದ್ದಿತು. ಆದರೆ ಉತ್ತರ ಪ್ರದೇಶ ಸರ್ಕಾರಕ್ಕೆ ಅಂತಹ ಅಧಿಕಾರಿಯ ಅಗತ್ಯವಿಲ್ಲ ಏಕೆಂದರೆ ಅದು ದೆಹಲಿಗೆ ಕೂಗಿದರೆ ಕೇಳಿಸುವಷ್ಟು ಸಮೀಪದಲ್ಲಿದೆ. ಮಧ್ಯ ಪ್ರದೇಶಕ್ಕೂ ಅದರ ಅಗತ್ಯವಿಲ್ಲ. ಇದಕ್ಕೆ ಪ್ರತಿಯಾಗಿ ನಾವು ತೀರ ದಕ್ಷಿಣದಲ್ಲಿದ್ದೇವೆ. ಆದ್ದರಿಂದ ಮೈಸೂರಿಗೂ,ತಿರುವಾಂಕೂರಿಗೂ ಅದು ಅಗತ್ಯ. ಆದರೆ ದೆಹಲಿಯ ಸುತ್ತಮುತ್ತಲಲ್ಲಿರುವ ರಾಜ್ಯಗಳಿಗೆ ಅದರ ಅಗತ್ಯವಿಲ್ಲ. ಕ್ಷಮಿಸಿ, ನಾನು ಬಹಳ ಕಾಲ ತೆಗೆದುಕೊಂಡೆ.

ಬಿ. ಚೆನ್ನಬೈರೇಗೌಡ:- ಮದರಾಸು ಪ್ರಾಂತ್ಯದವರೂ ಇಟ್ಟಿದ್ದಾರೆಯೆ?

ಕೆ. ಚೆಂಗಲರಾಯರೆಡ್ಡಿ:- ಮದರಾಸು ಸರ್ಕಾರದ ವಿಚಾರ ನಾನು ಹೇಳುವುದು ಸೂಕ್ತವಲ್ಲ. ನಾವು ಮಾಡಿರತಕ್ಕದ್ದು ಮಾದರಿಯಾಗಿದೆ. ಇದನ್ನೇ ಇನ್ನೂ ಕೆಲವರು ಅನುಸರಿಸೋಣ ಎಂದು ಆಲೋಚನೆ ಮಾಡುತ್ತಿದ್ದಾರೆ ಎಂಬುದನ್ನು ಮಾತ್ರ ಹೇಳುತ್ತೇನೆ. ಇಂಥ ಸ್ಪೆಷಲ್ ಆಫೀಸರ್‌ಗಳು ಎಷ್ಟೋ ವೇಳೆ ಇರಬೇಕಾಗುತ್ತದೆ. ಉದಾಹರಣೆಗೆ ನಮ್ಮ ಮಿತ್ರರು ಹೇಳುತ್ತಾ ಇದ್ದರು. ಆಡಿಟ್ ಇಲಾಖೆ ತೆಗೆದುಕೊಳ್ಳಿ. ಈ ಇಲಾಖೆ ಚೇಂಜ್ ಓವರ್ ಆಗುವ ಸಂದರ್ಭದಲ್ಲಿ ಕೇಂದ್ರ ಸರ್ಕಾರದವರು ತಿರುವಾಂಕೂರು ಮತ್ತು ಮೈಸೂರಿಗೆ ಸಂಬಂಧಪಟ್ಟ ಹಾಗೆ ಸ್ಪೆಷಲ್ ಆಗಿ ಒಬ್ಬ ಅಕೌಂಟ್ಸ್ ಆಫೀಸರ್‌ನ್ನು ನೇಮಕ ಮಾಡಿದ್ದಾರೆ. ಅಂಥಾ ಆಫೀಸರ್‌ರ ಅವಶ್ಯಕತೆ ಇದೆ. ಆ ರೀತಿ ಮಾಡುವುದು ಲುಕ್ಸಾನಲ್ಲ; ಅನಾವಶ್ಯಕ ಅಲ್ಲ. ಆದ್ದರಿಂದ ಕೆಲಸ ಸುಸೂತ್ರವಾಗಿ ನಡೆಯುತ್ತದೆ, ಅನುಕೂಲ ಇದೆ. ಹೀಗೆ ಸ್ಪೆಷಲ್ ಆಫೀಸರನ್ನು ನಾವು ನೇಮಕ ಮಾಡಿರುವುದು ಒಬ್ಬ ಆಫೀಸರಿಗೆ ಕೆಲಸ ಕೊಡಬೇಕೆಂದಲ್ಲ. ಯಾವ ದೃಷ್ಟಿಯಿಂದ ನೋಡಿದರೂ ಈ ಏರ್ಪಾಡಿನಿಂದ ಕೆಲಸ ಚೆನ್ನಾಗಿ ನಡೆಯುತ್ತದೆ ಎಂದು ಹೇಳಬಲ್ಲೆ. ಇಷ್ಟು ವಿವರಣೆ ಕೊಟ್ಟಮೇಲೆ ಯಾವ ಭಿನ್ನಾಭಿಪ್ರಾಯವನ್ನೂ ವ್ಯಕ್ತಪಡಿಸದೆ ಇದನ್ನು ಒಪ್ಪುತ್ತೀರೆಂದು ನಂಬಿದ್ದೇನೆ.

ಶ್ರೀ ಜನಾಬ್ ಜೆ. ಮೊಹಮುದ್‌ಇಮಾಂ(ಚಿತ್ರದುರ್ಗ ಹಾಗೂತುಮಕೂರು - ಮುಸ್ಲಿಂ):-ಮಾನ್ಯರೇ, ಸನ್ಮಾನ್ಯ ಮುಖ್ಯಮಂತ್ರಿಗಳ ವಿವರವಾದ ಹೇಳಿಕೆಯನ್ನು ನಾನು ಆಸಕ್ತಿಯಿಂದ ಆಲಿಸಿದ್ದೇನೆ. ತಾವು ಯಾವ ನೀತಿಯನ್ನು ಆಲೋಚಿಸಿದ್ದಾರೊ ಅಥವಾ ಯಾವ ಕ್ರಮವನ್ನು ಅಳವಡಿಸಿಕೊಂಡಿದ್ದಾರೋ ಅದನ್ನು ಬೆಂಬಲಿಸುವುದು ಸರ್ಕಾರ ಮತ್ತು ಸರ್ಕಾರದ ಹೊಣೆ ಹೊತ್ತಿರುವವರ ಕರ್ತವ್ಯವೇ ಆಗಿದೆ.

**ಕೆ. ಚೆಂಗಲರಾಯರೆಡ್ಡಿ:**-ನಿಮಗೆ ಇದು ಒಪ್ಪಿತವಾಯಿತೋ ಇಲ್ಲವೋ ಎಂಬುದು ನನಗೆ ಬೇಕು.

**ಜನಾಬ್ ಜೆ. ಮಹಮದ್‌ಇಮಾಂ:**-.......Cut motion ನ್ನು ಮಂಡಿಸಿದ ಉದ್ದೇಶ ಇಷ್ಟೇ-ನಮ್ಮ ಸಂಪನ್ಮೂಲಗಳು ಸೀಮಿತವಾಗಿದ್ದು ನಮ್ಮ ವೆಚ್ಚಗಳು ಬಹಳ ಹೆಚ್ಚುತ್ತಿರುವಾಗ ಸರ್ಕಾರವು ಸ್ವಲ್ಪ ತ್ಯಾಗ ಮಾಡಿಯಾದರೂ ಸರಿ, ವೆಚ್ಚಗಳನ್ನು ಕಡಿಮೆ ಮಾಡುವುದಕ್ಕಾಗಿ ಸೂಕ್ತವಾದ ಹಾಗೂ ಅಗತ್ಯವಾದ ಕೆಲವು ಪರಿಣಾಮಕಾರೀ ಕ್ರಮಗಳನ್ನು ಕೈಗೊಳ್ಳಬೇಕಾಗುತ್ತದೆ. ನಮಗೆ ದೊರೆಯುವ ಲಾಭ ಹಾಗೂ ಅನುಕೂಲಗಳು ನಮ್ಮ ವೆಚ್ಚಕ್ಕಿಂತ ಕಡಿಮೆ ಇದ್ದಾಗ ಮತ್ತು ಅದೇ ಕೆಲಸವನ್ನು ಇನ್ನಿತರರ ಮೂಲಕ ಮಾಡಿಸುವುದು ಸಾಧ್ಯವಿದ್ದಾಗ ಸರ್ಕಾರವು ಇಂತಹ ನೇಮಕಾತಿಗಳನ್ನು ಮಾಡುವುದಕ್ಕೆ ಹೋಗಕೂಡದು. ಮಾನ್ಯ ಮುಖ್ಯಮಂತ್ರಿಗಳು ಈ ಅಧಿಕಾರಿಯನ್ನೋ, ಆ ಅಧಿಕಾರಿಯನ್ನೋ ಏಕೆ ನೇಮಕ ಮಾಡಿದಿರಿ ಎಂದು ಹಿಂದಿನ ಸರ್ಕಾರದ ಸದಸ್ಯರನ್ನು ಕೇಳಿದರು. ಆದರೆ ನಾವು ಅದರ ಹಣಕಾಸು ಪರಿಣಾಮಗಳನ್ನು ಲೆಕ್ಕಹಾಕದೆ ಯಾವ ನೇಮಕವನ್ನೂ ಮಾಡಲಿಲ್ಲ ಎಂದು ಹೇಳಬಯಸುತ್ತೇನೆ. ನಾವು ಅವಶ್ಯಕತೆಯನ್ನು ಗಮನಿಸಿದೆವು ಮತ್ತು ಯಾವುದೋ ಒಂದು ನೇಮಕಾತಿಗೆ ಅನಗತ್ಯವಾಗಿ ತುಂಬ ಖರ್ಚಾಗುತ್ತದೆ ಎಂದು ಕಂಡುಬಂದಾಗ ಅಂತಹ ನೇಮಕಾತಿಯನ್ನು ಮಾಡುವುದಕ್ಕೇ ಹೋಗಲಿಲ್ಲ. ಒಂದು ನೇಮಕಾತಿ ಅಗತ್ಯವೆಂದು ಕಂಡುಬಂದ ಕೂಡಲೇ ಕ್ರಮ ತೆಗೆದುಕೊಂಡೆವು.

**ಶ್ರೀ ಡಬ್ಲ್ಯು.ಹೆಚ್.ಹನುಮಂತಪ್ಪ (ಬೆಂಗಳೂರುಜಿಲ್ಲೆ-ಸಾಮಾನ್ಯ):**- ಮಾನ್ಯರೆ, ಹಿಂದಿನ ಸರ್ಕಾರವನ್ನು ಸಮರ್ಥಿಸಿಕೊಳ್ಳುವುದಕ್ಕೆ ಅವರೇಕೆ ಅಷ್ಟು ಜವಾಬ್ದಾರಿ ವಹಿಸಬೇಕು.

ಶ್ರೀ ಎ. ಭೀಮಪ್ಪನಾಯಕ(ಚಿತ್ರದುರ್ಗ ಜಿಲ್ಲೆ-ಸಾಮಾನ್ಯ):-ಮಾನ್ಯರೆ, ಕ್ರಮ ಬದ್ಧತೆಯ ದೃಷ್ಟಿಯಿಂದ ನೋಡುವುದಾದರೆ, ಉತ್ತರ ನೀಡಿದ ನಂತರ ಸನ್ಮಾನ್ಯ ಸದಸ್ಯರು ಭಾಷಣ ಮಾಡುವುದು ಸರಿಯೆ? ಅವರು ತಮ್ಮ Cut Motion ನ್ನು ಹಿಂತೆಗೆದುಕೊಳ್ಳಬೇಕು ಇಲ್ಲವೇ ಅದನ್ನು ಒತ್ತಾಯಪಡಿಸಬೇಕು. ಆದರೆ ಅವರು ಈಗಾಗಲೇ ಮಾತಾಡಿ, ಮುಖ್ಯಮಂತ್ರಿಗಳು ಉತ್ತರ ನೀಡಿದ ನಂತರ ಮತ್ತೆ ಭಾಷಣ ಮಾಡುವಂತಿಲ್ಲ. ಅವರು ಮತ್ತೆ ಮಾತಾಡಬಹುದೇ ಎಂಬ ಬಗೆಗಷ್ಟೇ ನನಗೆ ಸ್ಪಷ್ಟೀಕರಣ ಬೇಕು.

**ಶ್ರೀ ಕೆ. ಚೆಂಗಲರಾಯರೆಡ್ಡಿ:**- ಈ ಬಗ್ಗೆ ನಾನು ಸ್ವಲ್ಪ ಬೆಳಕು ಬೀರಬಹುದೆಂದು ತೋರುತ್ತದೆ. ಬಹುಶಃ ನಾನು ಹೇಳಿದ್ದನ್ನು ಸನ್ಮಾನ್ಯ ಸದಸ್ಯ ಶ್ರೀ ಭೀಮಪ್ಪ ನಾಯಕ ಅವರು ಕೇಳಿಸಿಕೊಂಡಿರಲಿಕ್ಕಿಲ್ಲ. ಸನ್ಮಾನ್ಯ ಸದಸ್ಯರ ಗಮನಕ್ಕಾಗಿ ನಾನು ಕೆಲವೊಂದು ಮಾಹಿತಿಯನ್ನು ನೀಡಿದ ನಂತರ ಮತ್ತಷ್ಟು ಚರ್ಚೆಗೆ ಬಹುಶಃ ಅವಕಾಶವಿರಲಾರದು ಎಂದು ನಾನು ಮಾತಾಡುವ ಆರಂಭದಲ್ಲೆ ತಿಳಿಸಿದ್ದೆ. ಆದರೆ ನಾನು ಈಗಾಗಲೇ ಸೂಚಿಸಿದಂತೆ ಒಬ್ಬಿಬ್ಬರು ಸದಸ್ಯರು ನನ್ನ ಮಾತಿನ ನಂತರವೂ ಕೆಲವು ವಿಷಯಗಳನ್ನು ತಿಳಿಸಲು ಬಯಸಿದರು. ಬಹುಶಃ ಜನಾಬ್ ಇಮಾಂ ಅವರು ಅದನ್ನನುಸರಿಸಿ ಕೆಲವು ವಿಷಯ ಹೇಳಬಯಸಿದರು.

ಶ್ರೀ ಎಚ್.ಬಿ. **ಗುಂಡಪ್ಪಗೌಡ:**- ಈ ಕ್ರಮವನ್ನು ಒಪ್ಪಿಕೊಳ್ಳಬಹುದೆ?

**ಸಭಾಪತಿಯವರು:**- ಇಲ್ಲ. ಇದೆಲ್ಲ ಆಗಿದ್ದು ಯಾಕೆಂದರೆ, ಆ ಸಂದರ್ಭದಲ್ಲಿ ಭೀಮಪ್ಪ ನಾಯಕರು ಉಪಸ್ಥಿತರಿರಲಿಲ್ಲ.

ಜನಾಬ್ ಜೆ. ಮೊಹಮದ್ ಇಮಾಂ:- ಮಾನ್ಯರೆ, ಸರ್ಕಾರದ ಕೈಯಲ್ಲಿ ಆಗ ವಿಲೇವಾರಿ ಮಾಡುವುದಕ್ಕೆ ಬೇಕಾದಷ್ಟು ಸಂಪನ್ಮೂಲಗಳಿದ್ದುದರಿಂದ ಕೆಲವೊಂದು ನೇಮಕಾತಿಗಳನ್ನು ಮಾಡುವುದು ಸಾಧ್ಯವಾಯಿತು. ಆದರೆ ಈಗ ಹಣಕಾಸು ಸಂಪನ್ಮೂಲಗಳು ತುಂಬ ಸೀಮಿತವಾಗಿರುವಾಗ ಮತ್ತು ಬಹಳ ಕಷ್ಟಕಾಲದಲ್ಲಿರುವಾಗ ಜನರಿಗೆ ಆಹಾರ ಮತ್ತಿತರ ಸೌಲಭ್ಯಗಳನ್ನು ಒದಗಿಸಬೇಕಾದಂತಹ ದೊಡ್ಡ ಸಮಸ್ಯೆಗಳು ನಮ್ಮ ಮುಂದಿರುವಾಗ, ಇಂತಹ ನೇಮಕಾತಿಗಳನ್ನು ಸಾಧ್ಯವಾದಷ್ಟೂ ತಪ್ಪಿಸುವುದೇ ಒಳ್ಳೆಯದು. ಅದರಲ್ಲಿಯೂ ಇನ್ನೊಂದು ಏಜೆನ್ಸಿಯ ಮೂಲಕ ಈ ಕೆಲಸಗಳನ್ನು ಮಾಡಿಸಲು ಸಾಧ್ಯವಿರುವಾಗ ಇದರ ಅಗತ್ಯವೇ ಇಲ್ಲ. ಈ ಬಗ್ಗೆ ಮದ್ರಾಸ್ ಮತ್ತು ಬಾಂಬೆ ಸರ್ಕಾರಗಳತ್ತ ಗಮನ ಸೆಳೆಯಲು ಇಚ್ಛಿಸುತ್ತೇನೆ. ಅವು ಬಹಳ ದೊಡ್ಡ ರಾಜ್ಯಗಳು.

ಶ್ರೀ ಕೆ. ಚೆಂಗಲರಾಯರೆಡ್ಡಿ:- ಭಾಗ ಬಿ ರಾಜ್ಯಗಳ ವಿಷಯ ಭಾಗ ಎ ರಾಜ್ಯಗಳಿಗಿಂತ ಭಿನ್ನ ಎಂಬುದನ್ನು ತಮ್ಮ ಗಮನಕ್ಕೆ ತರಲೇ? ಅಲ್ಲಿ ಆದಾಗಲೇ ಬಹಳ ಹಿಂದಿನಿಂದ ಮುಂದುವರೆದುಕೊಂಡು ಬಂದ ಹಾಗೂ ಸುಸ್ಥಾಪಿತವಾದ ವಿಚಾರವಾಗಿತ್ತು. ಆದರೆ ಭಾಗ ಬಿ ರಾಜ್ಯಗಳ ವಿಷಯದಲ್ಲಿ ಅದು ಭಿನ್ನ. ಸಂವಿಧಾನದ ವ್ಯವಸ್ಥೆ, ಹಣಕಾಸು ವಿಲಿನೀಕರಣ ಹಾಗೂ ಭಾಗ 'ಎ' ರಾಜ್ಯಗಳಿಗೆ ಅನ್ವಯಿಸದ ಇನ್ನೂ ನೂರೊಂದು ಸಮಸ್ಯೆಗಳು ನಮ್ಮಲ್ಲಿ ಉದ್ಭವಿಸಿದವು.

ಜನಾಬ್ ಜೆ. ಮೊಹಮದ್ ಇಮಾಂ:- ಹೊಸ ಸಂವಿಧಾನದ ಪ್ರಕಾರ ಅಂತಹ ಕ್ರಮಗಳನ್ನು ಅನೇಕ ರಾಜ್ಯಗಳು ಅಳವಡಿಸಿಕೊಂಡಿಲ್ಲ ಎಂಬುದೇ, ನಾವು ಅನುಸರಿಸಿದ ಅಂಶಗಳು ಎಷ್ಟು ಗಣನೀಯವಾಗಿದ್ದರೂ ಅವರು ಅದನ್ನು ಅನುಸರಿಸಲು ತವಕದಿಂದಿಲ್ಲ ಎಂಬುದಕ್ಕೆ ಸಾಕ್ಷಿ. ಎರಡನೆಯದಾಗಿ, ಆಯಾ ವಿಷಯಗಳ ಹೊಣೆ ಹೊತ್ತಿರುವ ಈಗಿರುವ ಅಧಿಕಾರಿಗಳಿಂದಲೇ ಆ ಕೆಲಸವನ್ನು ಮಾಡಿಸಲು ಸಾಧ್ಯವಿಲ್ಲವೆ? ಉದಾಹರಣೆಗೆ ಮಾನ್ಯ ಮುಖ್ಯಮಂತ್ರಿಗಳು ರಫ್ತು ಮತ್ತು ಆಮದು ನಿಯಂತ್ರಣ ಕ್ರಮಗಳ ವಿಷಯ ಹೇಳಿದರು. ಮತ್ತು ನಾವು ಒಂದು ವೇಳೆ ಆ ಅಧಿಕಾರಿಯನ್ನು ಸಕಾಲಕ್ಕೆ ಕಳಿಸಿರದಿದ್ದರೆ ದೇಶಕ್ಕೆ ಬಹುಶಃ ಬಹಳ ನಷ್ಟವಾಗುತ್ತಿತ್ತು ಎಂದು ಹೇಳಿದರು. ಈಗ ಸಂಬಂಧಪಟ್ಟ ಕಾರ್ಯದರ್ಶಿಗಳಿದ್ದಾರೆ, ಕೈಗಾರಿಕೆಗಳ ನಿರ್ದೇಶಕರಿದ್ದಾರೆ. ಆಮದು ವಿಷಯದ ಬಗ್ಗೆ ಈ ವಿಶೇಷ ಅಧಿಕಾರಿಯವರಿಗೆ ಗೊತ್ತಿರುವುದಕ್ಕಿಂತ ತುಂಬ ಚೆನ್ನಾಗಿ ಗೊತ್ತು. ಇಂತಹ ಸಂದರ್ಭಗಳಲ್ಲಿ ವಿಷಯದ ಹೊಣೆ ಹೊತ್ತಿರುವ ಅಧಿಕಾರಿ ಅಥವಾ ವಿಷಯದ ಬಗ್ಗೆ ಈಗಾಗಲೇ ವ್ಯವಹರಿಸುತ್ತಿರುವಂಥವರನ್ನು ನಿಯೋಜಿಸಬಹುದಿತ್ತು ಮತ್ತು ಸಚಿವರು, ಸಚಿವ ಶಾಖೆಯ ಮಟ್ಟದಲ್ಲಿ ಆ ಬಗ್ಗೆ ಚರ್ಚಿಸಬಹುದಿತ್ತು. ಇಲ್ಲಿ ವಿಶೇಷ ಅಧಿಕಾರಿ, ಅವರಿಗೊಬ್ಬ ಸಹಾಯಕ ಕಾರ್ಯದರ್ಶಿ, ಸಿಬ್ಬಂದಿ ಮುಂತಾದುವೆಲ್ಲ ಏಕೆ ಬೇಕು?

ಕೆ. ಚೆಂಗಲರಾಯರೆಡ್ಡಿ:- ಯಾವುದೇ ಸಹಾಯಕ ಕಾರ್ಯದರ್ಶಿ ಅಥವಾ ಹೆಚ್ಚಿನ ಸಿಬ್ಬಂದಿಯನ್ನು ಕೊಟ್ಟಿಲ್ಲ. ಅಲ್ಲಿ ತೀರಾ ಅಗತ್ಯವಾಗಿರುವಷ್ಟು ಸಿಬ್ಬಂದಿ ಮಾತ್ರ ಇದೆ.

ಜನಾಬ್ ಜೆ. ಮೊಹಮದ್ ಇಮಾಂ:- ಅವರು ಪದೇ ಪದೇ ದೆಹಲಿಗೆ ಹೋಗಬೇಕಾಗಿರುತ್ತದೆ. ಈ ಪರಿಸ್ಥಿತಿಯಲ್ಲಿ ಅದು ತೀರಾ ಅನವಶ್ಯ ಎಂದು ನಮಗನ್ನಿಸುತ್ತದೆ. ನನಗನ್ನಿಸುವಂತೆ ಅವರು ಏನು ಮಾಡುತ್ತಾರೋ ಅದನ್ನು ಸರ್ಕಾರದಲ್ಲಿ ಈ ವಿಷಯದ ಸಂಪರ್ಕವಿರುವ ಇತರ ಅಧಿಕಾರಿಗಳು ಮಾಡಬಲ್ಲರು. ಇದರಿಂದ ನೀವು ಆ ಅಧಿಕಾರಿ ಹಾಗೂ ಅವರ ಸಿಬ್ಬಂದಿಯ ಸಂಬಳ ಹಾಗೂ ಅವರ ದೆಹಲಿ ವೆಚ್ಚಗಳನ್ನು ಉಳಿಸಬಹುದು. ಅಲ್ಲದೆ ಈ ರೀತಿಯ ಸಮಸ್ಯೆಗಳು ಯಾವಾಗಲೂ

ಉದ್ಭವಿಸುವಂಥವಲ್ಲ. ಅವು ತಿಂಗಳಿಗೋ ಎರಡು ತಿಂಗಳಿಗೋ ಒಮ್ಮೆ ಉದ್ಭವಿಸಬಹುದು. ಇಂಥ ಸಮಸ್ಯೆಗಳು ದಿನವೂ ಉದ್ಭವಿಸುತ್ತವೆ ಎಂದು ಮಾನ್ಯ ಮುಖ್ಯಮಂತ್ರಿಗಳು ಹೇಳಿದರೆ ನಾನು ಒಪ್ಪುತ್ತೇನೆ. ಇತರ ಸಮಸ್ಯೆಗಳು ದೆಹಲಿ ಸಚಿವಾಲಯದಲ್ಲಿಯೇ ವ್ಯವಹರಿಸಬೇಕಾದಷ್ಟು ಮುಖ್ಯವಾದವುಗಳಲ್ಲ. ಸಮಸ್ಯೆಗಳು ಸಂದರ್ಭಗಳು ಯಾವಾಗಲೂ ಇರುತ್ತವೆ. ಅದರಲ್ಲಿ ಯಾವುದು ಮುಖ್ಯ ಯಾವುದು ಅಮುಖ್ಯ ಎಂಬುದು ನಿಮಗೆ ತಿಳಿಯುತ್ತದೆ. ಇಷ್ಟಕ್ಕೂ ಮಂತ್ರಿಗಳು ಪದೇ ಪದೇ ದೆಹಲಿಗೆ ಹೋಗುತ್ತಲೇ ಇರುತ್ತಾರೆ. ಅವರು ಅಲ್ಲಿಗೆ ಹೋದಾಗ ಇವುಗಳ ಬಗ್ಗೆ ಅವರೇ ಮಾತುಕತೆ ನಡೆಸಬಹುದು. ವಿಶೇಷ ಅಧಿಕಾರಿಯನ್ನು ನೇಮಿಸಿದಾಗ ಸರ್ಕಾರವು ಅದಕ್ಕೆ ಕಾರಣವನ್ನು ಈ ರೀತಿ ಹೇಳಿತು. "ಇದುವರೆಗೆ ಸಚಿವರು ಕರ್ತವ್ಯಗಳ ಅಂಗವಾಗಿ ಪದೇ ಪದೇ ದೆಹಲಿಗೆ ಪ್ರಯಾಣ, ಭೇಟಿ ಮಾಡುವುದು ಅಗತ್ಯವಾಗಿತ್ತು. ಇದನ್ನು ತಪ್ಪಿಸುವುದಕ್ಕಾಗಿ ವಿಶೇಷ ಅಧಿಕಾರಿಯನ್ನು ನೇಮಕ ಮಾಡಲಾಗಿದೆ (ಅಡಚಣೆ). ನನ್ನ ಮಾನ್ಯ ಸ್ನೇಹಿತರೊಬ್ಬರು ಪ್ರಯಾಣ ಭತ್ಯೆಯ ಬಗ್ಗೆ ಹೇಳುತ್ತಿದ್ದಾರೆ ಇದರಿಂದ ಮಾನ್ಯ ಮುಖ್ಯಮಂತ್ರಿಗಳ ಪ್ರಯಾಣವೇನೂ ಕಡಿಮೆಯಾಗುವುದಿಲ್ಲ. ಉದಾಹರಣೆಗೆ ಏನಾದರೂ ಸಾಲ ಕೇಳಿದಾಗ, ಯಾವುದೇ ಭಾವೈಕ್ಯತೆಯ ಸಮಸ್ಯೆಯನ್ನು ಬಗೆಹರಿಸಬೇಕಾದಾಗ ಸನ್ಮಾನ್ಯ ಸಚಿವರು ಸ್ವತಃ ಅಲ್ಲಿಗೆ ಹೋಗಬೇಕಾಗುತ್ತದೆ, ಇತರ ಯಾವ ಅಧಿಕಾರಿಯೂ ಆ ಕೆಲಸ ಮಾಡಲು ಬರುವುದಿಲ್ಲ.

ಶ್ರೀ ಕೆ. ಚೆಂಗಲರಾಯರೆಡ್ಡಿ:- ಇದಕ್ಕೆ ಮೂಲ ಸಿದ್ಧತೆಯ ಕೆಲಸ ಮಾಡಬೇಕಾಗುತ್ತದೆ. ಇಲ್ಲದಿದ್ದಲ್ಲಿ ನಾವು ಅನೇಕ ದಿನಗಳವರೆಗೆ ಅಲ್ಲಿಯೇ ಉಳಿಯಬೇಕಾಗುತ್ತದೆ.

ಜನಾಬ್ ಜೆ. ಮೊಹಮದ್ ಇಮಾಂ:-ಆದರೆ ಇದು ಅನಗತ್ಯ ವೆಚ್ಚ ಎಂದು ನನಗನ್ನಿಸುತ್ತದೆ. ಆದರೆ ಮಾನ್ಯ ಮುಖ್ಯಮಂತ್ರಿಗಳು ಈ ನೇಮಕಾತಿ ತಾತ್ಕಾಲಿಕ ಎಂದು ಹೇಳಿರುವುದು ಸಂತೋಷ. ಮೂರು ತಿಂಗಳಾದ ನಂತರ, ಇನ್ನಾವುದೇ ಕಾರಣಕ್ಕಲ್ಲದಿದ್ದರೂ ರಾಜ್ಯದ ಹಣಕಾಸು ದೃಷ್ಟಿಯಿಂದಲಾದರೂ ಈ ಹುದ್ದೆಯನ್ನು ತೆಗೆದುಹಾಕುತ್ತಾರೆ ಎಂದು ನಾನು ನಿರೀಕ್ಷಿಸುತ್ತೇನೆ.

ಬಿ. ಹುಚ್ಚೇಗೌಡರು:- ಮಾನ್ಯ ಮುಖ್ಯ ಮಂತ್ರಿಗಳು ಕೊಟ್ಟ ಭರವಸೆಗಾಗಿ ನಾನು ಅವರನ್ನು ವಂದಿಸುತ್ತೇನೆ ಮತ್ತು. ........

ಅಧ್ಯಕ್ಷರು:- ತಾವು ಈಗ ಉತ್ತರ ಕೊಡಬೇಕಾದ್ದಿಲ್ಲ, ಭಾಷಣ ಮಾಡುವ ಹಾಗಿಲ್ಲ. ತಮ್ಮ ಸೂಚನೆಯನ್ನು ತಾವು ವಾಪಸ್ಸು ತೆಗೆದುಕೊಳ್ಳಬಹುದು, ಇಲ್ಲವೇ ಒತ್ತಾಯಪಡಿಸುತ್ತೇನೆಂದು ಬೇಕಾದರೂ ಹೇಳಬಹುದು; ಅಷ್ಟೆ ಶಿವಾಯಿ ಭಾಷಣಕ್ಕೆ ಪುನಃ ಅವಕಾಶವಿಲ್ಲ.

9."ವೈದ್ಯಕೀಯ" ಕ್ಕೆ ಹೆಚ್ಚುವರಿ ಮೊತ್ತ ಮಂಜೂರು ಮಾಡಬೇಕೆಂದು ತಿಳಿಸುವ ನಿರ್ಣಯ ಕುರಿತು.....

ವಿಧಾನ ಸಭಾ ಕಲಾಪ 29, ಜನವರಿ 1951

ಮಾನ್ಯಶ್ರೀ ಕೆ. ಚೆಂಗಲರಾಯರೆಡ್ಡಿಯವರು (ಮುಖ್ಯ ಸಚಿವರು):- ಮಾನ್ಯ ಅಧ್ಯಕ್ಷರೇ, ಹೊರಗಡೆಯಿಂದ ತರಿಸಬೇಕಾಗಿರತಕ್ಕ ಕೆಲವು ಔಷಧಿಗಳಿಗಾಗಿ 5 ಲಕ್ಷ ರೂಪಾಯಿಗಳಷ್ಟು ಹೆಚ್ಚಿಗೆ ಹಣವನ್ನು ಒದಗಿಸಬೇಕೆಂದು ಬಂದಿರುವ ಈ ಬೇಡಿಕೆಯ ಸಂದರ್ಭದಲ್ಲಿ ಜನಾಬ್ ಇಮಾಂರವರು ಕೆಲವು ವಿಷಯಗಳನ್ನು ಸರ್ಕಾರದವರ ಗಮನಕ್ಕೆ ತಂದಿದ್ದಾರೆ. ಸಂಸ್ಥಾನಾಮಳೆ ಇರತಕ್ಕ ಅನೇಕ ಆಸ್ಪತ್ರೆಗಳಲ್ಲಿ ನರಳತಕ್ಕ ಸಹೋದರ ಸಹೋದರಿಯರಿಗೆ ಎಲ್ಲಾ ವಿಧವಾದ ಸೌಕರ್ಯಗಳನ್ನು ಒದಗಿಸಬೇಕೆಂಬುದೇ ಸರ್ಕಾರದವರ ಆಶಯವಾಗಿದೆ. ಈ ದೃಷ್ಟಿಯಿಂದಲೇ ಸಾಧ್ಯವಾದಷ್ಟು ಮಟ್ಟಿಗೆ ಸಾರ್ವಜನಿಕರಿಗೆ ವೈದ್ಯಕೀಯ ಸೌಲಭ್ಯ ದೊರೆಯಲೆಂದು ಉದಾರ ನೀತಿಯನ್ನನುಸರಿಸಿ ಸರ್ಕಾರದವರು ಅನೇಕ ಕಡೆ ಆಸ್ಪತ್ರೆಗಳನ್ನು ಏರ್ಪಡಿಸಿದ್ದಾರೆ. ಇಡೀ ಭಾರತದಲ್ಲಿ ಎಲ್ಲ ನೋಡಿದರೂ ಮೈಸೂರು ಸಂಸ್ಥಾನದಲ್ಲಿರುವಷ್ಟು ಆಸ್ಪತ್ರೆಗಳು ಇನ್ನೆಲ್ಲೂ ಇಲ್ಲವೆಂದು ನಾನು ಹೇಳಬಲ್ಲೆ. ಅದು ಬರೀ ಸಂಖ್ಯೆಯಲ್ಲ; ಇಷ್ಟಿಷ್ಟು ಜನರಿಗೆ ಇಷ್ಟಿಷ್ಟು ಆಸ್ಪತ್ರೆಗಳೆಂದು ನೋಡುವ ಪಕ್ಷಕ್ಕೂ ನಮ್ಮಲ್ಲಿ ಆಸ್ಪತ್ರೆಗಳ ಸೌಕರ್ಯ ಜಾಸ್ತಿಯಿದೆಯೆಂದು ಹೇಳಬಹುದು. ಇದೊಂದು ಸಂತೋಷದ ವಿಷಯವಾದರೂ ನಾವಿನ್ನೂ ಗಮನಕೊಡಬೇಕಾದ ವಿಷಯಗಳು ಅನೇಕವಾಗಿವೆಯೆಂಬುದನ್ನು ಒಪ್ಪುತ್ತೇನೆ. ಈಚೆಗೆ ಕೆಲವು ವರ್ಷಗಳಿಂದ ಅನೇಕ ಆಸ್ಪತ್ರೆಗಳನ್ನು ನಾವು ಪ್ರಾರಂಭ ಮಾಡಿದ್ದೇವೆ. ಸ್ಥಳೀಯ ಸಂಸ್ಥೆಗಳ ನೆರವಿನಿಂದ ಮತ್ತು ಉದಾರ ಸಹಾಯದಿಂದಲೂ ಅನೇಕ ಆಸ್ಪತ್ರೆಗಳಾಗಿವೆ. ಇಷ್ಟೆಲ್ಲಾ ಸಂಸ್ಥಾನ ಮಳೆ ಮಾಡಿದ್ದರೂ ಇಂದು ನಾವು ಯಾವ ಸ್ಥಿತಿಯಲ್ಲಿದ್ದೇವೆ ಎಂದರೆ, ಇಷ್ಟು ಆಸ್ಪತ್ರೆಗಳಲ್ಲೂ ಅಲ್ಲಿಗೆ ಬರುವ ರೋಗಿಗಳಿಗೆ, ಅದರಲ್ಲೂ ಅಲ್ಲಿಗೆ ಬಂದು ಅಲ್ಲೇ ಇರಬೇಕಾದ ರೋಗಿಗಳಿಗೆ, ವೈದ್ಯಕೀಯ ಚಿಕಿತ್ಸೆಗಳಿಗೆ ಅನುಕೂಲತೆಗಳನ್ನು ಹಾಲಿ ಕಲ್ಪಿಸಿಕೊಡುವುದೇ ಅಲ್ಲದೇ ಇನ್ನೂ ಹೆಚ್ಚಿನ ಬೆಡ್ಡುಗಳಿಗೆ ಏರ್ಪಾಡು ಮಾಡಬೇಕಾಗಿದೆ ಎಂದು ತಿಳಿದು ಬಂದಿದೆ. ಇದೊಂದು ಬಹಳ ಮುಖ್ಯವಾದ ವಿಷಯ. ಹಾಲಿ ಆಸ್ಪತ್ರೆಗಳಲ್ಲಿರುವ ಬೆಡ್ಸ್ ಏನೂ ಸಾಲದೆಂದು ಹೇಳಿದ್ದಾರೆ ವಿಕ್ಟೋರಿಯಾ ಆಸ್ಪತ್ರೆಯೇ ಅಲ್ಲದೆ ಬಾಕಿ ನಗರಗಳಲ್ಲಿರುವ ತಕ್ಕ ಮತ್ತು ಟೌನ್‌ಗಳಲ್ಲಿರತಕ್ಕ ಆಸ್ಪತ್ರೆಗಳಲ್ಲಿಯೂ ಸಹ ಬೆಡ್ಸ್ ಸಾಕಷ್ಟಿಲ್ಲವೆಂದು ತಿಳಿದು ಬಂದಿದೆ ಅಂತೂ ಅಲ್ಲಿಗೆ ಬರುವವರಿಗೆ ಯಾವುದಾದರೂ ರೀತಿಯಲ್ಲಿ ಸೌಲಭ್ಯ ಒದಗಿಸಬೇಕೆಂದು ಹೇಳಿ ಕೆಲವರನ್ನು ನೆಲದ ಮೇಲೆ ಮಲಗಿಸುವುದಕ್ಕೂ ಏರ್ಪಾಡು ಮಾಡಬೇಕೆಂದು ಹೇಳಿದ್ದೇವೆ. ಇಂದು ವಿಕ್ಟೋರಿಯಾ ಆಸ್ಪತ್ರೆಗೆ ತಾವುಗಳು ಹೋಗಿ ನೋಡುವುದಾದರೆ ಅಲ್ಲಿ ಲೆಕ್ಕದ ಪ್ರಕಾರ 300 ಹಾಸಿಗೆಗಳಿರಬೇಕೆಂದಿದ್ದರೂ, ಅದಕ್ಕೆ ಎರಡರಷ್ಟು ಜನ ರೋಗಿಗಳಿರುವುದು ಕಂಡುಬರುತ್ತದೆ ಅನೇಕರನ್ನು ಎರಡು ಮಂಚಗಳ ಮಧ್ಯೆ ಮಲಗಿಸಿ ಅವಕಾಶ ಮಾಡಿಕೊಡಬೇಕಾದ ಪರಿಸ್ಥಿತಿ ಬಂದಿದೆ. ಸಾಮಾನ್ಯವಾಗಿ ಎಲ್ಲಾ ಆಸ್ಪತ್ರೆಗಳಲ್ಲೂ ಇರತಕ್ಕ ಪರಿಸ್ಥಿತಿ ಇದು. ಆದುದರಿಂದ ನಾವೇನು ಮಾಡಬೇಕು? ಇರತಕ್ಕ ಕಟ್ಟಡಗಳನ್ನು ಮತ್ತು ಬೆಡ್ಡುಗಳನ್ನೂ ಜಾಸ್ತಿ ಮಾಡಬೇಕು ಇದೆಲ್ಲಕ್ಕೂ ಬಹಳವಾಗಿ ಹಣವನ್ನೊದಗಿಸಬೇಕಾಗುತ್ತದೆ. ಪಾಶ್ಚಾತ್ಯ ದೇಶಗಳಲ್ಲಿ ನೋಡುವುದಾದರೆ ಅಲ್ಲಿ ಖಾಸಗಿ

ಮಹನೀಯರ ಸಹಾಯದಿಂದ ಆಸ್ಪತ್ರೆಗಳು ಪ್ರರಂಭವಾಗಿ ಒಳ್ಳೆಯ ಸ್ಥಿತಿಯಲ್ಲಿವೆ. ಅಲ್ಲಿ ರೋಗಿಗಳಿಗೆ ಬೇಕಾದಷ್ಟು ಅನುಕೂಲತೆಗಳನ್ನು ಕಲ್ಪಿಸಿಕೊಡುತ್ತಾರೆ. ನಮ್ಮಲ್ಲಿಯೂ ಅಂಥವು ಸೇಂಟ್ ಮಾರ್ಥಾಸ್ ಆಸ್ಪತ್ರೆ, ಮಿಷನ್ ಆಸ್ಪತ್ರೆ ಮುಂತಾದವು ಇದ್ದರೂ ಅವುಗಳ ಸಂಖ್ಯೆ ಹೆಚ್ಚಿಲ್ಲ. ಇವುಗಳು ಇನ್ನೂ ಜಾಸ್ತಿಯಾಗಬೇಕು. ಏಕೆಂದರೆ ಸರ್ಕಾರದವರ ಹಣಕಾಸಿನ ಸ್ಥಿತಿಯನ್ನು ನೋಡುವುದಾದರೆ ಇದಕ್ಕೆ ಇನ್ನೂ ಹೆಚ್ಚಿಗೆ ಹಣ ಒದಗಿಸಬೇಕೆಂದರೆ ಕಷ್ಟವಿದೆ. ಅವರು ಖರ್ಚು ಮಾಡುವುದಕ್ಕೂ ಒಂದು ಪರಿಮಿತಿ ಇದೆ ಬಡ್ಜೆಟ್ಟಿನಲ್ಲಿ ಒದಗಿಸಿರುವುದಕ್ಕಿಂತ ಹೆಚ್ಚಿಗೆ ಕೊಡಲು ಅವಕಾಶವಿಲ್ಲದಂತೆ ನಮ್ಮ ಕೈಕಾಲು ಕಟ್ಟಿದೆ. ಸದ್ಯದ ಹಣಕಾಸಿನ ಸ್ಥಿತಿಯಲ್ಲಿ ನಮ್ಮ ಬಡ್ಜೆಟ್ಟಿನಲ್ಲಿ ಇದಕ್ಕಾಗಿ ಹೆಚ್ಚಿಗೆ ಒದಗಿಸುವುದು ಕಷ್ಟ.

ಇದು ಈಗಿರತಕ್ಕ ಸಾಮಾನ್ಯ ಪರಿಸ್ಥಿತಿಯ ವಿಷಯ. ಬಡ್ಜೆಟ್ಟಿನ ಮುಂದಿನ ಅಧಿವೇಶನದಲ್ಲಿ ಇದರ ವಿಷಯದಲ್ಲಿ ಎಲ್ಲವನ್ನೂ ವಿಶದವಾಗಿ ತಿಳಿಸಬಹುದು. ಒಟ್ಟಿನಲ್ಲಿ ಈಗ ಏನಾಗಿದೆಯೆಂದರೆ, ಹಾಲಿ ಬಡ್ಜೆಟ್ಟಿನಲ್ಲಿ ಒದಗಿಸಿರತಕ್ಕ ಹಣ ಸಾಲದೆ ಬಂದಿದೆ. ರೋಗಿಗಳ ಸಂಖ್ಯೆ ಬರಬರುತ್ತಾ ಜಾಸ್ತಿಯಾಗಿರುವುದೇ ಕಾರಣ. ಪ್ರತಿವರ್ಷವೂ ಎಷ್ಟು ಜನರು ಬರುತ್ತಾರೆಂದು ನಾವು ನಿರೀಕ್ಷಿಸಿದ್ದೇವೋ ಅದಕ್ಕಿಂತ ಬಹಳ ಹೆಚ್ಚಾಗಿದೆ. ಅಂದ ಮಾತ್ರಕ್ಕೆ ದೇಶದಲ್ಲಿ ವ್ಯಾಧಿಗಳು ಜಾಸ್ತಿಯಾಗಿವೆ ಎಂದು ಅರ್ಥವಲ್ಲ, ಜನರಿಗೆ ಆಸ್ಪತ್ರೆಗೆ ಬರುವ ಅಭ್ಯಾಸ ಹೆಚ್ಚು ಹೆಚ್ಚಿಗೆ ಉಂಟಾಗುತ್ತಿದೆ. ಆದ್ದರಿಂದ ಈ ಸಂದರ್ಭ ಬಂದಿದೆ. ಈ ಕಾರಣದಿಂದ ಹಾಲಿ ಔಷದಿಗಳಿಗಾಗಿ ಕೊಟ್ಟಿರತಕ್ಕ ಹಣ ಏನೇನೂ ಸಾಲದಾಗಿದೆ. ಈಗ ನಾವು ಕೇಳಿರುವ 5 ಲಕ್ಷ ರೂಪಾಯಿಗಳು ಸಾಲದೆಂದು ಹೇಳಿ ಇಲಾಖೆಯವರು 12 ಲಕ್ಷ ರೂಪಾಯಿಗಳ ಡಿಮ್ಯಾಂಡ್ ಎಸ್ಟಿಮೇಟ್ ಆಗಿದೆಯೆಂದು ಹೇಳಿದ್ದಾರೆ.ಆದರೂ ನಮ್ಮ ಹಣಕಾಸಿನ ಸ್ಥಿತಿಯನ್ನು ನೋಡಿಕೊಂಡು 5 ಲಕ್ಷ ರೂಪಾಯಿಗಳನ್ನು ಮಾತ್ರ ಕೊಡುತ್ತೇವೆಂದು ಹೇಳಿ ಅಷ್ಟಕ್ಕೆ ಮಾತ್ರ ಈ ಸಪ್ಲಿಮೆಂಟರಿ ಡಿಮ್ಯಾಂಡನ್ನು ತಂದಿದ್ದೇವೆ.

ಈ ಖರ್ಚು ಇಷ್ಟೊಂದು ಏರುವುದಕ್ಕೆ ಇನ್ನೊಂದು ಕಾರಣವೇನೆಂದರೆ ಹೊರದೇಶದಿಂದ ಬರತಕ್ಕಂಥ ಈ ಔಷಧಿಗಳ ಬೆಲೆ ವ್ಯಾಪಾರದ ಉಬ್ಬರದ ದೆಸೆಯಿಂದ ಒಂದಕ್ಕೆ ನಾಲ್ಕರಷ್ಟು ಹೆಚ್ಚಿದೆ. ಆ ಪ್ರಕಾರ ಹಿಂದೆ ಇದೇ ಔಷಧಿಗಳಿಗೆ ಏನು ಕೊಡಬೇಕಾಗುತ್ತಿತ್ತೋ ಅದಕ್ಕೆ ನಾಲ್ಕರಷ್ಟು ಕೊಡಬೇಕಾಗುತ್ತದೆ ಆದ್ದರಿಂದ ಮಾನ್ಯ ಸದಸ್ಯರು ಈ ಅಂಶವನ್ನು ಗಣನೆಗೆ ತೆಗೆದುಕೊಳ್ಳಬೇಕು.

ಈಗ ಜನಾಬ್ ಇಮಾಂರವರು ಕೇಳಿದ್ದಕ್ಕೆ ಉತ್ತರ ಹೇಳುತ್ತೇನೆ ಇಲಾಖೆಯವರು ಇಂಡೆಂಟ್ ಮಾಡಿದ ಮೇಲೆಯೂ ಸರಿಯಾಗಿ ಸರಬರಾಯಿಯಾಗುತ್ತಿಲ್ಲವೆಂದು ಅವರು ಹೇಳಿದರು ಕಾರಣ ಇಷ್ಟೆ. ಅವರು ಇಂಡೆಂಟ್ ಮಾಡುವುದನ್ನು ಹೆಚ್ಚಿಗೆ ಪ್ರಮಾಣದಲ್ಲಿ ಮಾಡಿರುತ್ತಾರೆ. ರೋಗಿಗಳು ಬರುವ ಸಂಖ್ಯೆ ಜಾಸ್ತಿಯಾಗಿರುವುದರಿಂದ ಇಂಡೆಂಟೂ ಜಾಸ್ತಿಯಾಗಿರುತ್ತದೆ. ಅದರ ಪ್ರಕಾರ ಎಷ್ಟು ಹೆಚ್ಚಿಗೆ ಕೊಡಬೇಕಾಗುತ್ತದೋ ಅದು Additional ಡಿಮ್ಯಾಂಡ್ ಆಗಿ ಬರುತ್ತದೆ.

**ಜನಾಬ್ ಜೆ. ಇಮಾಂರವರು:-** ಅದನ್ನೂ ಒಪ್ಪುತ್ತೇನೆ. ಆದರೆ ಕೊಡುವಾಗ ಎಲ್ಲರಿಗೂ ಕೊಡ ಬೇಕೆಂದು ಹೇಳುತ್ತೇನೆ ಅಷ್ಟೆ.

**ಶ್ರೀ ಕೆ. ಚೆಂಗಲರಾಯರೆಡ್ಡಿ:-** ಇರುವ ಕಷ್ಟಗಳನ್ನೆಲ್ಲಾ ತಿಳಿಸಿದ್ದೇನೆ.

**ಶ್ರೀ ಹೆಚ್.ಬಿ ಗುಂಡಪ್ಪಗೌಡರು:-** ಇಂಡೆಂಟ್‌ನ್ನು ಕೊಡುವಾಗ, ಈ ವರ್ಷದ ಇಂಡೆಂಟ್ ಎಷ್ಟು ಹಿಂದಿನ ವರ್ಷದ ಇಂಡೆಂಟ್ ಎಷ್ಟು ಎಂಬುದನ್ನು ನೋಡಿಕೊಂಡು ಹೆಚ್ಚಿಗೆ ಏನೂ ಕೊಡದೆ ಇದ್ದರೂ ಹಿಂದಿನ ವರ್ಷದಷ್ಟಾದರೂ automatic ಆಗಿ ಸಕಾಲದಲ್ಲಿ ಅವರಿಗೆ ಕೊಡುವಂತೆ ಮಾಡಿದರೆ ಸಾಕು.

**ಶ್ರೀ ಕೆ. ಚೆಂಗಲರಾಯರೆಡ್ಡಿಯವರು:-** ಹಾಗೆಯೇ ಯೋಚನೆ ಮಾಡುತ್ತಿದ್ದೇವೆ. ಆದರೆ ಹೋದ ವರ್ಷ ಇಂಡೆಂಟ್ ಕೊಟ್ಟು ಎಷ್ಟು ತರಿಸಬೇಕಾಗಿತ್ತೋ ಅದನ್ನು ತರಿಸದೇ ಹೋಗಿದ್ದರಿಂದ ಹಿಂದಿನ ವರ್ಷದ್ದು ಈಗ ಬಂದು ಅದನ್ನು ಕೊಡಬೇಕಾಗಾಗಿ ಬಂದಿದೆ. ಇನ್ನು ಮೇಲೆ ಇದಕ್ಕೆ ಅವಕಾಶವಿಲ್ಲದಂತೆ ಸಕಾಲದಲ್ಲೇ ಇಂಡೆಂಟ್ ಕೊಟ್ಟು ತರಿಸಿಕೊಳ್ಳುವುದಕ್ಕೆ ಸರ್ಕಾರದವರು ಎಲ್ಲಾ ಏರ್ಪಾಡನ್ನೂ ಮಾಡುತ್ತಾರೆ.

ಎರಡನೆಯದಾಗಿ diet ಮತ್ತು clothing ವಿಷಯ ಇದೂ ಕೂಡ ಹಿಂದೆ ಇದ್ದದ್ದಕ್ಕಿಂತ ಒಂದಕ್ಕೆ ಎರಡರಷ್ಟಲ್ಲ, ನಾಲ್ಕರಷ್ಟು ಜಾಸ್ತಿಯಾಗಿದೆ, ಹೀಗಾಗಿ ಹಿಂದಿನ ಬಡ್ಜೆಟ್ಟಿನಲ್ಲಿ ನಮೂದಿಸಿರುವುದಕ್ಕಿಂತ ಬಹಳ ಮಿತಿಮೀರಿ ಈ ಖರ್ಚು ಏರಿದೆ. ಇಂಥ ಕಷ್ಟಪರಿಸ್ಥಿತಿಯಲ್ಲಿ ನಾವಿದ್ದೇವೆ. ಆದರೂ ಸಾಧ್ಯವಾದಷ್ಟೂ ಒದಗಿಸುವುದಕ್ಕೆ ಪ್ರಯತ್ನ ಮಾಡುತ್ತೇವೆಂದು ಹೇಳುತ್ತೇನೆ diet ಮತ್ತು clothing ವಿಚಾರದಲ್ಲಿ ಇನ್ನೊಂದು ವಿಚಾರ ಹೇಳಬೇಕಾಗಿದೆ. ಇವುಗಳ ಮಟ್ಟಿಗೆ ಸಾಮಾನ್ಯವಾಗಿ ನಾವೇನು ಒದಗಿಸಲು ಮಂಜೂರು ಮಾಡಿರುತ್ತೇವೆಯೋ ಅಷ್ಟಾದರೂ ಸರಿಯಾಗಿಗಿ quality ಯಲ್ಲಿ quantity ಯಲ್ಲಿಯೂ ಸರಬರಾಯಿಯಾಗುವಂತೆ ಆಚರಣೆಗೆ ತರಬೇಕೆಂದು ಮಾಡಿದ್ದೇವೆ. ಈ ವಿಚಾರದಲ್ಲಿ ಈಗ ಕೆಲವು ಆಸ್ಪತ್ರೆಗಳಲ್ಲಿ ಆಕ್ಷೇಪಣೆಗಳು ಬಂದಿರುವುದು ನಮ್ಮ ಗಮನಕ್ಕೆ ಬಂದಿದೆ.

**ಶ್ರೀ ಎಚ್.ಬಿ. ಗುಂಡಪ್ಪಗೌಡರು:-** ಹೌದು quality ಮತ್ತು quantity ಯನ್ನು ತಾವು ensure ಮಾಡಬೇಕಾದ್ದು ಅವಶ್ಯಕ.

**ಶ್ರೀ ಕೆ. ಚೆಂಗಲರಾಯರೆಡ್ಡಿಯವರು:-** ಆ ವಿಚಾರದಲ್ಲಿಯೇ ತಕ್ಕ ಬಂದೋಬಸ್ತು ಮಾಡುವುದಕ್ಕೆ ಪ್ರಯತ್ನ ಮಾಡುತ್ತೇವೆ. ಒಟ್ಟಿನಲ್ಲಿ ಈಗಿರತಕ್ಕ ಅನಾನುಕೂಲಗಳು ಸರ್ಕಾರದವರ ಗಮನಕ್ಕೆ ಬಂದಿದೆ. ಅವುಗಳನ್ನೆಲ್ಲಾ ತಪ್ಪಿಸುವುದಕ್ಕೆ ಸಾಕಷ್ಟು ಪ್ರಯತ್ನ ಮಾಡುತ್ತೇವೆ. ಈ ವಿಷಯದಲ್ಲಿ ಇರತಕ್ಕ ಅನಿವಾರ್ಯಗಳನ್ನೂ ತಮಗೆ ತಿಳಿಸಿದ್ದೇನೆ. ಮುಂದಿನ ಬಡ್ಜೆಟ್ ಅಧಿವೇಶನದಲ್ಲಿ ಈ ವಿಚಾರಕ್ಕೆ ಮುಖ್ಯವಾಗಿ ಗಮನ ಕೊಡಬೇಕಾಗಿ ಬರುತ್ತದೆ. ಆದ್ದರಿಂದ ಜನಾಬ್ ಇಮಾಂರವರು ಹೇಳಿರತಕ್ಕ ವಿಷಯಗಳನ್ನೆಲ್ಲಾ ಮನಸ್ಸಿನಲ್ಲಿಟ್ಟುಕೊಂಡು ಅದನ್ನು ಸಾಧ್ಯವಾದಷ್ಟು ನಿವಾರಿಸುವುದಕ್ಕೆ ಪ್ರಯತ್ನ ಪಡುತ್ತೇವೆಂಬ ಭರವಸೆಯ ಮೇಲೆ ಅವರು ತಮ್ಮ ಸೂಚನೆಯನ್ನು ವಾಪಸು ತೆಗೆದುಕೊಳ್ಳಬೇಕೆಂದು ಕೇಳಿಕೊಳ್ಳುತ್ತೇನೆ.

## 10. ಶ್ರೀ ಟಿ. ಸಿದ್ದಲಿಂಗಯ್ಯ ಅವರ ರಾಜೀನಾಮೆ ಕುರಿತು

## (ವಿಧಾನಸಭಾ ಕಲಾಪ 31 ಜನವರಿ 1951)

**ಶ್ರೀ ಕೆ. ಚೆಂಗಲರಾಯರೆಡ್ಡಿ:-**

ಎ) ಅವರು ಸಚಿವ ಸ್ಥಾನಕ್ಕೆ ರಾಜಿನಾಮೆ ನೀಡಿರುವುದು ನಿಜ.

ಬಿ) ಅವರ ರಾಜಿನಾಮೆಯ ಕಾರಣಗಳನ್ನು ಸರ್ಕಾರವು ಬಹಿರಂಗಪಡಿಸಬೇಕಾದ್ದಿಲ್ಲ.

**ಶ್ರೀ ಜನಾಬ್ ಜೆ. ಮೊಹಮದ್ ಇಮಾಂ:-** ಸಚಿವ ಮಂಡಲವು ಯಾವ ಸದನಕ್ಕೆ ಜವಾಬ್ದಾರವಾಗಿದೆಯೋ ಅಂತಹ ಸದನಕ್ಕೆ ಕಾರಣಗಳನ್ನು ತಿಳಿಸುವುದು ಮುಖ್ಯಮಂತ್ರಿಗಳ ಅಥವಾ ಸಚಿವ ಮಂಡಲದ ಕರ್ತವ್ಯವಲ್ಲವೆ?

**ಶ್ರೀ ಕೆ. ಚೆಂಗಲರಾಯರೆಡ್ಡಿ:-** ಇದು ಶಾಸನಬದ್ಧ ಬಾಧ್ಯತೆ ಏನೂ ಅಲ್ಲ.

**ಜನಾಬ್ ಮೊಹಮದ್ ಇಮಾ:-** ಸದನದ ಸದಸ್ಯರಿಗೆ ಇಂತಹ ಕಾರಣಗಳನ್ನು ತಿಳಿಸಬಾರದು ಎಂಬ ಬಗ್ಗೆ ಶಾಸನಾತ್ಮಕ ನಿಷೇಧವೇನಾದರೂ ಇದೆಯೆ?

**ಶ್ರೀ ಕೆ. ಚೆಂಗಲರಾಯರೆಡ್ಡಿ:-** ಶಾಸನಾತ್ಮಕ ನಿಷೇಧವೇನೂ ಇಲ್ಲ.

**ಜನಾಬ್ ಜೆ. ಮೊಹಮದ್ ಇಮಾಂ:-** ಮಾಹಿತಿಯನ್ನು ತಿಳಿಯುವುದು ಈ ಸದನದ ಹಕ್ಕಲ್ಲವೆ?

**ಶ್ರೀ ಕೆ. ಚೆಂಗಲರಾಯರೆಡ್ಡಿ:-** ರಾಜಿನಾಮೆ ನೀಡಿದ ಯಾವುದೇ ಸಚಿವರಾಗಲೀ ವಿವರಣೆಯನ್ನು ಕೊಡುವುದು ಅವರಿಗೇ ಸೇರಿದ್ದು ಮತ್ತು ಇಂತಹ ವಿವರಗಳಿಗೆ ಉತ್ತರ ನೀಡುವ ಅಧಿಕಾರವೂ ಕೂಡ ಇತರ ಸಚಿವರಿಗೆ ಸೇರಿದೆ. ಅದು ಈ ಸದನದ ನೆಲೆಯಲ್ಲಿಯೇ ನಡೆಯಬೇಕು.

**ಜನಾಬ್ ಜೆ. ಮೊಹಮದ್ ಇಮಾಂ:-** ಈ ಸಂಬಂಧವಾಗಿ ಸ್ವತಃ ತಾವೇ ಹೇಳಿಕೆ ನೀಡುವುದಕ್ಕೆ ಮಾನ್ಯ ಮುಖ್ಯಮಂತ್ರಿಗಳು ಬಾಧ್ಯಸ್ಥರಲ್ಲವೆ?

**ಶ್ರೀ ಕೆ. ಚೆಂಗಲರಾಯರೆಡ್ಡಿ:-** ಹಾಗಿರಬೇಕೆಂದೇನೂ ಇಲ್ಲ.

**ಜನಾಬ್ ಜೆ. ಮೊಹಮದ್ ಇಮಾಂ:-** ಕೊನೆಯ ಪಕ್ಷ ಜನರಿಗೆ ಜವಾಬ್ದಾರರಾಗಿರತಕ್ಕ ಮಂತ್ರಿಯೊಬ್ಬರು ಯಾವ ಕಾರಣಕ್ಕಾಗಿ ರಾಜೀನಾಮೆ ನೀಡಿದರು ಎಂಬುದನ್ನು ಜನರಾದರೂ ತಿಳಿದುಕೊಳ್ಳಬಹುದಲ್ಲವೆ?

**ಶ್ರೀ ಕೆ. ಚೆಂಗಲರಾಯರೆಡ್ಡಿ:-** ಯಾವುದೇ ಸಚಿವರ ರಾಜಿನಾಮೆಗೆ ಕಾರಣಗಳನ್ನು ವಿವರಿಸಬೇಕೆಂಬುದು ಮಂತ್ರಿಗಳ ಬಾಧ್ಯತೆಯಾಗಲೀ ಕರ್ತವ್ಯವಾಗಲೀ ಅಲ್ಲ ಎಂದು ಈಗಾಗಲೇ ನಾನು ಹೇಳಿದ್ದೇನೆ.

ಶ್ರೀ ಹೆಚ್.ಎಂ. ಚನ್ನಬಸಪ್ಪ (ಮೈಸೂರು ಜಿಲ್ಲೆ-ಸಾಮಾನ್ಯ):- ಈ ರಾಜೀನಾಮೆಗೆ ಸಂಬಂಧಿಸಿದಂತೆ ಸರ್ಕಾರದ ಲೋಪದೋಷಗಳೇನಾದರೂ ಇವೆಯೆ?

ಶ್ರೀ ಕೆ. ಚೆಂಗಲರಾಯರೆಡ್ಡಿ:- ಈ ಪ್ರಶ್ನೆಯಲ್ಲಿ ಅರ್ಥವಿಲ್ಲ. ಈ ಪ್ರಶ್ನೆ ಉದ್ಭವಿಸುವುದಿಲ್ಲ ಎಂದು ಮಾನ್ಯ ಸಭಾಪತಿಯವರು ಹೇಳಿದ್ದನ್ನು ಕೇಳಿದೆ.

ಶ್ರೀ ಹೆಚ್.ಎಂ. ಚನ್ನಬಸಪ್ಪ:- ಸರ್ಕಾರದ ಯಾವುದಾದರೂ ಲೋಪದೋಷ ಈ ರಾಜಿನಾಮೆಗೆ ಕಾರಣವೆ?

ಶ್ರೀ ಕೆ. ಚೆಂಗಲರಾಯರೆಡ್ಡಿ:- ಇಲ್ಲಿ ಯಾವ ತಪ್ಪೂ ಇಲ್ಲ ಒಪ್ಪೂ ಇಲ್ಲ ಅಥವಾ ಯಾವುದೇ ತಪ್ಪೊಪ್ಪಿಗೆ ಇತ್ಯಾದಿ ಏನೂ ಇಲ್ಲ.

# 11. ಅಧಿಕಾರಿಗಳ ನಿವೃತ್ತಿಯ ಕಾಲ ವಿಸ್ತರಣೆ ಕುರಿತು

## ವಿಧಾನ ಸಭಾ ಕಲಾಪ ಜನವರಿ 31 - 1951

ಶ್ರೀ ಕೆ. ಚೆಂಗಲರಾಯರೆಡ್ಡಿ:- 55ನೇ ವಯಸ್ಸಿನಲ್ಲಿರುವ ಒಬ್ಬ ಸರ್ಕಾರೀ ಅಧಿಕಾರಿಯ ಸೇವೆಯನ್ನು ವಿಸ್ತರಿಸುವ ಸಂದರ್ಭದಲ್ಲಿ ಸರ್ಕಾರವು ಅನೇಕ ಅಂಶಗಳನ್ನು ಗಮನದಲ್ಲಿರಿಸಿಕೊಂಡಿರುತ್ತದೆ. ಈ ಅನುಚ್ಛೇದದ ಸಾಮಾನ್ಯ ನಿಯಮವೇನೆಂದರೆ ಒಬ್ಬ ಅಧಿಕಾರಿಯು ತನ್ನ 55ನೇ ವಯಸ್ಸನ್ನು ತಲುಪಿದ್ದರೂ ಸಹ ಆತನನ್ನು ನಿವೃತ್ತಿ ಮಾಡುವುದಕ್ಕೆ ಸರಿಯಾದ ಕಾರಣವಿಲ್ಲದಿದ್ದಲ್ಲಿ ಆತನ 60ನೇ ವಯಸ್ಸಿನ ತನಕವೂ ಆತನ ಸೇವೆಯನ್ನು ವಿಸ್ತರಿಸಬಹುದು. ಆದರೆ ಅಧಿಕಾರಿಯು ತನ್ನ ಆಯ್ಕೆಗನುಗುಣವಾಗಿ ತನ್ನನ್ನು 55ನೇ ವಯಸ್ಸಿಗೇ ನಿವೃತ್ತಿ ಮಾಡುವಂತೆ ಸರ್ಕಾರವನ್ನು ಕೇಳಬಹುದು. ಈ ನಿಯಮ ಅನ್ವಯಿಸುತ್ತದೆ. ಕೈಪಿಡಿಯಲ್ಲಿನ ಅನುಚ್ಛೇದವು ಆ ರೀತಿ ಇದ್ದರೂ ಸಹ ಅಧಿಕಾರಿಗಳು 55ನೇ ವಯಸ್ಸು ತಲುಪಿದ ಕೂಡಲೇ ಅವರನ್ನು ನಿವೃತ್ತಿಗೊಳಿಸುವುದು ಸರ್ಕಾರದ ಸಾಮಾನ್ಯ ನೀತಿ ಎಂಬುದನ್ನು ನಾನು ಒಪ್ಪುತ್ತೇನೆ. ಈ ಪ್ರಕರಣಗಳು ನಮ್ಮ ಮುಂದೆ ಬಂದಾಗ ನಾವು ಅನೇಕ ರೀತಿಯಲ್ಲಿ ಅದನ್ನು ಪರಿಶೀಲಿಸುತ್ತೇವೆ. ತಾಂತ್ರಿಕ ಇಲಾಖೆಯ ಒಬ್ಬ ವ್ಯಕ್ತಿಯನ್ನು ಮುಂದುವರಿಸುವ ಅಗತ್ಯತೆ. ಯಾವುದೋ ಒಂದು ನಿರ್ದಿಷ್ಟ ನೀತಿ ಜಾರಿಯಲ್ಲಿದ್ದು ಅದನ್ನು ಒಂದು ಹಂತಕ್ಕೆ ತರಬೇಕಾದ ಸಂದರ್ಭದಲ್ಲಿ ಹೊಸ ಅಧಿಕಾರಿಯೊಬ್ಬನಿಗೆ ಅದನ್ನು ಪೂರ್ಣಗೊಳಿಸುವುದು ಕಷ್ಟವಾಗಬಹುದು. ಅಂತಹ ಸಂದರ್ಭದಲ್ಲಿ ಸಧ್ಯದಲ್ಲಿರುವ ಅಧಿಕಾರಿಯನ್ನೇ ಮುಂದುವರೆಸಲಾಗುವುದು. ಇನ್ನು ಕೆಲವು ಸಂದರ್ಭಗಳಲ್ಲಿ ಅಧಿಕಾರಿಯೊಬ್ಬನು ದೈಹಿಕವಾಗಿ ದೃಢವಾಗಿದ್ದು ಮಾನಸಿಕವಾಗಿ ಚುರುಕಾಗಿದ್ದು ತೃಪ್ತಿಕರವಾಗಿ ಕಾರ್ಯನಿರ್ವಹಿಸುತ್ತಿದ್ದರೆ ಅಂತಹ ಸಂದರ್ಭಗಳಲ್ಲಿಯೂ ಕೆಲವೊಮ್ಮೆ ಅವರ ಸೇವೆಯನ್ನು ಒಂದು ಅಥವಾ ಎರಡು ವರ್ಷಗಳ ಅವಧಿಗೆ ವಿಸ್ತರಿಸುವುದುಂಟು. ಆಯಾ ಸಂದರ್ಭಕ್ಕನುಗುಣವಾಗಿ ಇಂತಹ ಕೆಲವು ಅಂಶಗಳನ್ನು ಸರ್ಕಾರವು ಗಮನಕ್ಕೆ ತೆಗೆದುಕೊಳ್ಳುತ್ತದೆ. ಈ ಅಧಿಕಾರಿಗಳ ಸೇವೆಯನ್ನು ವಿಸ್ತರಿಸುವ ಸಂದರ್ಭದಲ್ಲಿ ಯಾವುದೇ ವೈಯಕ್ತಿಕ ಅಂಶಗಳ ಪ್ರಭಾವ ಇರುವುದಿಲ್ಲ.

ಶ್ರೀ ಎಂ. ಗೋವಿಂದರೆಡ್ಡಿ:- ಈ ಅನುಚ್ಛೇದದ ಪ್ರಕಾರ, ಈಗಾಗಲೇ ಸೇವೆಯಿಂದ ನಿವೃತ್ತರಾದ ಅಧಿಕಾರಿಗಳ ಮರುನೇಮಕಾತಿಗೆ ಅವಕಾಶವಿದೆಯೆ?

ಶ್ರೀ ಕೆ. ಚೆಂಗಲರಾಯರೆಡ್ಡಿ:- ಈಗಾಗಲೇ ನಿವೃತ್ತರಾದ ಅಧಿಕಾರಿಗಳನ್ನು ಒಂದು ನಿರ್ದಿಷ್ಟ ಅವಧಿ ಅಥವಾ ವಿಶೇಷ ಆಧಾರದ ಮೇಲೆ ಮರುನೇಮಕ ಮಾಡಿಕೊಳ್ಳುವುದು ಸರ್ಕಾರಕ್ಕೇ ಸೇರಿದ ವಿಷಯ.

ಸಭಾಪತಿ:- ನಿವೃತ್ತ ಅಧಿಕಾರಿಗಳ ನೇಮಕಾತಿಯ ಪ್ರಶ್ನೆ ಈ ಸಂದರ್ಭದಲ್ಲಿ ಉದ್ಭವಿಸುವುದಿಲ್ಲ.

ಶ್ರೀ ಎಲ್.ಎಚ್. ತಿಮ್ಮಾಬೋಯಿಯವರು(ಚಿಕ್ಕಮಗಳೂರು ಜಿಲ್ಲೆ-ನಿಮ್ನ ಪಂಗಡ)

ರಿಟೈರ್ ಆದ ಆಫೀಸರುಗಳನ್ನು ಅಡ್ವೈಜರ್ ಆಗಿ ತೆಗೆದುಕೊಳ್ಳುವುದಕ್ಕೆ ಅವಕಾಶವಿದೆಯೆ?

ಸಭಾಪತಿ:- ಪೂರಕ ಪ್ರಶ್ನೆ ಇಲ್ಲಿಗೆ ಸಂಬಂಧಿಸುವುದಿಲ್ಲ ಎಂದು ನಾನಾಗಲೇ ಹೇಳಿದೆ.

## 12. ಕನ್ನಡ ಮಾಧ್ಯಮದಲ್ಲಿ ಶಿಕ್ಷಣ ಕುರಿತು

### ವಿಧಾನಸಭಾ ಕಲಾಪ, 1 ಫೆಬ್ರವರಿ 1951

ಶ್ರೀ ಎಂ.ಸಿ. ಶಿವಾನಂದ ಶರ್ಮ (ಬೆಂಗಳೂರು ಜಿಲ್ಲೆ-ಸಾಮಾನ್ಯ):- ಸರ್ಕಾರ ಈ ಕೆಳಕಂಡ ಮಾಹಿತಿ ಕೊಡುವುದೆ?

ಎ) ರಾಜ್ಯದ ಶಿಕ್ಷಣ ಸಂಸ್ಥೆಗಳಲ್ಲಿ ಕನ್ನಡವನ್ನು ಶಿಕ್ಷಣ ಮಾಧ್ಯಮವಾಗಿ ಎಂದಿನಿಂದ ಜಾರಿಗೆ ತರಲಾಯಿತು?

ಬಿ) ಯಾವ ಪರಿಸ್ಥಿತಿಯು ಹಿನ್ನೆಲೆಯಲ್ಲಿ ಕನ್ನಡವನ್ನು ಶಿಕ್ಷಣ ಮಾಧ್ಯಮವಾಗಿ ಜಾರಿಗೊಳಿಸಲಾಯಿತು?

ಸಿ) ಎಷ್ಟು ಶಾಲೆಗಳಲ್ಲಿ ಸಂಪೂರ್ಣವಾಗಿ ಕನ್ನಡವನ್ನು ಶಿಕ್ಷಣ ಮಾಧ್ಯಮವಾಗಿ ಜಾರಿಗೆ ತರಲಾಗಿದೆ? (ಅಂತಹ ಶಿಕ್ಷಣ ಸಂಸ್ಥೆಗಳ ಹೆಸರನ್ನು ಕೊಡಬಹುದು).

ಡಿ) ಕನ್ನಡವನ್ನು ಶಿಕ್ಷಣ ಮಾಧ್ಯಮವಾಗಿ ಜಾರಿಗೆ ತಂದೇ ಇಲ್ಲದಂತಹ ಪ್ರೌಢಶಾಲೆಗಳು ರಾಜ್ಯದಲ್ಲಿ ಇವೆಯೆ? ಹಾಗಿದ್ದಲ್ಲಿ ಅವು ಯಾವುವು?

ಇ) ತಮ್ಮ ನೀತಿ ಅಪೇಕ್ಷಿತ ಫಲಿತಾಂಶ ನೀಡಿದೆ ಎಂಬ ತೃಪ್ತಿ ಅವರಿಗಿದೆಯೆ?

**ಶ್ರೀ ಕೆ. ಚೆಂಗಲರಾಯರೆಡ್ಡಿ (ಮುಖ್ಯಮಂತ್ರಿ) :-**

ಎ) 1937ರಲ್ಲಿ, ಪ್ರೌಢಶಾಲೆಗಳಿಗೆ ಸಂಬಂಧಿಸಿದಂತೆ

ಬಿ) ಒಂದಕ್ಕಿಂತ ಹೆಚ್ಚಿನ ಸೆಕ್ಷನ್‌ಗಳಿರುವ ಅನೇಕ ದೊಡ್ಡ ಪ್ರೌಢಶಾಲೆಗಳಲ್ಲಿ ಕನ್ನಡ ಮಾತೃಭಾಷೆಯಾಗಿಲ್ಲದವರ ಅನುಕೂಲಕ್ಕಾಗಿ ಎಲ್ಲ ಆಯ್ಕೆ ವಿಷಯಗಳನ್ನೂ ಇಂಗ್ಲೀಷಿನಲ್ಲಿ ಭೋದಿಸಿಬೇಕು ಎಂಬ ಮಿತಿಗೆ ಕನ್ನಡ ಮಾಧ್ಯಮದ ಅಳವಡಿಕೆ ಒಳಪಟ್ಟಿತ್ತು. ಆದರೆ ಪ್ರತಿಯೊಂದು ಇಯತ್ತೆಯಲ್ಲಿಯೂ ಕೇವಲ ಒಂದು ಸೆಕ್ಷನ್‌ನ್ನು ಮಾತ್ರ ಹೊಂದಿರುವ ಪ್ರೌಢಶಾಲೆಗಳಲ್ಲಿ ಇಂಗ್ಲೀಷ್ ಮಾತ್ರವೇ ಶಿಕ್ಷಣ ಮಾಧ್ಯಮವಾಗಿರುತ್ತದೆ.

ಸಿ) ಯಾವುದೂ ಇಲ್ಲ.

ಡಿ) ಹೌದು, ಪಟ್ಟಿಯ ಪ್ರತಿಯನ್ನು ಲಗತ್ತಿಸಿದೆ.

ಇ) ಹೌದು, ಸ್ವಲ್ಪಮಟ್ಟಿಗೆ.

## 13. ಪ್ರಶ್ನೆಗಳಿಗೆ ಉತ್ತರಗಳನ್ನು ಹಾಗೂ ಬಜೆಟ್ ಅಂದಾಜಿನ ಪ್ರತಿಗಳನ್ನು ಸದಸ್ಯರಿಗೆ ತಕ್ಷಣವೇ ಒದಗಿಸುವ ಬಗ್ಗೆ.

### ವಿಧಾನ ಸಭಾ ಕಲಾಪ - ಫೆಬ್ರುವರಿ 1, 1951

**ಶ್ರೀ ಕೆ. ಚೆಂಗಲರಾಯರೆಡ್ಡಿ:-** ಸನ್ಮಾನ್ಯ ಸದಸ್ಯರು ಸೂಚನೆ ಕಳಿಸಿದ ಎಲ್ಲ ಪ್ರಶ್ನೆಗಳಿಗೂ ಉತ್ತರ ಕೊಡಬೇಕೆಂಬುದು ಸರ್ಕಾರದ ಆಪೇಕ್ಷೆಯೇ ಆಗಿದೆ. ಪ್ರಶ್ನೆಗಳಿಗೆ ಉತ್ತರಗಳನ್ನು ಕೊಡುವುದನ್ನು ಮುಂದೂಡುವ ಉದ್ದೇಶವಾಗಲೀ, ಅಪೇಕ್ಷೆಯಾಗಲೀ ಸರ್ಕಾರಕ್ಕಿಲ್ಲ. ಸನ್ಮಾನ್ಯ ಸದಸ್ಯರಿಗೆ ತಿಳಿದಿರುವಂತೆ, ಕೆಲವೊಂದು ಪ್ರಶ್ನೆಗಳಿಗೆ ಮಾಹಿತಿಯನ್ನು ದೊರಕಿಸಿಕೊಳ್ಳಲು ಬಹಳ ಕಾಲಾವಕಾಶ ಬೇಕಾಗುತ್ತದೆ. ಉದಾಹರಣೆಗೆ ಈ ಅಧಿವೇಶನದ ಸಮಯದಲ್ಲಿ ಕೆಲವೊಂದು ಪ್ರಶ್ನೆಗಳನ್ನು ಕೇಳಲಾಗಿದ್ದು ಅವುಗಳಿಗೆ ತೃಪ್ತಿಕರ ಉತ್ತರ ಕೊಡಬೇಕಾದರೆ ಮಾಹಿತಿ ಸಂಗ್ರಹಿಸುವುದಕ್ಕೆ ಎಂಟು ತಿಂಗಳಷ್ಟು ಕಾಲಾವಕಾಶವೂ ಬೇಕಾಗಬಹುದು. ಆದರೆ ಇನ್ನೂ ಕೆಲವು ಪ್ರಶ್ನೆಗಳಿಗೆ ಕೂಡಲೇ ಉತ್ತರ ಒದಗಿಸಬಹುದಾಗಿತ್ತು. ಅದನ್ನು ನಾನು ಒಪ್ಪಿಕೊಳ್ಳುತ್ತೇನೆ. ಹಾಗೆ ಉತ್ತರ ನೀಡಬಹುದಾದ ಒಂದೆರಡು ಪ್ರಶ್ನೆಗಳಿಗೆ ಸನ್ಮಾನ್ಯ ಸದಸ್ಯ ಶ್ರೀ ಎಲ್. ಸಿದ್ದಪ್ಪನವರು ಸದನದ ಗಮನ ಸೆಳೆದಿದ್ದಾರೆ. ಶಾಸನ ಸಭೆಯು ಕಛೇರಿಯು ಸರ್ಕಾರದ ಕಾರ್ಯದರ್ಶಿಗಳೊಂದಿಗೆ ನಿರಂತರ ಸಂಪರ್ಕವಿರಿಸಿಕೊಂಡಿದೆ; ಉತ್ತರಿಸಿದ ಅಥವಾ ಉತ್ತರ ಮುಂದೂಡಲಾದ ಪ್ರಶ್ನೆಗಳಿಗೆ ಉತ್ತರ ಕಳಿಸಿಕೊಡುವಂತೆ ಕಾರ್ಯದರ್ಶಿಗಳಿಗೆ ನೆನಪಿಸಲಾಗುತ್ತಿದೆ ನಮ್ಮ ಕಡೆಯಿಂದಲೂ ನಾವು ಈ ಬಗ್ಗೆ ಪ್ರಯತ್ನ ಮಾಡಿದ್ದೇವೆ. ಕಳೆದ ಎರಡು ಅಧಿವೇಶನಗಳಿಂದ ಮುಂದೂಡಿಕೊಂಡು ಬಂದ ಎಲ್ಲ ಪ್ರಶ್ನೆಗಳಿಗೂ ಈ ವೇಳೆಗೆ ಉತ್ತರ ನೀಡಬೇಕಾಗಿತ್ತು ಎಂದು ನಾನು ಅಂದುಕೊಂಡಿದ್ದೆ. ಮತ್ತು ವಿವರಣೆಯನ್ನು ಸದನದ ಮುಂದೆ ಮಂಡಿಸಬಹುದಾಗಿತ್ತು. ಆದರೆ 1950ರ ಬಜೆಟ್ ಅಧಿವೇಶನಕ್ಕೆ ಸಂಬಂಧಿಸಿದ 11 ಪ್ರಶ್ನೆಗಳು ಹಾಗೂ ಅದೇ ವರ್ಷದ ಆಗಸ್ಟ್-ಸೆಪ್ಟಂಬರ್ ಅಧಿವೇಶನದ ಪ್ರಶ್ನೆಗಳಿಗೆ ಇನ್ನೂ ಉತ್ತರಿಸಲಾಗದಿದ್ದು ನನಗೆ ವ್ಯಥೆ ಉಂಟುಮಾಡಿದೆ. ಈ ಬಗ್ಗೆ ನಾನು ಪರಿಶೀಲಿಸುತ್ತೇನೆ ಮತ್ತು ಸನ್ಮಾನ್ಯ ಸದಸ್ಯರಿಗೆ ಈ ಎಲ್ಲ ಪ್ರಶ್ನೆಗಳ ಉತ್ತರ ಆದಷ್ಟೂ ಬೇಗ ಲಭ್ಯವಾಗುವಂತೆ ಮಾಡುತ್ತೇನೆ. ಪ್ರಸ್ತುತ ಅಧಿವೇಶನಕ್ಕೆ ಸಂಬಂಧಿಸಿದಂತೆ ಸ್ಥಿತಿ ಅಷ್ಟೇನೂ ಕಳಪೆಯಾಗಿಲ್ಲ ಎಂದು ನಾನು ಭಾವಿಸುತ್ತೇನೆ. 201 ಪ್ರಶ್ನೆಗಳಲ್ಲಿ ನಾವು 169 ಪ್ರಶ್ನೆಗಳಿಗೆ ಉತ್ತರ ನೀಡಿದ್ದೇವೆ. ಇನ್ನೂ 32 ಪ್ರಶ್ನೆಗಳು ಬಾಕಿ ಇವೆ. ಈ 32ರಲ್ಲಿ ಕೆಲವು ಪ್ರಶ್ನೆಗಳಿಗೆ ಉತ್ತರ ದೊರಕಿಸಲು ತುಂಬ ಸಮಯ ಬೇಕು. ಕೆಲವು ಪ್ರಶ್ನೆಗಳಿಗೆ ಇಷ್ಟು ಹೊತ್ತಿಗೆ ಉತ್ತರ ಒದಗಿಸಬಹುದಾಗಿತ್ತು. ಇನ್ನೂ ಕೆಲವು ಪ್ರಶ್ನೆಗಳಿಗೆ ಸಮಾಧಾನಕರ ಉತ್ತರ ಕೊಡಬೇಕಾದರೆ ನಾನು ಭಾರತ ಸರ್ಕಾರದೊಂದಿಗೆ ವ್ಯವಹರಿಸಬೇಕಿದೆ.

ಇಲ್ಲಿ ಭಾರತೀಯ ಸಂವಿಧಾನದ 371ನೇ ಅನುಚ್ಛೇದದ ಅಡಿಯಲ್ಲಿರುವ Superintendence ಹಾಗೂ control ಗಳಿಗೆ ಸಂಬಂಧಿಸಿದ ಪ್ರಶ್ನೆಯನ್ನು ನೋಡೋಣ. ನಮ್ಮ ಮಟ್ಟಿಗೆ ಹೇಳುವುದಾದರೆ ನಮ್ಮ ಉತ್ತರಗಳು ಸಿದ್ಧವಾಗಿವೆ. ಆದರೆ ನಮ್ಮ ಹಾಗೂ ಭಾರತ ಸರ್ಕಾರದ ನಡುವೆ ನಡೆದ ಪತ್ರವ್ಯವಹಾರವನ್ನು ಮಂಡಿಸಬಹುದೋ ಬೇಡವೋ ಎಂಬ ಸಮಸ್ಯೆ ಎದುರಾಗಿದೆ.

ಆದ್ದರಿಂದ ಎಲ್ಲ ಪತ್ರವ್ಯವಹಾರವನ್ನು ಮಂಡಿಸಬಹುದು ಎಂಬ ಬಗ್ಗೆ ನಾವು ಭಾರತ ಸರ್ಕಾರದಿಂದ ಖಚಿತಪಡಿಸಿಕೊಳ್ಳಲು ಪ್ರಶ್ನಿಸಿದೆವು. ಅವರಿಂದ ಇನ್ನೂ ಅಂತಿಮ ಉತ್ತರ ಬಂದಿಲ್ಲ. ಈ ಕಾರಣದಿಂದಾಗಿಯೇ ಸಂವಿಧಾನಕ್ಕೆ ಸಂಬಂಧಿಸಿದ ಯಾವುದೇ ಪ್ರಶ್ನೆಗೂ ಈ ಸದನದಲ್ಲಿ ಉತ್ತರಿಸುವುದು ಸಾಧ್ಯವಾಗಿಲ್ಲ. ಈ ವಿಷಯದ ಬಗ್ಗೆ ಒಂದು ಹೇಳಿಕೆ ನೀಡುವ ಅವಕಾಶ ತೆಗೆದುಕೊಳ್ಳಬೇಕೆಂದಿದ್ದೆ. ಆದರೆ ಸದನದ ಮುಂದೆ ಆ ವ್ಯವಹಾರವನ್ನು ಮಂಡಿಸುವುದಕ್ಕೆ ಕಾಲ ಪಕ್ವವಾಗಿಲ್ಲ. ಭಾರತ ಸರ್ಕಾರ ತಿಳಿಸುವವರೆಗೂ ಈ ಪತ್ರ ವ್ಯವಹಾರವನ್ನು ಸಂಪೂರ್ಣವಾಗಿ ಸದನದಲ್ಲಿ ಮಂಡಿಸಲು ಸಾಧ್ಯವಾಗದು.

ಶ್ರೀ ಎಲ್. ಸಿದ್ದಪ್ಪ:- ಇಂತಹ ಪ್ರಕರಣಗಳು ಯಾವಾಗಲೂ ಎದುರಾಗುವಂಥದ್ದಲ್ಲ.

'ಈ ವಿಷಯದ ಬಗ್ಗೆ ಪತ್ರ ವ್ಯವಹಾರ ನಡೆಯುತ್ತಿದೆ ' ಎಂದು ನೀವು ಉತ್ತರಿಸಬಹುದಿತ್ತು.

ಶ್ರೀ ಕೆ. ಚೆಂಗಲರಾಯರೆಡ್ಡಿ:- ಸದಸನದ ಸದಸ್ಯರಿಗೆ ಅದರಿಂದ ಸಮಾಧಾನ ಸಿಗುವುದಾಗಿದ್ದರೆ ಹಾಗೇ ಮಾಡಬಹುದಿತ್ತು. ಉತ್ತರಗಳು ಹತ್ತು ದಿನದ ಹಿಂದೆಯೇ ಸಿದ್ಧವಾಗಿದ್ದವು. ಹಾಗೆಂದು ಹೇಳಲು ನನಗೂ ಬಹಳ ಸುಲಭವಾಗಿತ್ತು. ಆದರೆ ಯಾವ ರೀತಿಯ ವ್ಯವಹಾರ ನಡೆದಿದೆ ಎಂಬುದರ ಕಲ್ಪನೆ ಸದಸ್ಯರಿಗೆ ತಿಳಿಯಬೇಕು ಆಗ ಸದಸ್ಯರಿಗೂ ಸಹ ತಮ್ಮನ್ನು ವಿಶ್ವಾಸಕ್ಕೆ ತೆಗೆದುಕೊಳ್ಳಲಾಗಿದೆ ಎಂಬ ಭಾವನೆ ಮೂಡುತ್ತದೆ ಎಂದು ನಾನು ಯೋಚಿಸಿದೆ. ಈ ಹಿನ್ನೆಲೆಯಲ್ಲಿ ಉತ್ತರಗಳನ್ನು ಕೊಡಲಾಗಿಲ್ಲ. ನಾವು ತೃಪ್ತಿಕರವಾಗಿ ಉತ್ತರಿಸಲಾರದಂಥ ಕೆಲವು ಪ್ರಶ್ನೆಗಳಿವೆ. ಈ ಬಗ್ಗೆ ವಿರೋಧಿ ಗುಂಪಿನ ಬಗ್ಗೆ ನನ್ನದೊಂದು ದೂರಿದೆ. ನಾವು 169 ಪ್ರಶ್ನೆಗಳಿಗೆ ಉತ್ತರ ನೀಡಿದ್ದೇವೆ. ಆದರೆ ಸದನ ಇದರಲ್ಲಿ 50 ಅಥವಾ 60 ರಷ್ಟು ಪ್ರಶ್ನೆಗಳನ್ನೂ ಮುಗಿಸಿಲ್ಲ. ಉತ್ತರಗಳು ಮುದ್ರಣದಲ್ಲಿವೆ ಅಷ್ಟೆ. ಅದಕ್ಕೆ ಪೂರಕ ಉತ್ತರಗಳನ್ನು ಪಡೆದುಕೊಳ್ಳಲು ಹೋಗಿಲ್ಲ ಇದು ನಮ್ಮ ತಪ್ಪಲ್ಲ.

ಶ್ರೀ ಎಲ್. ಸಿದ್ದಪ್ಪ :- ಇದು ವಿರೋಧಿ ಗುಂಪಿನ ತಪ್ಪೂ ಅಲ್ಲ. ಯಾಕೆಂದರೆ ಈ ಗುಂಪಿನಲ್ಲಿರುವುದು ಆರೇ ಮಂದಿ.

ಶ್ರೀ ಕೆ. ಚೆಂಗಲರಾಯರೆಡ್ಡಿ:- ಆದ್ದರಿಂದಲೇ ನಾವು ಈಗ ಅನುಸರಿಸುತ್ತಿರುವ ವಿಧಾನವನ್ನು ಬದಲಾಯಿಸಬೇಕು ಎಂದು ಈ ಹಿಂದಿನ ಸಂದರ್ಭದಲ್ಲಿ ಸೂಚಿಸಿದ್ದು. ಪಾರ್ಲಿಮೆಂಟಿನಲ್ಲಿ ಮತ್ತು ಇತರ ಕೆಲವು ಅಸೆಂಬ್ಲಿಗಳಲ್ಲಿ ಪ್ರತಿದಿನ ಇಂತಿಷ್ಟು ಪ್ರಶ್ನೆಗಳನ್ನು ಪರಿಶೀಲಿಸಬೇಕು ಎಂದು ನಿಗದಿಸಲಾಗಿರುತ್ತದೆ. ಪ್ರತಿದಿನ, ಸಭೆ ಆರಂಭವಾಗುವ ಸುಮಾರು ಒಂದು ಗಂಟೆಗೆ ಮೊದಲು ಪ್ರಶ್ನೆಗಳ ಪಟ್ಟಿಯನ್ನು ಸದಸ್ಯರಿಗೆ ಕೊಡಲಾಗುತ್ತದೆ. ಅಲ್ಲಿರುವ ಎಲ್ಲ ಪ್ರಶ್ನೆಗಳನ್ನೂ ಪರಿಶೀಲಿಸಲಾಗುತ್ತದೆ. ಇಲ್ಲಿ ನಾವು ಒಂದು ಪ್ರಶ್ನೆಯನ್ನು ತೆಗೆದುಕೊಂಡರೆ.....

ಶ್ರೀ ಎಲ್. ಸಿದ್ದಪ್ಪ :- ಮಾನ್ಯ ಮುಖ್ಯಮಂತ್ರಿಗಳು ಸದನದ ಶಿಸ್ತನ್ನು ನೋಡಿಕೊಳ್ಳಬೇಕು ಎಂದು ನಾನು ಹೇಳುತ್ತೇನೆ.

**ಶ್ರೀ ಕೆ. ಚೆಂಗಲರಾಯರೆಡ್ಡಿ:-** ಇಲ್ಲಿ ನಾನು ನನ್ನ ಸದನ ಅಥವಾ ನಿಮ್ಮ ಸದನದ ಪ್ರತಿನಿಧಿಯಂತೆ ಮಾತಾಡುತ್ತಿಲ್ಲ. ಒಂದು ವಿಧಾನ ಅನುಸರಿಸಬೇಕು. ಹಾಗೆ ಮಾಡಿದಾಗ ಅದಷ್ಟು ಹೆಚ್ಚಿನ ಪ್ರಶ್ನೆಗಳಿಗೆ ಪೂರಕ ಉತ್ತರಗಳನ್ನು ಪಡೆದುಕೊಳ್ಳಲು ಸಾಧ್ಯವಾಗುತ್ತದೆ. ಸದಸ್ಯರು ಬೇಕಾದ ಮಾಹಿತಿ ಪಡೆದುಕೊಂಡಾಗುತ್ತದೆ ಎಂದಷ್ಟೇ ನಾನು ಹೇಳಿದ್ದು. ಕೆಲವೊಂದು ಪ್ರಶ್ನೆಗಳಿಗೆ ಪೂರ್ಣ ಮಾಹಿತಿ ನೀಡಬೇಕೆಂಬುದು ನನ್ನ ಉದ್ದೇಶವಾಗಿತ್ತು. ಆದರೆ ಅವುಗಳನ್ನು ಕೈಗೆತ್ತಿಕೊಳ್ಳಲು ಸಮಯವೇ ಆಗಲಿಲ್ಲ. ಆ ಪ್ರಶ್ನೆಗಳ ಬಗ್ಗೆ ಸದಸ್ಯರ ಮನಸ್ಸಿನಲ್ಲಿ ಇನ್ನೂ ಕೆಲವು ಸಂದೇಹಗಳು ಹಾಗೂ ತಪ್ಪು ಗ್ರಹಿಕೆಗಳು ಇರಬಹುದು. ಅವುಗಳಿಗೆ ಪೂರಕ ಉತ್ತರಗಳನ್ನು ನೀಡಬಹುದಿತ್ತು. ಇರಲಿ, ಅಸೆಂಬ್ಲಿಯ ನಡೆವಳಿಯ ನಿಯಮಗಳನ್ನು ರೂಪಿಸುವುದಕ್ಕೆಂದು ನೇಮಕವಾಗಿದ್ದ ವಿಶೇಷ ಸಮಿತಿ ನೀಡಿರುವ ಅಂಶಗಳನ್ನು ನಾವು ಪರಿಶೀಲಿಸಿಲಿದ್ದೇವೆ. ಅದನ್ನು ಕೈಗೆತ್ತಿಕೊಂಡಾಗ ಪ್ರಶ್ನೋತ್ತರ ವ್ಯವಹಾರದ ಬಗ್ಗೆ ತೃಪ್ತಿಕರ ವಿಧಾನವೊಂದು ರೂಪುಗೊಳ್ಳಬಹುದು. ಆದರಿಂದ ಸದಸ್ಯರಿಗೂ ಹಾಗೂ ವಿರೋಧಿ ಗುಂಪಿನವರಿಗೂ ಮತ್ತು ಸರ್ಕಾರಕ್ಕೂ ಸಮಾಧಾನವಾಗಬಹುದು ಎಂದು ಆಶಿಸುತ್ತೇನೆ.

**ಶ್ರೀ ಎಲ್ ಸಿದ್ದಪ್ಪ:-** ಈ ಅಧಿವೇಶನದಲ್ಲಿ ನಡೆವಳಿಯ ನಿಯಮಗಳನ್ನು ಪರಿಶೀಲಿಸಿದ್ದರೆ ಚೆನ್ನಾಗಿತ್ತು. ಮುಂದಿನ ಬಜೆಟ್ ಅಧಿವೇಶನದಲ್ಲಿ ಹೊಸ ನಿಯಮಗಳನ್ನು ಅಳವಡಿಸಬಹುದಿತ್ತು.

**ಕೆ. ಚೆಂಗಲರಾಯರೆಡ್ಡಿ:-** ಅದು ಸಾಧ್ಯವಿಲ್ಲ. ಏಕೆಂದರೆ ಮೊದಲು ಆ ನಿಯಮಗಳನ್ನು ಸದನದ ಮುಂದೆ ಮಂಡಿಸಬೇಕು. ಮುಂದಿನ ಬಜೆಟ್ ಅಧಿವೇಶನದಲ್ಲಿ ಅವುಗಳನ್ನು ಅಳವಡಿಸಿಕೊಳ್ಳುವ ಮೊದಲು ಅವುಗಳು ಅನುಮೋದನೆಯಾಗಬೇಕು.

**ಶ್ರೀ ಎಲ್. ಸಿದ್ದಪ್ಪ:-** ಆದರಿಂದ ನಮಗೆ ಹೆಚ್ಚು ಪ್ರಯೋಜನವಾಗದು. ಉದಾಹರಣೆಗೆ ಈಗಿರುವ ನಿಯಮಗಳ ಪ್ರಕಾರ ಕಟ್ ಮೋಷನ್‌ಗೆ ನಾಲ್ಕು ದಿನಗಳ ಅವಕಾಶ ಮಾತ್ರ ಇದೆ. ಆದರೆ ಪರಿಷ್ಕೃತ ನಿಯಮಗಳಲ್ಲಿ ಭಿನ್ನವಾದ ನಿಯಮವಿರುತ್ತದೆ. ಅದು ಆಡಳಿತಾತ್ಮಕ ಪ್ರಶ್ನೆಗಳ ಪರಿಶೀಲನೆಗೆ ಸಮೃದ್ಧ ಕಾಲಾವಕಾಶ ನೀಡುತ್ತದೆ.

**ಶ್ರೀ ಹೆಚ್.ಸಿ. ದಾಸಪ್ಪನವರು (ಹಣಕಾಸು ಮತ್ತು ಕೈಗಾರಿಕಾ ಸಚಿವರು):-** ನಿಮಗೆ ಕಟ್ ಮೋಷನ್‌ಗಳಿಗೆ ಹೆಚ್ಚು ದಿನಗಳು ಸಿಗುತ್ತವೆ.

**ಶ್ರೀ ಎಲ್. ಸಿದ್ದಪ್ಪ :-** ಈಗ ಕಟ್ ಮೋಷನ್‌ಗಳಿಗೆ ಹೆಚ್ಚು ದಿನ ಸಿಗುವುದು ಸಾಧ್ಯವಿಲ್ಲ, ಏಕೆಂದರೆ ಇದು 'ನಾಲ್ಕು ದಿನ ಮೀರತಕ್ಕದ್ದಲ್ಲ' ಎಂಬ ನಿಯಮವಿದೆ. ನಾನು ಇನ್ನೊಂದು ಅಂಶವನ್ನು ಮಾನ್ಯ ಹಣಕಾಸು ಮಂತ್ರಿಗಳು ಹಾಗೂ ಮಾನ್ಯ ಮುಖ್ಯಮಂತ್ರಿಗಳ ಗಮನಕ್ಕೆ ತರಬಯಸುತ್ತೇನೆ- ಮದ್ರಾಸಿನಲ್ಲಿ ಸದಸ್ಯರಿಗೆ ಬಜೆಟ್ ಅಂದಾಜುಗಳನ್ನು ಮುಂಚಿತವಾಗಿಯೇ ಒದಗಿಸುವ ರೂಢಿ ಇದೆ. ಸಾರ್ವಜನಿಕ ಲೆಕ್ಕಪತ್ರಗಳ ಸಮಿತಿ ವರದಿಯನ್ನು ನೀವು ಮುಂಚಿತವಾಗಿಯೇ ಸದಸ್ಯರಿಗೆ ನೀಡಿದ್ದಿರಿ ಮತ್ತು ಅದರೊಂದಿಗೆ ಇದನ್ನು ರಹಸ್ಯ ಎಂದು ಪರಿಗಣಿಸತಕ್ಕದ್ದು ಎಂಬ ಸೂಚನೆಯ ಚೀಟಿ ಇದ್ದಿತು. ಅದೇ ರೀತಿ ಬಜೆಟ್ ಅಂದಾಜುಗಳ ಪ್ರತಿಗೂ ನೀವು ಚೀಟಿ ಅಂಟಿಸಿ ಇದನ್ನು ರಹಸ್ಯ ಎಂದು ಪರಿಗಣಿಸಬೇಕು ಎಂದು ಸೂಚಿಸಬಹುದು. ನಾವು ಅದನ್ನು ರಹಸ್ಯ ಎಂದೇ ಪರಿಗಣಿಸುತ್ತೇವೆ ಮತ್ತು ಆ ಬಗ್ಗೆ ಭರವಸೆ ನೀಡುತ್ತೇವೆ ಬಜೆಟ್

ಅಂದಾಜುಗಳನ್ನು ನಮಗೆ ಮುಂಚಿತವಾಗಿಯೇ ನೀಡಿದರೆ ಬಜೆಟ್ಟನ್ನು ಸರಿಯಾಗಿ ಅಧ್ಯಯನಿಸುವುದಕ್ಕೆ ನಮಗೆ ಸ್ವಲ್ಪ ಕಾಲಾವಕಾಶ ಸಿಗುತ್ತದೆ. ಅದಕ್ಕೆ ಬದಲು ನಾವು ಇಲ್ಲಿಗೆ ಬಂದ ನಂತರ ಮತ್ತು ಇತರೆ ಕೆಲಸಗಳಲ್ಲಿ ತೊಡಗಿದ್ದಾಗ ಕೊಟ್ಟರೆ ನಮಗೆ ಅದನ್ನು ಅಧ್ಯಯನಿಸುವುದಕ್ಕೆ ಸಾಕಷ್ಟು ಕಾಲಾವಕಾಶ ಸಿಗುವುದಿಲ್ಲ.

ಶ್ರೀ ಹೆಚ್. ಸಿ. ದಾಸಪ್ಪ:- ಆದರೆ ಸಾಮಾನ್ಯವಾಗಿ ಬಜೆಟ್ ಮಂಡನೆಗೂ ಅದರ ಚರ್ಚೆಯನ್ನು ಕೈಗೆತ್ತಿಕೊಳ್ಳುವುದಕ್ಕೂ ಮಧ್ಯೆ ಕಾಲಾವಕಾಶ ಇರುತ್ತದೆ.

ಶ್ರೀ ಎಲ್. ಸಿದ್ದಪ್ಪ:- ಹೌದು, ಆದರೆ ಇಲ್ಲಿದ್ದಾಗ ನಾವು ಈ ಸದನದ ನಡೆವಳಿಗಳಿಗೆ ಸಂಬಂಧಿಸಿದ ಇನ್ನಿತರ ಕೆಲಸದಲ್ಲಿ ತೊಡಗಿರುತ್ತೇವೆ. ಹೀಗಾಗಿ ಬಜೆಟ್ ಪ್ರಸ್ತಾಪಗಳಿಗೆ ಸಾಕಷ್ಟು ಕಾಲ ಸಿಗುವುದಿಲ್ಲ.

ಶ್ರೀ ಎಸ್. ರಂಗರಾಮಯ್ಯ (ಮೈಸೂರು ಜಿಲ್ಲೆ-ಸಾಮಾನ್ಯ):- ಮಾನ್ಯರೆ, ನಿಲುವಳಿಗೆ ಸಂಬಂಧಿಸಿದಂತೆ ಪ್ರತಿಯೊಂದು ಅಧಿವೇಶನದಲ್ಲಿಯೂ ಅನೇಕ ನಿಲುವಳಿಗಳ ಸೂಚನೆಯಿದ್ದರೂ ಮೂರು ಅಥವಾ ನಾಲ್ಕಕ್ಕಿಂತ ಹೆಚ್ಚಿಗೆ ಪರಿಶೀಲಿಸುವುದಕ್ಕಾಗುವುದಿಲ್ಲ. ಈ ಸಲವೂ ಕೂಡ ಸುಮಾರು 65 ನಿಲುವಳಿಗಳಿವೆ. ಆದರೆ ನಾಲ್ಕಕ್ಕಿಂತ ಹೆಚ್ಚನ್ನು ಮುಗಿಸಲು ಸಾಧ್ಯವಾಗುವುದಿಲ್ಲ. ಇತರ ನಿಲುವಳಿಗಳಿಗೆ ಸಂಬಂಧಿಸಿದಂತೆ ಸರ್ಕಾರವಾಗಲೀ ಸದಸ್ಯರಾಗಲೀ ಆ ನಿಲುವಳಿಗಳ ಸ್ವರೂಪಕ್ಕೆ ತಕ್ಕಂತೆ ಹಾಗೂ ಅದನ್ನು ಮಂಡಿಸಿದವರ ಉದ್ದೇಶವನ್ನವಲಂಬಿಸಿ ಪರಿಶೀಲನೆಗೆ ತೆಗೆದುಕೊಳ್ಳಬೇಕಾಗುತ್ತದೆ. ಅವುಗಳನ್ನು ಪರಿಶೀಲಿಸಿದ ನಂತರ ಅವುಗಳ ಬಗ್ಗೆ ಯಾವ ಕ್ರಮ ಕೈಗೊಳ್ಳಲಾಯಿತು ಎಂಬುದನ್ನು ಮುಂದಿನ ಅಧಿವೇಶನದಲ್ಲಿ ವರದಿ ಮಾಡಬಹುದು.

ಶ್ರೀ ಕೆ. ಚೆಂಗಲರಾಯರೆಡ್ಡಿ:- ಶ್ರೀ ಎಲ್. ಸಿದ್ದಪ್ಪನವರು ಮಾಡಿಕೊಂಡ ಮನವಿಗೆ ಸಂಬಂಧಿಸಿದಂತೆ ನಾನು ಒಂದು ಮಾತು ಹೇಳಲೇ? ಬಜೆಟ್ ಅಂದಾಜುಗಳನ್ನು ಬಜೆಟ್ ಅಧಿವೇಶನ ಆರಂಭವಾಗುವ ಮೊದಲ ದಿನದ ಒಂದು ವಾರಕ್ಕೆ ಮುಂಚಿತವಾಗಿ ಸದಸ್ಯರಿಗೆ ಒದಗಿಸಬೇಕು ಎಂದು ಪ್ರಸ್ತಾಪಿಸಲಾಯಿತು. ಇತರ ರಾಜ್ಯಗಳು ಮತ್ತು ಪಾರ್ಲಿಮೆಂಟಿನಲ್ಲಿ ಯಾವ ಪದ್ಧತಿ ಇದೆಯೋ ನನಗೆ ಗೊತ್ತಿಲ್ಲ. ಒಂದೆರಡು ಸಂದರ್ಭಗಳಲ್ಲಿ ಮಾತ್ರ ಅವುಗಳನ್ನು ಮುಂಚಿತವಾಗಿ ನೀಡಲಾಗುತ್ತದೆ ಎಂದು ತಿಳಿದುಬಂತು. ಸರಿಯಾದ ಪದ್ಧತಿ ಏನು ಎಂಬುದನ್ನು ನಾವು ತಿಳಿದುಕೊಳ್ಳುತ್ತೇವೆ.

ಶ್ರೀ ಎಲ್. ಸಿದ್ದಪ್ಪ :- ಸನ್ಮಾನ್ಯ ಮಿತ್ರರಾದ ಶ್ರೀ ಡಿ. ಎಚ್. ಚಂದ್ರಶೇಖರಯ್ಯ ಅವರ ಹತ್ತಿರ ಮದ್ರಾಸ್ ರಾಜ್ಯದ ಬಜೆಟ್ಟಿನ ಒಂದು ಪ್ರತಿ ಇದೆ.

ಶ್ರೀ ಕೆ. ಚೆಂಗಲರಾಯರೆಡ್ಡಿ:- ನೋಡೋಣ ಯಾವ ರೀತಿ ಇದೆ ಎಂದು. ಸದಸ್ಯರಿಗೆ ಮುಂಚಿತವಾಗಿಯೇ ಬಜೆಟ್ ನೀಡಬೇಕೆಂದಿದ್ದರೆ ಬಜೆಟ್ ಅಧಿವೇಶನವನ್ನು ಒಂದು ವಾರದಷ್ಟು ಕಾಲ ಮುಂದೆ ಹಾಕಬೇಕಾಗಬಹುದು.

ಶ್ರೀ ಎಲ್. ಸಿದ್ದಪ್ಪ:- ಅದಕ್ಕೆ ನಮ್ಮ ಒಪ್ಪಿಗೆ ಇದೆ.

ಶ್ರೀ ಕೆ. ಚೆಂಗಲರಾಯರೆಡ್ಡಿ:- ಇದನ್ನು ನಾವು ಪರಿಶೀಲಿಸಬೇಕಾಗುತ್ತದೆ. ಖಚಿತವಾಗಿ ಹೀಗೆ ಆಗುತ್ತದೆಂದು ಹೇಳಲಾರೆ. ಮಾನ್ಯ ಹಣಕಾಸು ಮಂತ್ರಿಗಳಿಗೆ ಅದು ಗೊತ್ತು. ಮಾರ್ಚ್ 31ರೊಳಗೆ ಬಜೆಟ್ ಅಂತಿಮವಾಗಿ ಸಿದ್ಧವಾಗಬೇಕು ಮತ್ತು ಏಪ್ರಿಲ್ 1ರ ಹೊತ್ತಿಗೆ Appropriation Bill ನ್ನು ಅನುಮೋದಿಸಬೇಕು ಎಂಬ ಕಟ್ಟುಪಾಡು ನಮಗೆ ಅನ್ವಯಿಸುವುದಿಲ್ಲ ಎಂದು ನಾನಂದುಕೊಂಡಿದ್ದೇನೆ. ಏಪ್ರಿಲ್ ತಿಂಗಳ ಹೊತ್ತಿಗೆ ನಾವು ಬಜೆಟ್‌ನ ಅಂತಿಮ ಹಂತ ತಲುಪಿದರೆ ಅದರಿಂದ ನಮಗೆ ಅನುಕೂಲ. ನಾವು ಇದೆಲ್ಲವನ್ನೂ ಪರಿಶೀಲಿಸಿ ಯಾವುದು ಅನುಕೂಲವೋ ಹಾಗೆ ಮಾಡುತ್ತೇವೆ. ಬಜೆಟ್ ಅಂದಾಜುಗಳ ಮೇಲೆ "Confidential" ಎಂದು ಸದಸ್ಯರಿಗೆ ಬರೆದು ಕಳಿಸಿದರೆ ಸದಸ್ಯರು ರಹಸ್ಯವನ್ನು ಕಾಪಾಡಿಕೊಳ್ಳುತ್ತಾರೆ ಎಂದು ಆಶಿಸುತ್ತೇನೆ.

ಶ್ರೀ ಎಸ್. ರಂಗರಾಮಯ್ಯ ಅವರು ಮಾಡಿದ ಪ್ರಸ್ತಾಪಕ್ಕೆ ಸಂಬಂಧಿಸಿದಂತೆ, ಸದನದಲ್ಲಿ ನಿರ್ಣಯ ಕೈ ಗೊಂಡಿರದಂಥ ನಿರ್ಣಯಗಳನ್ನು ಸರ್ಕಾರ ಪರಿಶೀಲಿಸುವುದೇ ಇಲ್ಲ ಎಂದರ್ಥವಲ್ಲ. ವಾಸ್ತವವಾಗಿ, ಇಲ್ಲಿಗೆ ಕಳುಹಿಸಿದ ಎಲ್ಲ ನಿರ್ಣಯಗಳ ಬಗೆಗೂ ಅಧ್ಯಯನ ಮಾಡಿ ಟಿಪ್ಪಣಿಗಳನ್ನು ಸಿದ್ಧಪಡಿಸಲಾಗುತ್ತದೆ. ಹೀಗಾಗಿ ಸೂಚಿಸಲಾದ ಪ್ರತಿಯೊಂದು ನಿರ್ಣಯಕ್ಕೆ ಸಂಬಂಧಿಸಿದ ಎಲ್ಲ ವಿಷಯವನ್ನೂ ಒಟ್ಟಿಗೆ ಕಲೆಹಾಕಲು ಸಾಧ್ಯವಾಗುತ್ತದೆ. ಇದರಿಂದ ಸದಸ್ಯರು ಯಾವ ವಿಷಯದಲ್ಲಿ ಆಸಕ್ತರಾಗಿದ್ದಾರೆ ಮತ್ತು ಯಾವುದಕ್ಕೆ ಒತ್ತು ನೀಡಲು ಬಯಸಿದ್ದಾರೆ ಎಂಬುದರ ಸೂಚನೆ ನಮಗೆ ಸಿಕ್ಕಂತಾಗುತ್ತದೆ. ಆ ಎಲ್ಲ ನಿರ್ಣಯಗಳನ್ನು ಪರಿಶೀಲಿಸಿ ನಿರ್ಧಾರ ಕೈಗೊಳ್ಳಲಾಗುವುದು ಮತ್ತು ಅಂತಹ ನಿರ್ಧಾರಗಳನ್ನು ಸದಸ್ಯರಿಗೆ ತಿಳಿಸಲಾಗುವುದು ಎಂದು ನಾನು ಭರವಸೆ ಕೊಡಲಾರೆ ಏಕೆಂದರೆ ಅದು ಕಾರ್ಯಸಾಧ್ಯವಾದ ವಿಷಯವಲ್ಲ. ಅದಕ್ಕೆ ಆ ಎಲ್ಲ ನಿರ್ಣಯಗಳನ್ನೂ ಸರ್ಕಾರ ಗಮನಿಸುತ್ತದೆ ಮತ್ತು ಆ ಬಗ್ಗೆ ಸೂಕ್ತ ಕ್ರಮ ಕೈಗೊಳ್ಳುತ್ತದೆ ಎಂಬ ಭರವಸೆಯನ್ನು ಮಾತ್ರ ಕೊಡಬಲ್ಲೆ.

## 14. ಸಂತಾಪ ಸೂಚನಾ ನಿರ್ಣಯ

## ಡಾ. ಸಿ. ಆರ್.ರೆಡ್ಡಿ ಹಾಗೂ ದಿವಾನ್ ಬಹದ್ದೂರ್ ಕೆ. ಮ್ಯಾಥನ್ ರವರು ನಿಧನರಾದ ಸಂದರ್ಭದಲ್ಲಿ ಸಂತಾಪ ಸೂಚನಾ ನಿರ್ಣಯ

## ವಿಧಾನಸಭಾ ಕಲಾಪ - ಮಾರ್ಚ್ 15-1951

ಕೆ. ಚೆಂಗಲರಾಯರೆಡ್ಡಿ (ಸದನದ ನಾಯಕರು):- ಮಾನ್ಯ ಸಭಾಪತಿಯವರೇ ನಾನು ಈ ಕೆಳಕಂಡ ಸಂತಾಪ ಸೂಚನಾ ನಿಯಂತ್ರಯಣವನ್ನು ಮಂಡಿಸುತ್ತಿದ್ದೇನೆ.

ಡಾ.ಸಿ.ಆರ್. ರೆಡ್ಡಿ ಹಾಗೂ ರಾಜ ಮಂತ್ರ ಪ್ರವೀಣ ದಿವಾನ್ ಬಹದ್ದೂರ್ ಕೆ. ಮ್ಯಾಥನ್ ಅವರ ನಿಧನಕ್ಕೆ ಈ ಸದನವು ತನ್ನ ತೀವ್ರ ಸಂತಾಪವನ್ನು ದಾಖಲಿಸುತ್ತದೆ. ಡಾ.ಸಿ.ಆರ್. ರೆಡ್ಡಿಯವರು ರಾಜ್ಯದಲ್ಲಿ ಶಿಕ್ಷಣ ಪ್ರಗತಿಗೆ ಬಹುವಾಗಿ ಶ್ರಮಿಸಿದವರು. ಮತ್ತು ಅವರು ನಿಧನರಾಗುವ ಸಂಧರ್ಭದಲ್ಲಿ ಮೈಸೂರು ವಿಶ್ವ ವಿದ್ಯಾನಿಲಯದ ಪ್ರೋ-ಚಾನ್ಸ್‌ಲರ್ ಹಾಗೂ ಸರ್ಕಾರಕ್ಕೆ ಶಿಕ್ಷಣ ಸಲಹಗಾರರೂ ಆಗಿದ್ದರು ನಾಡಿನ ವಿವಿಧ ಕಾರ್ಯಚಟುವಟಿಕೆಗಳ ಕ್ಷೇತ್ರದಲ್ಲಿ ಅವರು ಸಲ್ಲಿಸಿದ ಸೇವೆ ಅಚ್ಚಳಿಯದ ಸ್ವರೂಪದ್ದು ಹಾಗೂ ವಿಶೇಷವಾಗಿ ಶಿಕ್ಷಣ ಕ್ಷೇತ್ರದಲ್ಲಿ ಅವರ ಸೇವೆ ಅತ್ಯುತ್ತನ್ನತ ಮಟ್ಟದ್ದು. ಅವರ ನಿಧನದಿಂದ ನಾವು ಒಬ್ಬ ಸುಸಂಸ್ಕೃತವಾದ ಅದ್ಭುತ ವಿದ್ವತ್ತಿನ ಹಾಗೂ ಉದಾತ್ತ ಭಾವನೆಗಳ ಮತ್ತು ಪ್ರಮುಖ ವ್ಯಕ್ತಿತ್ವದ ಹಾಗೂ ಅತ್ಯುತ್ತಮ ವಾಗ್ಮಿತೆ ಹಾಗೂ ದೇಶ ಭಕ್ತಿಯ ಸದ್ಗುಣಗಳು ಮೇಳೈಸಿದ ವ್ಯಕ್ತಿಯನ್ನು ಕಳೆದುಕೊಂಡಂತಾಗಿದೆ.

ರಾಜಮಂತ್ರ ಪ್ರವೀಣ ಶ್ರೀ ಕೆ. ಮ್ಯಾಥನ್ ಅವರು ವಿವಿಧ ಸ್ಥಾನಗಳ ಅಧಿಕಾರಿಯಾಗಿ ಸೇವೆ ಸಲ್ಲಿಸಿದರು. ಅನೇಕ ವರ್ಷಗಳ ಕಾಲ ಅವರು ಸರ್ಕಾರದ ಅಂಗವಾಗಿದ್ದರು. ಅವರು ನಾಡಿಗೆ ನಿಷ್ಠಾವಂತ ಸೇವೆ ಸಲ್ಲಿಸಿದ್ದಾರೆ. ಪರಿಪೂರ್ಣತೆ, ದಕ್ಷತೆ ಹಾಗೂ ಋಜುತ್ವಗಳು ಅವರ ಕೆಲಸದ ಹೆಗ್ಗುರುತುಗಳಾಗಿವೆ. ಅವರದು ಪ್ರಸನ್ನ ವ್ಯಕ್ತಿತ್ವ. ಅವರ ನಿಧನದಿಂದ ಒಬ್ಬ ಸಮೃದ್ಧ ಅನುಭವೀಯ ವ್ಯಕ್ತಿಯನ್ನು ಕಳೆದು ಕೊಂಡಂತಾಗಿದೆ.

ನಿಧನರಾದ ಈ ಇಬ್ಬರು ವ್ಯಕ್ತಿಗಳ ಕುಟುಂಬ ವರ್ಗದವರಿಗೆ ಈ ಸಭೆಯು ತನ್ನ ಹೃದಯಪೂರ್ವಕ ಸಂತಾಪವನ್ನು ವ್ಯಕ್ತಪಡಿಸುತ್ತದೆ.

ನಾನು ಅತ್ಯಂತ ಭಾರವಾದ ಹೃದಯದಿಂದ ಈ ಸಂತಾಪ ಸೂಚನಾ ನಿಲುವಳಿಯನ್ನು ಮಂಡಿಸುತ್ತಿದ್ದೇನೆ. ಹಿಂದಿನ ಸಭೆಯ ನಂತರ ಮತ್ತೆ ನಾವು ಸೇರುವುದರೊಳಗಾಗಿ ಇಬ್ಬರು ಮಹಾನ್ ವ್ಯಕ್ತಿಗಳನ್ನು ಕಳೆದುಕೊಂಡಿದ್ದೇವೆ. ಇವರಲ್ಲಿ ಮೊದಲು ನಿಧನರಾದವರು ರಾಜ ಮಂತ್ರ ಪ್ರವೀಣ ಶ್ರೀ. ಕೆ. ಮ್ಯಾಥನ್‌ರವರು. ಅವರು ನಾಡಿನ ಹೆಸರಾಂತ ವ್ಯಕ್ತಿಯಾಗಿದ್ದರು. ಸಿವಿಲ್ ಸರ್ವೀಸ್ ಸದಸ್ಯರಾಗಿ ಅವರು ಯಾವ ಯಾವ ಹುದ್ದೆಗಳನ್ನು ನಿರ್ವಹಿಸಿದರು ಎಂಬುದನ್ನು ಇಲ್ಲಿ ಹೇಳುವ ಅಗತ್ಯವಿಲ್ಲ. ಅವರು ಸ್ಪರ್ಧಾತ್ಮಕ ಪರೀಕ್ಷೆ ಮುಗಿಸಿ ಮೈಸೂರು ಸಿವಿಲ್ ಸರ್ವಿಸ್

ಸೇರಿದರು. ಅನೇಕ ಹುದ್ದೆಗಳಲ್ಲಿ ಘನತೆ ಗಂಭೀರ್ಯಗಳಿಂದ ಕಾರ್ಯ ನಿರ್ವಹಿಸಿದರು. ಅವರು ತಮ್ಮ ಅಧಿಕಾರದ ಕರ್ತವ್ಯಗಳನ್ನು ನಿರ್ವಹಿಸಿದ ರೀತಿ ಅನುಸರಣೀಯವಾಗಿದೆ. ಮುಖ್ಯವಾಗಿ ಹಿಂದೆ ಆಹಾರ ನಿಯಂತ್ರಣ ಕಾರ್ಯಾಚರಣೆಯಂತಹ ಅತ್ಯಂತ ಸಂದಿಗ್ಧ ಸಂದರ್ಭದಲ್ಲಿ ಅವರಿಗೆ ವಹಿಸಲಾದ ಗುರುತರವಾದ ಜವಾಬ್ದಾರಿಯನ್ನು ಅವರು ಸಮರ್ಥವಾಗಿ ನಿರ್ವಹಿಸಿದರು. ಅವರು ಸಾರ್ವಜನಿಕ ಶಿಕ್ಷಣ ಇಲಾಖೆಯ ನಿರ್ದೇಶಕರೂ ಆಗಿದ್ದರು. ಅಲ್ಲಿಯೂ ಸಹ ಅತ್ಯಂತ ಶ್ರದ್ಧೆಯಿಂದ ಪರಿಪೂರ್ಣತೆಯಿಂದ ಕೆಲಸ ಮಾಡಿದರು. ಆ ನಂತರ ಅವರ ಅರ್ಹತೆಗೆ ತಕ್ಕ ಮನ್ನಣೆಯಾಗಿ ಅವರನ್ನು ಸರ್ಕಾರದ ಕೌನ್ಸಿಲ್ ಸದಸ್ಯರ ಹುದ್ದೆಗೆ ಏರಿಸಲಾಯಿತು. ಸುಮಾರು ಎಂಟು ವರ್ಷಗಳಷ್ಟು ದೀರ್ಘಕಾಲ ಅವರು ಈ ಹುದ್ದೆಯಲ್ಲಿದ್ದರು. ಅನೇಕ ವರ್ಷಗಳ ಕಾಲ ಅವರ ಸಹಯೋಗ ದೊರಕಿದ್ದು ನನ್ನ ವಿಶೇಷ ಅದೃಷ್ಟ, ನಾನು ಶಾಸನ ಸಭಾ ಪರಿಷತ್ತನ್ನು ಪ್ರವೇಶಿಸಿದ ಸಂದರ್ಭ ಇನ್ನೂ ನೆನಪಿದೆ. ಅದು 1930ನೇ ಇಸವಿ, ಮ್ಯಾಥನ್ ಅವರ ಪರಿಪೂರ್ಣ ಕೆಲಸದ ರೀತಿ ತಕ್ಷಣ ನನ್ನ ಗಮನ ಸೆಳೆಯಿತು. ವೈಯಕ್ತಿಕವಾಗಿ ನಮ್ಮಿಬ್ಬರ ನಡುವೆ ಒಂದು ರೀತಿಯ ವಾತ್ಸಲ್ಯ ಬೆಳೆಯಿತು. ಅವರ ಹೃದಯ ಮತ್ತು ಬುದ್ಧಿಗಳೆರಡರ ಬಗೆಗೂ ನನಗೆ ಅಪಾರ ಗೌರವವಿತ್ತು. ಅವರು ಕೊನೆಯವರೆಗೂ ಸರ್ಕಾರದ ಸದಸ್ಯರಾಗಿದ್ದರು. ದಿವಾನರಿಗೆ ಹಾಗೂ ಸರ್ಕಾರದ ಪಾಲಿಗೆ ಅವರು ದೊಡ್ಡದೊಂದು ಶಕ್ತಿಯಿದ್ದಂತೆ, ಅವರು ಅನೇಕ ಯೋಜನೆಗಳನ್ನು ಕೈಗೆತ್ತಿಕೊಂಡರು ಮತ್ತು ಶಾಸನ ಪರಿಷತ್ತಿನ ಮೂಲಕ ಅನೇಕ ಮಸೂದೆಗಳ ಮಂಡನೆಯ ಮುಂಚೂಣಿಯಲ್ಲಿದ್ದರು. ನಾನು ಆಗ ಶಾಸನ ಪರಿಷತ್ತಿಗೆ ಹೊಸದಾಗಿ ಬಂದವನು. ನಾನು ಒಬ್ಬ ರಾಜಕಾರಣಿಯಾಗಿ ಹಾಗೂ ಸಾರ್ವಜನಿಕ ಸೇವಾಕರ್ತನಾಗಿ ಬೆಳೆಯುವುದಕ್ಕೆ ಅಗತ್ಯವಾದ ಅನೇಕ ಅವಕಾಶಗಳನ್ನು ಸರ್.ಮ್ಯಾಥನ್ ಅವರು ಒದಗಿಸಿಕೊಟ್ಟಿದ್ದನ್ನು ನಾನು ಕೃತಜ್ಞತೆಯಿಂದ ಸ್ಮರಿಸುತ್ತೇನೆ. ನಿವೃತ್ತಿ ನಂತರವೂ ಅವರ ಸೇವಾ ಅವಧಿಯನ್ನು ಮತ್ತೆ ಮತ್ತೆ ವಿಸ್ತರಿಸಲಾಯಿತು. ನಿವೃತ್ತಿ ನಂತರವೂ ಅವರು ವಿಶ್ರಮಿಸಲಿಲ್ಲ ಆಗಲೂ ನಿಷ್ಕ್ರಿಯರಾಗಿ ಕೂರಲಿಲ್ಲ. ಅವರು ತಮ್ಮ ಪ್ರತಿಭೆಯನ್ನು ಬಳಸಿಕೊಂಡು ವಿವಿಧ ರೀತಿಯಲ್ಲಿ ಜನತೆಗೆ ಸೇವೆ ಸಲ್ಲಿಸಿದರು. ಅವರು ಕೈಗಾರಿಕೆ, ವಾಣಿಜ್ಯ, ಹಾಗೂ ಬ್ಯಾಂಕಿಂಗ್ ಕ್ಷೇತ್ರದ ಕಡೆಗೂ ತಮ್ಮ ಗಮನ ಹರಿಸಿ ತಮ್ಮ ಪಾಲಿನ ಸೇವೆ ಸಲ್ಲಿಸಿದರು. ಅವರು ಹಿಡಿದ ಕೆಲಸ ಸಾಧಿಸುವ ತನಕ ಬಿಡುತ್ತಿರಲಿಲ್ಲ. ಅವರು ಸದಾ ಕಾಲವೂ ತಮ್ಮ ಆತ್ಮಸಾಕ್ಷಿಗನುಗುಣವಾಗಿ ಕೆಲಸ ಮಾಡುತ್ತಿದ್ದರು ಎಂದು ಅವರ ಜೊತೆಗೆ ಕೆಲಸ ಮಾಡಿದವರು ಹೇಳುತ್ತಾರೆ. ತಮ್ಮ ಬದುಕಿನ ಉತ್ತರಾರ್ಧದಲ್ಲಿಯೂ ಅವರು ಮೊದಲಿನಂತೆಯೇ ಸಮಾಜ ಸೇವೆಯಲ್ಲಿ ಒಲವು ಹೊಂದಿದ್ದರು. ಮತ್ತು ನೀತಿ ಹಾಗೂ ಧರ್ಮದ ನೆಲೆಗಟ್ಟನ್ನು ಆಧರಿಸಿದಂತಹ ಯಾವುದೇ ಸಾಮಾಜಿಕ ಕೆಲಸವನ್ನು ಕೈಗೊಳ್ಳುವುದಕ್ಕೆ ಅವರು ಧಾವಿಸಿ ಬರುತ್ತಿದದ್ದರು. ಇಂತಹ ಒಬ್ಬ ಪ್ರತಿಭಾ ಸಂಪನ್ನ ಹಾಗೂ ಪ್ರೀತಿ ಪಾತ್ರ ವ್ಯಕ್ತಿಯನ್ನು ನಾವಿಂದು ಕಳೆದು ಕೊಂಡಿದ್ದೇವೆ.

ಅವರಿಗೆ ಗೌರವ ಸಲ್ಲಿಸುವುದಕ್ಕಾಗಿ ಇಡೀ ಸದನ ನನ್ನೊಂದಿಗೆ ಭಾಗಿಯಾಗುತ್ತದೆ ಎಂದು ಭಾವಿಸುತ್ತೇನೆ.

ಡಾ. ರೆಡ್ಡಿಯವರ ಬಗೆಗೆ ಏನು ಹೇಳಲಿ? ಅವರೇ ಒಂದು ಸಂಸ್ಥೆಯಾಗಿದ್ದರು. ಈ ನಾಡಿನಲ್ಲಿ ಉದಿಸಿದ ಅಗ್ರ ಶ್ರೇಣಿಯ ವ್ಯಕ್ತಿ ಅವರು. ಈ ದೇಶದ ವಿವಿಧ ವರ್ಗಗಳ ಜನರ ಪ್ರೀತಿ ಪ್ರಶಂಸೆಗಳಿಗಷ್ಟೇ ಅವರು ಪಾತ್ರರಾಗಿರಲಿಲ್ಲ. ವಿಶ್ವದ ಎಲ್ಲ ಭಾಗಗಳ ವಿದ್ವಾಂಸರು, ಜ್ಞಾನಿಗಳು ಹಾಗೂ ಶಿಕ್ಷಣತಜ್ಞರ ಮುಕ್ತ ಪ್ರಶಂಸೆಯನ್ನು ಅವರುಗಳಿಸಿದ್ದರು. ವಿದ್ಯಾರ್ಥಿ ದೆಸೆಯಿಂದಲೂ ಅವರು ವಿಶಿಷ್ಟಸ್ಥಾನ ಗಳಿಸಿದ್ದರು. ಅವರ ಪ್ರತಿಭೆ ದೇವರೇ ಅವರಿಗಿತ್ತ ವರ. ಮದ್ರಾಸ್ ವಿಶ್ವವಿದ್ಯಾನಿಲಯದಿಂದ ಅವರು ಉನ್ನತ ಸ್ಥಾನದಲ್ಲಿ ತೇರ್ಗಡೆಯಾದರು, ವಿಶ್ವವಿದ್ಯಾಲಯಕ್ಕೇ ಮೊದಲ ಸ್ಥಾನ ಪಡೆದರು. ಅನೇಕ ಚಿನ್ನದ ಪದಕಗಳನ್ನು ಗಳಿಸಿದರು. ಅವರು ಅಧ್ಯಯನದ ವಿಷಯವನ್ನು ಒಂದಾದ ನಂತರ ಒಂದರಂತೆ ಬದಲಿಸುತ್ತ ಹೋದರು. ನನಗೆ ತಿಳಿದಂತೆ ಅವರು ಮೊದಲು ಆರಿಸಿಕೊಂಡ ವಿಷಯ ಇತಿಹಾಸ. ಅನಂತರ ತತ್ವಶಾಸ್ತ್ರವನ್ನು ಆರಿಸಿಕೊಂಡರು. ಅವರ ಅಧ್ಯಯನದ ಅವಧಿಯುದ್ದಕ್ಕೂ ಅವರ ಪ್ರಕಾಂಡ ಪ್ರತಿಭೆ ವ್ಯಕ್ತವಾಗಿತ್ತು. ಅನಂತರ ಅವರು ವಿದೇಶಕ್ಕೆ ಹೋದರು. ಆ ದಿನಗಳಲ್ಲಿ ಅದು ತುಂಬ ಅಪರೂಪ. ಕೇಂಬ್ರಿಡ್ಜ್ ವಿಶ್ವವಿದ್ಯಾಲಯದಲ್ಲಿಯೂ ಅವರು ಎಷ್ಟು ಗಮನಾರ್ಹ ಸಾಧನೆ ಮಾಡಿದರೆಂದರೆ ಕೇಂಬ್ರಿಡ್ಜ್ ಯೂನಿಯನ್ನಿನ ಮೊದಲ ಭಾರತೀಯ ಅಧ್ಯಕ್ಷರಾದರು.

ನಾಲ್ಕು ವರ್ಷಗಳ ಹಿಂದೆ ನಾನು ಇಂಗ್ಲೆಂಡಿಗೆ ಹೋಗಿದ್ದೆ. ಅಷ್ಟು ವರ್ಷಗಳ ನಂತರವೂ, ರೆಡ್ಡಿಯವರ ಪರಿಚಯವಿದ್ದ ಜನರು ಅವರ ಪ್ರಕಾಂಡ ವಿದ್ವತ್ತು ಹಾಗೂ ಪ್ರತಿಭೆಗಳ ಬಗ್ಗೆ ಪ್ರಶಂಸಾಪೂರ್ವಕವಾಗಿ ಹೇಳುತ್ತಿದ್ದುದನ್ನು ಕೇಳಿದೆ. ಅತ್ಯುತ್ತಮ ವಾಗ್ಮಿಯೆಂದು ಆದಾಗಲೇ ಅವರು ಪ್ರಸಿದ್ಧರಾಗಿದ್ದರು. ಅಸಾಧಾರಣವೆನಿಸಿಕೊಂಡವರೆಲ್ಲರಿಗೂ ಅವರು ಸರಿಸಮವಾಗಿ ನಿಲ್ಲುತ್ತಿದ್ದರು. ವಿದೇಶದ ವಿಶ್ವವಿದ್ಯಾನಿಲಯಗಳಲ್ಲಿ ವಿಶಿಷ್ಟ ಸ್ಥಾನ ಪಡೆದ ನಂತರ ಅವರು ಭಾರತಕ್ಕೆ ಹಿಂತಿರುಗಿದರು. ರೆಡ್ಡಿಯವರ ಅಸಾಧಾರಣ ಸಾಮರ್ಥ್ಯ ಹಾಗೂ ಸೌಜನ್ಯ ಪೂರ್ಣ ವ್ಯಕ್ತಿತ್ವಕ್ಕೆ ಮಾರು ಹೋದ ಬರೋಡಾದ ಅರಸರು ಕೂಡಲೇ ಅವರನ್ನು ಆಯ್ಕೆ ಮಾಡಿಕೊಂಡರು. ಶಿಕ್ಷಣ ಕ್ಷೇತ್ರದಲ್ಲಿ ಕೆಲಸ ಮಾಡಲು ಡಾ.ರೆಡ್ಡಿಯವರಿಗೆ ಅವಕಾಶ ನೀಡಲಾಯಿತು. ರೆಡ್ಡಿಯವರು ಅದನ್ನು ಸಮರ್ಥವಾಗಿ ನಿರ್ವಹಿಸಿದರು. ಅವರು ಅಲ್ಲಿ ಡಾ. ಅರಬಿಂದೋ ಘೋಷ್ ಅವರಿಗೆ ಜೊತೆಯಾದರು. ಈ ಇಬ್ಬರೂ ಪ್ರತಿಭಾವಂತರು ರಾಜ್ಯದಲ್ಲಿ ಒಟ್ಟುಗೂಡಿದರು ಮತ್ತು ಮಹರ್ಷಿ ಅರಬಿಂದರ ನಂತರ ಡಾ. ರೆಡ್ಡಿಯವರು ಅವರ ಉತ್ತರಾಧಿಕಾರಿಯಾದರು. ಅವರಿಬ್ಬರ ನಡುವೆ ಬಹು ಆಪ್ತವಾದ ಹಾಗೂ ಪರಸ್ಪರ ಮೆಚ್ಚುಗೆಯ ಸ್ನೇಹವಿದ್ದತು. ಕಳೆದ ಕೆಲವು ವರ್ಷಗಳಲ್ಲಿಯೂ ಸಹ ಈ ಇಬ್ಬರ ನಡುವೆ ಸ್ನೇಹ ಹಾಗೇ ಮುಂದುವರೆದುಕೊಂಡು ಬಂದಿತ್ತು ಎಂಬುದು ಒಂದು ಸಮಾಧಾನ. ಒಂದು ಸಲ ರೆಡ್ಡಿಯವರು ಹೇಳಿದರು-"ನಾನು ಪಾಂಡಿಚೆರಿಯಲ್ಲಿ ಅರಬಿಂದರ ಆಶ್ರಮಕ್ಕೆ ಹೋಗಿದ್ದೆ. ಈಗಷ್ಟೆ ವಾಪಸ್ಸು ಬಂದೆ. ನಾನು ಆ ವಾತಾವರಣದಿಂದ ಪಾರಾಗಿ ಬಂದಿದ್ದೇ ಒಂದು ಪವಾಡ. ನನಗೆ ಅಲ್ಲಿ ಹೋಗುವುದಕ್ಕೇ ಹೆದರಿಕೆ. ಯಾಕೆಂದರೆ ನಾನು ಅಲ್ಲಿಗೆ ಹೋದರೆ ಹಿಂದಿರುಗುವುದು ಸಂಶಯ. ಡಾ. ರೆಡ್ಡಿಯವರ ವ್ಯಕ್ತಿತ್ವದ ಅನೇಕ ಅಂಶಗಳು ಜನರಿಗೆ ಗೊತ್ತಿಲ್ಲ. ಏಕೆಂದರೆ ಸಾರ್ವಜನಿಕ ವೇದಿಕೆಗಳಲ್ಲಿ ಆ ಬಗ್ಗೆ ಅವರು ಹೆಚ್ಚಿಗೆ ಹೇಳುತ್ತಿರಲಿಲ್ಲ. ಅವರು ತುಂಬ ವ್ಯವಹಾರ ಚಾತುರ್ಯದ ಧರ್ಮನಿರಪೇಕ್ಷ ಸ್ವಭಾವದ ಮನುಷ್ಯ ಎಂದು ಅನೇಕರು ಹೇಳಿದ್ದರು. ಆದರೆ ಮೂಲತಃ ಅವರು ಧರ್ಮಶ್ರದ್ಧೆಯ ವ್ಯಕ್ತಿಯಾಗಿದ್ದರು. ಬಹುಶಃ ಅವರ ಬಗೆಗಿನ ಈ ಅಂಶವನ್ನು ನಾನು ಮೊದಲ ಬಾರಿಗೆ ಬಹಿರಂಗ ಪಡಿಸುತ್ತಿದ್ದೇನೆ ಎಂದು ತೋರುತ್ತದೆ.

ಬರೋಡಾ ನಂತರ ಅವರು ಮೈಸೂರಿಗೆ ಬಂದರು. ಮೈಸೂರು ರಾಜ್ಯದ ಶಿಕ್ಷಣ ನೀತಿ ಹಾಗೂ ಕಾರ್ಯಕ್ರಮಗಳನ್ನು ರೂಪಿಸುವುದಕ್ಕೆ ರೆಡ್ಡಿಯಂಥವರು ಸಿಕ್ಕಿದ್ದು ಮೈಸೂರಿನ ಅದೃಷ್ಟ. ಅವರ ಕೆಲಸದ ವಿವರಗಳನ್ನೆಲ್ಲ ನಾನು ಇಲ್ಲಿ ಹೇಳುವುದಿಲ್ಲ. ಆದರೆ ಒಂದೆರಡು ವಿಷಯಗಳನ್ನು ಮಾತ್ರ ತಿಳಿಸಬೇಕು. ದಲಿತ ವರ್ಗಗಳವರಿಗೆ ಸಲ್ಲಬೇಕಾದ ನ್ಯಾಯ ದೊರಕಿಸುವುದಕ್ಕಾಗಿ ಅವರ ಹಕ್ಕುಗಳನ್ನು ಸ್ಥಾಪಿಸುವುದಕ್ಕಾಗಿ ಪ್ರಯತ್ನಗಳನ್ನು ಆರಂಭಿಸಿದವರಲ್ಲಿ ಅವರು ಮೊದಲಿಗರು. ಆ ಕಾಲದಲ್ಲಿ ಅವರು ಶಿಕ್ಷಣ ಸಂಸ್ಥೆಗಳಿಗೆ ಪ್ರವೇಶ ಕುರಿತಂತೆ ದಲಿತ ವರ್ಗಗಳವರ ವಿಷಯದಲ್ಲಿ ಆಗುತ್ತಿದ್ದ ಭಾರೀ ಅನ್ಯಾಯಗಳ ವಿರುದ್ಧ ಹೋರಾಡಿದರು ಮತ್ತು ಅವರಿಗೆ ಶಿಕ್ಷಣ ಸಂಸ್ಥೆಗಳಿಗೆ ಪ್ರವೇಶ ಸಿಗುವಂತೆ ಮಾಡಿದರು. ಈ ದಿನ ಇಷ್ಟೆಲ್ಲ ಬೆಳವಣಿಗೆಗಳಾದ ನಂತರ ನಾವು ಆ ಬಗ್ಗೆ ಬಹಳ ಸುಲಭವಾಗಿ ಮಾತಾಡಬಹುದು. ಇದು ತೀರಾ ಸಾಮಾನ್ಯವಾದ ವಿಷಯ ಎಂದು ಅನ್ನಿಸಬಹುದು. ಆದರೆ ಭಾವೋದ್ರೇಕಗಳು ತೀವ್ರವಾಗಿದ್ದ ಹಾಗೂ ಪೂರ್ವಾಗ್ರಹಗಳು ಆಳವಾಗಿ ಬೇರೂರಿದ್ದಂತಹ ಆ ಕಾಲದಲ್ಲಿ ಮತ್ತು ಈಗಿನಂತೆ ನಮ್ಮ ದೃಷ್ಟಿಕೋನಗಳು ಸುಧಾರಿಸದಿದ್ದಂತಹ ಆ ಸಂದರ್ಭದಲ್ಲಿ ಅವರು ದಲಿತ ವರ್ಗದವರ ಹಕ್ಕುಗಳನ್ನು ಸ್ಥಾಪಿಸುವುದಕ್ಕಾಗಿ ಮತ ಪ್ರಚಾರಕರ ನಿಷ್ಠೆ ಹಾಗೂ ಸಂಕಲ್ಪಗಳಿಂದ ಹೋರಾಟ ರೀತಿ ಅತ್ಯಂತ ಶ್ಲಾಘನಾರ್ಹ ಮತ್ತು ಸ್ವತಃ ರೆಡ್ಡಿಯವರೂ ಕೂಡ ಇದನ್ನು ತಮ್ಮ ಮಹತ್ವದ ಸಾಧನೆ ಎಂದು ಭಾವಿಸಿದ್ದರು. ಶಿಕ್ಷಣದ ಪ್ರಗತಿಗೆ ಮುಖ್ಯವಾಗಿ ಪ್ರೌಢಶಿಕ್ಷಣ ಕ್ಷೇತ್ರದ ಪ್ರಗತಿಗೆ 1919-1920ರಷ್ಟು ಹಿಂದೆಯೇ ಅಡಿಪಾಯ ಹಾಕಿ ಪ್ರಸಿದ್ಧವಾದ ಶೈಕ್ಷಣಿಕ ಸಂಸ್ಥಾಪನಾ ನಡವಳಿಕೆಗಳಿಗೆ ಡಾ. ರೆಡ್ಡಿಯವರೇ ಕಾರಣ ಕರ್ತರು. ಮೈಸೂರು ವಿಶ್ವವಿದ್ಯಾನಿಲಯದ ಸ್ಥಾಪನೆಗೆ ಸಂಬಂಧಿಸಿದ ಕರಡು ಪ್ರಸ್ತಾಪಗಳನ್ನೂ ರೂಪಿಸುವುದಕ್ಕೂ ಅವರೇ ಕಾರಣ. ಅವರದು ಒಂದು ಸಂಕೀರ್ಣ ವ್ಯಕ್ತಿತ್ವ. ಮೊನ್ನೆ ಯಾವಾಗಲೋ ನಾನು ಇಂಗ್ಲಿಷ್ ದಿನ ಪತ್ರಿಕೆಯಲ್ಲಿನ ಒಂದು ವರದಿಯನ್ನು ಓದುತ್ತಿದ್ದೆ. ಯಾರೋ ಅಮೇರಿಕನ್ನನೋ, ಇಂಗ್ಲಿಷ್‌ನವನೋ ನೀಡಿರುವ ಆ ವರದಿಯಲ್ಲಿ ಜವಹರಲಾಲ್ ನೆಹರೂ ಅವರದು ಸ್ಪ್ಲಿಟ್ ಪರ್ಸನಾಲಿಟಿ ಎಂದು ತಿಳಿಸಿದ್ದಾನೆ. ಡಾ. ರೆಡ್ಡಿಯವರು ಇನ್ನೊಂದು ಅರ್ಥದಲ್ಲಿ Split personality ಅವರು ಒಂದು ಸಣ್ಣ ವಲಯಕ್ಕೆ, ಉದಾಹರಣೆಗೆ ಶೈಕ್ಷಣಿಕ ಕ್ಷೇತ್ರ- ತೃಪ್ತಿ ಹೊಂದುವ ಸ್ವಭಾವದವರಾಗಿರಲಿಲ್ಲ. ರಾಜಕೀಯದಲ್ಲೂ ಪ್ರವೇಶಿಸಿ ನೋಡಲು ಅವರು ಯತ್ನಿಸಿದರು. ರಾಜಕೀಯ ವೃತ್ತಿಗೆ ಬೇಕಾದ ಅದ್ಭುತ ಅರ್ಹತೆ ಅವರಲ್ಲಿತ್ತು. ಆದರೆ ಒಬ್ಬ ಪಕ್ಷ ರಾಜಕಾರಣಿಯಲ್ಲಿರಬೇಕಾದ ಕೆಲವು ಗುಣಗಳು ಅವರಲ್ಲಿರಲಿಲ್ಲ. ಹೀಗಾಗಿ ಅವರು ಬಹಳ ಬೇಗನೆ ರಾಜಕೀಯದ ಆಸಕ್ತಿಯನ್ನು ಬಿಟ್ಟುಕೊಟ್ಟರು ಮತ್ತು ತಮ್ಮ ಹಿಂದಿನ ಪ್ರಿಯವಾದ ಶಿಕ್ಷಣ ಕ್ಷೇತ್ರಕ್ಕೆ ಹಿಂತಿರುಗಿದರು. ಅವರು ಮದುವೆಯಾಗಿರಲಿಲ್ಲ. ಬ್ರಹ್ಮಚಾರಿಯಾಗೇ ಉಳಿದರು. ಅವರು ಆಂಧ್ರ ವಿಶ್ವಾವಿದ್ಯಾನಿಲಯ ಕಾಯಿದೆಯ ಸಂಸ್ಥಾಪಕರು ಮತ್ತು 17 ವರ್ಷಕಾಲ ಆಂಧ್ರ ವಿಶ್ವಾವಿದ್ಯಾಲಯಕ್ಕೆ ಸೇವೆ ಸಲ್ಲಿಸಿದರು. ಎರಡು ಸಲ ಅವರು ರಾಜಕೀಯ ಕ್ಷೇತ್ರಕ್ಕೆ ಹೋಗಿರದಿದ್ದಲ್ಲಿ ಅವರು 25 ವರ್ಷಗಳ ಕಾಲ ಆಂದ್ರಾ ವಿಶ್ವವಿದ್ಯಾನಿಲಯದ ಉಪಕುಲಪತಿಯಾಗಿ ಸೇವೆ ಸಲ್ಲಿಸಿದಂತಾಗುತ್ತಿತ್ತು. ಇಷ್ಟಾದರೂ ಸಹ ವಿಶ್ವದ ವಿಶ್ವವಿದ್ಯಾನಿಲಯಗಳ ಇತಿಹಾಸದಲ್ಲಿ ಇಷ್ಟು ದೀರ್ಘಕಾಲ ಉಪಕುಲಪತಿಗಾಗಿ ಸೇವೆ ಸಲ್ಲಿಸಿದವರು ರೆಡ್ಡಿಯವರು ಮಾತ್ರವೇ ಎಂದು ಅಧಿಕೃತವಾಗಿ ಹೇಳಲಾಗುತ್ತಿದೆ. ಅವರು ಆಂಧ್ರ ವಿಶ್ವವಿದ್ಯಾನಿಲಯದ ರಜತ ಮಹೋತ್ಸವವನ್ನು ಆಚರಿಸುವುದನ್ನು ನೋಡಲು ಮತ್ತು ಅದರಲ್ಲಿ ಪಾಲ್ಗೊಳ್ಳಲು ಬಹಳ ಕಾತರದಿಂದ ನಿರೀಕ್ಷಿಸುತ್ತಿದ್ದರು.

ಆದರೆ ದೇವರ ಇಚ್ಛೆಯೇ ಬೇರೆಯಾಗಿದ್ದಿತು ಅವರಿಗೆ ಆ ಅವಕಾಶ ಸಿಗಲಿಲ್ಲ. ಅವರು ಆಂಧ್ರ ವಿಶ್ವವಿದ್ಯಾಲಯದಲ್ಲಿಯೇ ಮುಂದುವರೆದಿದ್ದರೆ ಹಾಗೆ ಮುಂದುವರೆಯದಿರುವಂಥ ಕಾರಣಗಳೇನೂ ಇರಲಿಲ್ಲ. ಅವರು ಆಂಧ್ರ ವಿಶ್ವವಿದ್ಯಾನಿಲಯದ ಉಪಕುಲಪತಿ ಎಂಬ ಪದವಿಗೌರವದೊಂದಿಗೆ ನಿಧನರಾಗುತ್ತಿದ್ದರು. ಆದರೆ ಅವರನ್ನು ನಾವು ಮತ್ತೆ ಇಲ್ಲಿ ಕರೆತಂದೆವು. ನಮ್ಮ ಶೈಕ್ಷಣಿಕ ನೀತಿಗಳನ್ನು ರೂಪಿಸಲು ಅವರ ಶ್ರೀಮಂತ ಅನುಭವ ಹಾಗೂ ಜ್ಞಾನಗಳು ನಮಗೆ ಬೇಕಾಗಿದ್ದವು. ನಮ್ಮ ಶಿಕ್ಷಣ ವ್ಯವಸ್ಥೆ ಹಾಗೂ ಮೈಸೂರು ವಿಶ್ವವಿದ್ಯಾನಿಲಯದ ಸ್ಥಾಪನೆಯಲ್ಲಿ ಅವರು ಮುಖ್ಯ ಪಾತ್ರ ವಹಿಸಿರುವುದರಿಂದ ಅವುಗಳನ್ನು ಈಗಿನ ಸನ್ನಿವೇಶದಲ್ಲಿ ಪುನರೂಪಿಸುವುದಕ್ಕೆ ಅವರ ಸೇವೆ ಅಗತ್ಯ ಎಂದು ನಾವು ಭಾವಿಸಿದೆವು. ಅವರು ಇಲ್ಲಿಗೆ ಬಂದು ಅಮೂಲ್ಯವಾದ ವರದಿಯನ್ನು ನೀಡಿದರು. ಅವರು ನೀಡಿದ ಶಿಫಾರಸುಗಳನ್ನು ಜಾರಿಗೆ ತರಲು ಹಾಗೂ ಶಿಫಾರಸುಗಳ ಹಿನ್ನೆಲೆಯಲ್ಲಿ ಮೈಸೂರು ವಿಶ್ವವಿದ್ಯಾನಿಲಯದ ಪುನರ್ ವ್ಯವಸ್ಥೆಗಾಗಿ ಅವರು ಇಲ್ಲಿ ಇರುವುದು ಬಹು ಅಗತ್ಯ ಎಂದು ನಾವು ನಿರ್ಧರಿಸಿದೆವು. ನಾವು ಈ ಬಗ್ಗೆ ಬೇಗ ಮುಂದುವರೆಯುವುದು ಸಾಧ್ಯವಾಗಿರಲಿಲ್ಲ. ಡಾ.ರೆಡ್ಡಿಯವರು ಈ ದಿಸೆಯಲ್ಲಿ ತಮ್ಮ ಸೇವೆಯನ್ನು ಸಂಪೂರ್ಣವಾಗಿ ಹಾಗೂ ಸಮಾಧಾನಕರವಾಗಿ ಸಲ್ಲಿಸುವ ಮೊದಲೇ ಸಾವು ಅವರನ್ನು ಸೆಳೆದೊಯ್ಯಿತು.

ಸಾಯುವ ಮೊದಲು ಅವರಿಗಿದ್ದ ಕೊನೆಯ ಎರಡು ಆಶೆಗಳ ಬಗ್ಗೆ ನನಗೆ ತಿಳಿದು ಬಂತು. ಈ ಕೊನೆಯ ಆಶೆಗಳು ಫಲಿಕೆಯಾಗಬೇಕೆಂದು ಅವರು ನಿರೀಕ್ಷಿಸುತ್ತಿದ್ದರು. ಸದನಕ್ಕೆ ತಿಳಿದಿರುವಂತೆ ಅವರು ಇಂಗ್ಲಿಷ್ ಹಾಗೂ ತೆಲುಗು ಭಾಷೆಗಳ ಪ್ರಕಾಂಡ ಪಂಡಿತರಾಗಿದ್ದರು. ಅವರು ಸಾಹಿತ್ಯ ಅಭ್ಯಾಸದಲ್ಲಿ ತಾವು ಗಳಿಸಿದ ಜ್ಞಾನವನ್ನೆಲ್ಲ ಬಳಸಿಕೊಂಡು ಮಹಾನ್ ಗ್ರಂಥಗಳನ್ನು ರಚಿಸಬೇಕೆಂದು ಅಭಿಲಾಷೆ ಹೊಂದಿದ್ದರು. ಅವರು ಒಂದು ಪುಸ್ತಕ ಬರೆದರು. ಅದು ಮಹಾಭಾರತವನ್ನು ಕುರಿತದ್ದು. ಆದರೆ ರಾಮಾಯಣವನ್ನು ಕುರಿತ ಗ್ರಂಥವನ್ನು ಅವರು ಮುಗಿಸಲಿಲ್ಲ. ಅವರು ಅದಕ್ಕೆ ಸಂಬಂಧಪಟ್ಟ ಎಲ್ಲ ಟಿಪ್ಪಣಿಗಳನ್ನೂ ಮಾಡಿಟ್ಟಿದ್ದಾರೆ. ಪುಸ್ತಕವನ್ನು ಮುಗಿಸುವ ಯೋಚನೆಯಲ್ಲಿದ್ದರು. ಅವರ ಇನ್ನೊಂದು ಕೊನೆಯ ಆಸೆ ಎಂದರೆ ಇಲ್ಲಿನ ವಿಶ್ವವಿದ್ಯಾನಿಲಯದ ವ್ಯವಸ್ಥಾಪನೆ. ಈ ಎರಡು ವಿಷಯಗಳನ್ನು ಮುಗಿಸುವುದು ಸಾಧ್ಯವಾಗುವಂತೆ ನನ್ನನ್ನು ಇನ್ನೂ ನಾಲ್ಕು ಐದು ತಿಂಗಳ ಕಾಲ ಬದುಕಿಸಲು ಸಾಧ್ಯವೇ ಎಂದು ಅವರು ಡಾಕ್ಟರುಗಳನ್ನು ಕೇಳಿಕೊಂಡರಂತೆ. ಅವರು ಎಂತಹ ದೊಡ್ಡ ವ್ಯಕ್ತಿ ಎಂಬುದನ್ನು ಇದು ತೋರಿಸುತ್ತದೆ. ಅವರು ಯಾವ ಕೆಲಸವನ್ನು ಪೂರ್ಣಗೊಳಿಸಬೇಕು ಎಂದು ಇಲ್ಲಿಗೆ ಕರೆಸಲಾಗಿದ್ದಿತೋ ಅಥವಾ ನಾನು ಅವರಿಗೆ ಯಾವ ಕೆಲಸವನ್ನು ವಹಿಸಿದ್ದೇನೋ ಅದರ ಬಗ್ಗೆ ಅವರಿಗಿದ್ದ ನಿಷ್ಠೆ ಹಾಗೂ ಕರ್ತವ್ಯ ಪ್ರಜ್ಞೆಗಳನ್ನು ಇದು ತೋರಿಸುತ್ತದೆ.

ನಾನು ಈಗಾಗಲೇ ಬಹಳ ಸಮಯ ತೆಗೆದುಕೊಂಡಿದ್ದೇನೆ. ಆದರೆ ಏನು ಮಾಡುವುದು. ಅವರ ವ್ಯಕ್ತಿತ್ವದ ಬಗ್ಗೆ ಹೇಳಬೇಕಾದ್ದು ಇನ್ನೂ ಬಹಳ ಇದೆ. ಇತ್ತೀಚೆಗೆ ನಾನು ಮದ್ರಾಸಿಗೆ ಹಾಗೂ ದೆಹಲಿಗೆ ಹಗಿದ್ದೆ. ನಾನು ಭೇಟಿ ಮಾಡಿದ ಪ್ರತಿಯೊಬ್ಬರೂ ಹಾಗೂ ಡಾ. ರೆಡ್ಡಿಯವರ ಬಗ್ಗೆ ತಿಳಿದಿದ್ದ ಪ್ರತಿಯೊಬ್ಬರೂ ಕೂಡ ಒಬ್ಬ ಮಹಾನ್ ದೇಶಭಕ್ತನನ್ನು ಹಾಗೂ ಭಾರತದ ಅಗ್ರಪಂಕ್ತಿಯ ವ್ಯಕ್ತಿಗಳಲ್ಲೊಬ್ಬರನ್ನು ಕಳೆದುಕೊಂಡಂತಾಗಿದೆ ಎಂದು ಶೋಕ ವ್ಯಕ್ತಪಡಿಸಿದರು. ಅಂಥವರು ಮತ್ತೆ ಎಲ್ಲಿ ಸಿಗುತ್ತಾರೆ ಎಂದು ಅನೇಕರು ಶೋಕಿಸಿದರು. ಇತರೆಲ್ಲರ ವಿಷಯ ಹಾಗಿರಲಿ, ಅವರ ಪ್ರಮುಖ ವ್ಯಕ್ತಿತ್ವ, ಮಹಾನ್ ಬುದ್ಧಿ ಮತ್ತೆ, ಚುರುಕುತನ, ಚತುರ ಮಾತುಕತೆ, ವಿಷಯ ನಿರೂಪಣಾ ಸಾಮರ್ಥ್ಯ, ಪ್ರತಿಭೆ ಮೊದಲಾದ ವಿಷಯಗಳಲ್ಲಿ ಅವರನ್ನು ಮೀರಿಸುವುದಿರಲಿ ಅವರ ಸಮಕ್ಕೆ ಬರುವಂಥವರ ಸಂಖ್ಯೆಯೂ ಸಹ ಜಗತ್ತಿನಲ್ಲಿ ವಿರಳ ಎನ್ನಬಹುದು. ಇಂತಹ ಮಹಾನ್ ವ್ಯಕ್ತಿಯನ್ನು ನಾವು ಕಳೆದುಕೊಂಡಿದ್ದೇವೆ. ಇದಕ್ಕಿಂತ ಹೆಚ್ಚಿಗೆ ನಾನೇನೂ ಹೇಳಲಾರೆ.

## 15. ಭಾರತ ಸರ್ಕಾರದ ಆಹಾರ ನಿಯಂತ್ರಣ ಆಹಾರ ಹೆಚ್ಚು ಬೆಳೆಯುವ ಯೋಜನೆಗಳು ಮತ್ತು ಮಿಲಿಟರಿ ಸಿಬ್ಬಂದಿಯ ಭವಿಷ್ಯದ ಬಗ್ಗೆ.

### ವಿಧಾನಸಭಾ ಕಲಾಪ-ಮಾರ್ಚ್ 17, 1951

ಶ್ರೀ ಕೆ. ಚೆಂಗಲರಾಯರೆಡ್ಡಿ(ಮುಖ್ಯ ಮಂತ್ರಿಗಳು):- ಮಾನ್ಯ ಸಭಾಪತಿಗಳೇ, ಈ ಹಂತದಲ್ಲಿ ನಾನು ಭಾಷಣ ಮಾಡುವುದಕ್ಕೆ ನಿಂತಿಲ್ಲ. ವಂದನಾರ್ಪಣಾ ನಿರ್ಣಯಕ್ಕೆ ಸಂಬಂಧಿಸಿದಂತೆ ನಡೆದು ಚರ್ಚೆಯಲ್ಲಿ ಉನ್ನತ ಮಟ್ಟದ ಸರ್ಕಾರದ ನೀತಿ ನಿರೂಪಣಾ ವಿಷಯ ಕುರಿತು ಪ್ರಸ್ತಾಪಿಸಲಾದ ಕೆಲವು ವಿಷಯಗಳ ಬಗ್ಗೆ ಸ್ಥೂಲವಾಗಿ ನನ್ನ ಅಭಿಪ್ರಾಯಗಳನ್ನು ತಿಳಿಸಬೇಕೆಂಬ ಉದ್ದೇಶವಿತ್ತು. ಆದರೆ ಇಲ್ಲಿನ ಕೆಲವೊಂದು ವಿಷಯಗಳ ಬಗ್ಗೆ ಬಜೆಟ್ ಅಂದಾಜುಗಳ ಮೇಲಿನ ಚರ್ಚೆಯ ಸಂದರ್ಭದಲ್ಲಿ ನನ್ನ ಅಭಿಪ್ರಾಯ ತಿಳಿಸುತ್ತೇನೆ. ಈ ಹಂತದಲ್ಲಿ ಮತ್ತಷ್ಟು ದೀರ್ಘಕಾಲ ಸದನವನ್ನು ಕೂರಿಸುವ ಬಯಕೆ ನನಗಿಲ್ಲ.

ಕೆಲವೊಂದು ವಿಷಯಗಳಿಗೆ ಸಂಬಂಧಿಸಿದಂತೆ ಸನ್ಮಾನ್ಯ ಗೃಹ ಮಂತ್ರಿಗಳು ಚರ್ಚೆಗೆ ಉತ್ತರ ನೀಡುವಾಗ ಪ್ರಸ್ತಾಪಿಸಿದ್ದಾರೆ. ಮುಖ್ಯವಾಗಿ ಎರಡು ವಿಷಯಗಳ ಬಗ್ಗೆ ಹೆಚ್ಚಿನ ಗಮನ ಸೆಳೆಯಲಾಗಿದೆ. ಒಂದನೆಯದು ಆಹಾರ ನಿಯಂತ್ರಣ ಮತ್ತು ಹೆಚ್ಚು ಆಹಾರ ಬೆಳೆಯಿರಿ ಎಂಬ ಯೋಜನೆಗಳು. ಎರಡನೆಯದು ಭಾರತ ಸರ್ಕಾರವು ತೆಗೆದು ಹಾಕಿರುವ ಮಿಲಿಟರಿ ಸಿಬ್ಬಂದಿಯ ಭವಿಷ್ಯಕ್ಕೆ ಸಂಬಂಧಿಸಿದ್ದು. ಈ ಎರಡೂ ವಿಷಯಗಳಿಗೆ ಸಂಬಂಧಿಸಿದಂತೆ ಇಷ್ಟು ಮಾತ್ರ ಹೇಳಬಲ್ಲೆ. ಸರ್ಕಾರ ಈ ಎರಡೂ ಸಮಸ್ಯೆಗಳ ವಿರುದ್ಧ ಅಂಶಗಳನ್ನೇ ತೀವ್ರ ಗಮನದಲ್ಲಿಟ್ಟುಕೊಂಡಿದೆ ಮತ್ತು ಸಮಾಧಾನಕರ ಪರಿಹಾರ ಕಂಡುಕೊಳ್ಳುವುದಕ್ಕಾಗಿ ಸಕಲ ಪ್ರಯತ್ನವನ್ನೂ ಮಾಡುತ್ತಿದೆ. ಇನ್ನೂ ಮುಂದಿನ ಹಂತದಲ್ಲಿ, ಸದನದಲ್ಲಿ ವಿಶ್ವಾಸವಿಟ್ಟು ಎಲ್ಲ ವಿವರಗಳನ್ನೂ ಸದನದ ಮುಂದೆ ಮಂಡಿಸಲಾಗುವುದು. ಮುಖ್ಯವಾಗಿ ಮಿಲಿಟರಿ ಸಿಬ್ಬಂದಿಯ ವಿಷಯಕ್ಕೆ ಸಂಬಂಧಿಸಿದಂತೆ ಈಗಾಗಲೇ ಮಾತನಾಡಿರುವ ಸನ್ಮಾನ್ಯ ಸದಸ್ಯರುಗಳು ತಿಳಿಸಿರುವ ಪ್ರಕಾರ, ಸಮಾಧಾನಕರ ಪರಿಹಾರ ಪಡೆದುಕೊಳ್ಳಲು ಮೈಸೂರು ಸರ್ಕಾರ ಸಕಲ ಪ್ರಯತ್ನವನ್ನೂ ಮಾಡುತ್ತಿದೆ. ಭಾರತ ಸರ್ಕಾರದ ಕಷ್ಟಗಳೇನು ಎಂಬುದು ನನಗೆ ಗೊತ್ತಿಲ್ಲ. ಆದರೆ ಅವರ ಕಷ್ಟಗಳೇನೆ ಇರಲಿ, ಅವರು ಸಮಸ್ಯೆಯ ಗಂಭೀರತೆಯನ್ನು ಗಮನಿಸಲೇ ಬೇಕಾಗುತ್ತದೆ ಮತ್ತು ಮಿಲಿಟರಿ ಸಿಬ್ಬಂದಿಗೆ ಸಲ್ಲಬೇಕಾದ ಹಣ ಹಾಗೂ ನ್ಯಾಯದ ಬಗ್ಗೆ ಯೋಚಿಸಬೇಕಾಗುತ್ತದೆ. ನಾವು ನಮ್ಮ ಅಭಿಪ್ರಾಯಗಳೇನು ಎಂಬುದನ್ನು ಯಾವುದೇ ಸಂದಿಗ್ಧತೆಗೆ ಎಡೆಯಿಲ್ಲದಂತೆ ಹಾಗೂ ಯಾವುದೇ ಹಿಂಜರಿಕೆಯಿಲ್ಲದಂತೆ ಭಾರತ ಸರ್ಕಾರಕ್ಕೆ ತಿಳಿಸಿದ್ದೇವೆ. ಈ ಅಂಶದ ಬಗ್ಗೆ ತೃಪ್ತಿಕರವಾಗಿ ವ್ಯವಹರಿಸದಿದ್ದ ಸಂದರ್ಭದಲ್ಲಿ ಒಂದು ದೇಶವಾಗಿ ನಾವು ಎಂತಹ ಅಪಾಯವನ್ನು ಎದುರಿಸಬೇಕಾಗುತ್ತದೆ ಎಂಬ ಮಾತನ್ನು ಸದನದ ಈ ನೆಲೆಯಲ್ಲಿ ಸಾರ್ವಜನಿಕವಾಗಿ ಹೇಳಲು ಬಯಸುತ್ತೇನೆ. ಬಜೆಟ್ ಚರ್ಚೆ ನಡೆಯುವ ಸಂದರ್ಭದಲ್ಲಿ ಈ ವಿಷಯಕ್ಕೆ ಮತ್ತೆ ಬರುತ್ತೇನೆ. ಆದ್ದರಿಂದ ಈಗ ಹೆಚ್ಚಿಗೆ ಹೇಳಬೇಕಾದ ಅಗತ್ಯವಿಲ್ಲ.

## 16. ಆಹಾರ ಹತೋಟಿ ಸಮಸ್ಯೆ ಕುರಿತು

### ವಿಧಾನಸಭಾ ಕಲಾಪ - 24, ಅಕ್ಟೋಬರ್, 1951

ಶ್ರೀ ಕೆ. ಚೆಂಗಲರಾಯರೆಡ್ಡಿಯವರು:-ಸ್ವಾಮಿ, ಈ ಆಹಾರದ ಹತೋಟಿ ಸಮಸ್ಯೆ ನಮ್ಮ ಸಂಸ್ಥಾನದಲ್ಲಿ ಏನೂ ಹೊಸದಲ್ಲ. ಸುಮಾರು ಎಂಟು ವರ್ಷಗಳಿಂದ ಈ ಸಮಸ್ಯೆ ಸರ್ಕಾರವನ್ನೂ ಹಾಗೂ ಪ್ರಜೆಗಳನ್ನೂ ಬಾಧಿಸುತ್ತಿದೆ. ನಾನು ಈ ದಿವಸ ಹೇಳುವ ಕೆಲವು ಮಾತುಗಳನ್ನು ಕೆಲವು ಪಕ್ಷ ಪ್ರತಿಪಕ್ಷಗಳ ಜಯಾಪಜಯಗಳ ದೃಷ್ಟಿಯಿಂದ ಹೇಳುತ್ತಿಲ್ಲ. ದೇಶದ ಮತ್ತು ಜನತೆಯ ಸುಖಸಂತೋಷ ಮತ್ತು ಅವಶ್ಯಕತೆಯ ದೃಷ್ಟಿಯಿಂದ ಹೇಳಲು ಅಪೇಕ್ಷಿಸುತ್ತೇನೆ. ಯಾರೇ ಆಗಲಿ ಕೆಲವು ಮುಖ್ಯ ವಿಷಯಗಳನ್ನು ಮನಸ್ಸಿನಲ್ಲಿಟ್ಟು ಆಮೇಲೆ ತಮ್ಮ ಸಲಹೆಗಳನ್ನು ನೀಡಬೇಕೆಂಬುದು ಸರಿಯೆಂದು ಎಲ್ಲರಿಗೂ ಅರ್ಥವಾಗುತ್ತದೆ. 1943ನೆ ಇಸವಿಗೆ ಮುಂಚೆ ಈ ಹತೋಟಿಯ ಪ್ರಶ್ನೆ ನಮ್ಮ ದೇಶದಲ್ಲಿ ಅಷ್ಟಾಗಿ ಇರಲಿಲ್ಲ. 1942-43ನೆಯ ಸಾಲಿನಿಂದ ಎರಡನೆಯ ಮಹಾಯುದ್ಧವು ಪ್ರಾರಂಭವಾದನಂತರ ಅದು ನಡೆಯುತ್ತಿದ್ದಾಗ ಈ ಸಮಸ್ಯೆಯು ನಮ್ಮಲ್ಲಿ ಪ್ರಾರಂಭವಾಯಿತು. ಕಾರಣ ಇಷ್ಟೆ. ಪ್ರತಿಯೊಂದು ದೇಶದಲ್ಲೂ ಪ್ರತಿಯೊಂದು ರಾಷ್ಟ್ರದಲ್ಲೂ ಈ ಹತೋಟಿಯನ್ನು ಒಂದಲ್ಲ ಒಂದು ರೀತಿಯಲ್ಲಿ ಆಚರಣೆಗೆ ತರುವ ಒಂದು ಏರ್ಪಾಡು ಜಾರಿಗೆ ಬಂತು. ಇಂಡಿಯಾದಿಂದ ಅಮೇರಿಕಾ ಮುಂತಾದ ಇತರ ದೇಶಗಳವರೆಗೂ ಇದು ಹಬ್ಬಿತು. ಅದರಂತೆ ಭಾರತ ದೇಶದಲ್ಲೂ ಈ ಹತೋಟಿ ಬರಬೇಕಾದ ಸಮಸ್ಯೆ ಬಂತು. ಇದಕ್ಕೆ ಹಿಂದೆ ಏನಾಗಿತ್ತೆಂದರೆ ಆಹಾರ ವಿಶೇಷವಾಗಿ ಭಾರತಕ್ಕೆ ಹೊರ ದೇಶಗಳಿಂದ ಬರುತ್ತಿತ್ತು. ಮುಖ್ಯವಾಗಿ ಬರ್ಮಾ ದೇಶದಿಂದ ನಮಗೆ ಬೇಕಾದಷ್ಟು ಅಕ್ಕಿ ಬರುತ್ತಿತ್ತು. ಹಾಗೆ ಸರಾಗವಾಗಿ ಬರುತ್ತಿದ್ದಾಗ ನಮಗೆ ಕಷ್ಟವೇನೂ ಕಂಡುಬರುತ್ತಿರಲಿಲ್ಲ. ಯಾವಾಗ ಒಂದೊಂದು ದೇಶದವರೂ ತಮ್ಮ ತಮ್ಮ ಬಂದೋಬಸ್ತನ್ನು ಮಾಡಿಕೊಳ್ಳಬೇಕಾದ ಪರಿಸ್ಥಿತಿ ಬಂತೋ ಆಗ ಅದರ ಬಿಸಿ ನಮಗೂ ತಟ್ಟಿತು. ಮುಖ್ಯವಾಗಿ ಇದನ್ನು ಗಮನದಲ್ಲಿಡಬೇಕು. ಪ್ರಪಂಚದ ಎಲ್ಲಾ ದೇಶಗಳವರೂ ಒಂದು ರೀತಿಯಲ್ಲಿರುವಾಗ ನಾವೇ ಒಂದು ಪ್ರತ್ಯೇಕ ರೀತಿಯಿರಬೇಕೆಂದರೆ ಅದು ಎಷ್ಟು ಮಟ್ಟಿಗೆ ಸಾಧ್ಯ ಎಂದು ತಾವೇ ಯೋಚನೆ ಮಾಡಬೇಕಾಗಿದೆ. ಇದು ಈ ದಿವಸ ನಾನು ಹೇಳುವ ಮಾತಲ್ಲ. ಇದು ಪೂರ್ಣವಾಗಿ ವಿಮರ್ಶೆ ಮಾಡಿದ ಒಂದು ಸಮಿತಿಯು ಹೇಳಿದ ವಿಷಯ. ಬಂಗಾಳದಲ್ಲಿ ಬರಗಾಲ ಬಂದು ಲಕ್ಷಾಂತರ ಜನರು ಸಾಯುವ ಪರಿಸ್ಥಿತಿ ಏಕೆ ಬಂತು ಅಂದರೆ ಆಗ ಕಂಟ್ರೋಲ್ ಒಂದು ರೀತಿ ಅಲ್ಲ ಒಂದು ರೀತಿಯಲ್ಲಿ ಇಲ್ಲದಿದ್ದುದೇ ಮುಖ್ಯ ಕಾರಣ ಎಂದು ಎಲ್ಲಾ ಅಂಶಗಳನ್ನೂ ಕೂಲಂಕಷವಾಗಿ ವಿಮರ್ಶೆ ಮಾಡಿ ಖಚಿತವಾಗಿ ತೀರ್ಮಾನ ಮಾಡಿದ್ದಾರೆ. ಈಗ ಕಂಟ್ರೋಲಿನಲ್ಲಿ ಲೋಪದೋಷಗಳು ಎಷ್ಟೋ ಇವೆ, ಎಷ್ಟೋ ತೊಂದರೆ ಇದೆ, ಕೆಲವು ಸರ್ಕಾರಗಳಿಗೂ ಬೇಕಾದಷ್ಟು ತಲೆನೋವಿದೆ ಎಂದು ಹೇಳುವುದರಲ್ಲಿ ಯಾವ ಅನುಮಾನವೂ ಇಲ್ಲ. ಇಂಥ ಪದ್ಧತಿ ಆಗ ಇದ್ದಿದ್ದರೂ, ಇಷ್ಟು ತೊಂದರೆಗೆ ಮತ್ತು ತಲೆನೋವಿಗೆ ಕಾರಣವಾದ ಒಂದು ಪದ್ಧತಿ ಇದ್ದಿದ್ದರೂ, ಬಂಗಾಳದಲ್ಲಿ ಅಂದು ಲಕ್ಷಾಂತರ ಜನರು ಖಂಡಿತ ಸಾಯುತ್ತಿರಲಿಲ್ಲ ಎಂದು ಪ್ರವೀಣರು ಅಭಿಪ್ರಾಯಪಟ್ಟರು. ಬಂಗಾಳದಲ್ಲಿ ಕ್ಷಾಮ ಬಂದ ಮೇಲೆ ದೇಶಕ್ಕೆ ಅನುಕೂಲವಾಗುವ ರೀತಿಯಲ್ಲಿ ಕಂಟ್ರೋಲ್ ಭಾರತ ದೇಶದ ಎಲ್ಲಾ ಕಡೆಯೂ ಜಾರಿಗೆ ಬಂತು ಎಂಬ ಹಿನ್ನೆಲೆಯನ್ನು

ಸರ್ವರೂ ಜ್ಞಾಪಕದಲ್ಲಿಟ್ಟುಕೊಳ್ಳಬೇಕು. ಈಗ ಮೈಸೂರು ದೇಶದಲ್ಲೂ ಕಂಟ್ರೋಲನ್ನು ಇಟ್ಟುಕೊಳ್ಳಬೇಕಾಗಿ ಬಂದಿದೆ. ಕಂಟ್ರೋಲ್ ಪದ್ಧತಿಯಿಲ್ಲದೆ ಹಾಗೇ ಸರಿತೂಗಿಸಲು ಸಾಧ್ಯವೆಂದು ಕೆಲವರು ಹೇಳುತ್ತಾರೆ ಈಗ ಶ್ರೀ ಚನ್ನಬೈರೇಗೌಡರು ಮಾತನಾಡುವಾಗ ಹಿಂದೆ ನಾನು ಈ ಸ್ಥಾನಕ್ಕೆ ಬರುವುದಕ್ಕೆ ಮುಂಚೆ ಮಾಡಿದ್ದ ಭಾಷಣದ ಕೆಲವು ಭಾಗವನ್ನು ಉಲ್ಲೇಖಿಸಿ ಪ್ರಸ್ತಾಪ ಮಾಡಿದ್ದಾರೆ. ಅದಕ್ಕೆ ಉತ್ತರವನ್ನು ಕೃತ್ರಿಮವಿಲ್ಲದೆ ಧೈರ್ಯವಾಗಿ ಈ ದಿವಸ ಹೇಳುತ್ತೇನೆ. ಸರ್ಕಾರದ ಆಡಳಿತವನ್ನು ವಹಿಸುವುದಕ್ಕೆ ಮುಂಚೆ ಹೇಳಿದ ಮಾತು ಅದು. ಜವಾಬ್ದಾರಿಯನ್ನು ವಹಿಸಿ, ಅದರ ನಿಜಸ್ವರೂಪ ಮತ್ತು ಕಷ್ಟಸುಖವನ್ನು ತಿಳಿದಿದ್ದರೆ ಆಗ ಆ ರೀತಿ ಮಾತನಾಡುತ್ತಿರಲಿಲ್ಲ ಎಂದು ಘಂಟಾಘೋಷವಾಗಿ ಹೇಳುವುದಕ್ಕೆ ಸಿದ್ಧವಾಗಿದ್ದೇನೆ, ಹಾಗೆ ಹೇಳಲು ಅವಮಾನವಿಲ್ಲ. ಕರ್ತವ್ಯ ಜವಾಬ್ದಾರಿ ರಹಿತವಾಗಿ ಮಾತನಾಡುತ್ತಿಲ್ಲ; ಧೈರ್ಯವಾಗಿ ಜವಾಬ್ದಾರಿಯುತವಾಗಿ ಹೇಳುತ್ತಿದ್ದೇನೆ. ನಾನು ವಿರೋಧಪಕ್ಷದಲ್ಲಿದ್ದಾಗ ಮಾತನಾಡುತ್ತಿದ್ದ ರೀತಿಯಲ್ಲಿ ಈಗ ಮಾತನಾಡಲು ಮನಸ್ಸು ಮಾಡುವುದಿಲ್ಲ. ಮನಸಾಕ್ಷಿಯಾಗಿ ವಿರೋಧವಾಗಿ ಮಾತನಾಡುವುದಕ್ಕಾಗುವುದಿಲ್ಲವೆಂದು ಈ ದಿವಸ ಧೈರ್ಯವಾಗಿ ಹೇಳುತ್ತೇನೆ. ಇವತ್ತು ಮೈಸೂರು ದೇಶದಲ್ಲಿರತಕ್ಕ ಸಮಸ್ಯೆಯೇನೆಂಬುದು ನೋಡೋಣ ಈಗ ಹತೋಟಿ ತೆಗೆದುಹಾಕಿದರೆ ಹಾಗೇ ನಡೆದುಕೊಂಡು ಹೋಗುತ್ತದೆ ಎಂದು ಹೇಳಿದರು. ಬ್ಲಾಕ್ ಮಾರ್ಕೆಟ್‌ನಲ್ಲಿ ಹೇಗೋ ಸಪ್ಲೈ ಆಗುತ್ತದೆ ಈಗಲೂ ಸಪ್ಲೈ ಆಗುತ್ತಿದೆ ಎಂದು ಹೇಳುತ್ತಾರೆ. ಆ ವಾದ ಇದ್ದೇ ಇದೆ. ಅದು ಹೇಗೆ ಸರಿಹೋಗುತ್ತದೆ ಎಂಬುದಾಗಿ ಒಂದು ಪ್ರಶ್ನೆ ಕೇಳಿಬಿಟ್ಟು, ಒಂದು ವಿಚಾರವನ್ನು ತಮ್ಮ ಮುಂದೆ ಇಡುತ್ತೇನೆ. ಈಗ ಸರ್ಕಾರದವರು ಸರ್‌ಪ್ಲಸ್ ವಸೂಲು ಮಾಡುತ್ತ ಇರತಕ್ಕದ್ದು ಒಂದು ಗೊತ್ತಾದ ಪ್ರಮಾಣದ ಧಾನ್ಯ. ಅದನ್ನು ಪ್ರತಿವರ್ಷ ಸಂಗ್ರಹಿಸುತ್ತಾ ಇದ್ದಾರೆ. ಬ್ಲಾಕ್ ಮಾರ್ಕೆಟ್‌ಗೆಅಷ್ಟು ಹೋಗುತ್ತಲೇ ಇರುತ್ತದೆ, ಈಗ ಜಾರಿಯಲ್ಲಿರುವುದು ಬಹಳ ಸೈನ್‌ಟಿಫಿಕ್ ಸಿಸ್ಟಂ ಎಂಬುದಾಗಿ ಅಭಿಪ್ರಾಯಪಟ್ಟಿದ್ದಾರೆ. ಆದರೂ ತೊಂದರೆಗಳು ಬಂದೇ ಬರುತ್ತವೆ. ಈಗಿರುವುದನ್ನು ಒಂದು ಲಾಜಿಕಲ್ ದೃಷ್ಟಿಯಿಂದ ಅಥವಾ ರ‍್ಯಾಶನಲ್ ದೃಷ್ಟಿಯಿಂದ ನೋಡಿದರೆ ಉತ್ತಮಪಡಿಸುವುದಕ್ಕೆ ಆಗಿಲ್ಲ ಎಂದು ಹೇಳುತ್ತೇನೆ. ಶ್ರೀಮಾನ್ ಮರಿಯಪ್ಪನವರು ಹೇಳಿದ ಹಾಗೆ ಎಷ್ಟು ಜಮೀನು ಇದೆ, ಎಷ್ಟು ಸಾಗುವಳಿ ಆಗಬಹುದು, ಅವರ ಮನೆಯಲ್ಲಿ ಎಷ್ಟು ಜನ ಇದ್ದಾರೆ, ಅವರಿಗೆ ವರ್ಷಕ್ಕೆ 16 ಔನ್ಸ್ ಪ್ರಕಾರ ಎಷ್ಟು ಕೊಡಬೇಕಾಗುತ್ತದೆ, ಕೂಲಿ ಜನರಿಗೆ ಎಷ್ಟು ಕೊಡಬೇಕಾಗುತ್ತದೆ, ಹಬ್ಬ ಹುಣ್ಣಿಮೆಗಳಿಗೆ ಎಷ್ಟು ಬೇಕಾಗುತ್ತದೆ, ಇತರ ಹೆಚ್ಚಿನ ಕಾರ್ಯಗಳಿಗೆ ಎಷ್ಟು ಬೇಕಾಗುತ್ತದೆ, ಇದೆಲ್ಲವನ್ನು ಲೆಕ್ಕ ಹಾಕಿ ಜಾತಾ ಉಳಿದದ್ದನ್ನು ಸರ್‌ಪ್ಲಸ್ ಅಂತ ವಸೂಲು ಮಾಡುತ್ತಾ ಇದ್ದಾರೆ. ಇದು ಒಂದು ಸೈನ್‌ಟಿಫಿಕ್ ಸಿಸ್ಟಂ. ಹೀಗೆ ವಸೂಲು ಮಾಡಿದ್ದನ್ನು ಒಂದು ಕಡೆ ಶೇಖರಿಸುತ್ತಾರೆ. ಬ್ಲಾಕ್ಮಾರ್ಕೆಟ್ ಆಗುವುದು, ಸರ್‌ಪ್ಲಸ್ ವಸೂಲು ಮಾಡುವುದು ಇವೆರಡೂ ಸೇರಿಕೊಂಡು ಈಗ 10 ವರ್ಷದಿಂದ ಏನಾಗಿದೆ ಎಂಬುದನ್ನು ನೋಡೋಣ. ಒಂದು ಪ್ರಮಾಣದಲ್ಲಿ ಇಂಡಿಯಾ ಸರ್ಕಾರದಿಂದ ನಾವು ಅಲಾಟ್‌ಮೆಂಟ್ ತರಿಸಿಕೊಳ್ಳುತ್ತಾ ಇದ್ದೇವೆ. ಅದು ಪೋಲು ಆಗುತ್ತಾ ಇಲ್ಲ. ಇಷ್ಟು ಮಾತ್ರ ಹೇಳಬಲ್ಲೆ. ನಮ್ಮ ಸಂಸ್ಥಾನದಲ್ಲಿ ಯಾವ ಹಳ್ಳಿಯನ್ನೇ ತೆಗೆದುಕೊಳ್ಳಿ, ಎಲ್ಲೂ ಯಥೇಚ್ಛವಾಗಿ ಸಾಕಾಗಿದೆ ಎಂದು ಯಾರು ಹೇಳುವುದಿಲ್ಲ. ಹೇಳಿದರೂ ಒಪ್ಪುವುದಿಲ್ಲ ಪ್ರೊಕ್ಯೂರ್‌ಮೆಂಟ್ ಮಾಡುವುದು ಬ್ಲಾಕ್ ಮಾರ್ಕೆಟ್ ಸಪ್ಲೈ ಆಗುವುದು ಎರಡೂ ಸಾಲದೆ ಡಿಫಿಸಿಟ್ ಆಗಿ

ಹೊರಗಡೆಯಿಂದ ತರಿಸಿಕೊಳ್ಳುತ್ತಾ ಇದ್ದೇವೆ. ಇದು ಮುಖ್ಯವಾಗಿ ಗಮನಿಸಬೇಕಾದ ವಿಚಾರ. ಇನ್ನೊಂದು ವಿಚಾರವೇನೆಂದರೆ ಎಲ್ಲಿಯವರೆಗೆ ಭಾರತ ಸರ್ಕಾರದಿಂದ ನಮಗೆ ಇಷ್ಟು ದಿವಸ ಬೇಕೆಂದು ಅಪೇಕ್ಷಿಸಿ ಒಂದು ಪ್ರಮಾಣದಲ್ಲಿ ತರಿಸಿಕೊಳ್ಳುತ್ತೇವೆಯೋ ಅಲ್ಲಿಯವರೆಗೂ ಭಾರತ ಸರ್ಕಾರ ಅಖಿಲ ಭಾರತ ನೀತಿಯಂತೆ ಏನು ಒಂದು ತೀರ್ಮಾನಮಾಡುತ್ತಾರೋ ಅದಕ್ಕೆ ಒಳಪಟ್ಟು ಕೆಲಸ ಮಾಡಬೇಕು. ಹಾಗಿಲ್ಲದೆ ಅದು ಹೇಗಾದರೂ ಇರಲಿ ನಮ್ಮ ಇಷ್ಟಬಂದಂತೆ ಮಾಡುತ್ತೇವೆ ಎಂದರೆ ಹಾಗೆ ಮಾಡುವುದಕ್ಕೆ ಸಾಧ್ಯವೇ ಎಂಬುದನ್ನು ಆಲೋಚನೆ ಮಾಡಬೇಕು. ಭಾರತ ಸರ್ಕಾರದವರ ನೀತಿಗೆ ಒಳಪಟ್ಟು ಅವರು ಅಲಾಟ್‌ಮೆಂಟ್ ಮಾಡಬೇಕಾದರೆ ದೇಶದಲ್ಲಿ ಎಷ್ಟು ಬೆಲೆಯಾಗುತ್ತದೆ , ಬೆಳೆಯತಕ್ಕವರಿಗೆ ಎಷ್ಟು ಬಿಡಬೇಕು; ಸರ್‌ಪ್ಲಸ್ ಎಷ್ಟು ಉಳಿಯುತ್ತದೆ, ಎಂಬುದನ್ನು ನೋಡಿಕೊಂಡು ಅದನ್ನು ವಸೂಲು ಮಾಡಿ, ಇಷ್ಟು ವಸೂಲಾಗಿದೆ ಎಂದು ತೋರಿಸಿ, ಇಷ್ಟು ಕಮ್ಮಿ ಬಿದ್ದಿದೆ, ಇಷ್ಟು ಬೇಕು ಅಂತ ಹೇಳಿದರೆ ಅದನ್ನು ಸರಬರಾಯಿ ಮಾಡುವುದಕ್ಕೆ ಪ್ರಯತ್ನ ಮಾಡುತ್ತೇವೆ ಎಂದು ಅವರು ಹೇಳುತ್ತಾರೆ. ಹಾಗೆ ಹೇಳುವಾಗ ನಾವು ವಸೂಲು ಮಾಡುವುದನ್ನು ಬಿಟ್ಟು ಬಿಡುತ್ತೇನೆ ನೀವು ಕೊಡುವುದನ್ನು ಕೊಡಿ ಎಂದರೆ, ಆಗ ಅವರು ನಿಮಗೆ ಎಷ್ಟು ಬೇಕಾಗುತ್ತದೆ ಎಂಬುದನ್ನು ತಿಳಿಸಿ ಎಂದರೆ ಅಂಕಿ ಅಂಶ ಕೊಡುವುದಕ್ಕೆ ಕಷ್ಟವಾಗುತ್ತದೆ ಎಂಬುದನ್ನು ಗಮನಿಸಬೇಕು. ಆದ್ದರಿಂದ ಎಲ್ಲಿಯವರೆಗೆ ಇಡೀ ಭಾರತ ಡಿಫಿಸಿಟ್ ರಾಷ್ಟ್ರವಾಗಿರುತ್ತದೆಯೋ, ಎಲ್ಲಿಯವರೆಗೆ ಭಾರತ ಸರ್ಕಾರ ಇತರ ಸರ್ಕಾರಗಳವರಿಂದ ಅಲಾಟ್‌ಮೆಂಟ್ ತರಿಸಿಕೊಳ್ಳುತ್ತದೆಯೋ ಅಲ್ಲಿಯವರೆಗೂ ಅವರ ನೀತಿಗನುಗುಣವಾಗಿ ಹೋಗಬೇಕಾಗುತ್ತದೆ. ನಮ್ಮ ಮೈಸೂರು ಸಂಸ್ಥಾನ 50 ವರ್ಷದಿಂದ ಡಿಫಿಸಿಟ್ ಸಂಸ್ಥಾನ ಆಗಿದೆ ಮೊದಲೇ ಹೊರಗಡೆಯಿಂದ ಬೇಕಾದಷ್ಟು ಬರುತ್ತಾ ಇತ್ತು ಆದ್ದರಿಂದ ಅದು ವಿಶೇಷವಾಗಿ ಗೊತ್ತಾಗುತ್ತಾ ಇರಲಿಲ್ಲ. ಈಗ ಪ್ರಜಾ ಸಂಖ್ಯೆಯು ಕೂಡ ಹೆಚ್ಚಾಗಿದೆ. ಇಂಥ ಸನ್ನಿವೇಶದಲ್ಲಿರುವಾಗ ನಾವು ಭಾರತದ ಇತರ ಕಡೆಗಳಿಂದ ಆಹಾರ ಧಾನ್ಯ ತರಿಸಿಕೊಳ್ಳುತ್ತಿರುವಾಗ ಫ್ರೀ ಎಕಾನಮಿ ಮಾಡುತ್ತೇವೆ ಎಂದರೆ ಅದು ನನಗಂತೂ ಖಂಡಿತ ಅರ್ಥವಾಗುವುದಿಲ್ಲ. ಅದು ಬ್ರೇಕ್ ಡೌನ್ ಆಗುತ್ತದೆ ಎಂದು ನನಗೆ ಅನ್ನಿಸುತ್ತದೆ. ಈಗ ಕೆಲವು ಕಡೆ ಡೀರೇಷನ್ ಮಾಡಿದ್ದಾರೆ. ಎಂದು ನಮ್ಮ ಮಿತ್ರರು ಹೇಳಿದರು. ಅಲ್ಲಿ ಈಗ ಏನಾಗಿದೆ ಎಂದರೆ-ಮತ್ತೊಮ್ಮೆ ಸರ್ಕಾರವನ್ನು ಟೀಕೆ ಮಾಡುವುದಕ್ಕೆ ನನಗೆ ಇಷ್ಟವಿಲ್ಲ ನಮ್ಮ ಸಂಸ್ಥಾನಕ್ಕೆ ಬಂದಿರುವ ಸಮಾಚಾರದ ಪ್ರಕಾರ ಎಲ್ಲೆಲ್ಲಿ ಆ ರೀತಿ ಡೀರೇಷನ್ ಮಾಡಿದ್ದಾರೋ ಅಲ್ಲೆಲ್ಲಾ ವಿಪರೀತ ಬೆಲೆ ಜಾಸ್ತಿಯಾಗಿ ಎಲ್ಲೂ ಧಾನ್ಯ ಸಿಕ್ಕದ ಹಾಗಾಗಿ ಅಲ್ಲಿಂದ ಎಲ್ಲರೂ ಇಲ್ಲಿಗೆ ಬರುತ್ತಾ ಇದ್ದಾರೆ. ಮೈಸೂರು ಸಂಸ್ಥಾನಕ್ಕೆ inflow ಆಗುತ್ತಾ ಇದೆ. ನಮ್ಮ ಅನುಭವಕ್ಕೆ ಬಂದಿರುವಂತೆ ಚಿತ್ತೂರು, ಅನಂತಪುರ, ಬಳ್ಳಾರಿ ಜಿಲ್ಲೆಗಳಿಂದ inflow ಜಾಸ್ತಿ ಆಗುತ್ತಾ ಇದೆ. ಹೀಗಿರುವಾಗ ಅಲ್ಲಿ ಮಾಡಿರತಕ್ಕ ಪದ್ಧತಿಯನ್ನೇ ನೀವು ಜಾರಿಗೆ ತಂದುಬಿಡಿ ಎಂದು ಹೇಳಿದರೆ ಅದು ನನಗಾದರೂ ಆಶ್ಚರ್ಯವೆನಿಸುತ್ತದೆ.

ಪಟ್ಟಣವಾಸಿಗಳು, ಹಳ್ಳಿಯುವರು ಎಂಬುದಾಗಿ ಎರಡುಭಾಗ ಮಾಡಿ, ಪ್ರೊಕ್ಯೂರ್‌ಮೆಂಟ್ ಮಾಡುವುದೆಲ್ಲಾ ಪಟ್ಟಣದವರಿಗೆ ಸಪ್ಲೈ ಮಾಡುವುದಕ್ಕೆ ಎಂದು ಹೇಳುತ್ತಾ ಇರುವುದು ಸಂಪೂರ್ಣವಾಗಿ ಸರಿಯಾದ ವಿಷಯವಲ್ಲ. ಈಗ ಸ್ವಲ್ಪ ಹೆಚ್ಚು ಕಮ್ಮಿ ಅರ್ಧಕ್ಕಿಂತ ಕಮ್ಮಿ ದವಸ ಪಟ್ಟಣದಲ್ಲಿರತಕ್ಕ ಜನರಿಗೆ ಒದಗಿಸುತ್ತಾ ಇದ್ದೇವೆ. ಕಾರಣ ಇಷ್ಟೆ.ಅವರ ಪೈಕಿ ಜಮೀನು ಇರುವವರು ಇಲ್ಲ. ಎಂದರೆ ಬೆಳೆಯದೇ ಇರತಕ್ಕವರಿಗೆ ಯಾವ ರೀತಿಯಲ್ಲಾದರೂ

ದವಸಧಾನ್ಯ ಒದಗಿಸಬೇಕು. ಇನ್ನೂ ಅರ್ಧಭಾಗ ಹಳ್ಳಿಗಳಲ್ಲಿರತಕ್ಕ ಪಾರ್ಷಿಯಲ್ ಪ್ರೊಡ್ಯೂಸರ್ಸ್‌ಗೆ, ವ್ಯವಸಾಯದ ಕೂಲಿಗಾರರಿಗೆ ಕೊಡುತ್ತಿದ್ದೇವೆ. ಇದು ಸರ್ಕಾರದವರು ಅತ್ಯಗತ್ಯವಾಗಿ ಪಾಲಿಸಬೇಕಾದ ಕರ್ತವ್ಯ, ನೆರವೇರಿಸಬೇಕು. ಅಲಾಟ್‌ಮೆಂಟ್ ಇರುವುದು ಪಟ್ಟಣಗಳವರಿಗೆ ಕೊಟ್ಟು ಬಿಡಿ ನಮ್ಮ ತಂಟೆಗೆ ಬರಬೇಡಿರಿ ಎಂದರೆ ಅಲಾಟ್‌ಮೆಂಟ್ ಕೊಡುವುದು ಬಿಡುವುದು ಕೇಂದ್ರವರಿಗೆ ಸೇರಿದ್ದು. ಅದು ಹೇಗಾದರೂ ಇರಲಿ ಅವರು ಹೇಳತಕ್ಕ ವಾದ, ಬಹಳ ಅಪಾಯವಾದ ಸಲ್ಯೂಷನ್ ಎಂದು ಹೇಳುತ್ತೇನೆ. ಪಟ್ಟಣಗಳಲ್ಲಿ ಕೊಡುತ್ತಾ ಇರತಕ್ಕ ರೀತಿಯಲ್ಲೇ ಹಳ್ಳಿಗಳಲ್ಲೂ ಕೊಡಿ ಎಂದು ಇನ್ನು ಕೆಲವು ಮಿತ್ರರು ಹೇಳಿದರು, ಆ ರೀತಿ ಕೊಡುವುದಕ್ಕೆ ಬಹಳ ಕಷ್ಟವಿದೆ. ಪಟ್ಟಣಗಳಲ್ಲಿರುವವರು ಎಲ್ಲರೂ ಬೆಳೆಯದೇ ಇರತಕ್ಕವರು. ವರ್ಷದ ಮೊದಲಿನಿಂದ ಕೊನೆಯವರೆಗೂ ಅವರಿಗೆ ಆಹಾರ ಒದಗಿಸಬೇಕು. ಹಳ್ಳಿಗಳ ಸ್ಥಿತಿ ಹಾಗಲ್ಲ. ಶ್ರೀಮಾನ್ ಮರಿಯಪ್ಪನವರು ಹೇಳಿದಂತೆ ಕೆಲವರು 4 ತಿಂಗಳಿಗೆ, ಕೆಲವರು 6 ತಿಂಗಳಿಗೆ, ಕೆಲವರು 8 ತಿಂಗಳಿಗೆ ಸಾಕಾಗುವಷ್ಟು ಬೆಳೆದುಕೊಳ್ಳುತ್ತಾರೆ. ಆಯಾಯಾ ಕಾಲಗಳಲ್ಲಿ ಮಾತ್ರ ಕೊಡಬೇಕಾಗುತ್ತದೆ. ಅದನ್ನು ನೋಡಿಕೊಂಡು ಕೊಡುತ್ತೇವೆ. ಅಲ್ಲಿ ಪೂರ್ತಿಯಾಗಿ ಸ್ಟ್ಯಾಚುಟರಿ ರೇಷನ್ ಪ್ರದೇಶದಲ್ಲಿ ರೇಷನ್ ಕೊಡುವಂತೆ ಕೊಡಬೇಕಾದ ಅವಶ್ಯಕತೆ ಇಲ್ಲ. ಕೊಡುವುದಕ್ಕೆ ಸಾಧ್ಯವಾಗುವುದಿಲ್ಲ.

ಶ್ರೀ ಎಚ್.ಎಂ. ಚನ್ನಬಸಪ್ಪ:–What about non-Producers?

**ಶ್ರೀ ಕೆ. ಚೆಂಗಲರಾಯರೆಡ್ಡಿ:**–I will come to that ವ್ಯವಸಾಯದ ಕೂಲಿಗಾರರಿಗೆ ಕೆಲವು ಕಾಲ ಧಾನ್ಯ ಸಿಕ್ಕುತ್ತದೆ. ಕೆಲವು ಕಾಲ ಸರ್ಕಾರೀ ಡಿಪೋಗಳ ಮೂಲಕ ಕೊಡಬೇಕಾಗುತ್ತದೆ. ಇನ್ನೂ ಕೆಲವರು ವ್ಯವಸಾಯದ ಕೂಲಿಗಾರರಲ್ಲದೇ ಇರುವರರು ಇರುತ್ತಾರೆ. ಅವರಿಗೂ ಸಹ ಸಾಧ್ಯವಾದಷ್ಟು ಮಟ್ಟಿಗೂ ಮಿನಿಮಂ ಸಪ್ಲೈ ಮಾಡಬೇಕು, ಅದನ್ನು ಒಪ್ಪಿಕೊಳ್ಳುತ್ತೇನೆ. ಶ್ರೀಮಾನ್ ಚೆನ್ನಬೈರೇಗೌಡರು ಹೇಳಿದಂಥ ವಾದ ಹೇಗೆ ಸಾಧುವಲ್ಲ ಎಂಬುದಕ್ಕೆ ಹೇಳುತ್ತೇನೆ. ಇಂಡಿಯಾ ಸರ್ಕಾರದವರು ಕೊಡುವುದನ್ನು ಪಟ್ಟಣಗಳಿಗೆ ಕೊಟ್ಟುಬಿಡಿ, ಹಳ್ಳಿಗಳಲ್ಲಿ ಪ್ರೊಕ್ಯೂರ್‌ಮೆಂಟ್ ವಜಾ ಮಾಡಿ ಎಂದರೆ ಎಷ್ಟು ಪ್ರಮಾದ ಆಗಬಹುದೂ ಎಂಬುದನ್ನು ಸ್ವಲ್ಪ ಊಹಿಸಿಕೊಳ್ಳಬೇಕು. ಬಡಬಗ್ಗರು ಮತ್ತು ಸಂಪೂರ್ಣವಾಗಿ ಬೆಳೆದು ಸಹ ವರ್ಷಕ್ಕಾಗುವಷ್ಟು ಉಪಯೋಗಿಸಿಕೊಳ್ಳುವುದಕ್ಕೆ ಅವಕಾಶವಿಲ್ಲದೇ ಇರತಕ್ಕವರ ಪಾಡು ಬಹಳ ಕೆಟ್ಟುಹೋಗುತ್ತದೆ. ಅವರಿಗೆ ಬಹಳ ತೊಂದರೆಯಾಗುತ್ತದೆ ಎಂಬುದರಲ್ಲಿ ಯಾವ ಅನುಮಾನವೂ ಇಲ್ಲ. ಈ ರೀತಿ ಪ್ರಯೋಗ ಮಾಡಿರುವ ಕಡೆ ಯಾವ ಪರಿಸ್ಥಿತಿಯುಂಟಾಗಿದೆ ಎಂಬುದು ನಮ್ಮ ಅನುಭವದಲ್ಲಿದೆ. ಆದ್ದರಿಂದ ಅದನ್ನು ಮಾಡುವುದಕ್ಕಾಗುವುದಿಲ್ಲ. ಆದರೆ ಇದನ್ನು ಮಾತ್ರ ಒಪ್ಪಿಕೊಳ್ಳುತ್ತೇನೆ. ಇನ್ನೂ ಹಳ್ಳಿಗಳಲ್ಲಿ ಉದಾರವಾಗಿ ರೇಷನ್ ಕೊಡಿ, ರೇಷನ್ ಇನ್ನೂ ಜಾಸ್ತಿ ಮಾಡಿ, ಅಲ್ಲಿ ಕೊಡುತ್ತಾ ಇರುವುದು ಸಾಲದು, ಪಟ್ಟಣಗಳಲ್ಲಿ ಸಂಪೂರ್ಣವಾಗಿ ಹೇಗೆ ಕೊಡುತ್ತೀರೋ ಅದೇರೀತಿ ಸಾಧ್ಯವಾದಷ್ಟೂ ಕೊಡಬೇಕು ಎಂಬುದನ್ನು ಸಂಪೂರ್ಣವಾಗಿ ಒಪ್ಪಿಕೊಳ್ಳುತ್ತೇನೆ. ಇದರಲ್ಲಿರತಕ್ಕ ಸಮಸ್ಯೆ ಇಷ್ಟೇ. ಎಷ್ಟು ಧಾನ್ಯ ನಮ್ಮಲ್ಲಿ ಇದೆ, ಪ್ರೊಕ್ಯೂರ್‌ಮೆಂಟ್ ಎಷ್ಟು ಮಾಡುತ್ತಾರೆ, ಎಷ್ಟು ಅಲಾಟ್‌ಮೆಂಟ್ ತರಿಸಬೇಕು, ಎಂಬುದನ್ನು ನೋಡಿಕೊಂಡು ಇರುವುದು ಕೊಡುವುದಕ್ಕೆ ಸಾಧ್ಯವೇ ಹೊರತು ಇಲ್ಲದೇ ಇರುವುದು ಕೊಡುವುದಕ್ಕೆ ಹೇಗೆ ಸಾಧ್ಯವಾಗುತ್ತದೆ ಎಂಬ ಪ್ರಶ್ನೆಯನ್ನು ತಮ್ಮಲ್ಲಿ ಕೇಳಬೇಕಾಗಿದೆ. ಇಷ್ಟು ಮಾತ್ರ ಮಾಡಬಹುದು, ಏನೆಂದರೆ ಸ್ಟ್ಯಾಚ್ಯುಟರಿ ರೇಷನ್ ಪ್ರದೇಶದಲ್ಲಿ

12 ಔನ್ಸ್ ಕೊಡುವುದನ್ನು 10 ಔನ್ಸ್ ಮಾಡಿ ಉಳಿದ 2 ಔನ್ಸನ್ನು ಇನ್ನೂ ಸ್ವಲ್ಪ ಧಾರಾಳವಾಗಿ ಹಳ್ಳಿಗಾಡು ಪ್ರದೇಶಗಳಿಗೆ ಕೊಡುವುದಕ್ಕೆ ಸಾಧ್ಯವೇ ಎಂಬುದನ್ನು ಯೋಚನೆ ಮಾಡಬಹುದೇ ಹೊರತು ಅಲ್ಲೂ ಸಂಪೂರ್ಣವಾಗಿ ಕೊಡಬೇಕು, ಇಲ್ಲೂ ಸಂಪೂರ್ಣವಾಗಿ ಕೊಡಬೇಕು, ಅಲಾಟ್‌ಮೆಂಟ್ ಬಂದರೆ ಬರಲಿ, ಹೋದರೆ ಹೋಗಲಿ ಎಂಬುದಾಗಿ ಮಾಟ, ಮಂತ್ರ ಮಾಡುವುದಕ್ಕೆ ಯಾವ ಸರ್ಕಾರದಿಂದಲೂ ಸಾಧ್ಯವಾಗುವುದಿಲ್ಲ.

**Sri H.M. Channabasappa:**To people living in rural areas who have absolutely no other means except depending on Government depots, do Government agree to give them The same protection as they Give to the people living in the ration areas? If such an assurance is given, it will help us to appreciate the Government point of view.

**The Hob'le Sri CHANGALARAYA REDDY:** There may be some places where full quantity is not bing given, but the attempt is there to give the maximum quantity.

**Sri H.M.CHANNABASAPPA:** Do Government stand committed to that? is it not a question of giveing where it is possible and not where it is not possible, because that will result in discrimination which is against the Constitution.

**The Hon'ble Sri K.CHENGALARAY REDDY:** Any way, all this will show that a certain amount of control is necessary at present. ಆದ್ದರಿಂದ ಯಾವ ದೃಷ್ಟಿಯಿಂದ ನೋಡಿದರೂ ಈಗಿನ ಸನ್ನಿವೇಶಗಳಲ್ಲಿ ಕಂಟ್ರೋಲನ್ನು ತೆಗೆದರೆ ಅಥವಾ ಪ್ರೊಕ್ಯೂರ್‌ಮೆಂಟನ್ನು ನಿಲ್ಲಿಸಿದರೆ ಅದರಿಂದ ಅನೇಕವಾದ ತೊಂದರೆಗಳಾಗುತ್ತವೆಂಬುದರಲ್ಲಿ ಯಾವ ಅನುಮಾನವೂ ಇಲ್ಲ. ಏಕೆಂದರೆ, ಒಂದು ವಿಷಯ ತಮ್ಮ ಜ್ಞಾಪಕಕ್ಕೆ ತರುತ್ತೇನೆ. 1947-48ನೆಯ ಇಸವಿಯಲ್ಲಿ ಒಮ್ಮೆ ಕಂಟ್ರೋಲನ್ನು ತೆಗೆದುಹಾಕಿದರು. ಆ ಕಾಲದಲ್ಲಿ ಸರ್ಕಾರಕ್ಕೂ ಮತ್ತು ನನಗೂ ಉಂಟಾದ ಸಂತೋಷ ಮತ್ತಾವ ಕಾಲದಲ್ಲಿಯೂ ಇರಲಿಲ್ಲ. ನನ್ನ ಎಷ್ಟೊ ತಲೆ ನೋವು ನಿಂತುಹೋಯಿತು. ಹೀಗಿರುವಾಗ ಸ್ವಲ್ಪವೂ ಕಿರುಕುಳವಿಲ್ಲದೆ ತಲೆಯ ಭಾರವಿಲ್ಲದೆ ಸಂತೋಷವಾಗಿರತಕ್ಕ ಸನ್ನಿವೇಶವನ್ನು ಬಿಟ್ಟು ಸರ್ಕಾರದವರು ಕಂಟ್ರೋಲನ್ನೇಕೆ ಮತ್ತೆ ಹಾಕಬೇಕಾಗಿ ಬಂತು ಎಂಬುದನ್ನು ಯೋಚನೆ ಮಾಡಿ. ಅದು ಮನಸ್ವಿಯಾಗಿ ಮಾಡುತ್ತಿಲ್ಲ; ಮೂರ್ಖತನವಲ್ಲ; ಮೌಢ್ಯವಲ್ಲ; ಹಠಮಾರಿತನದಿಂದಲ್ಲ; ಕಂಟ್ರೋಲನ್ನು ನಡೆಸಿಕೊಂಡು ಹೋಗಬೇಕೆಂಬ ಆಸೆಯಿಂದಲ್ಲವೆಂದು ನಾನು ಹೇಳುತ್ತೇನೆ. ಕಂಟ್ರೋಲ್ ತೆಗೆದು ಹಾಕಿದ ಮೂರು ನಾಲ್ಕು ತಿಂಗಳ ಕಾಲದಲ್ಲಿ ಎಂಥ ಭಯೋತ್ಪಾದಕ ಸೂಚನೆಗಳು ಕಂಡು ಬಂದವೆಂಬುದನ್ನು ನಾನು ಹೇಳಬೇಕಾಗಿಲ್ಲ. ನಿದರ್ಶನವಾಗಿ ಒಂದು ಹೇಳುತ್ತೇನೆ; ಒಮ್ಮೆ ದಾರಿಯಲ್ಲಿ ಹೋಗುತ್ತಿದ್ದಾಗ ಒಬ್ಬ ಹಣ್ಣಣ್ಣು ಮುದುಕಿ 70-80 ವರ್ಷದವಳು ಮಾತನಾಡಲಿಕ್ಕೂ ಶಕ್ತಿ ಇಲ್ಲದೆ, ಕೈಸನ್ನೆ ಮಾಡಿ ಡಿ ಕಂಟ್ರೋಲ್ ಆದ ಮೇಲೆ ರೂಪಾಯಿಗೆ ಎರಡು ಸೇರೂ ಸಿಕ್ಕದಿರುವುದನ್ನು ತಿಳಿಸಿದ್ದು ಎಷ್ಟು ವ್ಯಸನಕರವಾಗಿತ್ತೆಂಬುದನ್ನು ನಾನು ವಿವರಿಸಲಾರೆ. ರೈತರಿಗೇನೋ ತಾತ್ಕಾಲಿಕವಾಗಿ

ಅನುಕೂಲವಾಗಿರಬಹುದು. ಶ್ರೀ ಚನ್ನಬೈರೇಗೌಡರೇನೋ ರೈತರ ಪರವಾಗಿ ಬಹಳ ಮಾತನಾಡಿದರು. ಆದರೆ, ಚನ್ನಬೈರೇಗೌಡರೆಷ್ಟು ರೈತವಂಶಸ್ಥರೋ ಅಥವಾ ಶ್ರೀ ಹುಚ್ಚೀಗೌಡರಿಗೆಷ್ಟು ರೈತರ ಅನುಭವವಿದೆಯೋ ಅಷ್ಟೇ ಮಟ್ಟಿಗೆ ನಾನು ರೈತವಂಶದವನಾಗಿ, ರೈತರ ಅನುಭವವುಳ್ಳವನಾಗಿದ್ದೇನೆಂದು ಹೇಳಬಲ್ಲೆ. ರೈತನಾಗಿ ಹುಟ್ಟಿದ್ದೇನೆ ರೈತನಾಗಿ ಬೆಳೆದಿದ್ದೇನೆ. ನಾನು ಬಿ.ಎಲ್. ಪಾಸುಮಾಡಿದ ಮೇಲೆ 5-6 ವರ್ಷ ರೈತನಾಗಿಯೇ ಹಳ್ಳಿಯಲ್ಲಿದ್ದವನು,ಅಲ್ಲದೆ ಕಂಟ್ರೋಲ್ ತೆಗೆದುಹಾಕಿದರೆ ಹೆಚ್ಚಿಗೆ ವರಮಾನ ಬರುತ್ತದೆಂದು ನಿರೀಕ್ಷಣೆಯಿಟ್ಟುಕೊಳ್ಳಬೇಕಾಗಿರುವವನೂ ನಾನು. ಆದರೆ ನಾವು ಸರ್ಕಾರದಲ್ಲಿರತಕ್ಕವರಾಗಿ ರೈತರ ಹಿತದೃಷ್ಟಿಯನ್ನೂ ನೋಡಬೇಕು, ಇತರೇ ಜನರ ಹಿತದೃಷ್ಟಿಯನ್ನೂ ನೋಡಬೇಕು. ಎರಡೂ ಸಮದೃಷ್ಟಿಯಿಂದ ನೋಡಿಕೊಂಡು ಇಬ್ಬರಿಗೂ ಸಾಧುವಾದ ಮಾರ್ಗವನ್ನು ಅನುಸರಿಸಿಕೊಂಡು ಹೋಗುವ ನೀತಿ ನಮ್ಮದಾಗಿರಬೇಕು. ಅಂದಮಾತ್ರಕ್ಕೆ ಈಗ ಸರ್ಕಾರದವರು ನಡೆಸಿಕೊಂಡು ಹೋಗುವ ನೀತಿ ಸರ್ವೋತ್ಕೃಷ್ಟವಾದ್ದು, ಆದರಲ್ಲಿ ಲೋಪದೋಷಗಳೇನೂ ಇಲ್ಲವೆಂದು ಯಾರೂ ಹೇಳುವುದಿಲ್ಲ. ನಾವು ಹಾಕಿರತಕ್ಕ ನೀತಿಯನ್ನು ಕಾರ್ಯತಃ ಜಾರಿಗೆ ತರುವವರು ಕೇವಲ ಮನುಷ್ಯರೇ ಎಂಬುದನ್ನು ನಾವು ಗಮನಿಸಬೇಕು. ಮನುಷ್ಯರಲ್ಲಿ ಎಷ್ಟರಮಟ್ಟಿಗೆ ಲೋಪದೋಷಗಳಿರುತ್ತವೆಯೋ ಅಷ್ಟೇಮಟ್ಟಿಗೆ ಅವರ ಕೆಲಸಕಾರ್ಯಗಳಲ್ಲೂ ಲೋಪದೋಷಗಳಿರುತ್ತವೆ. ಅಂದಮಾತ್ರಕ್ಕೇ ನಮ್ಮ ಪದ್ಧತಿಯನ್ನೇ ಸರಿಯಾಗಿಲ್ಲವೆಂದು ಹೇಳಿಬಿಟ್ಟುಬಿಡಬೇಕೆಂದು ಹೇಳುವುದು ಸರಿಯಲ್ಲ.

**Sri K.R. Sri kanteswar Bangalore City:-** General:- Why this oscillating policy between control and de-control? Why not the party come forward and say that they have got a definite poliy of control?

**Sri k. Chengalaraya reddy:**The definte policy of this Government and the the Congress party which is behind this Government is one of gradual de-control It is neither wedded to control for all time nor wedded to de-control immediately as is now proposed by the mover of the resolution. As and when circumstances permit, when the time is ripe, when the Government are assured that there will be no serious dislocation or serious harm to any section of the people then, it would be time enough to de-control; we want to bring about that de-control as speedily as possible. ಆದ್ದರಿಂದ ಹತೋಟಿಯೆಂಬುದು ಯಾರಿಗೂ ಪ್ರಿಯವಾದ್ದಲ್ಲ. ಕಬ್ಬಿಣ, ಸಿಮೆಂಟ್ ಯಾವುದನ್ನು ತೆಗೆದುಕೊಂಡರೂ ಅವನ್ನು ತಯಾರಿಸುವವರು ಹತೋಟಿಗಳನ್ನು ಒಪ್ಪುವುದೇ ಇಲ್ಲ. ಆದರೆ, ರೈತರು ತಮ್ಮ ದವಸ ಧಾನ್ಯಗಳಿಗೆ ಹತೋಟಿ ಬೇಡವೆಂದರೂ, ಬೇರೆ ಕಬ್ಬಿಣ ಮುಂತಾದ ಮುಟ್ಟುಗಳಿಗೆ ಹತೋಟಿಯಿರಲೇಬೇಕೆನ್ನುತ್ತಾರೆ. ಹಾಗೆಯೇ ಕಡ್ಲೆಕಾಯಿ, ಹಿಂಡಿ ರೈತರಿಗೆ ಇದರ ಹತೋಟಿ ಬೇಕು, ಗಾಣದವರಿಗೆ ಹತೋಟಿ ಬೇಡ. ಹೀಗೆ ನಮಗೆ ಬೇಕಾದ ವಸ್ತುಗಳಿಗೆ ಹತೋಟಿ ಬೇಕು, ನಾವು ಮಾರಬೇಕಾದ ವಸ್ತುಗಳಿಗೆ ಹತೋಟಿ ಬೇಡ ಎನ್ನುವುದು ಸ್ವಾಭಾವಿಕ.

**ಶ್ರೀ ಬಿ. ಹುಚ್ಚೇಗೌಡರು:**-ಹತೋಟಿ ಬೇಕೆಂದು ಯಾರು ಹೇಳಿದರು, ಯಾವುದಕ್ಕೆ ಹೇಳಿದರು, ಎಲ್ಲಿ ಹೇಳಿದರು ಎಂಬುದನ್ನು ದಯವಿಟ್ಟು ತಿಳಿಸುತ್ತೀರಾ?

**ಮಾನ್ಯ ಶ್ರೀ ಕೆ. ಚೆಂಗಲರಾಯರೆಡ್ಡಿಯವರು:** ಸರ್ವೇಸಾಮಾನ್ಯವಾಗಿ ತಮಗೆಲ್ಲಾ ಗೊತ್ತಿರುವಂತೆ, ಬಟ್ಟೆ ತಯಾರುಮಾಡುವವರೂ, ಮಿಲ್ಲಿನವರೂ ಬಟ್ಟೆಗೆ ಹತೋಟಿ ಬೇಡವೆಂದು ಹೇಳುತ್ತಾರೆ; ಸಿಮೆಂಟ್ ತಯಾರು ಮಾಡುವವರೂ ಸಿಮೆಂಟಿಗೆ ಹತೋಟಿ ಇರಕೂಡದೆಂದೂ ಹೇಳುತ್ತಾರೆ ಹೀಗೆ ಅವರವರ ಕ್ಷೇತ್ರಕ್ಕೆ ಸಂಬಂಧಪಟ್ಟ ವಸ್ತುಗಳ ಮೇಲೆ ಹತೋಟಿಯಿಲ್ಲದೆ ಮಿಕ್ಕದ್ದರ ಮೇಲೆ ಹತೋಟಿಯಿದ್ದು ಪ್ರತಿಫಲ ಹೊಂದಬೇಕೆಂದು ಎಲ್ಲರಿಗೂ ಆಸೆಯಿದೆ.

**ಶ್ರೀ ಬಿ. ಚೆನ್ನಬೈರೇಗೌಡರು:**- ಎಲ್ಲಿ ಯಾವ ಸರ್ಕಾರ ಮುಂದೆ ಬಂದು ಕಂಟ್ರೋಲ್ ಬೇಕೆಂದು ಹೇಳಿದರೆಂಬುದನ್ನು ತಿಳಿಸಿ.

**ಶ್ರೀ ಚೆಂಗಲರಾಯರೆಡ್ಡಿ:**- ಯಾವ ಪದಾರ್ಥವೇ ಆಗಲಿ, ಪ್ರಮಾಣದಲ್ಲಿ ಸಾಕಷ್ಟಿಲ್ಲದೆ ಇದ್ದರೆ ವಿಪರೀತ ಬೆಲೆಯಾಗದ ರೀತಿಯಲ್ಲಿ ಎಲ್ಲರಿಗೂ ಹಂಚತಕ್ಕ ಏರ್ಪಾಡು ಮಾಡುವುದು ಸರ್ಕಾರದವರ ಕರ್ತವ್ಯ. ಆಹಾರ ಪದಾರ್ಥವೇ ಆಗಲಿ, ಕೈಗಾರಿಕಾ ಪದಾರ್ಥವೇ ಆಗಲಿ, ಇಂಥ ಸಂದರ್ಭಗಳಲ್ಲಿ ಧಾರಣೆಯ ಹತೋಟಿ ಮಾಡಿಯೇ ತೀರಬೇಕೆಂಬ ತತ್ವವನ್ನು ಎಲ್ಲರೂ ಒಪ್ಪಿಕೊಂಡಿದ್ದಾರೆ. ಆದ್ದರಿಂದ ದೇಶದಲ್ಲಿ ಉತ್ಪತ್ತಿಯ ಪ್ರಮಾಣ ನಮ್ಮ ಪ್ರಜಾಸಂಖ್ಯೆಗೆ ಅನುಗುಣವಾಗಿ ಎಲ್ಲಿಯವರೆಗೆ ಜಾಸ್ತಿಯಾಗುವುದಿಲ್ಲವೋ ಅಲ್ಲಿಯವರೆಗೆ ಧಾರಣೆಗಳು ವಿಪರೀತ ಏರದಂತೆ inflation ನ್ನು ತಡೆಗಟ್ಟಲೇಬೇಕು. ಇದಕ್ಕಾಗಿ ಒಂದಲ್ಲಾ ಒಂದು ರೀತಿಯಲ್ಲಿ ಹತೋಟಿಯನ್ನು ಇಟ್ಟುಕೊಳ್ಳಬೇಕು. ಕಂಟ್ರೋಲ್ ತೆಗೆದುಬಿಟ್ಟರೆ ಹೇಗೊ ನಡೆಯುತ್ತದೆ ಎಂದು ಹೇಳುವ ಹಾಗಿಲ್ಲ. ಎಲ್ಲವೂ confusion ಆಗುತ್ತದೆಂದು ಹೇಳಬೇಕಾಗಿಲ್ಲ. ನಾನಿದನ್ನು ಜವಾಬ್ದಾರಿಯಿಂದ ಹೇಳುತ್ತೇನೆ. ಈ 5-6 ವರ್ಷಗಳಿಂದ ಈ ವಿಧವಾದ ಕಂಟ್ರೋಲ್ ಇಲ್ಲದೆ ಹೋಗಿದ್ದರೆ ಇಷ್ಟು ಹೊತ್ತಿಗೆ ಕ್ರಾಂತಿಕಾರಕವಾದ ಸನ್ನಿವೇಶಗಳು ಉಂಟಾಗುತ್ತಿದ್ದುವೆಂದು ನಾನು ಹೇಳಬಲ್ಲೆ.

**ಶ್ರೀ ಬಿ. ಹುಚ್ಚೇಗೌಡರು:**- ಬಟ್ಟೆಗೆ ಯಾವ ರೀತಿಯಲ್ಲಿ ಕಂಟ್ರೋಲ್ ಹಾಕಿದೆಯೋ ಅದಕ್ಕೆ ಯಾವ ವಿಧಾನವನ್ನನುಸರಿಸಿದ್ದೀರೋ ಅದೇ ವಿಧಾನವನ್ನು ಆಹಾರ ಧಾನ್ಯಗಳಿಗೂ ಏಕೆ ಅನ್ವಯಿಸ ಕೂಡದು? ಬಟ್ಟೆಯ ದರವನ್ನು ಗೊತ್ತು ಮಾಡುವ ರೀತಿಯಲ್ಲೇ ಧಾನ್ಯಗಳಿಗೂ ಗೊತ್ತು ಮಾಡಿದ್ದೀರಾ?

**ಮಾನ್ಯ ಶ್ರೀ ಕೆ. ಚೆಂಗಲರಾಯರೆಡ್ಡಿಯವರು:**- ದರದ ವಿಚಾರ ಇಲ್ಲಿ ಬರುವುದಿಲ್ಲ. ಬೇಕಾದರೆ ಅದನ್ನು ಆಮೇಲೆ ಹೇಳುತ್ತೇನೆ. ಪ್ರೊಕ್ಯೂರ್‌ಮೆಂಟಿನ ಹತೋಟಿ ತೆಗೆದುಹಾಕುವ ಪ್ರಶ್ನೆ ಈಗಿರುವುದು. ಒಟ್ಟು ಕಂಟ್ರೋಲಿನ ವಿಚಾರದಲ್ಲಿ ಹೇಳುತ್ತೇನೆ; ಬೆಲೆಯ ಹತೋಟಿ, ಸಾಗಾಣಿಕೆಯ ಹತೋಟಿ-ಇವೆಲ್ಲಾ ಇರಬೇಕೆಂದು ಹೇಳಿದ ಮೇಲೆ, ಪ್ರೊಕ್ಯೂರ್‌ಮೆಂಟ್ ಒಂದು ಮಾತ್ರ ಬೇಡವೆಂದರೆ ಹೇಗಾಗುತ್ತದೆ? ಮುಖ್ಯವಾಗಿ ಪ್ರೊಕ್ಯೂರ್‌ಮೆಂಟ್ ಸ್ಟೇಜಿನಿಂದ ಹಿಡಿದು ಕೊನೆಯಲ್ಲಿ ಹಂಚಿಕೆ ಮಾಡುವ ಸ್ಟೇಜಿನವರೆಗೂ ಮಧ್ಯೆ ಏನೇನು ಹತೋಟಿಗಳನ್ನಿಟ್ಟುಕೊಂಡು ಕೆಲಸಮಾಡಬೇಕೋ ಅಷ್ಟನ್ನೂ ಇಟ್ಟುಕೊಂಡು ಕೆಲಸಮಾಡಿದರೆ ಸರಿಯಾಗುತ್ತದೆಯೇ ಹೊರತು ಒಂದನ್ನು ಇಟ್ಟುಕೊಳ್ಳಿ ಇನ್ನೊಂದನ್ನು ಬೇಡಿ ಎಂದರೆ, ಯಾವುದೂ ಸರಿಯಾಗುವುದಿಲ್ಲ. ಪ್ರೊಕ್ಯೂರ್‌ಮೆಂಟೇ ಇಲ್ಲದಿದ್ದರೆ ರೇಷನಿಂಗ್ ಹೇಗೆ ಮಾಡುತ್ತೀರಿ? ಹಂಚಿಕೆ ಹೇಗೆ ಮಾಡುತ್ತೀರಿ?

**ಶ್ರೀ ಬಿ. ಹುಚ್ಚೇಗೌಡರು:-** ಹಾಗಾದರೆ, ಪೂರ್ತಿಯಾಗಿ ಎಲ್ಲವನ್ನು ಕಂಟ್ರೋಲ್ ಮಾಡಿ ತೆಗೆದುಕೊಂಡು ಎಲ್ಲರಿಗೂ ಸರಿಯಾಗಿ ಸಂಚಿಕೆ ಮಾಡುವುದಕ್ಕೆ ಸಾಧ್ಯವೇ?

**ಮಾನ್ಯ ಶ್ರೀ ಕೆ. ಚೆಂಗಲರಾಯರೆಡ್ಡಿಯವರು:-** ಅವರು ಹೇಳುವುದು ಒಟ್ಟು ಸಂಸ್ಥಾನದಲ್ಲಿ ಹಾಗೂ ಭಾರತದಲ್ಲಿ ಎಷ್ಟು ಬೆಳೆಯಾಗುತ್ತದೆಯೋ ಅಷ್ಟನ್ನೂ ಪ್ರೊಕ್ಯೂರ್ ಮಾಡಿಕೊಂಡು ತಂದು ಸರ್ಕಾರಿ ಗೋಡೌನ್‌ನಲ್ಲಿ ಹಾಕಿಕೊಂಡು ಬೆಳೆದವರು, ಬೆಳೆಯದವರು ಎಲ್ಲರಿಗೂ ರೇಷನ್ ಕಾರ್ಡ್‌ಗಳನ್ನು ಹಂಚಿ, ಅದರ ಪ್ರಕಾರ ಜನರಿಗೆ ಒಂದೇ ಸಮಾನಾಗಿ ಆಹಾರವನ್ನು ಹಂಚಿಕೆ ಮಾಡಬೇಕು ಎಂದು. ತಮ್ಮ ಸರ್ಕಾರ ಬಂದಾಗ ಬಹುಶಃ ಅದನ್ನು ಪ್ರಯತ್ನಮಾಡಿ ನೋಡಬಹುದು; ಈ ಸರ್ಕಾರಕ್ಕೆ ಅದು ಬಹಳ ಕಷ್ಟ. ಅಷ್ಟುಭಾರಿ ಪ್ರಮಾಣದಲ್ಲಿ ಪ್ರೊಕ್ಯೂರ್ ಮಾಡಿಕೊಂಡು ಇಡೀ 30 ಕೋಟಿ ಜನರಿಗೆ ಹಂಚುವುದೆಂದರೆ ಈಗಿರುವ ಕಷ್ಟಕ್ಕೆ ಇನ್ನೂ ಹತ್ತರಷ್ಟಾಗುತ್ತದೆ ಎಂದು ನಾನು ಹೇಳಬಲ್ಲೆ.

ಪ್ರೊಕ್ಯೂರ್‌ಮೆಂಟ್, ಪಾರ್ಷಿಯಲ್ ಪ್ರೊಕ್ಯೂರ್‌ಮೆಂಟ್ ವಿಷಯವನ್ನು ಬಿಟ್ಟರೆ ಇನ್ನೂ ಅನೇಕ ಅಂಶಗಳನ್ನು ಅವರು ಹೇಳಿದ್ದಾರೆ ಒಟ್ಟಿನಲ್ಲಿ ನಾನು ಇಷ್ಟು ಮಾತ್ರ ಹೇಳುತ್ತೇನೆ. ಸರ್ಕಾರದವರು ಈಗ ಅನುಸರಿಸುತ್ತಿರುವ ನೀತಿಯಲ್ಲಿ ರೈತರ ಹೊಟ್ಟೆಯ ಮೇಲೆ ಹೊಡೆದು ರೈತರಿಗೆ ದ್ರೋಹವೆಣಿಸಿ ಅವರಿಗೆ ಇಲ್ಲದ ಸಲ್ಲದ ತೊಂದರೆಗಳನ್ನು ಕೊಟ್ಟು ಬೇರೆಯವರಿಗೆ ಉಪಕಾರ ಮಾಡಿ ಅವರಿಂದ ಶಹಭಾಷ್ ಗಿರಿಯನ್ನು ಪಡೆದುಕೊಳ್ಳಬೇಕು ಎಂಬ ಉದ್ದೇಶ ಖಂಡಿತವಾಗಿಯೂ ಇಲ್ಲ. ಎಷ್ಟು ಸಾಧ್ಯವೋ ಅಷ್ಟು ಮಟ್ಟಿಗೆ ರೈತರಿಗೂ ಹಳ್ಳಿಯವರಿಗೂ ಅನುಕೂಲಮಾಡಿದ್ದೇವೆ.ಅದೆಲ್ಲವನ್ನೂ ಈಗ ಹೇಳುವುದಕ್ಕೆ ಸಾಧ್ಯವಿಲ್ಲ. ರೈತರ ಹಿತರಕ್ಷಣೆಯೇ ಸರ್ಕಾರಕ್ಕೆ ಅತಿ ಮುಖ್ಯವೆಂದಿಟ್ಟುಕೊಂಡಿದ್ದೇವೆ. ಈಗ ಭಾರತದ ಮತ್ತು ಒಟ್ಟು ಪ್ರಪಂಚದ ಪರಿಸ್ಥಿತಿಯಿಂದ ಎಲ್ಲರಿಗೂ ಆಹಾರವೇ ಮುಖ್ಯ ಪ್ರಶ್ನೆಯಾಗಿರುವುದರಿಂದ ವಿಧಿಯಿಲ್ಲದೆ ಕಂಟ್ರೋಲ್ ಇಡಬೇಕಾಗಿರುವುದರಿಂದ ಇಟ್ಟಿದ್ದೇವೆಯೇ ಹೊರತು ಬೇರಾವ ಉದ್ದೇಶದಿಂದಲೂ ಅಲ್ಲ.

ಬೆಲೆಯ ವಿಷಯವನ್ನು ಹೇಳುವುದಾದರೆ, ಹಿಂದೆ ಪಲ್ಲಕ್ಕೆ 12-13 ರೂಪಾಯಿ ಇತ್ತು ನಮ್ಮ ಸರ್ಕಾರ ಬಂದಾಗ ಅದನ್ನು 23 ರೂಪಾಯಿಯವರೆಗೂ ಹೆಚ್ಚುಮಾಡಿದ್ದೇವೆ. ಹಿಂದಿದ್ದ ಸರ್ಕಾರದವರು ಈ ವಿಷಯಕ್ಕೆ ಕೈಹಾಕುವುದಕ್ಕೂ ಹೆದರುತ್ತಿದ್ದರು ಆದರೂ ಈ ಬೆಲೆಯು ಸಾಲದೆಂಬುದನ್ನು ಒಪ್ಪುತ್ತೇನೆ. ಆಹಾರ ಬೆಳೆಯಲು ರೈತರಿಗೆ ಎಷ್ಟು ಖರ್ಚಾಗುತ್ತದೆ, ಅವರು ಎಷ್ಟು ಕೂಲಿ ಕೊಡಬೇಕು ಎಂಬುದನ್ನೆಲ್ಲಾ ನೋಡಿದರೆ ಜಾಸ್ತಿ ಮಾಡುವುದಕ್ಕೆ ಸಕಾರಣವಿದೆಯೆಂದು ನಾನು ಒಪ್ಪುತ್ತೇನೆ. ಆದರೆ ನಾವು ಈ ಪ್ರಶ್ನೆಯನ್ನು ಅನೇಕ ದೃಷ್ಟಿಗಳಿಂದ ನೋಡಬೇಕಾಗಿದೆ ಬೆಲೆಗಳನ್ನು rationalise ಮಾಡಬೇಕಾದರೆ, ಕೈಗಾರಿಕೆಗಳ ಕೂಲಿಗಳಿಗೆ ಎಷ್ಟು ಕೊಡಬೇಕು, ಉತ್ಪತ್ತಿಯ ಖರ್ಚೆಷ್ಟಾಗುತ್ತದೆ ಎಂಬುದನ್ನೆಲ್ಲಾ ಧೀರ್ಘವಾಗಿ ಆಲೋಚನೆ ಮಾಡಬೇಕಾಗುತ್ತದೆ. ಯಾವ ಸರ್ಕಾರವಾಗಲಿ ಮುಂದೆ ಇದನ್ನೆಲ್ಲ ಗಮನಿಸಬೇಕಾದುದು ಅಗತ್ಯವೆಂದು ನಾನು ಒಪ್ಪುತ್ತೇನೆ.

ಇನ್ನು ರೈತರಿಗೆ ಇರುವ ಕಿರುಕುಳದ ವಿಷಯ. ನಾನು ಹಿಂದೆ ಪ್ರತಿಪಕ್ಷದಲ್ಲಿದ್ದಾಗ ಅನೇಕ ಸಲ ಈ ವಿಷಯವಾಗಿ ಹೇಳಿದ್ದೇನೆ. ಪಾಶ್ಚಾತ್ಯ ದೇಶಗಳಲ್ಲಿ ಇಂತಹ ಕೆಲಸಗಳಲ್ಲಿ ಭಾಗವಹಿಸುವ ಜನರಿಗಿರುವಂತೆ ನಮ್ಮ ಜನತೆಯಲ್ಲಿ ಸಗುಣಗಳು, ಶಿಸ್ತು,regimentation

ಮುಂತಾದವು ಇಲ್ಲ. ಈ ಕೆಲಸಗಳನ್ನು ಜಾರಿಗೆ ಕೊಡಬೇಕಾದ agency ಯಲ್ಲೂ ಈ ಸದ್ಗುಣಗಳು ಪೂರ್ಣವಾಗಿಲ್ಲವೆಂಬುದು ಒಪ್ಪತಕ್ಕ ವಿಷಯ. ಎಲ್ಲೆಲ್ಲಿ ಲೋಪದೋಷಗಳು ಕಾಣುತ್ತವೋ ಅವುಗಳನ್ನು ಸರಿಪಡಿಸಿ ಜನರಿಗೆ ಅನುಕೂಲವಾಗುವಂತೆ ಏರ್ಪಾಡುಮಾಡುವುದು ನಮ್ಮ ಕರ್ತವ್ಯ. ಆದರೆ ಎಲ್ಲವನ್ನೂ ವಜಾ ಮಾಡಬೇಕೆಂದು ಹೇಳುವುದು ಸರಿಯಿಲ್ಲ; ಹಾಗೆ ಮಾಡುವುದು remedy is worse than the disease ಎನ್ನುವ ಹಾಗಾಗುತ್ತದೆ. ರೈತರಿಗೆ ಕಿರುಕುಳ ವಾಗುತ್ತಿರುವ ಅನೇಕ ಉದಾಹರಣೆಗಳನ್ನು ಕೊಟ್ಟರು. ಆದರೆ ಇಂಥಹ ಸಂದರ್ಭಗಳು ಶೇಕಡ 5 ಅಥವಾ 10 ರಷ್ಟಿರಬಹುದು. ಅದು ಕೆಲವು ಕಡೆ ಇರಬಹುದು ಕೆಲವು ಕಡೆ ಏನೂ ಕಿರುಕುಳ ಇಲ್ಲದೆಯೂ ಇರಬಹುದು. perfect ಆಗಿದೆ ಎಂದು ಹೇಳುವುದಕ್ಕಾಗುವುದಿಲ್ಲ. ಇರುವ ಲೋಪದೋಷಗಳನ್ನು ಸರಿಪಡಿಸುವುದಕ್ಕೆ ಜನತೆಯ ಸಹಕಾರ ಮತ್ತು ಅಧಿಕಾರಿಗಳ ಕಾರ್ಯದಕ್ಷತೆ, ದೇಶಪ್ರೇಮವೂ ಮುಖ್ಯವಾಗಿ ಅವಶ್ಯಕ. ಎಲ್ಲರಲ್ಲೂ ಕರ್ತವ್ಯನಿಷ್ಠೆಯಿಂದಲೂ ದೇಶಪ್ರೇಮದಿಂದಲೂ ನಡೆಯುವ ಮನೋಧರ್ಮ ಉಂಟಾಗಬೇಕು. ಇದು ಒಂದು ದಿವಸದಲ್ಲಲ್ಲ, ಒಂದು ವರ್ಷದಲ್ಲಲ್ಲ, ಕ್ರಮೇಣ ಉಂಟಾಗಬೇಕು ಶಿಸ್ತು, ಒಳ್ಳೆಯ ನಡತೆ, ಸಂಪ್ರದಾಯ ಕ್ರಮೇಣ ಇವೆಲ್ಲವೂ ಬರಬೇಕು. ಲೋಪವಿದೆಯೆಂದು ಎಲ್ಲವನ್ನು ಬಿಟ್ಟುಬಿಡುವುದಕ್ಕಾಗುವುದಿಲ್ಲ. ಈ ಕಂಟ್ರೋಲುಗಳಿಗೆ ನಾವು ಎಂದೆಂದಿಗೂ ಬದ್ಧರೆಂದು ನಾನು ಹೇಳುವುದಿಲ್ಲ ಆದಷ್ಟು ಬೇಗ ಇದನ್ನು ತೆಗೆದು ಹಾಕಬೇಕೆಂಬುದು ಕೇಂದ್ರ ಸರ್ಕಾರದ ಮತ್ತು ನಮ್ಮ ಸರ್ಕಾರದ ಉದ್ದೇಶ. ಆದರೆ ಕೂಡಲೆ ತೆಗೆದುಹಾಕಿದರೆ ಜನರಿಗೆ ಬಹಳ ಕಷ್ಟವಾಗುತ್ತದೆ. ಆದಕಾರಣ ಈ ನಿರ್ಣಯವನ್ನು ಒಪ್ಪಿಕೊಳ್ಳುವುದು ಕಷ್ಟವಾಗಿದೆ. ಈಗಿರುವ ಪದ್ಧತಿಯನ್ನು ಬದಲಾವಣೆ ಮಾಡಬೇಕೆಂದು ಕೆಲವರು ಹೇಳುತ್ತಾರೆ. ಇದು ಹೊಸದೇನೂ ಅಲ್ಲ ಕೆಲವು ಕಡೆ levy system ಜಾರಿಗೆ ತಂದಿದ್ದಾರೆ. ಆದರೆ ನನಗೆ ತಿಳಿದಮಟ್ಟಿಗೆ. ಅಲ್ಲೇ ಅನೇಕರು ಇದು ಬೇಡ ವಜಾಮಾಡಿ ಎಂದು ಹೇಳಿದ್ದಾರೆ. ಹಿಂದಿನ ಐದಾರು ವರ್ಷಗಳ ಬೆಳೆಯ ಸರಾಸರಿ ಆಧಾರದ ಮೇಲೆ ಗೊತ್ತುಮಾಡಿ ಎಂದು ಹೇಳುತ್ತಾರೆ. ಹಾಗೆ ಮಾಡಿದರೂ ಈ assessment basis ಸರಿಯಿಲ್ಲ ಅನ್ಯಾಯ ನಡೆದಿದೆ ಎಂದು ಹೇಳಲು ಅವಕಾಶವಿದೆ. ಅಂಕಿಗಳ ಮೇಲೆ ಸರಾಸರಿ ತೆಗೆದುಕೊಂಡರೂ ತೊಂದರೆ, ಬೆಳೆ ಎಷ್ಟೇ ಆಗಲಿ, ಎರಡಾಣೆ, ಎಂಟಾಣೆ ಅಥವಾ ಹನ್ನೆರಡಾಣೆ ಆಗಲಿ ಒಂದೇ ರೀತಿ ಎಲ್ಲರಿಗೂ ಹಾಕಿ ಸರಾಸರಿ ತೆಗೆದುಕೊಂಡರೆ, ಅದರಿಂದಲೂ ಅನ್ಯಾಯವಾಗುತ್ತದೆ. ಅದರಲ್ಲಿ ಇನ್ನೊಂದು ನ್ಯೂನತೆಯಿದೆ. ಈಗಿರುವ ಪದ್ಧತಿಯ ಪ್ರಕಾರ ಒಂದು ಸಂಸಾರದಲ್ಲಿ ನಾಲ್ಕು ಜನರಿದ್ದರೆ ಒಂದು ರೀತಿ ಮಾಡುತ್ತೇವೆ ಇಪ್ಪತ್ತು ಜನರಿದ್ದರೆ ಅದಕ್ಕೆ ತಕ್ಕಂತೆ ಮಾಡುತ್ತೇವೆ. ಆದರೆ levy ಪದ್ಧತಿಯಲ್ಲಿ ಎಷ್ಟೇ ಜನರಿರಲಿ ಒಂದು ಎಕರೆಗೆ ಇಷ್ಟು ಎಂದು ಗೊತ್ತುಮಾಡುತ್ತೇನೆ. ಇದು irrational ಆಗುತ್ತದೆ. ಹಾಗೆ ಒಂದೊಂದು ದೃಷ್ಟಿಯಿಂದ ಮಾತ್ರ ಒಂದೊಂದು ವಿಷಯವನ್ನು ನೋಡಬಾರದು. ಎಲ್ಲ ಅಂಕಿ ಅಂಶಗಳನ್ನು ಗಮನದಲ್ಲಿಟ್ಟುಕೊಂಡು ಕೂಲಂಕಷವಾಗಿ ಪರಿಶೀಲಿಸಿ ಎಲ್ಲರ ಅವಶ್ಯಕತೆಗಳನ್ನು ಒದಗಿಸುವುದಕ್ಕೆ ಪ್ರಯತ್ನಪಟ್ಟರೆ ಇದು ಎಷ್ಟು ಜಟಿಲವಾದ ಪ್ರಶ್ನೆ, ಎಷ್ಟು ಕಷ್ಟವಿದೆ, ಎಷ್ಟು ತೊಡಕಾಗಿದೆ ಎಂಬುದು ಗೊತ್ತಾಗುತ್ತದೆ. ಆಚರಣೆಗೆ ತರತಕ್ಕ ಕಾಲದಲ್ಲಿ ಇದರ ಕಷ್ಟ ಗೊತ್ತಾಗುತ್ತದೆ, ಸುಮ್ಮನೆ theory ಯಿಂದ ಗೊತ್ತಾಗುವುದಿಲ್ಲ. ಆದುದರಿಂದ ನನ್ನ ಕಡೆಯ ಮಾತಿಷ್ಟೇ ನಿರ್ವಾಹವಿಲ್ಲದೆ ಸನ್ನಿವೇಶಗಳು ಹೀಗಾಗಿವೆಯೆಂಬ ದೃಷ್ಟಿಯಿಂದ

ನಾವು ಇಷ್ಟವಿಲ್ಲದೆ ಮನಸ್ಸಿಲ್ಲದೇಯಿದ್ದರೂ ಸಹ ಇದು ಅಗತ್ಯವೆಂದು ಭಾವಿಸಿ ಇದನ್ನು ಮುಂದುವರಿಸಿಕೊಂಡು ಬರುತ್ತಿದ್ದೇವೆಯೇ ಹೊರತು ಬೇರೆ ಉದ್ದೇಶದಿಂದಲ್ಲ. ಇದನ್ನು ತಕ್ಷಣ ತೆಗೆದುಹಾಕಿದರೆ ಪ್ರಮಾದವಾಗಬಹುದು. ಎರಡನೆಯದಾಗಿ, ಸಾಧ್ಯವಾದಮಟ್ಟಿಗೂ ತೆಗೆದುಹಾಕಬೇಕೆಂದು. ನಮ್ಮ ಉತ್ಪತ್ತಿಯನ್ನು ಜಾಸ್ತಿ ಮಾಡುವುದಕ್ಕೆ ಪ್ರಯತ್ನಿಸುತ್ತಿದ್ದೇವೆ; ಸನ್ನಿವೇಶ ನೋಡಿಕೊಂಡು ಕಂಟ್ರೋಲ್ ತೆಗೆದು ಹಾಕುವುದೆಂದು, ಮೂರನೆಯದಾಗಿ ಈ ಹತೋಟಿ ಆರು ತಿಂಗಳಿರಲಿ, ಒಂದು ವರ್ಷವಿರಲಿ ಅಥವಾ ಎರಡು ವರ್ಷವಿರಲಿ, ಇದು ಇರತಕ್ಕ ಕಾಲಾವಧಿಯಲ್ಲಿ ರೈತರಿಗೆ ಯಾವ ರೀತಿಯಲ್ಲಿ ಇನ್ನೂ ಹೆಚ್ಚಿನ ಪರಿಹಾರ ಕೊಡುವುದು ಸಾಧ್ಯ. ಹಣಪಾವತಿಯ ವಿಚಾರದಲ್ಲಿ ಬೆಲೆಯ ವಿಚಾರದಲ್ಲಿ, ಸಣ್ಣ ಅಧಿಕಾರಿಗಳಿಂದ ಅವರಿಗಾಗಬಹುದಾದ ಕಿರುಕುಳವನ್ನು ತಪ್ಪಿಸುವ ವಿಚಾರದಲ್ಲಿ ಆದಷ್ಟು ತೊಂದರೆಗಳನ್ನು ಕಡಿಮೆ ಮಾಡಲು ಸರ್ಕಾರದವರು ಆತ್ಮಸಾಕ್ಷಿಯಾಗಿ ಆಸಕ್ತಿ ವಹಿಸಿ ಪ್ರಯತ್ನ ಮಾಡುತ್ತಾರೆಂದು ಭರವಸೆ ಕೊಡುತ್ತೇನೆ. ದೇಶದಲ್ಲಿ ಆಹಾರ ಸಮೃದ್ಧಿಯಾಗಿ ದೊರೆಯುವಂತೆ ಮಾಡುವುದು ಎಲ್ಲಾ ಪ್ರಜೆಗಳ ಪವಿತ್ರ ಕರ್ತವ್ಯ. ಇದರಲ್ಲಿ ನಾವು ಎಷ್ಟು ಬೇಗ ಜಯಶೀಲರಾಗುತ್ತೇವೆಯೋ ಅಷ್ಟು ಬೇಗ ಈ ಕಂಟ್ರೋಲ್ ಹೋಗುತ್ತದೆ. ಒಟ್ಟಿನಲ್ಲಿ ಈಗಿರುವ ರೀತಿಯಲ್ಲಿ ಈ ನಿರ್ಣಯವನ್ನು ಒಪ್ಪುವುದು ಕಷ್ಟವಾಗಿದೆ ಎಂದು ಹೇಳಬಯಸುತ್ತೇನೆ.Levy ಪದ್ಧತಿ ಎಲ್ಲೆಲ್ಲಿ ಸಾಧ್ಯವೋ ಅಲ್ಲಿ ಜಾರಿಗೆ ತರಲು ಪ್ರಯತ್ನಿಸಿ, ಎಲ್ಲಿ ಸರ್ವೇ ಸಾಮಾನ್ಯ ಬೆಳೆಯಾಗಿದೆಯೇ ಎಲ್ಲಿ ಇದನ್ನು ಜಾರಿಗೆ ತಂದರೆ ತೊಂದರೆಯಾಗುವುದಿಲ್ಲವೆಂದು ಸರ್ಕಾರಕ್ಕೆ ಭರವಸೆ ಇದೆಯೋ ಅಂತಹ ಕಡೆಗಳಲ್ಲಿ ಪರೀಕ್ಷೆ ಮಾಡಲು ಆಲೋಚನೆ ಇದೆ. ಇದನ್ನು ಕೆಲವು ದಿನಗಳಲ್ಲಿ ತೀರ್ಮಾನ ಮಾಡಲು ಪ್ರಯತ್ನ ಮಾಡುತ್ತೇವೆಂದು ಭರವಸೆ ಕೊಟ್ಟು ಈಗಿರುವ ಈ ನಿರ್ಣಯವನ್ನು ಒಪ್ಪುವುದಕ್ಕಾಗುವುದಿಲ್ಲವಾದುದರಿಂದ ಇದನ್ನು ವಾಪಸ್ಸು ತೆಗೆದುಕೊಳ್ಳಬೇಕೆಂದು ಸೂಚಿಸುತ್ತೇನೆ.

## 17. ಕರ್ನಾಟಕ ಪ್ರಾಂತ ರಚನೆ ಕುರಿತು

## ವಿಧಾನ ಸಭಾ ಕಲಾಪ-12 ನವೆಂಬರ್ 1951

**ಪ್ರಶ್ನೆ:- ಶ್ರೀ ಕೆ. ಸಂಪಂಗಿರಾಮಯ್ಯ** (ಕೋಲಾರ ಜಿಲ್ಲೆ-ಸಾಮಾನ್ಯ ): ಸರ್ಕಾರ ಈ ಕೆಳಗಿನ ಪ್ರಶ್ನೆಗಳಿಗೆ ಉತ್ತರಿಸಬೇಕು:

ಎ) ಕರ್ನಾಟಕ ಪ್ರಾಂತ ರಚನೆಯ ಪರವಾಗಿ ಸಾರ್ವಜನಿಕ ಅಭಿಪ್ರಾಯ ದಿನೇ ದಿನೇ ಹೆಚ್ಚುತ್ತಿರುವುದು ಸರ್ಕಾರದ ಅರಿವಿಗೆ ಬಂದಿದೆಯೆ?

ಬಿ) ರಾಜ್ಯದ ಗಡಿ ಆಚೆಯಿಂದಿರುವ ಜನರೂ ಸಹ ಮೈಸೂರಿನ ರಾಜ ಪ್ರಮುಖರನ್ನೇ ಕರ್ನಾಟಕ ರಾಜ್ಯದ ಮುಖ್ಯಸ್ಥರಾಗಿ ಒಪ್ಪಿಕೊಳ್ಳಲು ಉತ್ಸಾಹದಿಂದಿದ್ದಾರೆ ಎಂಬುದನ್ನು ಸರ್ಕಾರ ಗಮನಿಸಿದೆಯೇ?

ಸಿ) ಭಾರತದ ಸಂವಿಧಾನದ 3ನೇ ಅನುಚ್ಛೇದದ ಉಪಬಂಧಗಳಿಗೆ ಅನುಗುಣವಾಗಿ ಕರ್ನಾಟಕ ರಾಜ್ಯವನ್ನು ರಚಿಸುಲು ಸರ್ಕಾರವು ತಕ್ಷಣ ಕ್ರಮ ಕೈಗೊಳ್ಳುತ್ತದೆಯೆ?

**ಉತ್ತರ:- ಶ್ರೀ ಕೆ. ಚೆಂಗಲರಾಯರೆಡ್ಡಿ (ಮುಖ್ಯಮಂತ್ರಿಗಳು):-**

(ಎ) ಯಿಂದ (ಸಿ) ವರೆಗಿನ ಪ್ರಶ್ನೆಗಳು ರಾಜಕೀಯ ವಿಷಯಕ್ಕೆ ಸಂಬಂಧಿಸಿದ್ದು ಅವು ಕೇಂದ್ರ ಸರ್ಕಾರದ ವ್ಯಾಪ್ತಿಯಲ್ಲಿ ಬರತಕ್ಕಂಥವಾಗಿದೆ. ಆದಾಗ್ಯೂ "ಕರ್ನಾಟಕ" ಪ್ರಾಂತರಚನೆಗಾಗಿ ಬಾಂಬೆ ಹಾಗೂ ಮದ್ರಾಸ್ ರಾಜ್ಯಗಳ ಕೆಲವು ಭಾಗಗಳನ್ನು ಮೈಸೂರಿನಲ್ಲಿ ವಿಲೀನಗೊಳಿಸುವ ಪ್ರಶ್ನೆಗೆ ಸಂಬಂದಿಸಿದಂತೆ, ಇತ್ತೀಚೆಗೆ ಬಾಂಬೆ ರಾಜ್ಯದಲ್ಲಿ ಪ್ರವಾಸ ಮಾಡಿದ ಸಂದರ್ಭದಲ್ಲಿ ಸನ್ಮಾನ್ಯ ಮಹಾರಾಜರವರು ತಮ್ಮನ್ನುದ್ದೇಶಿಸಿ ಮಾಡಿದ ಭಾಷಣಗಳಿಗೆ ಸಂಬಂಧಿಸಿದಂತೆ ನೀಡಿದ ಹೇಳಿಕೆಯ ಬಗ್ಗೆ ನಿಮ್ಮ ಗಮನ ಸೆಳೆಯಲು ಇಚ್ಛಿಸುತ್ತೇನೆ.

**ಶ್ರೀ ಕೆ. ಸಂಪಂಗಿರಾಯ್ಯ:-** ಈ ಮೂರು ಪ್ರಶ್ನೆಗಳಿಗೆ ಒಂದು ಉತ್ತರ ನೀಡಿದರೆ ಸಾಕು. ಕರ್ನಾಟಕ ಪ್ರಾಂತ ರಚನೆ ಪರವಾಗಿ ಸಾರ್ವಜನಿಕರ ಅಭಿಪ್ರಾಯ ದಿನೇ ದಿನೇ ಹೆಚ್ಚುತ್ತಿರುವುದು ತಮ್ಮ ಗಮನಕ್ಕೆ ಬಂದಿದೆಯೇ ಎಂಬ ಪ್ರಶ್ನೆಗೆ ಸರ್ಕಾರ ಹೌದು ಅಥವಾ ಇಲ್ಲ ಎಂಬ ಒಂದು ಖಚಿತ ಉತ್ತರ ನೀಡಬೇಕು ಎಂದು ನಾನು ಬಯಸುತ್ತೇನೆ.

**ಶ್ರೀ ಕೆ. ಚೆಂಗಲರಾಯರೆಡ್ಡಿಯವರು:-** ಸಧ್ಯಕ್ಕೆ ಈ ವಿವಾದ ಮೈಸೂರಿನ ಸರ್ಕಾರಕ್ಕೆ ನೇರವಾಗಿ ಸಂಬಂಧಿಸಿದ್ದಲ್ಲ. ಈ ಬಗ್ಗೆ ರಾಷ್ಟ್ರಪತಿಯವರು ಆಸಕ್ತಿ ವಹಿಸಬೇಕು. ಸಂವಿಧಾನದ 3 ಅನುಚ್ಛೇದವು ಈ ವಿಷಯದ ಬಗ್ಗೆ ಬಹಳ ಸ್ಪಷ್ಟವಾಗಿದೆ. ಈ ಕೆಲಸವನ್ನು ಸಂಸತ್ತು ಮಾಡಬೇಕೇ ಹೊರತು ಸಂಬಂಧಪಟ್ಟ ರಾಜ್ಯವಲ್ಲ.

**3ನೇ ಅನುಚ್ಛೇದ ಹೀಗೆ ಹೇಳುತ್ತದೆ:-**

ಸಂಸತ್ತು ಕಾನೂನಿನ ಮೂಲಕವಾಗಿ: ಎ) ಯಾವುದೇ ರಾಜ್ಯದಿಂದ ಒಂದಿಷ್ಟು ಭೂ ಭಾಗವನ್ನು ಪ್ರತ್ಯೇಕಗೊಳಿಸಿ ಅಥವಾ ಎರಡು ಹೆಚ್ಚಿನ ರಾಜ್ಯಗಳನ್ನು ಒಂದುಗೂಡಿಸಿ ಅಥವಾ ರಾಜ್ಯಗಳ ಕೆಲವು ಭಾಗಗಳನ್ನು ಒಂದುಗೂಡಿಸಿ ಅಥವಾ ಯಾವುದೇ ರಾಜ್ಯದ ಭಾಗಕ್ಕೆ ಯಾವುದೇ ಭೂ

ಭಾಗವನ್ನು ಸೇರಿಸಿ ಒಂದು ಹೊಸ ರಾಜ್ಯವನ್ನು ರೂಪಿಸಬಹುದಾಗಿದೆ:-

ಬಿ) ಯಾವುದೇ ರಾಜ್ಯದ ವಿಸ್ತೀರ್ಣವನ್ನು ಹೆಚ್ಚಿಸಬಹುದು.

ಸಿ) ಯಾವುದೇ ರಾಜ್ಯದ ವಿಸ್ತೀರ್ಣವನ್ನು ಕಡಿಮೆ ಮಾಡಬಹುದು.

ಡಿ) ಯಾವುದೇ ರಾಜ್ಯದ ಗಡಿರೇಖೆಗಳನ್ನೇ ಬದಲಾಯಿಸಬಹುದು.

ಇ) ಯಾವುದೇ ರಾಜ್ಯದ ಹೆಸರನ್ನು ಬದಲಾಯಿಸಬಹುದು.

Providid that Bill for the prupose shall be introduced in either House of parliament except on the recommendation of the president and unless, where the proposal contained in the Bill affects the Boundaries of any state or states specified in part A or part B of the first schedule or the name or names of any state or states, the view of the legislature of the state as the case may be of each of the states both with respect to the proposal to introduce the Bill and with respect to the provisions there off have been ascertained by the president.

ಆದ್ದರಿಂದ ಈ ಬಗ್ಗೆ ಭಾರತ ಸರ್ಕಾರವೇ ಮುಂದಾಗಬೇಕು ಹಾಗೂ ಈ ಉದ್ದೇಶಕ್ಕಾಗಿ ಅವರು ವಿಧೇಯಕವನ್ನು ಜಾರಿಗೆ ತರಬೇಕು ಮತ್ತು ಹಾಗೆ ಒಂದು ವಿಧೇಯಕವನ್ನು ಜಾರಿಗೊಳಿಸುವಾಗ ರಾಷ್ಟ್ರಪತಿಯವರು ವಿಧೇಯಕವನ್ನು ಜಾರಿಗೊಳಿಸುವುದನ್ನು ಶಿಫಾರಸ್ಸು ಮಾಡಬೇಕು. ಶಿಫಾರಸು ಮಾಡುವ ಮೊದಲು ಅವರು ಶಾಸಕಾಂಗದ ಅಭಿಪ್ರಾಯವನ್ನು ಕೇಳುತ್ತಾರೆ. ಮೈಸೂರಿನ ವಿಷಯಕ್ಕೆ ಸಂಬಂಧಿಸಿದಂತೆ ಅನಂತರ ಅದು ಶಾಸಕಾಂಗ ಅಥವಾ ಮೈಸೂರು ಸರ್ಕಾರವು ಪರಿಶೀಲಿಸಬೇಕಾಗುವ ವಿಷಯವಾಗುತ್ತದೆ.

ಶ್ರೀ ಕೆ. ಸಂಪಂಗಿರಾಮಯ್ಯ:- ಕರ್ನಾಟಕ ಪ್ರಾಂತರಚನೆಯ ಪರವಾಗಿ ಸಾರ್ವಜನಿಕ ಒಲವು ದಿನೇ ದಿನೇ ಹೆಚ್ಚುತ್ತಿರುವುದನ್ನು ಅವರು ಗಮನಿಸಿದ್ದಾರೆಯೇ ಎಂಬುದೇ ನನ್ನ ಪ್ರಶ್ನೆ.

ಶ್ರೀ ಕೆ. ಚೆಂಗಲರಾಯರೆಡ್ಡಿ:- ಸಾರ್ವಜನಿಕರು ಅವರ ಪರವಾಗಿರುವುದರಲ್ಲಿ ಸಂಶಯವೇನಿಲ್ಲ. ಕೆಲವರು ಭಾರತದ ವಿವಿಧ ಭಾಗಗಳಲ್ಲಿ ಭಾಷಾವಾರು ಪ್ರಾಂತಗಳನ್ನು ರಚಿಸಬೇಕೆಂದು ಒತ್ತಾಯಿಸುತ್ತಿದ್ದಾರೆ. ಹಾಗೂ ಕರ್ನಾಟಕ ಪ್ರಾಂತ ರಚನೆಗೆ ಸಂಬಂಧಿಸಿದಂತೆಯೂ ಜನಾಭಿಪ್ರಾಯ ರೂಪುಗೊಂಡಿದೆ ನಿಜ. ನಮಗೆ ತಿಳಿದು ಬಂದಂತೆ ಈ ವಿಷಯ ಕುರಿತು ವಿವಿಧ ರೀತಿಯ ಅಭಿಪ್ರಾಯಗಳಿವೆ.

ಶ್ರೀ ಕೆ. ಸಂಪಂಗಿರಾಮಯ್ಯ:- ಈ ವಿಷಯದ ಬಗ್ಗೆ ಸದನದ ಅಭಿಪ್ರಾಯವನ್ನು ಪಡೆದುಕೊಳ್ಳಬೇಕಾದ್ದು ಮೈಸೂರು ಸರ್ಕಾರದ ಕರ್ತವ್ಯವಲ್ಲವೆ?

ಶ್ರೀ ಕೆ. ಚೆಂಗಲರಾಯರೆಡ್ಡಿ:- ಈ ಪ್ರಶ್ನೆಗೆ ಉತ್ತರಿಸಿದೆ, ಈ ವಿಷಯವಾಗಿ ಮೈಸೂರು ಸರ್ಕಾರವನ್ನು ಕೇಳಲಾಗಿಲ್ಲ.

ಶ್ರೀ ಕೆ. ಸಂಪಂಗಿರಾಮಯ್ಯ:- ಈ ಸದನದ ಮುಂದೆ ನಿಲುವಳಿಯನ್ನು ಮಂಡಿಸಿ ಈ ಬಗ್ಗೆ ಸದನದ ಅಭಿಪ್ರಾಯವನ್ನು ಪಡೆದುಕೊಳ್ಳುವುದಕ್ಕಾಗುವುದಿಲ್ಲವೆ?

ಶ್ರೀ ಕೆ. ಚೆಂಗಲರಾಯರೆಡ್ಡಿ:- ಇದು ಅವರವರ ಅಭಿಪ್ರಾಯಕ್ಕೆ ಸಂಬಂಧಿಸಿದ್ದು. ಹಿಂದೆಯೂ ಹಳೆಯ ಪ್ರಜಾಪ್ರತಿನಿಧಿ ಸಭೆಯಲ್ಲಿ, ಸದನದಲ್ಲಿ ಈ ವಿಷಯದ ಬಗ್ಗೆ ಚರ್ಚೆಯಾಗಿರುವುದು ಮಾನ್ಯ ಸದಸ್ಯರಿಗೆ ತಿಳಿದಿದೆ. ಈ ವಿಷಯ ನ್ಯಾಯವಿಧಾಯಕ ಸಭೆಯಲ್ಲಿಯೂ ಪ್ರಸ್ತಾಪವಾಗಿತ್ತೇ ಎಂಬುದು ನನಗೆ ಗೊತ್ತಿಲ್ಲ.

ಶ್ರೀ ಕೆ. ಸಂಪಂಗಿರಾಮಯ್ಯ:- ಈ ವಿಷಯವಾಗಿ ಸರ್ಕಾರವು ಸದನದಲ್ಲಿ ನಿಲುವಳಿಯನ್ನು ಮಂಡಿಸುವುದೆ?

ಶ್ರೀ ಕೆ. ಚೆಂಗಲರಾಯರೆಡ್ಡಿ:- ಮಾಡಬಹುದು. ಆದರೆ ಅವರು ಅದನ್ನು ಈಗಲೇ ಮಾಡುತ್ತಾರೋ ಅಥವಾ ಅನಂತರ ಮಾಡುತ್ತಾರೋ ಎಂಬುದು ಪರಿಶೀಲಿಸಬೇಕಾದ ವಿಷಯ.

ಶ್ರೀ ಕೆ. ಸಂಪಂಗಿರಾಮಯ್ಯ:- ಈ ಪ್ರಶ್ನೆಯನ್ನು ಸದನದಲ್ಲಿ ಪ್ರಸ್ತಾಪಿಸಬೇಕು ಎಂದು ಅವರು ಯಾವಾಗಲಾದರೂ ಆಲೋಚಿಸಿದ್ದುಂಟೆ?

ಶ್ರೀ ಕೆ. ಚೆಂಗಲರಾಯರೆಡ್ಡಿ:- ಈ ಪ್ರಶ್ನೆಯನ್ನು ಸದನದಲ್ಲಿ ಚರ್ಚಿಸಿ ತರಬೇಕೆಂದು ಸರ್ಕಾರವು ಏನೂ ಆಲೋಚನೆ ಮಾಡಿರುವುದಿಲ್ಲ.

ಶ್ರೀ ಸಂಪಂಗಿರಾಮಯ್ಯ:- ಈ ವಿಷಯದ ಪರವಾಗಿ ಸಾರ್ವಜನಿಕರ ಒಲವು ಹೆಚ್ಚುತ್ತಿರುವುದನ್ನು ಗಮನದಲ್ಲಿಟ್ಟುಕೊಂಡು ಸರ್ಕಾರವು ಶಾಸಕಾಂಗದಲ್ಲಿ ಈ ವಿಷಯವನ್ನು ಯಾಕೆ ಮಂಡಿಸಬಾರದು?

ಶ್ರೀ ಕೆ. ಚೆಂಗಲರಾಯರೆಡ್ಡಿ:- ನಾನು ಮೊದಲೇ ಹೇಳಿದಂತೆ ಈ ವಿಷಯವನ್ನು ಸದನದಲ್ಲಿ ಮಂಡಿಸುವುದು ಸರ್ಕಾರಕ್ಕೆ ಸಂಬಂಧಿಸಿಲ್ಲ. ಈ ಬಗ್ಗೆ ಭಾರತ ಸರ್ಕಾರವು ಮೊದಲನೆಯದಾಗಿ ಪ್ರಸ್ತಾಪಿಸಬೇಕು.

ಶ್ರೀ ಕೆ. ಸಂಪಂಗಿರಾಮಯ್ಯ:- ಮೊದಲೇ ಈ ಸದನದ ಅಭಿಪ್ರಾಯವನ್ನು ಖಚಿತಪಡಿಸಿಕೊಳ್ಳಬಹುದಲ್ಲ?

ಶ್ರೀ ಕೆ. ಚೆಂಗಲರಾಯರೆಡ್ಡಿ:- ಹೌದು. ಸೂಕ್ತ ಸಮಯದಲ್ಲಿ ಹಾಗೆ ಮಾಡಬಹುದು.

ಶ್ರೀ ಕೆ. ಸಂಪಂಗಿರಾಮಯ್ಯ:- ಸರ್ಕಾರದ ಪ್ರಕಾರ ಸೂಕ್ತ ಸಮಯ ಯಾವುದು?

ಶ್ರೀ ಕೆ. ಚೆಂಗಲರಾಯರೆಡ್ಡಿ:- ಅದನ್ನು ಸಂವಿಧಾನದ ಅನುಚ್ಛೇದದಲ್ಲಿ ಸೂಚಿಸಲಾಗಿದೆ. ಯಾವುದೇ ಭಾಷಾವಾರು ಪ್ರಾಂತದ ರಚನೆಗೆ ಸಂಬಂಧಿಸಿದಂತೆ ಸಂಸತ್ತಿನಲ್ಲಿ ವಿಧೇಯಕವನ್ನು ಮಂಡಿಸಲು ರಾಷ್ಟ್ರಪತಿಯವರು ಇಚ್ಛಿಸಿದಾಗ ಅವರು ಖಂಡಿತವಾಗಿಯೂ ಸಂಬಂಧಪಟ್ಟ ರಾಜ್ಯ ಶಾಸಕಾಂಗದ ಅಭಿಪ್ರಾಯವನ್ನು ಕೇಳಿಯೇ ಕೇಳುತ್ತಾರೆ. ಅದು ಈ ವಿಷಯವನ್ನು ಪರಿಶೀಲಿಸಲು ರಾಜ್ಯ ಸರ್ಕಾರಕ್ಕೆ ಸೂಕ್ತವಾದ ಸಮಯವಾಗಿರುತ್ತೆ.

ಶ್ರೀ ಕೆ. ಸಂಪಂಗಿರಾಮಯ್ಯ:- ಈ ವಿಷಯವನ್ನು ಸಂಸತ್ತು ಕೈಗೆತ್ತಿಕೊಳ್ಳುವ ಮುಂಚೆ ಈ ಸದನದಲ್ಲಿ ಚರ್ಚೆಗೆ ಆ ನಿಲುವಳಿಯನ್ನು ಮಂಡಿಸುವ ಅಗತ್ಯವಿಲ್ಲ ಎಂಬುದು ಸರ್ಕಾರದ ಅಭಿಪ್ರಾಯವೆ?

ಶ್ರೀ ಕೆ. ಚೆಂಗಲರಾಯರೆಡ್ಡಿ:- ಇದಕ್ಕೆ ಕಾಲ ಪಕ್ವವಾಗಿಲ್ಲ ಮತ್ತು ಅದು ಅನಗತ್ಯವೂ ಹೌದು.

ಶ್ರೀ ಜಿ. ವೀರಪ್ಪ (ಚಿತ್ರದುರ್ಗಜಿಲ್ಲೆ-ಸಾಮಾನ್ಯ) ಮೈಸೂರನ್ನು ಒಳಗೊಂಡಂತೆ ಕರ್ನಾಟಕ ಪ್ರಾಂತವನ್ನು ರಚಿಸುವುದು ಸೂಕ್ತ ಎಂದು ಒಂದು ಸಲ ಮೈಸೂರು ಸರ್ಕಾರ ನಿರ್ಣಯ ತೆಗೆದುಕೊಂಡಿತ್ತೆಂಬುದು ನಿಜವೇ? ಈ ಬಗ್ಗೆ ಮೈಸೂರಿಗೆ ಯಾವ ಆಕ್ಷೇಪಣೆಯೂ ಇರಲಿಲ್ಲವೇ?

ಶ್ರೀ ಕೆ. ಚೆಂಗಲರಾಯರೆಡ್ಡಿ:- ಅದು ನನಗೆ ಗೊತ್ತಿದೆ.

ಶ್ರೀ ಜಿ. ವೀರಪ್ಪ:- ಕೂರ್ಗನ್ನು ಮೈಸೂರು ರಾಜ್ಯದೊಂದಿಗೆ ವಿಲೀನಗೊಳಿಸುವ ವಿಚಾರವಿದೆಯೆ?

ಶ್ರೀ ಕೆ. ಚೆಂಗಲರಾಯರೆಡ್ಡಿ:- ಇಲ್ಲ.

ಶ್ರೀ ಜಿ. ವೀರಪ್ಪ:- ಕೂರ್ಗನ್ನು ಮೈಸೂರಿನೊಂದಿಗೆ ವಿಲೀನಗೊಳಿಸುವುದಕ್ಕೆ ಸಂಬಂಧಿಸಿದಂತೆ ಭಾರತ ಸರ್ಕಾರವು ಮೈಸೂರು ಸರ್ಕಾರದೊಂದಿಗೆ ಸಮಾಲೋಚಿಸಿಲ್ಲವೆ?

ಶ್ರೀ ಕೆ. ಚೆಂಗಲರಾಯರೆಡ್ಡಿ:-ಇಲ್ಲ.

ಶ್ರೀ ಎಚ್.ಸಿ. ಲಿಂಗಾರೆಡ್ಡಿ(ಕೋಲಾರ ಜಿಲ್ಲೆ, ಸಾಮಾನ್ಯ) ಸಾರ್ವಜನಿಕರ ಅಭಿಪ್ರಾಯದ ಒಲವು ಕರ್ನಾಟಕ ಪ್ರಾಂತವನ್ನು ರಚಿಸುವುದರ ಪರವಾಗಿ ಇದೆ ಎಂದು ನೀವು ಹೇಳಿದಿರಿ. ಕರ್ನಾಟಕ ಪ್ರಾಂತದ ಏಕೀಕರಣವಾಗಬಾರದು ಎಂಬ ಬಗ್ಗೆಯೂ ಜನರು ಹೇಳುತ್ತಿಲ್ಲವೇ?

ಶ್ರೀ ಕೆ. ಚೆಂಗಲರಾಯರೆಡ್ಡಿ:- ಈ ವಿಷಯದ ಬಗ್ಗೆ ಭಿನ್ನಾಭಿಪ್ರಾಯಗಳಿವೆ ಎಂದು ಹೇಳುವ ಮೂಲಕ ಈ ಪ್ರಶ್ನೆಗೆ ನಾನು ಆಗಲೇ ಉತ್ತರ ನೀಡಿದ್ದೇನೆ.

ಶ್ರೀ ಎಚ್.ಸಿ. ಲಿಂಗಾರೆಡ್ಡಿ:- ಈ ಹಂತದಲ್ಲಿ ಕರ್ನಾಟಕದ ಏಕೀಕರಣದಿಂದ ಜನರಿಗೆ ಅನುಕೂಲವಾಗುವುದಿಲ್ಲ ಎಂದು ರಾಜ್ಯದ ವಿವಿಧ ಭಾಗಗಳವರು ಅಭಿಮತ ವ್ಯಕ್ತಪಡಿಸಿಲ್ಲವೆ?

ಶ್ರೀ ಕೆ. ಚೆಂಗಲರಾಯರೆಡ್ಡಿ:- ಈ ವಿಷಯದ ಬಗ್ಗೆ ಸಮಾವೇಶಗಳನ್ನು ನಡೆಸಿ ಅಭಿಮತವನ್ನು ವ್ಯಕ್ತಪಡಿಸಿರುವ ವೃತ್ತ ಪತ್ರಿಕಾ ವರದಿಗಳನ್ನು ಸರ್ಕಾರವು ನೋಡಿದೆ. ಮತ್ತು ಹಳೆಯ ಪ್ರಜಾಪ್ರತಿನಿಧಿ ಹಾಗೂ ನ್ಯಾಯ ವಿಧಾಯಕ ಪರಿಷತ್ತಿನ ಸದಸ್ಯರು ವ್ಯಕ್ತ ಪಡಿಸಿರುವ ಅಭಿಪ್ರಾಯಗಳೂ ಸಹ ಸಹ ಸರ್ಕಾರದ ಅರಿವಿನಲ್ಲಿವೆ.

ಶ್ರೀ ಭಿಮಪ್ಪ ನಾಯಕ್:-(ಚಿತ್ರದುರ್ಗ ಜಿಲ್ಲೆ-ಸಾಮಾನ್ಯ):- ಭಾಷಾವಾರು ಪ್ರಾಂತಗಳೆಂದು ನೋಡದೆ ಆಡಳಿತಾತ್ಮಕ ಘಟಕಗಳನ್ನು ರೂಪಿಸುವುದರಲ್ಲಿ ಏನಾದರೂ ಸಮಸ್ಯೆ ಇದೆಯೆ?

ಶ್ರೀ ಕೆ. ಚೆಂಗಲರಾಯರೆಡ್ಡಿ:- ಈ ಪ್ರಶ್ನೆಗೆ ಉತ್ತರಿಸುವ ನಿರ್ದಿಷ್ಟ ವ್ಯಕ್ತಿಯ ಮನೋಭಾವವನ್ನು ಇದು ಅವಲಂಬಿಸಿದೆ.

ಶ್ರೀ ಎ. ಭೀಮಪ್ಪ ನಾಯಕ್:- ಭಾಷಾವಾರು ಘಟಕಗಳಿಗಿಂತ ಆಡಳಿತಾತ್ಮಕ ಘಟಕಗಳು ಹೆಚ್ಚು ಉತ್ತಮ ಎಂದು ಶ್ರೀ ಸಿ. ರಾಜಗೊಪಾಲಾಚಾರಿಯವರು ಸೂಚಿಸಿದ್ದಾರಲ್ಲವೆ?

ಶ್ರೀ ಕೆ. ಚೆಂಗಲರಾಯರೆಡ್ಡಿ:- ಶ್ರೀ ಸಿ. ರಾಜಗೋಪಾಲಾಚಾರಿಯವರು ಅದನ್ನು ಹೇಗೆ ಹೇಳಿದ್ದಾರೋ ನನಗೆ ಗೊತ್ತಿಲ್ಲ. ಸಂಸತ್ತಿನಲ್ಲಿ ಬೇರೆ ಯಾವುದೋ ವಿಷಯದ ಬಗ್ಗೆ ಚರ್ಚೆ ನಡೆಯುತ್ತಿರುವ ಸಂದರ್ಭದಲ್ಲಿ ಅವರು ಈ ಬಗ್ಗೆ ಏನೋ ಹೇಳಿರಬೇಕು.

ಶ್ರೀ ಎ. ಭೀಮಪ್ಪ ನಾಯಕ್:- ತನ್ನ ಆಡಳಿತ ಉತ್ತಮತೆಯ ದೃಷ್ಟಿಯಿಂದ ನೆರೆ ಹೊರೆಯ ಪ್ರದೇಶವೊಂದು ಮೈಸೂರಿನೊಂದಿಗೆ ಸೇರಿಕೊಳ್ಳಲು ಬಯಸಿದರೆ ಆ ಬಗ್ಗೆ ಮೈಸೂರು ಸರ್ಕಾರಕ್ಕೆ ಆಕ್ಷೇಪಣೆಯಿದೆಯೇ?

ಶ್ರೀ ಕೆ. ಚೆಂಗಲರಾಯರೆಡ್ಡಿ:- ಇಂತಹ ಊಹಾತ್ಮಕ ಪ್ರಶ್ನೆಗೆ ನಾನು ಉತ್ತರಿಸ ಬಯಸುವುದಿಲ್ಲ.

ಶ್ರೀ ಎ. ಭೀಮಪ್ಪ ನಾಯಕ:- ಭಾರತ ಸರ್ಕಾರವು ಮೈಸೂರಿನ ಆಡಳಿತ ವ್ಯಾಪ್ತಿಗೆ ಕೆಲವೊಂದು ಗ್ರಾಮಗಳನ್ನು ಮೈಸೂರಿಗೆ ಸೇರಿಸಿದೆಯೆ?

ಶ್ರೀ ಕೆ. ಚೆಂಗಲರಾಯರೆಡ್ಡಿ:- ಇದಕ್ಕೂ ಪ್ರಸ್ತುತ ಪ್ರಶ್ನೆಗೂ ಸಂಬಂಧವಿಲ್ಲ.

ಶ್ರೀ ಎ. ಭೀಮಪ್ಪ ನಾಯಕ್:-ಮೈಸೂರು ಸರ್ಕಾರವು ಕೆಲವೊಂದು ಗ್ರಾಮಗಳನ್ನು ನೆರೆಹೊರೆಯ ಪ್ರಾಂತಗಳಿಗೆ ಬಿಟ್ಟುಕೊಟ್ಟಿಲ್ಲವೆ?

ಸಭಾಪತಿಗಳು:- ಇದು ಪ್ರಸ್ತುತ ಪ್ರಶ್ನೆಗೆ ಸಂಬಂಧಿಸಿದ್ದಲ್ಲ ಎಂದು ಮುಖ್ಯ ಮಂತ್ರಿಯವರು ಹೇಳುತ್ತಿದ್ದಾರೆ.

ಶ್ರೀ ಎ. ಭೀಮಪ್ಪನಾಯಕ:-ಆಡಳಿತಾತ್ಮಕ ಘಟನೆಗಳನ್ನು ರೂಪಿಸಲಾಗುತ್ತಿದೆ ಆದ್ದರಿಂದ, ಆ ದೃಷ್ಟಿಯಿಂದಲೂ ಮೈಸೂರು ಪ್ರಾಂತದ ವಿಸ್ತರಣೆಗೆ ಯಾವುದೇ ತೊಂದರೆಯಾಗಬಾರದು ಎಂದು ಹೇಳುವುದು ನನ್ನ ಉದ್ದೇಶವಾಗಿತ್ತು.

ಶ್ರೀ ಕೆ. ಚೆಂಗಲರಾಯರೆಡ್ಡಿ:- ಇಂತಹ ವಿಷಯಗಳಿಗೆ ಉತ್ತರಿಸಲು ಈ ಪ್ರಶ್ನಾವೇಳೆ ಸರಿಯಲ್ಲ ಎಂದು ಹೇಳ ಬಯಸುತ್ತೇನೆ.

ಶ್ರೀ ಕೆ.ಆರ್. ಶ್ರೀಕಂಠೇಶ್ವರ (ಬೆಂಗಳೂರು ನಗರ, ಸಾಮಾನ್ಯ):- ಮೈಸೂರು ರಾಜ್ಯವು ಕರ್ನಾಟಕದಂಥ ಒಂದು ದೊಡ್ಡ ಪ್ರಾಂತವಾಗುವುದು ನಿಮಗಿಷ್ಟವಿಲ್ಲವೆ?

ಶ್ರೀ ಕೆ. ಚೆಂಗಲರಾಯರೆಡ್ಡಿ:-ಮೈಸೂರು ಸತತವಾಗಿ ಪ್ರಗತಿ ಹೊಂದಬೇಕು ಅದೇ ರೀತಿ ಇಡೀ ಭಾರತವೂ ಕೂಡ ಪ್ರಗತಿ ಹೊಂದಬೇಕು ಎಂಬುದೇ ಸದಾಕಾಲವೂ ನಮ್ಮ ಅಭೀಷ್ಟೆ.

ಶ್ರೀ ಕೆ.ಆರ್ ಶ್ರೀಕಂಠೇಶ್ವರ:- ಹಾಗಿದ್ದ ಮೇಲೆ, ಮೈಸೂರು ಒಂದು ವಿಶಾಲ ಕರ್ನಾಟಕ ಪ್ರಾಂತವಾಗುವ ದಿಸೆಯಲ್ಲಿ ಈ ನಾಲ್ಕು ವರ್ಷಗಳಲ್ಲಿ ನೀವು ಯಾವ ಪ್ರಯತ್ನಗಳನ್ನು ಮಾಡಿದ್ದೀರಿ?

ಸಭಾಪತಿ:- ಇಂತಹಪೂರಕ ಪ್ರಶ್ನೆಗೆ ಏನು ಸಂಬಂಧ?

ಶ್ರೀ ಕೆ.ಆರ್ ಶ್ರೀಕಂಠೇಶ್ವರ:-ಅದು ಈ ರೀತಿ. ಮೈಸೂರು ಒಂದು ಮಾದರಿ ಕರ್ನಾಟಕ ಪ್ರಾಂತವಾಗಬೇಕೆಂಬುದು ತಮ್ಮ ಅಭೀಪ್ಸೆ ಎಂದು ಮುಖ್ಯ ಮಂತ್ರಿಗಳು ಒಪ್ಪಿಕೊಂಡಿದ್ದಾರೆ. ಈ ದಿಸೆಯಲ್ಲಿ ಅವರು ಏನೇನು ಪ್ರಯತ್ನ ಮಾಡಿದ್ದಾರೆ ಎಂಬುದನ್ನು ನಾನು ತಿಳಿಯಬಯಸುತ್ತೇನೆ.

ಶ್ರೀ ಕೆ. ಚೆಂಗಲರಾಯರೆಡ್ಡಿ:- ನಾನು ಆ ರೀತಿ ಹೇಳಲಿಲ್ಲ.

ಶ್ರೀ ಡಿ.ಎಂ. ಸಿದ್ದಯ್ಯ:-(ಮೈಸೂರು ಜಿಲ್ಲೆ-ಸಾಮಾನ್ಯ) ಕೊಡಗಿನ ಜನರು ಮೈಸೂರಿನೊಂದಿಗೆ ಸೇರಲು ಬಯಸುತ್ತಿರುವುದು ಸತ್ಯವಲ್ಲವೆ?

**ಶ್ರೀ ಕೆ. ಚೆಂಗಲರಾಯರೆಡ್ಡಿ:-** ಇದು ನಿಜಾಂಶವಲ್ಲ. ಕೊಡಗಿನಲ್ಲಿ ಎರಡು ಭಿನ್ನ ರೀತಿಯ ಆಲೋಚನೆಗಳಿವೆ. ಒಂದು ಗುಂಪಿನವರು ಮೈಸೂರಿನೊಂದಿಗೆ ಸೇರಬೇಕು ಎನ್ನುತ್ತಾರೆ? ಇನ್ನೊಂದು ಗುಂಪಿನವರು ಕೊಡಗು ಒಂದು ಪ್ರತ್ಯೇಕ ಪ್ರದೇಶವಾಗಿ ಉಳಿಯಬೇಕು ಎನ್ನುತ್ತಾರೆ.

ಶ್ರೀ ಡಿ. ಎಂ. ಸಿದ್ದಯ್ಯ:- ಮಾನ್ಯ ಮುಖ್ಯ ಮಂತ್ರಿಗಳು ಕೊಡಗಿಗೆ ಭೇಟಿ ನೀಡಿದಾಗ ಕೊಡಗಿನ ಜನರು ಮುಖ್ಯಮಂತ್ರಿಯವರಿಗೆ ಅರ್ಪಿಸಿದ ಮನವಿಯಲ್ಲಿ ಮೈಸೂರಿನ ಜೊತೆ ಸೇರುವ ಅಭಿಪ್ರಾಯವನ್ನು ವ್ಯಕ್ತಪಡಿಸಿಲ್ಲವೆ?

**ಶ್ರೀ ಕೆ. ಚೆಂಗಲರಾಯರೆಡ್ಡಿ:-** ನಾವು ನಮ್ಮಷ್ಟಕ್ಕೆ ಇರುತ್ತೇವೆ. ನಾವು ಯಾರೊಂದಿಗೂ ಸೇರುವುದು ಬೇಡ ಎನ್ನುವ ಕೂಗುಗಳು ಇದ್ದವು.

ಶ್ರೀ ಡಿ.ಎಂ. ಸಿದ್ದಯ್ಯ:- ಒಂದು ವೇಳೆ ಕೊಡಗು ಮೈಸೂರಿನೊಂದಿಗೆ ಸೇರಲು ಅಪೇಕ್ಷಿಸಿದರೆ ಎಂದು ಮುಖ್ಯಮಂತ್ರಿಯವರು ಹೇಳಿದ್ದು ನಿಜವೆ?

**ಕೆ. ಚೆಂಗಲರಾಯರೆಡ್ಡಿ:-** ಇಲ್ಲ ಇದು ಕೊಡಗಿನ ಜನರು ತಮ್ಮ ಜವಾಬ್ದಾರಿಯ ಮೇಲೆ ತಾವೇ ನಿರ್ಧರಿಸಬೇಕಾದ ವಿಷಯ ಎಂದು ಹೇಳಿದೆ. ಇದು ಮೈಸೂರು ಅವರ ಪರವಾಗಿ ನಿರ್ಣಯಿಸುವಂತಹ ವಿಷಯವಲ್ಲ.

ಶ್ರೀ ಡಿ. ಎಂ. ಸಿದ್ದಯ್ಯ:- ಅವರು ತಾವಾಗಿಯೇ ಮೈಸೂರನ್ನು ಸೇರಿದರೆ ಮೈಸೂರು ಸರ್ಕಾರದ ಕಡೆಯಿಂದ ಆ ಬಗ್ಗೆ ಏನಾದರೂ ಆಕ್ಷೇಪಣೆ ಇದೆಯೆ?

**ಕೆ. ಚೆಂಗಲರಾಯರೆಡ್ಡಿ:-** ಇದು ಪುನಃ ಒಂದು ಊಹಾತ್ಮಕ ಪ್ರಶ್ನೆ. ಈ ಬಗ್ಗೆ ನಾವು ಸೂಕ್ತ ಸಮಯದಲ್ಲಿ ವ್ಯವಹರಿಸಬೇಕು. ಕಾಲ ಕೂಡಿಬರುವ ಮೊದಲೇ ಉತ್ತರ ಕೊಟ್ಟು ಸಿಕ್ಕಿಹಾಕಿಕೊಳ್ಳಬಾರದು.

ಶ್ರೀ ಹೆಚ್.ಎಂ. ಚೆನ್ನಬಸಪ್ಪ:-(ಮೈಸೂರು ಜಿಲ್ಲೆ ಸಾಮಾನ್ಯ):- ಭಾಷೆಯ ಆಧಾರದ ಮೇಲೆ ಪ್ರದೇಶಗಳನ್ನು ವಿಂಗಡಿಸುವ ಅಥವಾ ಮರು ವಿಂಗಡಿಸುವ ಬಗ್ಗೆ ಸರ್ಕಾರದ ಅಭಿಪ್ರಾಯ ಏನೆಂದು ಕೇಳಬಹುದೆ?

**ಕೆ. ಚೆಂಗಲರಾಯರೆಡ್ಡಿ:-** ಈ ಸಮಸ್ಯೆಯನ್ನು ಅದರ ಎಲ್ಲ ಮುಖಗಳೊಂದಿಗೆ ನಾವಿನ್ನೂ ಪರಿಶೀಲಿಸಿಲ್ಲ. ಸರ್ಕಾರವು ಈ ಬಗ್ಗೆ ಪರಿಶೀಲಿಸುವಂತಹ ಸಂದರ್ಭ ಬರಲಿಲ್ಲವಾದ್ದರಿಂದ ನಾವು ಈ ಬಗ್ಗೆ ಯಾವುದೇ ನಿರ್ಣಯ ಕೈಗೊಂಡಿಲ್ಲ.

## 18. ಕರ್ನಾಟಕ ಏಕೀಕರಣ ಕುರಿತು

### ವಿಧಾನಸಭಾ ಕಲಾಪ - 12, ನವೆಂಬರ್ 1951

ಪ್ರಶ್ನೆ: ಜನಾಬ್ ಮೊಹಮದ್ ಇಮಾಂ (ಚಿತ್ರದುರ್ಗ):

ಸರ್ಕಾರ ಈ ಕೆಳಕಂಡ ಪ್ರಶ್ನೆಗಳಿಗೆ ಉತ್ತರಿಸಬೇಕು.

ಎ) ಮೈಸೂರು ರಾಜ್ಯವನ್ನೂ ಒಳಗೊಂಡಂತೆ ಕರ್ನಾಟಕದ ಏಕೀಕರಣ ಮಾಡಬೇಕು ಎಂಬ ಬಗ್ಗೆ ಭಾರತ ಸರ್ಕಾರಕ್ಕೆ ಮನವಿಗಳನ್ನು ಸಲ್ಲಿಸುತ್ತಿರುವುದು ನಿಜವೆ?

ಬಿ) ಈ ಬಗ್ಗೆ ಕೇಂದ್ರವು ಮೈಸೂರು ಸರ್ಕಾರದೊಡನೆ ಸಮಾಲೋಚನೆ ನಡೆಸಿದೆಯೆ?

ಸಿ) ಮೈಸೂರನ್ನು ಕರ್ನಾಟಕದಲ್ಲಿ ವಿಲೀನಗೊಳಿಸುವುದರ ಅನುಕೂಲತೆ ಮತ್ತು ಅನಾನುಕೂಲತೆಗಳ ಬಗ್ಗೆ ಅವರು ತನಿಖೆ ಮಾಡಿದ್ದಾರೆಯೆ?

**ಶ್ರೀ ಕೆ. ಚೆಂಗಲರಾಯರೆಡ್ಡಿ:-** ಈ ಪ್ರಶ್ನೆ ರಾಜಕೀಯ ವಿಷಯಕ್ಕೆ ಸಂಬಂಧಿಸಿದ್ದು. ಕೇಂದ್ರ ಸರ್ಕಾರದ ವ್ಯಾಪ್ತಿಯಲ್ಲಿ ಬರುವಂಥದ್ದಾಗಿದೆ. ಬಾಂಬೆ ಮತ್ತು ಮದ್ರಾಸ್ ರಾಜ್ಯದ ಕೆಲವು ಭಾಗಗಳನ್ನು ಮೈಸೂರಿನೊಂದಿಗೆ ವಿಲೀನಗೊಳಿಸಿ ಕರ್ನಾಟಕ ಪ್ರಾಂತವನ್ನು ರಚಿಸುವ ಪ್ರಶ್ನೆಗೆ ಸಂಬಂಧಿಸಿದಂತೆ ಮಹಾರಾಜರವರು ಇತ್ತೀಚೆಗೆ ಬಾಂಬೆ ಪ್ರವಾಸದಲ್ಲಿ ತಮಗೆ ಸಲ್ಲಿಸಲಾದ ಮನವಿಗಳಿಗೆ ಸಂಬಂಧಿಸಿದಂತೆ ನೀಡಿರುವ ಹೇಳಿಕೆಯ ಬಗ್ಗೆ ತಮ್ಮ ಗಮನ ಸೆಳೆಯಬಯಸುತ್ತೇನೆ.

ಬಿ) ಇಲ್ಲ

ಸಿ) ಮೇಲೆ (ಎ) ಗೆ ನೀಡಿರುವ ಉತ್ತರ ನೋಡಿ.

**ಜನಾಬ್ ಜೆ ಮೊಹಮದ್ ಇಮಾಂ:-** ಮೈಸೂರನ್ನು ಕರ್ನಾಟಕದಲ್ಲಿ ವಿಲೀನಗೊಳಿಸುವುದರ ಅನುಕೂಲತೆ ಮತ್ತು ಅನಾನುಕೂಲತೆಗಳ ಬಗ್ಗೆ ಸರ್ಕಾರವು ತನಿಖೆ ನಡೆಸಿದೆಯೆ?

**ಶ್ರೀ ಕೆ. ಚೆಂಗಲರಾಯರೆಡ್ಡಿ:-** ಇಲ್ಲ ವ್ಯವಸ್ಥಿತ ಕ್ರಮದಲ್ಲಿ ನಡೆಸಿಲ್ಲ.

**ಜನಾಬ್ ಜೆ. ಮೊಹಮದ್ ಇಮಾಂ:-** ಇಂತಹ ಒಂದು ಮುಖ್ಯ ವಿಷಯದ ಸಾಧಕ ಬಾಧಕಗಳನ್ನು ಹಾಗೂ ಮೈಸೂರು ರಾಜ್ಯದ ಮೇಲೆ ಅದರ ಪರಿಣಾಮವೇನು ಎಂಬುದನ್ನು ತನಿಖೆ ಮಾಡುವುದು ಮೈಸೂರು ಸರ್ಕಾರದ ಕರ್ತವ್ಯವಲ್ಲವೆ?

**ಶ್ರೀ ಕೆ. ಚೆಂಗಲರಾಯರೆಡ್ಡಿ:-** ನಾನು ಮೊದಲೇ ಹೇಳಿದಂತೆ ಈ ವಿಷಯವು ಅಧಿಕೃತ ರೀತಿಯಲ್ಲಿ ಸರ್ಕಾರದ ಮುಂದೆ ಬಂದಿಲ್ಲ. ಆದ್ದರಿಂದ ಈ ವಿಷಯದ ಬಗ್ಗೆ ವಿಚಾರಣೆ ನಡೆಸುವುದಕ್ಕೆ ಕಾಲ ಇನ್ನೂ ಕೂಡಿ ಬಂದಿಲ್ಲ ಎಂದು ನಾವು ಭಾವಿಸಿದ್ದೇವೆ.

**ಜನಾಬ್ ಜೆ. ಮೊಹಮ್ಮದ್ ಇಮಾಂ:-** ಈ ವಿಷಯದ ಪರವಾಗಿ ಅಥವಾ ವಿರುದ್ಧವಾಗಿ ಜನಾಭಿಪ್ರಾಯ ರೂಪುಗೊಳ್ಳುತ್ತಿರುವುದನ್ನು ಸರ್ಕಾರವು ಗಮನಿಸಿಲ್ಲವೆ? ಇದರ ಪರಿಣಾಮಗಳೇನು ಎಂದು ಯೋಚಿಸಿಲ್ಲವೆ?

**ಶ್ರೀ ಕೆ. ಚೆಂಗಲರಾಯರೆಡ್ಡಿ:-** ಈ ಪ್ರಶ್ನೆಗೆ ನಾನು ಆಗಲೇ ಉತ್ತರಿಸಿದ್ದೇನೆ. ಭಾರತದ ಸಂವಿಧಾನದ 3 ನೇ ಅನುಚ್ಛೇದದಲ್ಲಿ ತಿಳಿಸಿರುವ ಪ್ರಕಾರ ಈ ವಿಷಯ ನಮ್ಮ ಮುಂದೆ ಬಂದರೆ ಆ ವಿಷಯವನ್ನು ನಾವು ಕೈಗೆತ್ತಿಕೊಂಡು ಪರಿಪೂರ್ಣವಾಗಿ ಪರಿಶೀಲಿಸಬೇಕಾಗುತ್ತದೆ.

**ಜನಾಬ್ ಜೆ. ಮೊಹಮದ್ ಇಮಾಂ:-** ನಮ್ಮ ಅಭಿಪ್ರಾಯದಲ್ಲಿ ಹೇಳುವುದೇನೆಂದರೆ, ಮುಖ್ಯಮಂತ್ರಿಯವರಿಗೆ ಈ ಪ್ರಶ್ನೆಗೆ ಉತ್ತರಿಸಲು ಇಷ್ಟವಿದ್ದಂತಿಲ್ಲ.

**ಶ್ರೀ ಕೆ. ಚೆಂಗಲರಾಯರೆಡ್ಡಿ:-** ಈ ವಿಷಯಕ್ಕೆ ಸಂಬಂಧಿಸಿದಂತೆ ಕೇಂದ್ರ ಸರ್ಕಾರವು ರಾಜ್ಯ ಸರ್ಕಾರದ ಮುಂದೆ ಯಾವುದೇ ಪ್ರಸ್ತಾಪ ಮಾಡಿಲ್ಲ.

**ಜನಾಬ್ ಜೆ. ಮೊಹಮದ್ ಇಮಾಂ:-** ಕರ್ನಾಟಕ ಏಕೀಕರಣಕ್ಕೆ ಸಂಬಂಧಿಸಿದಂತೆ ಇಷ್ಟೊಂದು ಚಳುವಳಿ ನಡೆಯುತ್ತಿರುವಾಗ ಮೈಸೂರು ಸರ್ಕಾರದ ಮೇಲೆ ಇದರ ಪರಿಣಾಮ ಯಾವ ರೀತಿಯಾಗಬಹುದು ಎಂಬುದನ್ನು ತಿಳಿದುಕೊಳ್ಳುವುದು ಸರ್ಕಾರದ ಕರ್ತವ್ಯವಲ್ಲವೆ, ಅದು ನೈತಿಕ ಬದ್ಧತೆಯಲ್ಲವೆ?

**ಶ್ರೀ ಕೆ. ಚೆಂಗಲರಾಯರೆಡ್ಡಿ:-** ಮಾನ್ಯ ಸದಸ್ಯರು ಕರ್ತವ್ಯ ಮತ್ತು ನೈತಿಕ ಬದ್ಧತೆ ಬಗ್ಗೆ ಮಾತಾಡುತ್ತಿದ್ದಾರೆ. ಆಡಳಿತಾತ್ಮಕವಾಗಿ ಹೇಳುವುದಾದರೆ ಒಂದು ಸರ್ಕಾರದ ಮುಂದೆ ಈ ಪ್ರಶ್ನೆ ಯಾವ ರೀತಿ ಪ್ರಸ್ತಾಪಿಸಲ್ಪಡಬೇಕೋ ಆ ರೀತಿಯಾಗಿದ್ದರೆ ಮಾತ್ರ ಅದನ್ನು ನಾವು ಪರಿಶೀಲಿಸಬೇಕು. ಅದು ಬೇರೆ ಬೇರೆ ರೀತಿಯಲ್ಲಿ ಶಾಸಕಾಂಗದಲ್ಲಿ ಪ್ರಸ್ತಾಪಿಸಲ್ಪಟ್ಟಿದೆ. ಆದರೆ ಈ ಪ್ರಶ್ನೆಯನ್ನು ಪರಿಶೀಲಿಸುವುದಕ್ಕಾಗಿ ಒಂದು ಸಮಿತಿಯನ್ನು ಅಥವಾ ಇತರ ರೀತಿಯ ಅಭಿನಿಯೋಗವೊಂದನ್ನು ರಚಿಸುವ ಅಗತ್ಯವೇನೂ ಕಂಡು ಬಂದಿಲ್ಲ. ಸಂಬಂಧಿಸಿದ ಎಲ್ಲ ಅಗತ್ಯ ಮಾಹಿತಿಯನ್ನೂ ಸಂಗ್ರಹಿಸಲಾಗುತ್ತಿದೆ. ಹಾಗೂ ಸಾಮಾನ್ಯ ಆಡಳಿತ ದೃಷ್ಟಿಯಿಂದಲೇ ಅದನ್ನು ಪರಿಶೀಲಿಸಲಾಗುತ್ತಿದೆ.

**ಜನಾಬ್ ಜೆ. ಮೊಹಮದ್ ಇಮಾಂ:-** ಯಾವುದಾದರೊಂದು ದಿನ ಭಾರತ ಸರ್ಕಾರವು 371 ನೇ ಅನುಚ್ಛೇದವನ್ನು ಪ್ರಯೋಗಿಸಿ ಮೈಸೂರು ಕರ್ನಾಟಕದೊಂದಿಗೆ ವಿಲೀನಗೊಳ್ಳಬೇಕು ಎಂದು ಆದೇಶ ಹೊರಡಿಸುವ ಸಾಧ್ಯತೆ ಇದೆಯಲ್ಲವೆ?

**ಶ್ರೀ ಕೆ. ಚೆಂಗಲರಾಯರೆಡ್ಡಿ:-** ಈ ಪ್ರಶ್ನೆ ಇಲ್ಲಿ ಪ್ರಸ್ತುತವಾಗುವುದಿಲ್ಲ.

**ಜನಾಬ್ ಜೆ. ಮೊಹಮದ್ ಇಮಾಂ:-** ಇಂತಹ ಸಾಧ್ಯತೆಗಳ ಬಗ್ಗೆ ಮೈಸೂರು ಸರ್ಕಾರ ಮೊದಲೇ ಜಾಗ್ರತೆ ವಹಿಸುವುದು ಹಾಗೂ ಸನ್ನದ್ಧವಾಗುವುದು ಅಗತ್ಯವಲ್ಲವೆ?

**ಶ್ರೀ ಕೆ. ಚೆಂಗಲರಾಯರೆಡ್ಡಿ:-** ಹೀಗೆ ಜಾಗ್ರತೆ ವಹಿಸುವುದಕ್ಕೆ ಹಾಗೂ ಸನ್ನದ್ಧವಾಗುವುದಕ್ಕೆ ಇದೇನು ಯುದ್ಧಭೀತಿಯಲ್ಲ? ವಿಷಯ ಉದ್ಭವಿಸಿದಾಗ ಚರ್ಚೆ ಮಾಡಬಹುದು.

**ಜನಾಬ್ ಜೆ. ಮೊಹಮದ್ ಇಮಾಂ:-** ಮಾನ್ಯ ಸಚಿವರ ಅಭಿಪ್ರಾಯದಲ್ಲಿ ಈ ವಿಷಯ ಯಾವಾಗ ನಮ್ಮ ಮುಂದೆ ಬರುತ್ತದೆ?

**ಶ್ರೀ ಕೆ. ಚೆಂಗಲರಾಯರೆಡ್ಡಿ:-** ಈ ಪ್ರಶ್ನೆಗೆ ಉತ್ತರಿಸಲು ನಾನು ಜ್ಯೋತಿಷಿಯಲ್ಲ.

**ಶ್ರೀ ಎಂ. ಗೋವಿಂದರೆಡ್ಡಿ(ಚಿತ್ರದುರ್ಗ ಜಿಲ್ಲೆ-ಸಾಮಾನ್ಯ):-** ಕರ್ನಾಟಕ ಏಕೀಕರಣದ ವಿಷಯವು ಮೈಸೂರು ಸರ್ಕಾರ ತನ್ನಷ್ಟಕ್ಕೇ ನಿರ್ಧಾರ ಕೈಗೊಳ್ಳಬಹುದಾಂತಹ ವಿಷಯವೆ?

**ಶ್ರೀ ಕೆ. ಚೆಂಗಲರಾಯರೆಡ್ಡಿ:-** ಸಂಬಂಧಪಟ್ಟ ಶಾಸಕಾಂಗವು ತನ್ನ ಅಭಿಪ್ರಾಯ ನೀಡಬೇಕು ಎಂದು ಅನುಚ್ಛೇದವು ತಿಳಿಸುತ್ತದೆ.

**ಶ್ರೀ ಎಂ. ಗೋವಿಂದರೆಡ್ಡಿ:-** ಈ ವಿಷಯದ ಬಗ್ಗೆ ಸರ್ಕಾರವಾಗಲೀ ಅಥವಾ ಇನ್ನಾವುದೇ ಸರ್ಕಾರವಾಗಲೀ ತನ್ನ ಅಭಿಪ್ರಾಯವನ್ನು ಹೇಳುವಂತಿಲ್ಲವೆ?

**ಶ್ರೀ ಕೆ. ಚೆಂಗಲರಾಯರೆಡ್ಡಿ:-** ಆಯಾ ಶಾಸಕಾಂಗದೊಂದಿಗೆ ಸಮಾಲೋಚನೆ ನಡೆಸಿ ಸಾರ್ವಜನಿಕ ಅಭಿಪ್ರಾಯ ಏನಿದೆಯೋ ಅದನ್ನು ಸಂಗ್ರಹಿಸಬೇಕು. ಆದರೆ ಅದನ್ನು ಸೂಕ್ತ ಕಾಲದಲ್ಲಿ ಮಾಡಬೇಕೆಂಬುದು ಸ್ಪಷ್ಟ.

## ಲೋಕಸಭೆಯ ನಡೆವಳಿಕೆಗಳು

## 1. ಟ್ರಾಂಕ್ವೆಬಾರ್ ಉಪ್ಪು ಕಾರ್ಖಾನೆ ಕುರಿತು ಪ್ರಶ್ನೋತ್ತರ (ನವೆಂಬರ್ 18, 1952.)

ಶ್ರೀ ವೇಲಾಯುಧನ್:- ಉತ್ಪಾದನಾ ಸಚಿವರು ಕೆಳಕಂಡ ಪ್ರಶ್ನೆಗಳಿಗೆ ಉತ್ತರಿಸಬೇಕು.

ಎ) ಟ್ರಾಂಕ್ವೆಬಾರ್ ಕಾರ್ಖಾನೆಯಲ್ಲಿ ಉತ್ಪಾದನೆಯಾದ ಉಪ್ಪಿನ ಬಿಡುಗಡೆಯನ್ನು ನಿಷೇಧಿಸಲಾಗಿದೆಯೆ? ಮತ್ತು

ಬಿ) ಹಾಗಿದ್ದಲ್ಲಿ, ಇಂತಹ ನಿಷೇಧಕ್ಕೆ ಕಾರಣವೇನು?

ಉತ್ಪಾದನಾ ಸಚಿವರು: (ಶ್ರೀ ಕೆ.ಸಿ. ರೆಡ್ಡಿ):- ಎಲ್ಲದರ ಮೇಲೂ ನಿಷೇಧ ಹೇರಿಲ್ಲ. ಆದರೆ 1952ರಲ್ಲಿ ಉತ್ಪಾದಿಸಲಾದ 44,000 ದಿಬ್ಬಗಳನ್ನು ಮಾತ್ರ ನಿಷೇಧಿಸಲಾಗಿದೆ.

ಬಿ) ಮಾನವರ ಸೇವನೆಗೆ ಬಳಕೆಯಾಗುವ ಉಪ್ಪು ಕನಿಷ್ಠ 93% ಸೋಡಿಯಂ ಕ್ಲೋರೈಡ್ ಅಂಶ ಹೊಂದಿರಬೇಕು ಎಂಬ ಮಾನ ದಂಡವನ್ನು 1952 ರಲ್ಲಿ ಭಾರತ ಸರ್ಕಾರ ನಿಗದಿಸಿತು. ಆದರೆ 1952 ರಲ್ಲಿ ಟ್ರಾಂಕ್ವೆಬಾರ್‌ನಲ್ಲಿ ಉತ್ಪಾದಿತವಾದ ಉಪ್ಪಿನಲ್ಲಿ ಕೇವಲ 91.37 ಸೋಡಿಯಂ ಕ್ಲೋರೈಡ್ ಅಂಶ ಇರುವುದು ಕಂಡು ಬಂತು. ಇದು ನಿಗದಿತ ಮಾನದಂಡಕ್ಕಿಂತ ಕಡಿಮೆ.

ಶ್ರೀ ವೇಲಾಯುಧನ್:- ಹಾಗಾದರೆ ಈ ಉಪ್ಪನ್ನು ಪ್ರಯೋಗಾಲಯಕ್ಕೆ ಕಳಿಸಿ ಪರೀಕ್ಷಿಸಲಾಯಿತೆ? ಅನಂತರ ಈ ನಿರ್ಧಾರವನ್ನು ಪ್ರಕಟಿಸಲಾಯಿತೆ?

ಶ್ರೀ ಕೆ.ಸಿ. ರೆಡ್ಡಿ:- ಸರಿಯಾದ ಪರೀಕ್ಷಣೆಯ ನಂತರವೇ ನಿರ್ಧಾರ ಕೈಗೊಳ್ಳಲಾಗಿದೆ.

ಶ್ರೀ ವೇಲಾಯುಧನ್:- ಆದರೆ ಜನ ಮೊದಲು ಇಂಥದ್ದೇ ಉಪ್ಪನ್ನು ಬಳಸುತ್ತಿರಲಿಲ್ಲವೆ?

ಶ್ರೀ ಕೆ.ಸಿ. ರೆಡ್ಡಿ:- ಮೊದಲು ಅಂದರೆ ಯಾವಾಗ?

ಸ್ಪೀಕರ್:-ಯಾವ ವರ್ಷದಲ್ಲಿ?

ಶ್ರೀ ವೇಲಾಯುಧನ್:- ಹಿಂದಿನ ವರ್ಷಗಳಲ್ಲಿ ಇದೇ ಗುಣಮಟ್ಟದ ಉಪ್ಪನ್ನೇ ಹೊರಗೂ ಕಳುಹಿಸಲಾಗುತ್ತಿತ್ತು.

ಶ್ರೀ ಕೆ. ಸಿ. ರೆಡ್ಡಿ:- ಹಿಂದಿನ ವರ್ಷಗಳಲ್ಲಿ? ಮಾನ್ಯ ಸದಸ್ಯರು 1945 ಅಥವಾ 50 ರ ಬಗ್ಗೆ ಹೇಳುತ್ತಿದ್ದರೆ ಬಹುಶಃ ಹಾಗೆ ಇದ್ದಿರಬಹುದು. ಆದರೆ ಈಗ ನಾವು ಕ್ರಮೇಣವಾಗಿ ಉಪ್ಪಿನ ಗುಣಮಟ್ಟವನ್ನು ಉತ್ತಮ ಪಡಿಸುತ್ತಿದ್ದೇವೆ. 1952ರಲ್ಲಿ ನಾವು 94% ರಷ್ಟು ಸೋಡಿಯಂ ಕ್ಲೋರೈಡ್ ಅಂಶ ಇರಬೇಕು ಎಂದು ನಿಗದಿಸಿದೆವು. ಆನಂತರ ಅದನ್ನು 93% ಗೆ ಇಳಿಸಿದೆವು. ಅನೇಕ ತಯಾರಕರುಗಳಿಂದ ಮನವಿಗಳು ಬಂದಿದ್ದರಿಂದ ಹೀಗೆ ಇಳಿಸಬೇಕಾಯಿತು.

ಶ್ರೀ ವೇಲಾಯುಧನ್:- ಉಪ್ಪಿಗೆ ಸಂಬಂಧಿಸಿದಂತೆ ಸರ್ಕಾರವು ಈಗ ಯಾವುದಾದರೂ ಒಂದು ನಿಗದಿತ ಗುಣಮಟ್ಟ ನಿರ್ಧರಿಸಿದೆಯೆ?

ಶ್ರೀ ಕೆ.ಸಿ ರೆಡ್ಡಿ:- ಹೌದು. ನಾನು ಈಗಾಗಲೇ ಈ ಪ್ರಶ್ನೆಗೆ ಉತ್ತರಿಸಿದ್ದೇನೆ. 1952ರ ಸಾಲಿನಲ್ಲಿ ಉಪ್ಪಿನಲ್ಲಿ 93% ಸೋಡಿಯಂ ಕ್ಲೋರೈಡ್ ಅಂಶ ಇರಬೇಕು ಎಂದು ನಿಗದಿಸಲಾಗಿದೆ.

## 2. ಉಪ್ಪಿನ ಉತ್ಪಾದನೆ ಮತ್ತು ರಫ್ತು ಕುರಿತು

## ನವೆಂಬರ್ 26, 1952.

ಶ್ರೀ ನಾನಾದಾಸ್:-ಎ) ಕಳೆದ ಆರು ತಿಂಗಳಲ್ಲಿ ಭಾರತದಲ್ಲಿ ಎಷ್ಟು ಉಪ್ಪು ಉತ್ಪಾದನೆಯಾಗಿದೆ. ಎಷ್ಟು ರಫ್ತು ಆಗಿದೆ ಎಂಬುದರ ವಿವರಣ ಪತ್ರವನ್ನು ಸದನದಲ್ಲಿ ಮಂಡಿಸುವ ಪ್ರಸ್ತಾಪವೇನಾದರೂ ಸರ್ಕಾರಕ್ಕಿದೆಯೇ ಎಂಬುದನ್ನು ಉತ್ಪಾದನಾ ಸಚಿವರು ತಿಳಿಸುವರೆ?

ಬಿ) ಮೇಲ್ಕಂಡ ಅವಧಿಯಲ್ಲಿ ಈ ರಫ್ತಿನಿಂದ ಭಾರತ ಎಷ್ಟು ಗಳಿಸಿದೆ?

ಸಿ) ಸಧ್ಯದಲ್ಲಿ ಇತರ ದೇಶಗಳಿಗೆ ನಮ್ಮ ಉಪ್ಪಿನ ರಫ್ತು ವಿತರಣೆಯಾಗುವ ಸಾಧ್ಯತೆಗಳಿವೆಯೇ? ಹಾಗಿದ್ದಲ್ಲಿ ಯಾವ ದೇಶಗಳಿಗೆ?

**ಉತ್ಪಾದನಾ ಸಚಿವರು:**(ಶ್ರೀ ಕೆ.ಸಿ.ರೆಡ್ಡಿ):-ಎ) 1952 ಏಪ್ರಿಲ್- ಸೆಪ್ಟೆಂಬರ್ ತಿಂಗಳಿನ ಅವಧಿಗೆ ಸಂಬಂಧಿಸಿದ ಮಾಹಿತಿಯನ್ನು ಸದನದಲ್ಲಿ ಮಂಡಿಸಲಾಗಿದೆ (ನೋಡಿ ಪರಿಶಿಷ್ಟ 4, ಅನುಬಂಧ ಸಂ.18)

ಬಿ) ಸುಮಾರು 45 ಲಕ್ಷ ರೂ.

ಸಿ) ಹೌದು. ಗುಣಮಟ್ಟ ಸುಧಾರಿಸಿದಲ್ಲಿ ಮಾತ್ರ. ಜಪಾನ್‌ಗೆ ರಫ್ತು ಮಾಡಲು ಉತ್ತಮ ಅವಕಾಶಗಳಿವೆ. ಇತರ ಮಾರುಕಟ್ಟೆಗಳ ಶೋಧನೆಯೂ ನಡೆದಿದೆ.

ಶ್ರೀ ನಾನಾದಾಸ್:- ವಿವರಣ ಪತ್ರದ ಪ್ರಕಾರ ಕಳೆದ ಆರು ತಿಂಗಳ ಅವಧಿಯಲ್ಲಿ ನಾವು ಜಪಾನ್‌ಗೆ 37 ಲಕ್ಷ ದಿಬ್ಬಗಳಷ್ಟು ಉಪ್ಪನ್ನು ರಫ್ತು ಮಾಡಿದ್ದೇವೆ. ಯಾವ ಉಪ್ಪು ಉತ್ಪಾದನಾ ಕೇಂದ್ರಗಳಿಂದ ಜಪಾನ್‌ಗೆ ಈ ಉಪ್ಪಿನ ರಫ್ತಾಗಿದೆ ಎಂಬುದನ್ನು ತಿಳಿಸುತ್ತೀರಾ?

ಕೆ.ಸಿ ರೆಡ್ಡಿ:- ಬಹುತೇಕವಾಗಿ ಪಶ್ಚಿಮ ತೀರದಿಂದ : ಸೌರಾಷ್ಟ್ರ, ಕಚ್ ಹಾಗೂ ಸ್ವಲ್ಪ ಪ್ರಮಾಣ ಟೂಟಿಕಾರನ್‌ನಿಂದ.

ಶ್ರೀ ನಾನಾದಾಸ್:- ಮದ್ರಾಸ್ ಮತ್ತು ಬಾಂಬೆಯ ಉಪ್ಪು ಜಪಾನ್‌ಗೆ ರಫ್ತಾಗಲು ಯೋಗ್ಯವಾಗುವಂತೆ ಸರ್ಕಾರ ಯಾವ ಕ್ರಮಗಳನ್ನು ಕೈಗೊಂಡಿದೆ?

ಶ್ರೀ ಕೆ.ಸಿ. ರೆಡ್ಡಿ:- ಉಪ್ಪಿನ ಗುಣಮಟ್ಟ ವರ್ಷದಿಂದ ವರ್ಷಕ್ಕೆ ಸುಧಾರಿಸಬೇಕು ಎಂದು ಸರ್ಕಾರ ತಿಳಿಸಿದೆ. ಈ ವರ್ಷಕ್ಕೆ ಸೋಡಿಯಂ ಕ್ಲೋರೈಡ್‌ನ ಅಂಶ 93% ರಷ್ಟಿರಬೇಕು ಎಂದು ನಿಗದಿಸಲಾಗಿದೆ. ಎಲ್ಲ ಕ್ಷೇತ್ರಗಳಲ್ಲಿನ ಉಪ್ಪಿನ ಗುಣಮಟ್ಟ ಸುಧಾರಿಸಬೇಕು ಎಂಬುದಕ್ಕಾಗಿ ಸಾಧ್ಯವಾದ ಎಲ್ಲ ಸೌಲಭ್ಯಗಳನ್ನೂ ಕೊಡಲಾಗಿದೆ.

ಶ್ರೀ ನಾನಾದಾಸ್:- ನಮ್ಮ ಉಪ್ಪಿನ ಗುಣಮಟ್ಟ ಹಾಗೂ ಮಾನದಂಡಗಳಿಗೂ ಆಡೆನ್ ಉಪ್ಪಿಗೂ ಯಾವ ರೀತಿಯ ಹೋಲಿಕೆಯಿದೆ? ಮತ್ತು ಬೆಲೆಗಳಲ್ಲಿ ಯಾವ ರೀತಿಯ ಹೋಲಿಕೆಯಿದೆ?

ಶ್ರೀ ಕೆ.ಸಿ. ರೆಡ್ಡಿ:- ಕ್ಷಮಿಸಿ, ಸಿದ್ಧತೆಯಿಲ್ಲದೆ ಅದಕ್ಕೆ ಉತ್ತರ ಕೊಡಲಾರೆ.

**ಶ್ರೀ ನಾನಾದಾಸ್:-** ವಿವರಣ ಪತ್ರದಿಂದ ತಿಳಿದು ಬರುವಂತೆ ನಾವು ಜುಲೈ ತಿಂಗಳಾದ ನಂತರ ಪೂರ್ವ ಬಂಗಾಳಕ್ಕೆ ಯಾವುದೇ ಉತ್ಪನ್ನ ರಫ್ತು ಮಾಡಿಲ್ಲ ಎಂದು ತಿಳಿದು ಬರುತ್ತದೆ. ಇದಕ್ಕೆ ಕಾರಣವೇನು? ನಮ್ಮ ಉಪ್ಪಿನ ರಫ್ತಿಗೆ ಸಂಬಂಧಿಸಿದಂತೆ ಏನಾದರೂ ನಿಷೇಧಾಜ್ಞೆ ಇದೆಯೆ?

**ಶ್ರೀ ಕೆ.ಸಿ. ರೆಡ್ಡಿ:-** 1951 ರ ಕೊನೆಯ ಮೂರು ತಿಂಗಳಿನಿಂದ ಯಾವುದೇ ನಿಷೇಧವಿಲ್ಲ. ಆದರೆ ಅದಕ್ಕೆ ಮೊದಲು, ಉಪ್ಪಿನ ವಿಷಯ ಇಂಡೋ ಪಾಕಿಸ್ತಾನ್ ವ್ಯಾಪಾರ ಒಪ್ಪಂದದಲ್ಲಿ ಸೇರಿರಲಿಲ್ಲವಾದ್ದರಿಂದ ಎರಡು ಸರ್ಕಾರಗಳು ಉಪ್ಪಿನ ಮೇಲೆ ನಿರ್ಬಂಧಗಳನ್ನು ಹೇರಿದ್ದವು. ಆದರೆ ನಿಷೇಧವನ್ನು ತೆಗೆದು ಹಾಕಿ ಮುಕ್ತ ಲೈಸೆನ್ಸ್ ನೀಡಿದ್ದರೂ ಪಾಕಿಸ್ತಾನಕ್ಕೆ ಉಪ್ಪಿನ ರಫ್ತಿನಲ್ಲಿ ಯಾವುದೇ ಸುಧಾರಣೆ ಕಂಡು ಬರಲಿಲ್ಲ.

**ಶ್ರೀ ಸಿ.ಆರ್. ಚೌಧುರಿ:-** ಉಪ್ಪನ್ನು ಜಪಾನ್ ಅಥವಾ ಇತರ ದೇಶಗಳಿಗೆ ರಫ್ತು ಮಾಡುವ ಮೊದಲು ನಮ್ಮ ದೇಶದ ಅಗತ್ಯತೆಯನ್ನು ಸಂಪೂರ್ಣವಾಗಿ ಪೂರೈಸಲಾಗುತ್ತಿದೆಯ?

**ಶ್ರೀ ಕೆ. ಸಿ ರೆಡ್ಡಿ:-**ಹೌದು.

## 3. ರೈಲ್ವೆ ಬಜೆಟ್ ಕುರಿತ ಚರ್ಚೆಯ ಸಂದರ್ಭದಲ್ಲಿ ರೈಲ್ವೆ ಕಲ್ಲಿದ್ದಲು ಗಣಿ ಕುರಿತು.

### ಮಾರ್ಚ್ 2, 1953

ಉತ್ಪಾದನಾ ಸಚಿವರು (ಶ್ರೀ ಕೆ.ಸಿ.ರೆಡ್ಡಿ):- ನನ್ನ ಸನ್ಮಾನ್ಯ ಮಿತ್ರ ಶ್ರೀ ಗುಹಾರವರು ಪ್ರಸ್ತಾಪಿಸಿದ ಕೆಲವೊಂದು ಅಂಶಗಳಿಗೆ ಉತ್ತರಿಸುವುದಕ್ಕಾಗಿ ಈ ಚರ್ಚೆಯಲ್ಲಿ ನಾನು ಮಧ್ಯೆ ಪ್ರವೇಶಿಸುತ್ತಿದ್ದೇನೆ. ಸುಮಾರು 11 ರೈಲ್ವೆ ಕಲ್ಲಿದ್ದಲು ಗಣಿಗಳಿದ್ದು ಅವೆಲ್ಲವೂ ರೈಲ್ವೆಯ ಸ್ವಾಮ್ಯದಲ್ಲಿವೆ. ಆದರೆ ಅವುಗಳ ಉಸ್ತುವಾರಿ ಉತ್ಪಾದನಾ ಸಚಿವ ಇಲಾಖೆಗೆ ಸೇರಿದೆ. ಈ ರೈಲ್ವೆ ಕಲ್ಲಿದ್ದಲ ಗಣಿಗಳಿಗೆ ಸಂಬಂಧಿಸಿದಂತೆ ನಿಯಂತ್ರಣ ಒಂದೇ ಕಡೆ ಇರಬೇಕು ಎಂಬ ಒತ್ತಾಯ ಬಹಳ ಕಾಲದಿಂದಲೂ ಇದೆ. ಅಂದರೆ ಉಸ್ತುವಾರಿಕೆ ಹಾಗೂ ಸ್ವಾಮ್ಯ ಇವೆರಡೂ ಒಂದೇ ಸಚಿವ ಶಾಖೆಯ ಅಧೀನದಲ್ಲಿರಬೇಕು. ರೈಲ್ವೆ ಕಲ್ಲಿದ್ದಲ ಗಣಿ ಕಾರ್ಯ ನಿರ್ವಹಣೆ ಕುರಿತಂತೆ 1951ರ ಮಾರ್ಚ್ 30 ರಲ್ಲಿ ನಡೆದ ಚರ್ಚೆಯ ಅವಧಿಯಲ್ಲಿಯೂ ಈ ಪ್ರಶ್ನೆಯನ್ನೇ ಒತ್ತಿ ಹೇಳಲಾಯಿತು ಎಂಬುದು ನನಗೆ ಗೊತ್ತು. ಅದರ ಬಗ್ಗೆ ಶ್ರೀ ಗುಹಾ ಅವರೂ ಕೂಡ ಉಲ್ಲೇಖಿಸಿದ್ದಾರೆ. 1946ರಲ್ಲಿ ಶ್ರೀ ಮಹೀಂದ್ರ ಅವರ ಅಧ್ಯಕ್ಷತೆಯ ರೈಲ್ವೆ ಕೋಲ್ ಫೀಲ್ಡ್ಸ್ ಕಮಿಟಿಯಿಂದಾರಂಭಿಸಿ 1949ರ Railway collieries enquiry committee ಹಾಗೂ ಇತ್ತೀಚಿಗಿನ ಶ್ರೀ ಬಿ. ದಾಸ್ ಅವರ ಅಧ್ಯಕ್ಷತೆಯ Coal working party ಯವರೆಗೂ ವಿವಿಧ ಸಮಿತಿಗಳು ಈ ಕಲ್ಲಿದ್ದಲ ಗಣಿಗಳು ಒಂದೇ ಸಚಿವ ಶಾಖೆಯ ಸ್ವಾಮ್ಯ ಹಾಗೂ ಉಸ್ತುವಾರಿಯಲ್ಲಿರಬೇಕು ಎಂದು ಶಿಫಾರಸ್ಸು ಮಾಡುತ್ತಾ ಬಂದಿದ್ದಾರೆ.ಶ್ರೀ ಗುಹಾ ಅವರು ಈ ಪ್ರಶ್ನೆಯನ್ನು ಮತ್ತೆ ಮತ್ತೆ ಪ್ರಸ್ತಾಪಿಸಿದ್ದರಿಂದ ಈ ವಿಷಯವನ್ನು ಹೇಳುತ್ತಿದ್ದೇನೆ. ಈ ಪ್ರಶ್ನೆಯ ಬಗ್ಗೆ ಸರ್ಕಾರ ಈಗ ತೀವ್ರವಾಗಿ ಪರಿಶೀಲಿಸುತ್ತಿದೆ ಮತ್ತು ಕಲ್ಲಿದ್ದಲ ಗಣಿಗಳ ಸ್ವಾಮ್ಯ ಹಾಗೂ ಉಸ್ತುವಾರಿಯ ಕೆಲಸಗಳೆರಡನ್ನೂ ಒಂದೇ ಸಚಿವ ಶಾಖೆಗೆ ಒಪ್ಪಿಸುವ ನಿರ್ಧಾರ ಕೈಗೊಳ್ಳುವ ದಿನ ಬಹಳ ಶೀಘ್ರದಲ್ಲಿಯೇ ಆಗಬಹುದು ಎಂದು ಹೇಳ ಬಯಸುತ್ತೇನೆ. ಬಹುಶಃ ಈ ಬದಲಾವಣೆ ನಡೆದ ನಂತರ ರೈಲ್ವೆ ಕಲ್ಲಿದ್ದಲ ಗಣಿಯ ಕಾರ್ಯ ನಿರ್ವಹಣೆಗೆ ಒಳ್ಳೆಯ ಅವಕಾಶ ಸಿಗಬಹುದು ಎಂದು ಅನೇಕರು ಹೊಂದಿರುವ ನಿರೀಕ್ಷೆಯಲ್ಲಿ ನಾನೂ ಭಾಗಿಯಾಗಿದ್ದೇನೆ.

ಶ್ರೀ ಗುಹಾ ಅವರು ಅನೇಕ ಅಂಶಗಳನ್ನು ಪ್ರಸ್ತಾಪಿಸಿದರು. ಅವುಗಳನ್ನು ಇಲ್ಲಿ ಸಂಕ್ಷಿಪ್ತವಾಗಿ ಉಲ್ಲೇಖಿಸಬಯಸುತ್ತೇನೆ. ಮೊದಲನೆಯದಾಗಿ ಅವರು ಅಂದಾಜು ಸಮಿತಿಯ ಶಿಫಾರಸ್ಸುಗಳನ್ನು ಉಲ್ಲೇಖಿಸಿ ಈ ಬಗ್ಗೆ ಯಾವ ಕ್ರಮ ಕೈಗೊಳ್ಳಲಾಗಿದೆ ಎಂದು ಕೇಳಿದರು. ಅವರು IMCC ಹಾಗೂ ಅವರೊಂದಿಗೆ ಭಾರತ ಸರ್ಕಾರದ ಕರಾರಿನ ಬಗ್ಗೆ ಪ್ರಸ್ತಾಪಿಸಿ ಈ ದಿಸೆಯಲ್ಲಿ ಏನು ಕ್ರಮ ಕೈಗೊಳ್ಳಲಾಗಿದೆ ಎಂದು ಪ್ರಶ್ನಿಸಿದರು. ಈ ಕರಾರನ್ನು ರದ್ದು ಪಡಿಸಲಾಗಿದೆ ಹಾಗೂ ಈ ಕ್ಷೇತ್ರದಲ್ಲಿ ಆ ಸಂಸ್ಥೆಯ ಯಾವುದೇ ಪ್ರಸಕ್ತಿಯಿಲ್ಲ ಎಂಬುದನ್ನು ಸಂತೋಷದಿಂದ ತಿಳಿಸುತ್ತಿದ್ದೇನೆ. ರೈಲ್ವೆ ಕಲ್ಲಿದ್ದಲು ಗಣಿಗಳು ಈಗಲೂ ನಷ್ಟದಲ್ಲಿಯೇ ಕೆಲಸ ಮಾಡುತ್ತಿವೆ ಎಂದು

ಅವರು ತಿಳಿಸಿದರು. ಆದರೆ ಸನ್ಮಾನ್ಯ ಸದಸ್ಯರಿಗೆ ಈ ಬಗ್ಗೆ ಸರಿಯಾದ ಮಾಹಿತಿ ಸಿಕ್ಕಿಲ್ಲವೆಂದು ತೋರುತ್ತದೆ. ನಮ್ಮ ಎಕ್ಸ್‌ಪ್ಲನೇಟರಿ ಮೆಮೊರ್‍ಯಾಂಡಮ್ ನಲ್ಲಿ ಲೆಕ್ಕ ಪತ್ರಗಳನ್ನು ಸಾದರ ಪಡಿಸುವ ವಿಧಾನದ ಶೈಲಿಯಿಂದಾಗಿ ಅವರು ಈ ರೀತಿ ತಪ್ಪಾಗಿ ತಿಳಿದುಕೊಂಡಿರಬಹುದು.

ಶ್ರೀ ಎ.ಸಿ. **ಗುಹಾ:-** ಲೆಕ್ಕ ಪತ್ರಗಳು ಎಂದೂ ಕೂಡ ನಾನು ಪ್ರಸ್ತಾಪಿಸಿದೆ.

ಶ್ರೀ **ಕೆ.ಸಿ. ರೆಡ್ಡಿ:-** ಆ ವಿಷಯಕ್ಕೆ ಬರುತ್ತೇನೆ. ಲೆಕ್ಕ ಪತ್ರವಿಡುವ ವಿಧಾನದಲ್ಲಿ ಬದಲಾವಣೆಯಾಗಿರುವುದರಿಂದ ಈಗ ಮಂಡಿಸಿರುವ ರೀತಿಯಲ್ಲಿ memorandum ನ್ನು ನಾವು ಮಂಡಿಸಬೇಕಾಯಿತು. explanatory memorandum ಎರಡು ಬಾಬ್ತುಗಳಲ್ಲಿ ರೈಲ್ವೆ ಕಲ್ಲಿದ್ದಲ ಗಣಿ ಕಾರ್ಯ ನಿರ್ವಹಣೆಯ ವಿಷಯ ಪ್ರತಿಬಿಂಬಿಸಿದೆ. ಸ್ವತಃ ಅವರೇ ಹೇಳಿದಂತೆ, ಒಂದು ಬಾಬ್ತು ರೈಲ್ವೆ ಕಲ್ಲಿದ್ದಲ ಗಣಿ ಕಾರ್ಯನಿರ್ವಹಣೆಯ ನಷ್ಟಗಳಿಗೆ ಸಂಬಂಧಿಸಿದೆ. ಅಂದರೆ ಮುಂದಿನ ವರ್ಷಕ್ಕೆ ಅದರ ಮೊತ್ತ ಸುಮಾರು 57,20,000 ರೂ ಆಗಿರುತ್ತದೆ. ಅದೇ 40 ನೇ ಪುಟದಲ್ಲಿ ತೋರಿಸಿರುವ ಕ್ರೆಡಿಟ್ ಅಥವಾ ವಸೂಲಾತಿಗಳ ಬಗ್ಗೆಯೂ ಅವರು ಪ್ರಸ್ತಾಪಿಸಿದರು. ಆ ಪುಟದಲ್ಲಿ ಕಡಿಮೆಯಾಗಿ ತೋರಿಸಿರುವ 1,20,78,000 ರೂ.ಗಳಿಗೆ ಸಂಬಂಧಿಸಿದಂತೆ ನಾನು ಹೇಳಬಯಸುವುದೇನೆಂದರೆ ಈ ಎಲ್ಲ ಮೊತ್ತವೂ ಕೂಡ ರೈಲ್ವೆ ಕಲ್ಲಿದ್ದಲಗಣಿಯ ಕಾರ್ಯನಿರ್ವಹಣೆಯಲ್ಲಿ ದೊರೆತ ಲಾಭಕ್ಕೆ ಸಂಬಂದಿಸಿದ್ದು. 58,000 ರೂ. ಬಿಟ್ಟು ಉಳಿದೆಲ್ಲವೂ ಸಹ ಈ ಗಣಿಗಳ ಲಾಭಕ್ಕೇ ಸೇರಿದ್ದು. ಆದ್ದರಿಂದ ಈ ವರ್ಷ ಹಾಗೂ ಮುಂದಿನ ವರ್ಷದ ಲಾಭಕ್ಕೆ ಪ್ರತಿಯಾಗಿ ನಷ್ಟಗಳನ್ನು ಹೋಲಿಸಿದರೆ 1953-54 ರಲ್ಲಿ ನಮಗೆ 63 ಲಕ್ಷರೂ. ಲಾಭ ದೊರೆಯುತ್ತದೆ ಎಂಬ ಚಿತ್ರ ಸಿಗುತ್ತದೆ. ಇದು ನಿಜವಾದ ಸ್ಥಿತಿ. ಈ ವರ್ಷದ ಅವಧಿಯಲ್ಲಿ ನಿವ್ವಳ ಫಲಿತಾಂಶವೆಂದರೆ ಸುಮಾರು 34 ಲಕ್ಷರೂ ಗಳಷ್ಟು ಲಾಭ. ಆದ್ದರಿಂದ ಈ ಗಣಿಗಳನ್ನು ಈಗ ನಾವು ಲಾಭದಲ್ಲಿ ನಡೆಸುತ್ತಿದ್ದೇವೆ. ಇವು ನಷ್ಟದಲ್ಲಿವೆ ಎಂಬ ಯಾವ ಆತಂಕವಾಗಲೀ, ಸಂದೇಹವಾಗಲೀ ಸನ್ಮಾನ್ಯ ಸದಸ್ಯರಿಗೆ ಇರಬೇಕಿಲ್ಲ.

ಅವರು ಪ್ರಸ್ಥಾಪಿಸಿದ ಮತ್ತೊಂದು ಅಂಶವೆಂದರೆ ಉತ್ಪಾದನಾ ವೆಚ್ಚವನ್ನು ಕುರಿತದ್ದು. ರೈಲ್ವೆ ಕಲ್ಲಿದ್ದಲ ಗಣಿಗಳಲ್ಲಿನ ಉತ್ಪಾದನಾ ವೆಚ್ಚ ಅಧಿಕವಾಗಿದೆ ಎಂದು ಹೇಳಿ ಅವರು ಕೆಲವು ಅಂಕಿ ಅಂಶಗಳನ್ನು ಕೊಟ್ಟರು. ಖಾಸಗಿ ಗಣಿಗಳಲ್ಲಿ ಉತ್ಪಾದನಾ ವೆಚ್ಚ ಸುಮಾರು 14ರೂ ಇದೆ [illegible]ಲಿಂಪಲ್ಲಿ ಅದು 25ರೂ., ಸವಾಂಗ್‌ನಲ್ಲಿ 28 ರೂ, ಕರ್ಜುರ್‌ಬಾರೀಯಲ್ಲಿ 27 ರೂ. ಇತ್ಯಾದಿ ಎಂದು ತಿಳಿಸಿದರು.

ರೈಲ್ವೆ ಕಲ್ಲಿದ್ದಲ ಗಣಿ ಕುರಿತು 1951 ರಲ್ಲಿ ನಡೆದ ಚರ್ಚೆಯಲ್ಲಿ ಇದೇ ಸದಸ್ಯರು ಮಾಡಿದ ಭಾಷಣದಲ್ಲಿ ಹೇಳಿದ ಅಂಶವನ್ನೇ ಉಲ್ಲೇಖಿಸಿದೆ ಅವರು ಹೇಳಿದರು. ಬೊಕಾರೋದ ಇತರ ಕಲ್ಲಿದ್ದಲ ಗಣಿಗಳಲ್ಲಿ ಅದು 11ರೂಪಾಯಿ........

ಶ್ರೀ ಎ.ಪಿ. **ಗುಹ:-**ನನಗೆ ಅದು ಗೊತ್ತಿದೆ.

ಶ್ರೀ **ಕೆ.ಸಿ. ರೆಡ್ಡಿ:-**ಅಗ್ಮಾಡಾದಲ್ಲಿ 13ರೂ, ಕುರೇಸಿಯಾದಲ್ಲಿ 11ರೂ.

ಶ್ರೀ ಎ.ಸಿ. **ಗುಹಾ:-** ಮೂರು ಗಣಿಗಳು ಲಾಭದಲ್ಲಿ ನಡೆಯುತ್ತಿವೆ ಉಳಿದವು ನಷ್ಟದಲ್ಲಿವೆ ಎಂದು ನನಗೆ ತಿಳಿದಿತ್ತು.

**ಕೆ.ಸಿ. ರೆಡ್ಡಿ:-** ವಾಸ್ತವ ಸ್ಥಿತಿ ಇದು. ಕಲ್ಲಿದ್ದಲಿನ ಉತ್ಪಾದನಾ ವೆಚ್ಚ ಗಣಿಯಿಂದ ಗಣಿಗೆ ವ್ಯತ್ಯಾಸವಾಗುತ್ತದೆ. ಅಲ್ಲಿಯ ಸೀವ್, ಗಣಿಯು ಸ್ವರೂಪ ಇತ್ಯಾದಿಯನ್ನು ಅದು ಅವಲಂಬಿಸಿರುತ್ತದೆ. ಉತ್ಪಾದನಾ ವೆಚ್ಚದಲ್ಲಿ ಅನೇಕ ಅಂಶಗಳು ಸೇರಿರುತ್ತವೆ. ಕೆಲವು ಗಣಿಗಳಲ್ಲಿ ಉತ್ಪಾದನಾ ವೆಚ್ಚ ಹೆಚ್ಚಾಗಿರಬಹುದು, ಕೆಲವು ಗಣಿಗಳಲ್ಲಿ ಕಡಿಮೆ ಇರಬಹುದು. ಆದ್ದರಿಂದ ಎಲ್ಲವನ್ನೂ ಒಂದೇ ದೃಷ್ಟಿಯಿಂದ ಹೋಲಿಸುವುದು ಸರಿಯಲ್ಲ ಮತ್ತು ಅಪೇಕ್ಷಣೀಯವಲ್ಲ. ಆದರೆ ರೈಲ್ವೆ ಕಲ್ಲಿದಲು ಗಣಿಗಳಲ್ಲಿ ಉತ್ಪಾದನಾ ವೆಚ್ಚ ಹೆಚ್ಚುವುದಕ್ಕೆ ಕೆಲವು ಅಂಶಗಳು ಕಾರಣವಾಗಿದೆ ಎಂಬುದನ್ನು ನಾನು ಒಪ್ಪುತ್ತೇನೆ. ಇದನ್ನು ಸರಿಪಡಿಸಲು ನಾವು ಕೆಲವು ಕ್ರಮಗಳನ್ನು ಕೈಗೊಳ್ಳುತ್ತಿದ್ದೇವೆ. ಉದಾಹರಣೆಗೆ ಹೆಚ್ಚುವರಿ ಕಾರ್ಮಿಕರ ಸಮಸ್ಯೆಯ ಪರಿಶೀಲನೆ ಇತ್ಯಾದಿ.

ರೈಲ್ವೆ ಕಲ್ಲಿದ್ದಲು ಗಣಿಗಳಲ್ಲಿ ಉತ್ಪಾದನಾ ವೆಚ್ಚ ಅಧಿಕವಾಗಿರುವುದಕ್ಕೆ ಮತ್ತು ಗಿರಧ್, ಸೆರಾಮ್ ಪುರ್ ಇತ್ಯಾದಿ-ನನಗೆ ಹೆಸರುಗಳು ಸರಿಯಾಗಿ ನೆನಪಿಲ್ಲ-ಮೊದಲಾದವುಗಳಲ್ಲಿ ಉತ್ಪಾದನೆ ಕಡಿಮೆಯಾಗಿರವುದಕ್ಕೆ, ಈ ಗಣಿಗಳಲ್ಲಿ ಹೆಚ್ಚುವರಿ ಕಾರ್ಮಿಕರಿರುವುದಕ್ಕೆ ಕಾರಣಗಳನ್ನು ವಿವರಿಸುತ್ತಾ ನಾನು ಸದನದ ವೇಳೆಯನ್ನು ಹೆಚ್ಚಿಗೆ ತೆಗೆದುಕೊಳ್ಳ ಬಯಸುವುದಿಲ್ಲ. ಆದರೆ ಉತ್ಪಾದನಾ ವೆಚ್ಚ ತಗ್ಗಿಸುವುದಕ್ಕೆ ಸರ್ಕಾರ ಪ್ರಯತ್ನಿಸುತ್ತಿದೆ. ಇದರಲ್ಲಿ ಮೂರು ನಾಲ್ಕನ್ನು ಹೆಸರಿಸಬಹುದು. ಕಳೆದ ಮೂರು ನಾಲ್ಕು ವರ್ಷಗಳಿಂದ ಸಿಬ್ಬಂದಿ ನೇಮಕಾತಿಯನ್ನು ಸಂಪೂರ್ಣ ನಿಲ್ಲಿಸಲಾಗಿದೆ. ಗಿರಿಧ್ ಸಮೂಹದ ಕಲ್ಲಿದ್ದಲ ಗಣಿಯೊಂದರಲ್ಲಿ ಕಾರ್ಮಿಕರ ಹಾಗೂ ಸಿಬ್ಬಂದಿಗಾಗಿ ವರ್ಷಕ್ಕೆ 26 ಲಕ್ಷ ರೂ ಗಳಿಗಿಂತ ಹೆಚ್ಚು ಖರ್ಚಾಗುತ್ತಿದ್ದು ಹೆಚ್ಚುವರಿ ಸಂಖ್ಯೆಯನ್ನು ಕಡಿಮೆ ಮಾಡಲು ಪ್ರಸ್ತಾಪಿಸಲಾಗಿದೆ. ಕಲ್ಲಿದ್ದಲ ಗಣಿ ಉಗ್ರಾಣದ ಬಳಕೆಯನ್ನೂ ಸಹ ಬಿಗಿಯಾಗಿ ನಿಯಂತ್ರಿಸಲಾಗಿದೆ. ಮತ್ತು ಕಾರ್ಯಾಚರಣಾ ವೆಚ್ಚಗಳಲ್ಲಿಯೂ ಸಹ ಭಾರಿ ನಿಯಂತ್ರಣ ತರಲಾಗುತ್ತಿದೆ.

ಕಲ್ಲಿದ್ದಲು ಉತ್ಪಾದನಾ ವೆಚ್ಚವನ್ನು ತಗ್ಗಿಸುವುದಕ್ಕಾಗಿ ಸರ್ಕಾರವು ಕೈಗೊಂಡಿರುವ ಕೆಲವೊಂದು ಕ್ರಮಗಳು ಹೀಗಿವೆ. ಮೊದಲು ಪಂಚವಾರ್ಷಿಕ ಯೋಜನೆಯಲ್ಲಿ ರೈಲ್ವೆ ಕಲ್ಲಿದ್ದಲ ಗಣಿಗಳು ಹೆಚ್ಚು ದಕ್ಷವಾಗಿ ಕಾರ್ಯಾಚರಿಸಬೇಕು ಎಂಬ ಉದ್ದೇಶಕ್ಕಾಗಿ 1.75 ಕೋಟಿ ರೂ.ಗಳನ್ನು ಒದಗಿಸಲಾಗಿದೆ. ಈ ಅವಧಿಯಲ್ಲಿ ಈ ಗಣಿಗಳಲ್ಲಿನ ಉತ್ಪಾದನಾ ವೆಚ್ಚವನ್ನು ನಿಶ್ಚಿತವಾಗಿ ತಗ್ಗಿಸುವಂತಹ ಯೋಜನೆಗಳನ್ನು ರೂಪಿಸಲು ಸರ್ಕಾರ ಪ್ರಸ್ತಾಪಿಸಿದೆ.

ಮಾನ್ಯ ಸದಸ್ಯರು ಲೋಕೊಮೋಟೀವ್ ಉದ್ದೇಶಗಳಿಗಾಗಿ ಮೆಟಲರ್ಜಿಕಲ್ ಕಲ್ಲಿದ್ದಲು ಅಥವಾ ಕಡಿಮೆ ದರ್ಜೆಯ ಕಲ್ಲಿದ್ದಲು ಬಳಸುವ ಬಗ್ಗೆಯೂ ಪ್ರಸ್ತಾಪಿಸಿದರು. ಆದರೆ ಆರಂಭದಲ್ಲಿಯೇ ನಾನು ಸ್ಪಷ್ಟಪಡಿಸುವ ಅಂಶವೇನೆಂದರೆ ಹೊಸ ಲೋಕೊಮೋಟಿವ್‌ಗಳು ಶ್ರೇಷ್ಠ ದರ್ಜೆಯ ಕಲ್ಲಿದ್ದಲನ್ನೇ ಬಳತ್ತವೆ ಅಥವಾ ಮೆಟಲರ್ಜಿಕಲ್ ಕಲ್ಲಿದ್ದಲನ್ನೇ ಬಳಸುತ್ತವೆ ಎಂಬ ತಿಳುವಳಿಕೆ ಸರಿಯಲ್ಲ. ಈ ಹೊಸ ಇಂಜಿನ್‌ಗಳಿಗೆ ಎ ಮತ್ತು ಬಿ ಗುಂಪಿನ ಕಳಪೆ ದರ್ಜೆಯ ಕಲ್ಲಿದ್ದಲನ್ನು ಸಹ ಬಳಸಬಹುದು ಎಂದು ತಿಳಿದು ಬಂದಿದೆ. ರೈಲ್ವೆಯವರ ಕಲ್ಲಿದ್ದಲ ಬಳಕೆಗೆ ಸಂಬಂಧಿಸಿದಂತೆ ಇಷ್ಟು ಮಾತ್ರ ಹೇಳಬಹುದು. ರೈಲ್ವೆಯವರು ಸಾಧ್ಯವಾದಷ್ಟೂ ಕಳಪೆ ದರ್ಜೆಯ ಕಲ್ಲಿದ್ದಲನ್ನೇ ಬಳಸಬೇಕು. ಮತ್ತು ಮೆಟಲರ್ಜಿಕಲ್ ಕಲ್ಲಿದ್ದಲನ್ನು ಬಳಸದೇ ಇರುವುದು ಸಾಧ್ಯವೆಂದಲ್ಲಿ ಬಳಸಕೂಡದು ಎಂಬುದೇ ಸರ್ಕಾರದ ಘೋಷಿತ ನೀತಿಯಾಗಿದೆ. ಈ ವಿಷಯ ಮೆಟಲರ್ಜಿಕಲ್

ಕಲ್ಲಿದ್ದಲನ್ನು ಸಂರಕ್ಷಿಸುವ ಮುಖ್ಯ ಪ್ರಶ್ನೆಗೆ ಸಂಬಂಧಿಸಿದೆ. ಅಂತಹ ದೊಡ್ಡ ವಿಷಯದ ಬಗ್ಗೆ ಈ ಸಂದರ್ಭದಲ್ಲಿ ಪ್ರಸ್ತಾಪಿಸುವುದಿಲ್ಲ. ಆದರೆ ಇದರಲ್ಲಿ ಕೆಲವು ಸಮಸ್ಯೆಗಳಿವೆ. ಮೆಟಲರ್ಜಿಕಲ್ ಕಲ್ಲಿದ್ದಲಿಗೆ ಬದಲಾಗಿ ಕಳಪೆ ದರ್ಜೆಯ ಕಲ್ಲಿದ್ದಲನ್ನು ಬಳಸುವುದಕ್ಕೆ ರೈಲ್ವೆಯವರ ವಿರೋಧವೇನೂ ಇಲ್ಲ. ಆದರೆ ಮೆಟಲರ್ಜಿಕಲ್ ಕಲ್ಲಿದ್ದಲನ್ನು ಸಂರಕ್ಷಿಸುವುದಕ್ಕೆ ಸಂಬಂಧಿಸಿದಂತೆ ನೀತಿಯನ್ನು ನಿರೂಪಿಸುವುದರಲ್ಲಿರುವ ಕಾರ್ಯ ಸೂಕ್ಷ್ಮತೆಯಿಂದಾಗಿ ನಾವು ಹುಶಾರಾಗಿ ಮುಂದುವರೆಯಬೇಕಾಗಿದೆ. ಒಂದು ವೇಳೆ ನಾವು ಮೆಟಲರ್ಜಿಕಲ್ ಕಲ್ಲಿದ್ದಲಿನ ಉತ್ಪಾದನೆಯನ್ನು 10 ಮಿ.ಟನ್‌ಗಳಿಂದ ಸುಮಾರು 4 ಮಿಲಿಯನ್ ಟನ್‌ಗಳಿಗೆ ಇಳಿಸುವ ಒಂದು ನಿರ್ಣಯ ಕೈಗೊಂಡು ಅದನ್ನು ಜಾರಿಗೆ ತಂದೆವು ಎಂದಿಟ್ಟುಕೊಳ್ಳಿ ಆಗ ಏನಾಗುತ್ತದೆ? ಅನೇಕ ಗಣಿಗಳನ್ನು ಮುಚ್ಚಬೇಕಾಗುತ್ತದೆ ಅನೇಕ ಕಾರ್ಮಿಕರು ನಿರದ್ಯೋಗಿಗಳಾಗುತ್ತಾರೆ. ಇಡೀ ಕಲ್ಲಿದ್ದಲ ಕೈಗಾರಿಕೆಯೇ ಅಸ್ತವ್ಯಸ್ತಗೊಳ್ಳುತ್ತದೆ. ಇದರಿಂದ ಪರಿಹರಿಸಲು ಸಾಧ್ಯವೇ ಇಲ್ಲದಂತಹ ಹೆಚ್ಚಿನ ಸಮಸ್ಯೆಗಳು ಉದ್ಭವಿಸುತ್ತವೆ;

ಈ ಕಾರ್ಯಾಚರಣೆಯಲ್ಲಿರುವ ಸೂಕ್ಷ್ಮತೆ ಎಂದು ನಾನು ಹೇಳಿದ್ದರ ಅರ್ಥ ನಾವು ನಿಧಾನವಾಗಿ ಮತ್ತು ಹುಶಾರಾಗಿ ಮುಂದುವರೆಯಬೇಕು ಎಂದು. ಆದರೆ ಅದು ತೀರಾ ನಿಧಾನ ಮತ್ತು ತೀರ ಹುಶಾರಿನದೂ ಆಗಬಾರದು. ನೀವು ಕೈಗೊಳ್ಳಲಿರುವ ಕ್ರಮದ ಸಾಧಕ ಬಾಧಕಗಳ ಬಗ್ಗೆ ಒಂದು ಕಣ್ಣಿಟ್ಟುಕೊಂಡೇ ಮುಂದುವರೆಯಬೇಕಾಗುತ್ತದೆ. ಈ ಪ್ರಕ್ರಿಯೆಯಲ್ಲಿ ಸಾಮಾನ್ಯವಾಗಿ ಮೆಟಲರ್ಜಿಕಲ್ ಉದ್ದೇಶಗಳಿಗೆ ಮೀಸಲಿಡಬೇಕಿದ್ದಂತಹ ಸ್ವಲ್ಪ ಪ್ರಮಾಣದ ಕಲ್ಲಿದ್ದಲನ್ನೇ ನಾವು ಬಳಸಿಕೊಳ್ಳಲೂ ಬೇಕಾಗುತ್ತದೆ.

ಈ ಬಗ್ಗೆ ಒಂದು ನೀತಿಯನ್ನು ನಿರೂಪಿಸುವುದಾಗಿ ರೈಲ್ವೆ ಸಚಿವಾಲಯವು ಒಪ್ಪಿಕೊಂಡಿದೆ. ಈ ವಿಷಯಕ್ಕೆ ಸಂಬಂಧಿಸಿದಂತೆ ರೈಲ್ವೆ ಸಚಿವಾಲಯ ಹಾಗೂ ಉತ್ಪಾದನಾ ಸಚಿವಾಲಯದ ನಡುವೆ ಯಾವುದೇ ಭಿನ್ನಾಭಿಪ್ರಾಯವಿಲ್ಲ. ಈ ವಿಷಯಕ್ಕೆ ಸಂಬಂಧಿಸಿದ ಎಲ್ಲ ಅಂಶಗಳನ್ನೂ ಗಮನದಲ್ಲಿಟ್ಟುಕೊಂಡು ಈ ನೀತಿಯನ್ನು ಜಾರಿಗೆ ತರುವುದಕ್ಕಾಗಿ ನಾವು ಸಾಧ್ಯವಿರುವ ಎಲ್ಲ ಪ್ರಯತ್ನಗಳನ್ನೂ ಮಾಡುತ್ತೇವೆ. ರೈಲ್ವೆ ಕಲ್ಲಿದ್ದಲ ಗಣಿ ಹಾಗೂ ಖಾಸಗಿಯ ಕಲ್ಲಿದ್ದಲ ಗಣಿಯ ನಡುವೆ ಯಾವುದೇ ವ್ಯತ್ಯಾಸವಿಲ್ಲ. ಆದೇ ರೀತಿ ಉನ್ನತ ದರ್ಜೆಯ ಕಲ್ಲಿದ್ದಲ ಉತ್ಪಾದಕರು ಹಾಗೂ ಕಳಪೆ ದರ್ಜೆಯ ಕಲ್ಲಿದ್ದಲ ಉತ್ಪಾದಕರ ನಡುವೆ ಯಾವುದೇ ವ್ಯತ್ಯಾಸವಿಲ್ಲ ಎಂಬ ಅಂಶವನ್ನು ತಿಳಿಸಬಯಸುತ್ತೇವೆ.

ಬಹುಶಃ ನನ್ನ ಸನ್ಮಾನ್ಯ ಮಿತ್ರರು ಪ್ರಸ್ತಾಪಿಸಿದ ಎಲ್ಲ ವಿಷಯಗಳಿಗೂ ನಾನು ಉತ್ತರಿಸಿದ್ದೇನೆ ಎಂದುಕೊಂಡಿದ್ದೇನೆ. ಕಲ್ಲಿದ್ದಲ ಗಣಿಗಳ ಕಾರ್ಯ ನಿರ್ವಹಣೆಯು ಸಂಬಂಧಪಟ್ಟವರಿಗೇ ಅಲ್ಲ ಒಟ್ಟು ಜನತೆಗೇ ಸಮಾಧಾನ ತರುವಂತಹ ರೀತಿಯಲ್ಲಿ ನಡೆಯುವ ಬಗ್ಗೆ ಎಲ್ಲ ಪ್ರಯತ್ನಗಳನ್ನೂ ಮಾಡಲಾಗುತ್ತಿದೆ ಮತ್ತು ಮುಂದೆಯೂ ಮಾಡಲಾಗುವುದು ಎಂದು ಕೊನೆಯದಾಗಿ ನಾನು ತಿಳಿಸಬಯಸುತ್ತೇನೆ.

## 4. ತೈಲ ಸಂಸ್ಕರಣಾಗಾರಗಳನ್ನು ಕುರಿತು

### ಡಿಸೆಂಬರ್ 2, 1953

**ಡಾ. ರಾಮ್ ಸುಭಾಗ್‌ಸಿಂಗ್:**-ಉತ್ಪಾದನಾ ಸಚಿವರು ದಯವಿಟ್ಟು ಈ ಪ್ರಶ್ನೆಗಳಿಗೆ ಉತ್ತರಿಸಬೇಕು.

ಎ) ಭಾರತದಲ್ಲಿ ಮೂರು ತೈಲ ಸಂಸ್ಕರಣಾಗಾರಗಳನ್ನು ಸ್ಥಾಪಿಸುವುದಕ್ಕಾಗಿ ಮೂರು ವಿದೇಶಿ ತೈಲಕಂಪನಿಗಳವರ ಸಾಧಾರಣ ಬಂಡವಾಳದಲ್ಲಿ ಭಾಗವಹಿಸುವುದಕ್ಕೆ ಅವಕಾಶಗಳನ್ನು ಕೋರಿ ಭಾರತೀಯ ಹೂಡಿಕೆದಾರರು ಭಾರತ ಸರ್ಕಾರಕ್ಕೆ ಮನವಿಗಳನ್ನು ಕೊಟ್ಟಿದ್ದಾರೆಯೆ? ಮತ್ತು

ಬಿ) ಹಾಗಿದ್ದಲ್ಲಿ, ಈ ಬಗ್ಗೆ ಏನಾದರೂ ಕ್ರಮ ಕೈಗೊಳ್ಳಲಾಗಿದೆಯೆ?

**ಉತ್ಪಾದನಾ ಸಚಿವರು:- (ಶ್ರೀ ಕೆ.ಸಿ. ರೆಡ್ಡಿ):-** ಎ. ಹೌದು.

ಬಿ) ಮನವಿಗಳನ್ನು ಪರಿಶೀಲಿಸಲಾಗುತ್ತಿದೆ.

**ಡಾ. ರಾಮ್‌ಸುಭಾಗ್‌ಸಿಂಗ್:-** ವಿದೇಶೀ ಕಂಪನಿಯ ಬಂಡವಾಳದಲ್ಲಿ ಭಾರತೀಯ ಹೂಡಿಕೆದಾರರು ಪಾಲುಗೊಳ್ಳುವುದಕ್ಕೆ ಮೊದಲು ಅವಕಾಶ ನೀಡಿರಲಿಲ್ಲ ಏಕೆ?

**ಶ್ರೀ ಕೆ.ಸಿ. ರೆಡ್ಡಿ:-** ಸರ್ಕಾರ ಮತ್ತು ತೈಲ ಸಂಸ್ಕರಣಾಗಾರಗಳವರ ನಡುವೆ ಆಗಿರುವ ಒಪ್ಪಂದದ ಪಠ್ಯವನ್ನು ನಾನೀಗಾಗಲೇ ಸದನದ ಮುಂದೆ ಮಂಡಿಸಿದ್ದೇನೆ. ಈ ಒಪ್ಪಂದಗಳ ಪ್ರಕಾರ ಈ ಕಂಪನಿಯ ಸಾಮಾನ್ಯ ಶೇರು ಬಂಡವಾಳದಲ್ಲಿ ಹೂಡಿಕೆ ಮಾಡಲು ಭಾರತೀಯ ಹೂಡಿಕೆದಾರರಿಗೆ ಅವಕಾಶವಿರಲಿಲ್ಲ. ಒಪ್ಪಂದವನ್ನು ಅಂತಿಮವಾಗಿ ನಿರ್ಣಯಿಸುವುದಕ್ಕೆ ಮೊದಲು ಈ ಬಗ್ಗೆ ಸುಧೀರ್ಘ ಮಾತುಕತೆ ನಡೆದಿತ್ತು. ರಿಫೈನರಿಯವರು ಹಾಕಿದ್ದ ಒಂದು ನಿಬಂಧನೆಯೇನೆಂದರೆ ಸಾಮಾನ್ಯ ಬಂಡವಾಳದಲ್ಲಿನ ಹೂಡಿಕೆಯನ್ನು ಸಂಪೂರ್ಣವಾಗಿ ತಮಗೇ ಬಿಟ್ಟು ಕೊಡಬೇಕು ಎಂದಿತ್ತು. ಸರ್ಕಾರವು ಈ ವಿಷಯವನ್ನು ಸಂಪೂರ್ಣವಾಗಿ ಪರಿಶೀಸಿದ ನಂತರ ಈ ನಿಬಂಧನೆಗೆ ಒಪ್ಪಿಗೆ ನೀಡಿತು. ಹೀಗಾಗಿ ಈ ಒಪ್ಪಂದಗಳ ಪ್ರಕಾರ ಈ ಕಂಪನಿಗಳ ಸಾಧಾರಣ ಬಂಡವಾಳದಲ್ಲಿ ಭಾರತೀಯ ಹೂಡಿಕೆದಾರರು ಭಾಗವಹಿಸುವುದಕ್ಕೆ ಯಾವುದೇ ಅವಕಾಶವಿಲ್ಲ.

**ಶ್ರಿ ರಾಮ್ ಸುಭಾಗ್‌ಸಿಂಗ್:-** ಸಾಮಾನ್ಯ ಬಂಡವಾಳದಲ್ಲಿ ಪಾಲುಗೊಳ್ಳುವುದಕ್ಕೆ ಮೊದಲು ಏಕೆ ಅವಕಾಶವಿರಲಿಲ್ಲ ಎಂಬುದಕ್ಕೆ ಕಾರಣಗಳನ್ನು ಅವರು ಸ್ಪಷ್ಟಪಡಿಸಲಿಲ್ಲ.

**ಶ್ರೀ ಕೆ.ಸಿ ರೆಡ್ಡಿ:-** ಇದಕ್ಕೆ ಕಾರಣ ಇದು-ಕಂಪನಿಯ ಸಾಧಾರಣ ಬಂಡವಾಳದಲ್ಲಿ ಭಾರತೀಯರ ಭಾಗವಹಿಸುವಿಕೆಗೆ ಅವಕಾಶವಿರಬೇಕು ಎಂದು ನಾವು ಒತ್ತಾಯಿಸಿದ್ದೇ ಆದರೆ ಈ ಒಪ್ಪಂದ ನಿರ್ಧಾರವಾಗುವ ಸಾಧ್ಯತೆಯೇ ಇರಲಿಲ್ಲ. ಅದು ಒಪ್ಪಂದವನ್ನು ತೀರ್ಮಾನಿಸುವ ಇಲ್ಲವೇ ಕೈಬಿಡುವ ಪ್ರಶ್ನೆಯಾಗಿತ್ತು.

**ಡಾ. ರಾಮ್‌ಸುಭಾಗ್‌ಸಿಂಗ್:**-ಮಾನ್ಯ ಮಂತ್ರಿಗಳು ನೀಡಿದ ಉತ್ತರವನ್ನು ಕೇಳಿದರೆ, ವಿದೇಶೀ ಹೂಡಿಕೆದಾರರ ಭಯದ ಕಾರಣದಿಂದಲೇ ಹೂಡಿಕೆದಾರರು ಪಾಲ್ಗೊಳ್ಳುವ ವಿಷಯವನ್ನು ಒತ್ತಾಯಪಡಿಸಲಿಲ್ಲ ಎಂದು ಹೇಳಬಹುದಲ್ಲವೆ?

ಶ್ರೀ ಕೆ.ಸಿ ರೆಡ್ಡಿ:- ಇದು ಹೆದರಿಕೆ ಅಥವಾ ಅಂತಹ ರೀತಿಯ ಭಾವನೆಯಲ್ಲ. ಅನೇಕ ಮುಖ್ಯ ಕಾರಣಗಳಿಂದಾಗಿ ನಮ್ಮ ದೇಶದಲ್ಲಿ ತೈಲಸಂಸ್ಕರಣಾಗಾರಗಳ ಸ್ಥಾಪನೆಯಾಗುವುದು ಅಗತ್ಯವಿತ್ತು. ತೈಲ ಸಂಸ್ಕರಣಾಗಾರಗಳ ಕಂಪನಿಗಳವರೊಂದಿಗೆ ನಾವು ಮಾತುಕತೆ ನಡೆಸಿದೆವು ಅವರು ಕೆಲವು ಷರತ್ತು ಹಾಗೂ ನಿಬಂಧನೆಗಳನ್ನು ತಿಳಿಸಿ ಆ ಪ್ರಕಾರವಾಗಿಯಾದರೆ ಮಾತ್ರ ತಾವು ಒಪ್ಪಂದಕ್ಕೆ ಸಿದ್ಧ ಎಂದರು. ನಾವು ಅವರ ಪ್ರಸ್ತಾಪಗಳನ್ನೂ ಹಾಗೂ ಷರತ್ತುಗಳನ್ನು ಪರಿಶೀಲಿಸಿ ಅದರಲ್ಲಿ ಏನನ್ನು ಒಪ್ಪಬಹುದು ಏನನ್ನು ಒಪ್ಪಲು ಸಾಧ್ಯವಿಲ್ಲ ಎಂದು ನಿರ್ಣಯಿಸಬೇಕಾಯಿತು. ನಾವು ಇದಕ್ಕಿಂತ ಹೆಚ್ಚಿಗೆ ಹೇಳುವ ಸ್ಥಿತಿಯಲ್ಲಿಲ್ಲ.

ಶ್ರೀ ಸಾರಂಗಧರ್‌ದಾಸ್:- ಅಂದರೆ ಇನ್ನೊಂದು ಕಂಪನಿಯ ಅಜ್ಞಾವರ್ತಿಯಾಗಿ ನಾವು ಈ ಒಪ್ಪಂದ ಮಾಡಿಕೊಂಡಿದ್ದೇವೆ ಎಂದು ಅರ್ಥಮಾಡಿಕೊಳ್ಳಬಹುದೆ?

ಶ್ರೀ ಕೆ.ಸಿ. ರೆಡ್ಡಿ:- ಇಲ್ಲಿ ಇನ್ನೊಂದು ಸಂಸ್ಥೆಯ ಅಜ್ಞಾಪನೆ ಏನೂ ಇಲ್ಲ.

**ಸಭಾಪತಿಯವರು;-** ಬಹುಶಃ ಇದು ವಾದಕ್ಕೆ ತಿರುಗಿದಂತೆ ಕಾಣುತ್ತದೆ.

ಶ್ರೀ ಕೆ.ಸಿ. ರೆಡ್ಡಿ:- ಇದು ಸರ್ಕಾರಕ್ಕೆ ಸೇರಿದೆ.......

**ಸಭಾಪತಿಯವರು:-** ಆರ್ಡರ್, ಆರ್ಡರ್, ಅವರು ಬಹಳ ಸ್ಪಷ್ಟವಾಗಿ ವಿಷಯ ತಿಳಿಸಿದ್ದಾರೆ ಅನ್ನಿಸುತ್ತೆ.

ಶ್ರೀ ಕೆ.ಸಿ. ರೆಡ್ಡಿ:- ನಾನು ಅದಕ್ಕೆ ಉತ್ತರ ನೀಡುತ್ತೇನೆ. ಈ ಒಪ್ಪಂದ ತೈಲ ಸಂಸ್ಕರಣಾಗಾರ ಕಂಪನಿಗಳ ಅಜ್ಞಾನುವರ್ತಿಯಾಗಿ ನಡೆದದ್ದಲ್ಲ. ಇನ್ನೂ ಅನೇಕ ರೀತಿಯ ಬೇರೆ ಬೇರೆ ಪ್ರಸ್ತಾಪಗಳಿದ್ದವು. ಅವೆಲ್ಲವನ್ನೂ ಕಾಲಾನುಕಾಲಕ್ಕೆ ಪರಿಶೀಲಿಸಲಾಯಿತು. ಈ ಎಲ್ಲ ಪ್ರಸ್ತಾಪಗಳ ಬಗ್ಗೆ ವಿಸ್ತೃತವಾದ ಹಾಗೂ ಸುದೀರ್ಘವಾದ ಚರ್ಚೆಯ ನಂತರವೇ ಅಂತಿಮ ಒಪ್ಪಂದವನ್ನು ಮಾಡಿಕೊಳ್ಳಲಾಗಿದೆ.

**ಪ್ರಧಾನಮಂತ್ರಿ (ಶ್ರೀ ಜವಹರಲಾಲ್ ನೆಹರೂ):-** ವಾಸ್ತವವಾಗಿ ಅವರು ನೀಡಿದ ಪ್ರಸ್ತಾವಗಳಲ್ಲಿ ಕೆಲವನ್ನು ಒಪ್ಪಿಕೊಳ್ಳಲಿಲ್ಲ. ಅವುಗಳನ್ನು ಬದಲಿಸಲಾಗಿದೆ.

## 5. ಉಪ್ಪಿನ ಮೇಲ್ತೆರಿಗೆ ಮಸೂದೆಯ ಮಂಡನೆ

### ಡಿಸೆಂಬರ್ 21, 1953

ಉತ್ಪಾದನಾ ಸಚಿವ ಶ್ರೀ ಕೆ.ಸಿ. ರೆಡ್ಡಿ ಅವರಿಂದ-(ಇದರ ಆಯ್ದ ಭಾಗಗಳನ್ನು ಮಾತ್ರ ಇಲ್ಲಿ ಕೊಡಲಾಗಿದೆ)

"ಸರ್ಕಾರವು ನಿರ್ವಹಿಸುತ್ತಿರುವ ಉಪ್ಪಿನ ಸಂಸ್ಥೆಯ ಖರ್ಚುಗಳನ್ನು ಪೂರೈಸುವ ಸಲುವಾಗಿ ನಿಧಿಯನ್ನು ಕೂಡಿಸಲು ಉಪ್ಪಿನ ಮೇಲೆ ಮೇಲ್ತೆರಿಗೆಯನ್ನು ವಿಧಿಸಿ, ಅದನ್ನು ಸಂಗ್ರಹಿಸುವುದಕ್ಕೆ ಅವಕಾಶ ಮಾಡಿಕೊಡುವುದಕ್ಕಾಗಿ ಮತ್ತು ಉಪ್ಪಿನ ತಯಾರಿಕೆ ಸರಬರಾಜು ಹಾಗೂ ವಿತರಣೆಗೆ ಸಂಬಂಧಿಸಿದಂತೆ ಸರ್ಕಾರವು ಕೈಗೊಂಡಿರುವ ಕ್ರಮಗಳನ್ನು ಪರಿಗಣಿಸುವುದಕ್ಕಾಗಿ ಈ ಮಸೂದೆಯನ್ನು ಮಂಡಿಸುತ್ತಿದ್ದೇನೆ.

ಮಾನ್ಯರೇ, ಈ ಮಸೂದೆ ಸಾಕಷ್ಟು ಸರಳವಾಗಿದೆ. ಉಪ್ಪಿನ ಮೇಲೆ ಹೊಸ ಮೇಲುತೆರಿಗೆಯನ್ನು ವಿಧಿಸುವುದಾಗಲೀ ಅಷ್ಟೇಕೆ, ಈಗ ಇರುವ ಮೇಲ್ತೆರಿಗೆಯ ದರವನ್ನು ಹೆಚ್ಚಿಸುವುದಾಗಲೀ ಈ ಮಸೂದೆಯ ಉದ್ದೇಶವಲ್ಲ ಎಂದು ಮೊದಲೇ ಸ್ಪಷ್ಟಪಡಿಸುತ್ತೇನೆ. 1947ರಲ್ಲಿ ಉಪ್ಪಿನ ಮೇಲಿನ ಸುಂಕವನ್ನು ರದ್ದುಪಡಿಸಿದಾಗಿನಿಂದ ಯಾವ ದರದ ಮೇಲ್ತರಿಗೆಯನ್ನು ಸಂಗ್ರಹಿಸಲಾಗುತ್ತಿತ್ತೋ ಅದನ್ನು ಸಂಗ್ರಹಿಸುವುದಕ್ಕೆ ಅವಕಾಶ ಮಾಡಿಕೊಡುವುದೇ ಈ ಮಸೂದೆಯ ಉದ್ದೇಶ. ಖಾಸಗಿಯಾಗಿ ಹಾಗೂ ಕೇಂದ್ರ ಸರ್ಕಾರದ ಕಾರ್ಖಾನೆಗಳಲ್ಲಿ ತಯಾರಾಗುವ ಉಪ್ಪಿನ ಮೇಲೆ ಈಗಿರುವ ದರದಲ್ಲಿಯೇ ಶುಲ್ಕವನ್ನು ವಿಧಿಸುವ ಬಗ್ಗೆ 1947ರಲ್ಲಿಯೇ ನಿರ್ಣಯ ಕೈಗೊಳ್ಳಲಾಯಿತು ಮತ್ತು ಉಪ್ಪಿನ ಮೇಲಿನ ಸುಂಕದ ರದ್ದತಿಯೊಂದಿಗೆ ಕೇಂದ್ರ ಅಬ್ಕಾರಿ ಮತ್ತು ಉಪ್ಪು ಕಾಯಿದೆಯ 37ನೇ ನಿಯಮದ ಅನ್ವಯ ಒಂದು ಅಧಿಸೂಚನೆಯನ್ನು ಹೊರಡಿಸಲಾಯಿತು.

ಐತಿಹಾಸಿಕ ಮಹತ್ವ ಪಡೆದಿರುವ ಉಪ್ಪಿನ ಸುಂಕದ ರದ್ದತಿಯ ವಿಷಯ ನಮ್ಮೆಲ್ಲರ ನೆನಪಿನಲ್ಲಿ ಇನ್ನೂ ಹಸಿರಾಗಿಯೇ ಇದೆ. ಸ್ವಾತಂತ್ರ್ಯ ಸಂಗ್ರಾಮ ಕಾಲದಲ್ಲಿ ಉಪ್ಪು ಸುಂಕದ ರದ್ದತಿಗೆ ಅತಿ ಸೂಕ್ತವಾದ ಮಹತ್ವವನ್ನು ನೀಡಲಾಯಿತು ಎಂಬುದನ್ನು ನಾನು ಮತ್ತೆ ನೆನಪಿಸಬೇಕಿಲ್ಲ.

1930ರಲ್ಲಿ ಮಹಾತ್ಮಾಗಾಂಧಿಯವರು ಸತ್ಯಾಗ್ರಹವನ್ನು ಆರಂಭಿಸಿ ದಂಡಿ ಯಾತ್ರೆ ಕೈಗೊಂಡಾಗ ಸುಂಕದ ರದ್ದತಿಯ ಬಗೆಗಿನ ಪ್ರಸ್ತಾಪ ಒಂದು ಮಹತ್ವದ ಹಾಗೂ ನಾಟಕೀಯ ಹಂತವನ್ನು ತಲುಪಿತು. ಗಾಂಧೀ ಇರ್ವಿನ್ ಒಪ್ಪಂದದೊಂದಿಗೆ ಅಹಿಂಸಾ ಸತ್ಯಾಗ್ರಹವು ಯಶಸ್ವಿಯಾಗಿ ಕೊನೆಗೊಂಡಿತು. ಉಪ್ಪನ್ನು ತಯಾರಿಸಬಹುದಾದ ಪ್ರದೇಶದ ನೆರೆಹೊರೆಯ ಗ್ರಾಮಗಳ ಜನರು ಉಪ್ಪನ್ನು ತಯಾರಿಸುವುದಕ್ಕೆ ಹಾಗೂ ಸಂಗ್ರಹಿಸುವುದಕ್ಕೆ ಈ ಒಪ್ಪಂದವು ಕೆಲವೊಂದು ವಿನಾಯಿತಿಗಳನ್ನು ದೊರಕಿಸಿ ಕೊಟ್ಟಿತು. ಆದರೆ ಉಪ್ಪಿನ ಸುಂಕವನ್ನು ಸಂಪೂರ್ಣವಾಗಿ ರದ್ದು ಮಾಡಲು ಸಾಧ್ಯವಾಗಿದ್ದು 1946ರಲ್ಲಿ, ನಮ್ಮ ರಾಷ್ಟ್ರೀಯ ನಾಯಕರು ಅಧಿಕಾರ ವಹಿಸಿಕೊಂಡು ಭಾರತವು ಸ್ವಾತಂತ್ರ್ಯವನ್ನು ಗಳಿಸುವ ಸಂದರ್ಭದಲ್ಲಿ ಅಂದರೆ 1947ರ 1ನೇ ಏಪ್ರಿಲ್‌ನಲ್ಲಿ, ಉಪ್ಪನ್ನು ಆದಾಯದ ಪ್ರಮುಖ ಮೂಲವಾಗಿ ಪರಿಗಣಿಸಕೂಡದು ಎಂಬ ನಿರ್ಣಯವನ್ನು ಆಗ

ಕೈಗೊಳ್ಳಲಾಯಿತು. ಉಪ್ಪಿನ ಸುಂಕವನ್ನು ಪೂರ್ಣವಾಗಿ ರದ್ದುಮಾಡುವ ನಿರ್ಣಯವನ್ನು ಕೈಗೊಂಡ ಸಂದರ್ಭದಲ್ಲಿ ಸರ್ಕಾರವು ವಿಷಯದ ಬಗ್ಗೆ ಕೂಲಂಕುಷ ಪರಿಶೀಲನೆ ನಡೆಸಿ ಭಾರತದಲ್ಲಿ ಉಪ್ಪಿನ ಉತ್ಪಾದನೆಯನ್ನು ನಿಯಂತ್ರಿಸುವಂತಹ ಸಂಸ್ಥೆಯೊಂದಿರಬೇಕು, ಆದರೆ ಅದು ಕೇವಲ ನಿಯಂತ್ರಣಕ್ಕಾಗಿ ಸೀಮಿತವಾಗದೆ ಉಪ್ಪಿನ ಗುಣಮಟ್ಟವನ್ನು, ಸುಧಾರಿಸುವ ಅದರ ಉತ್ಪಾದನೆಯನ್ನು ಹೆಚ್ಚಿಸುವ ಕೆಲಸವನ್ನು ಮಾಡಬೇಕು ಎಂದು ಅಭಿಪ್ರಾಯಪಟ್ಟಿತು. ಸಂಕ್ಷಿಪ್ತವಾಗಿ ಹೇಳುವುದಾದರೆ ಉಪ್ಪಿನ ಕೈಗಾರಿಕೆಯನ್ನು ಸಮಗ್ರವಾಗಿ ಹಾಗೂ ಯೋಜಿತವಾಗಿ ಅಭಿವೃದ್ಧಿಪಡಿಸಬೇಕು ಎಂಬುದು ಇಲ್ಲಿನ ಅಭಿಪ್ರಾಯವಾಗಿತ್ತು.....

ಕೇಂದ್ರ ಅಬ್ಕಾರಿ ಹಾಗೂ ಉಪ್ಪು ಕಾಯಿದೆ ಮತ್ತು ಅದರ ಕೆಳಗಿನ ನಿಯಮಗಳ ಆಧಾರದ ಮೇಲೆ ಮೇಲ್ತೆರಿಗೆಯನ್ನು ವಿಧಿಸಲು ಸರ್ಕಾರಕ್ಕೆ ಹಕ್ಕಿದೆಯೇ ಎಂಬ ಬಗ್ಗೆ ಇತ್ತೀಚೆಗೆ ಸಂದೇಹವನ್ನು ವ್ಯಕ್ತಪಡಿಸಲಾಗಿತ್ತು. ತೆರಿಗೆಯನ್ನು ಶಾಸನಬದ್ಧ ನಿಯಮದ ಆಧಾರದ ಮೇಲೆ ವಿಧಿಸುವುದು ಉತ್ತಮ ಎಂಬ ಅಭಿಪ್ರಾಯ ವ್ಯಕ್ತವಾಯಿತು. ಈ ಮಸೂದೆಯನ್ನು ಮಂಡಿಸುವುದಕ್ಕೆ ಇದೂ ಒಂದು ಕಾರಣ.

ಎರಡನೆಯ ಹಾಗೂ ನನ್ನ ಅಭಿಪ್ರಾಯದಲ್ಲಿ ಬಹಳ ಮುಖ್ಯವಾದ ಇನ್ನೊಂದು ಉದ್ದೇಶವೇನೆಂದರೆ ಹೀಗೆ ಸಂಗ್ರಹಿಸಲಾದ ಮೊತ್ತವನ್ನು ಯಾವ ಉದ್ದೇಶಗಳಿಗೆ ಬಳಸಬೇಕು ಎಂಬುದನ್ನೂ ಸಹ ಈ ಅಧಿನಿಯಮದಲ್ಲಿ ಸೇರಿಸಬಿಡಬಹುದು. ಇತರ ಕೆಲವು ಸರಕುಗಳ ಉತ್ಪಾದನೆಯ ವಿಷಯದಲ್ಲಿಯೂ ಇಂತಹ ಮೇಲ್ತೆರಿಗೆಗಳಿದ್ದು ಅವುಗಳನ್ನು ಸಂಗ್ರಹಿಸಿ ಆಡಳಿತಾತ್ಮಕ ವೆಚ್ಚಗಳನ್ನು ಪೂರೈಸಿದ ನಂತರ ಉಳಿದಂತಹ ಮೊತ್ತವನ್ನು ಆಯಾ ಉದ್ದಿಮೆಗಳ ಪ್ರವರ್ಧನೆಗಾಗಿಯೇ ಬಳಸುತ್ತಿರುವ ವಿಷಯ ಸದನಕ್ಕೆ ತಿಳಿದಿದೆ. ಉದಾಹರಣೆಗೆ ಟೀ, ಕಾಫಿ, ರಬ್ಬರ್‌ಗಳ ಮೇಲಿನ ಮೇಲ್ತೆರಿಗೆಯನ್ನು ಈ ಉದ್ದಿಮೆಗಳ ಅಭಿವೃದ್ಧಿಗಾಗಿ ಹಾಗೂ ಅವುಗಳ ಉತ್ಪನ್ನಗಳ ವ್ಯಾಪಾರಕ್ಕಾಗಿ ಬಳಸಲಾಗುತ್ತಿದೆ. ಇದೇ ರೀತಿ ಕಲ್ಲಿದ್ದಲ ಮೇಲೆ ವಿಧಿಸುವ ಮೇಲ್ತೆರಿಗೆಯನ್ನು (1) ಕಲ್ಲಿದ್ದಲ ಗಣಿಗಳ ಕಾರ್ಮಿಕರ ಕಲ್ಯಾಣಕ್ಕಾಗಿ (2) ಕಲ್ಲಿದ್ದಲ ಗಣಿಗಳ ಸಂರಕ್ಷಣೆ ಹಾಗೂ ಸುರಕ್ಷಣೆಗಾಗಿ ಬಳಸಲಾಗುತ್ತಿದೆ. ಇತ್ತೀಚೆಗೆ ವಿಧಿಸಲಾದ ಒಂದು ಕಾನೂನಿನ ಪ್ರಕಾರ ಮಿಲ್ ಬಟ್ಟೆಯ ಮೇಲೂ ಮೇಲ್ತೆರಿಗೆಯನ್ನು ವಿಧಿಸಲಾಗುತ್ತಿದೆ. ಖಾದಿ ಮತ್ತು ಇತರ ಗೃಹ ಕೈಗಾರಿಕೆಗಳಿಗೆ ನೆರವು ಹಾಗೂ ಪ್ರೋತ್ಸಾಹ ನೀಡುವುದು ಇದರ ಉದ್ದೇಶ. ಈಗಾಗಲೇ ವಿವರಿಸಿದಂತೆ ಈಗ ಕೈಗೊಂಡಿರುವ ಕ್ರಮ ಅತ್ಯಂತ ಸರಳವಾದುದು. ಉಪ್ಪು ಕೈಗಾರಿಕೆಯನ್ನು ವೈಜ್ಞಾನಿಕವಾದ ಹಾಗೂ ಯೋಜಿತವಾದ ರೀತಿಯಲ್ಲಿ ಅಭಿವೃದ್ಧಿಪಡಿಸುವುದಕ್ಕಾಗಿ ಈ ಮೇಲ್ತೆರಿಗೆಯನ್ನು ವಿಧಿಸಲಾಗುತ್ತಿದೆ.

ಉಪ್ಪು ಕೈಗಾರಿಕೆಯನ್ನು ಅಭಿವೃದ್ಧಿಪಡಿಸುವ ಸಲುವಾಗಿ ಅದರಲ್ಲಿಯೂ ಮುಖ್ಯವಾಗಿ ಉಪ್ಪಿನ ಗುಣಮಟ್ಟ ಹಾಗೂ ಉತ್ಪಾದನೆಯನ್ನು ಸುಧಾರಿಸುವ ಸಲುವಾಗಿ ಸರ್ಕಾರವು 1947ರಲ್ಲಿ ಕೈಗೊಂಡ ನೀತಿ ನಿರ್ಧಾರದ ಬಗ್ಗೆ ಆಗಲೇ ಹೇಳಿದ್ದೇನೆ. ಈ ನೀತಿಯನ್ನು ಅನುಷ್ಠಾನಕ್ಕೆ ತರುವುದಕ್ಕಾಗಿ ಕಳೆದ ಕೆಲವು ವರ್ಷಗಳಲ್ಲಿ ಕೆಲವು ಕ್ರಮಗಳನ್ನು ಕೈಗೊಳ್ಳಲಾಗಿದೆ. ಉದಾರವಾಗಿ ಲೈಸೆನ್ಸ್‌ಗಳನ್ನು ನೀಡಲಾಗಿದೆ. ಕಲ್ಲಿದ್ದಲು, ಸಿಮೆಂಟು, ಉಕ್ಕು ಹಾಗೂ ಅಗತ್ಯವಾದ ಇನ್ನಿತರ ಸಾಮಗ್ರಿಗಳನ್ನು ಖರೀದಿಸಲು ಸಾಧ್ಯವಾದ ಎಲ್ಲ ಸಹಾಯವನ್ನೂ ನೀಡುವ ಮೂಲಕ ಹೊಸ ಹೊಸ ಉಪ್ಪು ತಯಾರಿಕಾ ಸ್ಥಾವರಗಳ ಸ್ಥಾಪನೆಗೆ ಪ್ರೋತ್ಸಾಹ ನೀಡಲಾಗಿದೆ. ಇದರ ಪರಿಣಾಮವಾಗಿ ಉಪ್ಪಿನ

ಉತ್ಪಾದನೆ ಗಣನೀಯವಾಗಿ ಏರಿದೆ. ದೇಶವು ನೂರು ವರ್ಷಗಳಲ್ಲಿ ಮೊದಲಬಾರಿಗೆ ಸ್ವಾವಲಂಬನೆ ಸಾಧಿಸಿದೆ. ಅದು ಸ್ವಾವಲಂಬಿಯಾಗಿರುವುದಷ್ಟೇ ಅಲ್ಲ, ವಿದೇಶಗಳಿಗೆ ಉಪ್ಪನ್ನು ರಫ್ತು ಮಾಡುವುದಕ್ಕೂ ಆರಂಭಿಸಿದೆ. ಇದುವರೆಗೆ ನಿರ್ಲಕ್ಷಿಸಲಾಗಿದ್ದ ಅನೇಕ ಕೆಲಸಗಳನ್ನು ವಿವಿಧ ಉಪ್ಪು ತಯಾರಿಕಾ ಕೇಂದ್ರಗಳಲ್ಲಿ ಈಗ ಕೈಗೊಳ್ಳಲಾಗಿದೆ... ಇದಲ್ಲದೆ ಉಪ್ಪಿನ ಗುಣಮಟ್ಟ ಸುಧಾರಣೆಗೆ ಪ್ರಯತ್ನ ಮಾಡಲಾಗಿದೆ. ಈ ವಿಷಯದಲ್ಲಿ 1950ಕ್ಕೆ ಮೊದಲು ಯಾವುದೇ ನಿಯಂತ್ರಣವಿರಲಿಲ್ಲ. ಉಪ್ಪಿನಲ್ಲಿ ಶೇಕಡಾ 96 ಸೋಡಿಯಂ ಕ್ಲೋರೈಡ್ ಅಂಶ ಇರಬೇಕು ಎಂದು ಭಾರತೀಯ ಪ್ರಮಾಣನಗಳ ಸಂಸ್ಥೆ ನಿಗದಿಸಿದೆ.... ಶೇಕಡಾ 96 ಮಾನದಂಡವನ್ನು ಇನ್ನು 2-3 ವರ್ಷಗಳಲ್ಲಿ ತಲುಪಲು ಸಾಧ್ಯವಾಗಬಹುದು ಎಂದು ನಿರೀಕ್ಷಿಸಲಾಗಿದೆ. ನಾವು ಐದು ಪರೀಕ್ಷಣಾ ಪ್ರಯೋಗಾಲಯಗಳನ್ನು ಹಾಗೂ ಒಂದು ಮಾದರಿ ಉಪ್ಪು ಸ್ಥಾವರವನ್ನು ಸ್ಥಾಪಿಸಿದ್ದೇವೆ ಮತ್ತು ಭಾವನಗರನಲ್ಲಿ ಒಂದು ಉಪ್ಪು ಸಂಶೋಧನಾ ಕೇಂದ್ರವನ್ನು ಸ್ಥಾಪಿಸಲು ಎಲ್ಲ ಸಿದ್ಧತೆಗಳೂ ನಡೆದಿವೆ. ವಿತರಣಾ ವ್ಯವಸ್ಥೆಯನ್ನೂ ಸರಿಪಡಿಸಲಾಗಿದೆ. ಬೇರೆ ಬೇರೆ ಪ್ರದೇಶಗಳಲ್ಲಿ ಕಂಡುಬಂದ ಕೊರತೆಗಳನ್ನು ಬಹುತೇಕ ನಿವಾರಿಸಲಾಗಿದೆ.....

ಗಮನಾರ್ಹ ಪ್ರಗತಿಯಾಗಿದ್ದರೂ ಮಾಡಬೇಕಾದ್ದು ಇನ್ನೂ ಬಹಳ ಇದೆ. ಮೇಲ್ತೆರಿಗೆಯ ಹಣ ನಮಗೆ ಲಭಿಸುವುದರಿಂದ ನಮ್ಮ ಅಭಿವೃದ್ಧಿ ಕಾರ್ಯಗಳನ್ನು ತ್ವರಿತವಾಗಿ ಕೈಗೊಳ್ಳಲು, ರಫ್ತುಗಳನ್ನು ಉತ್ತೇಜಿಸಲು, ಹೆಚ್ಚು ಹೆಚ್ಚು ಮಾದರಿ ಸ್ಥಾವರಗಳನ್ನು ಹೊಂದಲು ಮತ್ತು ಹೆಚ್ಚು ಸಂಶೋಧನಾ ಕೇಂದ್ರಗಳನ್ನು ಸ್ಥಾಪಿಸಲು ಸಾಧ್ಯವಾಗಬಹುದು. ಈಗ ಹಾಕಿರುವ ಮೇಲ್ತೆರಿಗೆಯಿಂದ ಉಪ್ಪಿನ ಬೆಲೆಯ ಮೇಲಾಗುವ ಪರಿಣಾಮವೇನು ಎಂದು ತಿಳಿಯಲು ಸದಸ್ಯರು ಕಾತುರರಾಗಿರಬಹುದು. ಸೈದ್ಧಾಂತಿಕವಾಗಿ ಇಲ್ಲಿನ ವ್ಯತ್ಯಾಸ 6 ಪೈಸೆಗಳಷ್ಟು ಅಂದರೆ ಖಾಸಗಿ ಕಾರ್ಖಾನೆಗಳಲ್ಲಿ ತಯಾರಾದ ಉಪ್ಪಿಗೆ ಒಂದು ಅಣೆಯ 20ನೇ ಒಂದು ಭಾಗದಷ್ಟು ವ್ಯತ್ಯಾಸವಾಗುತ್ತದೆ ಮತ್ತು ಸರ್ಕಾರಿ ಕಾರ್ಖಾನೆಗಳಲ್ಲಿ ತಯಾರಾದ ಉಪ್ಪಿಗೆ ಸೇರಿಗೆ ಒಂದು ಪೈಸೆಯಷ್ಟು ವ್ಯತ್ಯಾಸವಾಗಬಹುದು. ಇಲ್ಲಿ ಸೈದ್ಧಾಂತಿಕ ವ್ಯತ್ಯಾಸ ಎಂಬುದನ್ನು ಗ್ರಾಹಕರ ದೃಷ್ಟಿಕೋನದಿಂದ ಹೇಳುತ್ತಿದ್ದೇನೆ. ಈ ಮೊತ್ತ ಒಂದು ಪೈಸೆಯ ಭಿನ್ನಾಂಶದಷ್ಟು ಅಲ್ಪ ಮೊತ್ತ. ಇದನ್ನು ರದ್ದು ಮಾಡಿದ್ದೇ ಆದರೆ ಅದನ್ನು ಗ್ರಾಹಕರ ಸೌಲಭ್ಯಕ್ಕೆ ವರ್ಗಾಯಿಸಲು ಸಾಧ್ಯವಾಗುವುದಿಲ್ಲ. ವಾಸ್ತವವಾಗಿ ಇಲ್ಲಿ ಬೆಲೆಯ ವ್ಯತ್ಯಾಸವೇ ಆಗಿಲ್ಲ ಎಂದು ಹೇಳಿದರೂ ಸರಿಯೇ. ಈ ದಿನ ನಾವೇನಾದರೂ ಮೇಲ್ತೆರಿಗೆಯನ್ನು ರದ್ದು ಮಾಡಿದ್ದೇ ಆದರೆ ಗ್ರಾಹಕರಿಗೆ ಯಾವ ಲಾಭವೂ ಆಗುವುದಿಲ್ಲ. ಈ ರದ್ದತಿಯಿಂದ ದೊಡ್ಡ ಪ್ರಮಾಣದ ತಯಾರಿಕರಿಗೆ ಅಥವಾ ಮಧ್ಯವರ್ತಿಗಳಿಗೆ ಮಾತ್ರ ಅನುಕೂಲವಾಗುತ್ತದೆ. ಮೇಲ್ತೆರಿಗೆಯನ್ನು ಇನ್ನೂ ಕಡಿಮೆಗೆ ವ್ಯತ್ಯಾಸ ಮಾಡುವ ಅಥವಾ ಮಾಡುವಂಥ ಪ್ರಸ್ತಾಪಕ್ಕೆ ಈ ವಾದವು ಇನ್ನೂ ತೀವ್ರವಾಗಿ ಅನ್ವಯಿಸುತ್ತದೆ. ಇಂತಹ ಕ್ರಮದಿಂದ ಒಂದು ಕಡೆ ಗ್ರಾಹಕರಿಗೆ ಯಾವುದೇ ಅನುಕೂಲ ಸಿಗುವುದಿಲ್ಲ ಮತ್ತು ಇನ್ನೊಂದು ಕಡೆ ಸರ್ಕಾರಕ್ಕೆ ಸಿಗುವ ಮೊತ್ತವೂ ಕಡಿಮೆಯಾಗಿ ಮೇಲ್ತೆರಿಗೆಯ ವಸೂಲಾತಿ ಅಸ್ತವ್ಯಸ್ತವಾಗುತ್ತದೆ ಹಾಗೂ ಈ ಕೈಗಾರಿಕೆಯ ಅಭಿವೃದ್ಧಿಯೂ ಕೂಡ ಹದಗೆಡುತ್ತದೆ.

ಇದಕ್ಕೆ ಪ್ರತಿಯಾಗಿ ಹಿಂದಿದ್ದ ಉಪ್ಪು ತೆರಿಗೆಯ ವ್ಯತ್ಯಾಸ ಪ್ರತಿ ದಿಬ್ಬಕ್ಕೆ (Mound) 1-9-0 ರಷ್ಟಿದ್ದಿತು. ಅಂದರೆ ಒಂದು ಸೇರಿಗೆ ಸುಮಾರು 7-1/2 ಪೈಸೆಯಷ್ಟು. ತೆರಿಗೆಯನ್ನು ರದ್ದುಮಾಡಿದ ನಂತರ ಉಪ್ಪಿನ ಬೆಲೆ ಈಗೇನಿದೆಯೋ ಅದು ತೆರಿಗೆ ಇದ್ದಾಗಿಗಿಂತ ಅಗ್ಗವೇನೂ ಆಗಿಲ್ಲ ಎಂಬ ಅಭಿಪ್ರಾಯ, ಅದೂ ದೂರಿನ ರೂಪದಲ್ಲಿಲ್ಲದಿದ್ದರೂ ಆಗಾಗ ವ್ಯಕ್ತವಾಗುತ್ತಿರುವುದಂಟು.

ಅವಿಭಾಜ್ಯ ಭಾರತದಲ್ಲಿ ಉಪ್ಪಿನ ತೆರಿಗೆಯಿಂದ ಬೊಕ್ಕಸದ ವಾರ್ಷಿಕ ಆದಾಯ ಗಣನೀಯವಾಗಿತ್ತು ಅಂದರೆ ಸುಮಾರು 9 ಕೋಟಿ ರೂ.ಗಳಷ್ಟಿತ್ತಾದರೂ ಮತ್ತು ಯಾವುದರ ಮೇಲೆ ಒತ್ತು ಬೀಳುತ್ತೆ (Angle of Incidence) ಎಂಬ ದೃಷ್ಟಿಯಿಂದ 1-9-0 ಯಷ್ಟು ಗಮನಾರ್ಹ ಪ್ರಮಾಣದಲ್ಲಿದ್ದರೂ ಆಗಲೂ ಕೂಡ ಅದು ಪ್ರತಿ ಸೇರಿನ ಬೆಲೆಯ ಮೇಲೆ ಬೀಳುವ ಭಾರದ ದೃಷ್ಟಿಯಿಂದ ಹೆಚ್ಚೇನೂ ಆಗಿರಲಿಲ್ಲ. ಅದು ಪ್ರತಿ ಸೇರಿಗೆ 7-1/2 ಪೈಸೆ ಮಾತ್ರ ಆಗಿದ್ದಿತು. ಇಲ್ಲಿ ನೆನಪಿಟ್ಟುಕೊಳ್ಳಬೇಕಾದ ಇನ್ನೊಂದು ಅಂಶವೆಂದರೆ 1947ರಿಂದಾ ನಂತರ ಕಾರ್ಮಿಕರ ಮಜೂರಿ ಹಾಗೂ ಒಟ್ಟಾರೆ ಉತ್ಪಾದನೆಯ ವೆಚ್ಚದಲ್ಲಿ ಏರಿಕೆ, ಗೋಣಿಚೀಲ ಮತ್ತು ಪ್ಯಾಕಿಂಗ್ ಸಾಮಗ್ರಿಯ ದರದ ಏರಿಕೆ ಹಾಗೂ ಕೆಲವು ಮಟ್ಟಿಗೆ ರೈಲ್ವೆ ಸಾಗಣೆ ವೆಚ್ಚದ ಹೆಚ್ಚಳದಿಂದಾಗಿ, ಉಪ್ಪಿನ ತೆರಿಗೆಯ ರದ್ದತಿಯಿಂದ ಗ್ರಾಹಕರಿಗೆ ಯಾವ ಲಾಭ ದೊರೆಯಬಹುದಿತ್ತೋ ಅದು ದೊರೆಯದಂತಾಗಿದೆ. ಇದನ್ನು ಇನ್ನೊಂದು ರೀತಿಯಲ್ಲಿ ಹೇಳುವುದಾದರೆ ಉಪ್ಪಿನ ತೆರಿಗೆಯ ರದ್ದತಿಯಿಂದ ಆ ತೆರಿಗೆಯನ್ನಷ್ಟೆ ಹೊರತುಪಡಿಸಿದರೆ ಚಿಲ್ಲರೆ ಮಾರಾಟದ ಬೆಲೆಯು ಕಡಿಮೆಯಾಗುವುದಕ್ಕೆ ಬದಲು 1946 ಅಥವಾ 1947ರಲ್ಲಿದ್ದುದಕ್ಕಿಂತ ಹೆಚ್ಚಾಗಿದೆ.

ವಸೂಲಿ ವೆಚ್ಚಗಳನ್ನು ಕಳೆದು ಒಟ್ಟು ಮೇಲ್ತೆರಿಗೆಯ ಮೊಬಲಗನ್ನು ಸಂಸತ್ತಿನ ಅನುಮೋದನೆ ಪಡೆದು ಪ್ರತಿವರ್ಷವೂ ಸರ್ಕಾರದ ಖಾತೆಯಲ್ಲಿ ತೆರೆಯಲಾಗುವ "ಉಪ್ಪಿನ ಉತ್ಪಾದನೆ ಹಾಗೂ ಅಭಿವೃದ್ಧಿ ನಿಧಿ" ಎಂದು ಹೆಸರಿಸಲಾದ ಠೇವಣಿ ಖಾತೆಗೆ ವರ್ಗಾಯಿಸಬೇಕೆಂದು ಪ್ರಸ್ತಾವಿಸಲಾಗಿದೆ. ಸಂಶೋಧನ ಪ್ರಯೋಗಾಲಯಗಳನ್ನು ನಡೆಸುವ, ಮಾದರಿ ಕೇಂದ್ರಗಳ ಕಾರ್ಯಾಚರಣೆಗೆ ಸಂಬಂಧಿಸಿದ ಹಾಗೂ ಉಪ್ಪಿನ ಆಡಳಿತಕ್ಕೆ ಸಂಬಂಧಿಸಿದ ವೆಚ್ಚವೂ ಸೇರಿದಂತೆ ಅಭಿವೃದ್ಧಿ ಕಾರ್ಯದ ಎಲ್ಲ ವೆಚ್ಚಗಳನ್ನೂ ಈ ಮೊದಲಿನಂತೆಯೇ ಸೂಕ್ತ ಖಾತೆಯ ಲೆಕ್ಕಕ್ಕೆ ಹಾಕಲಾಗುವುದು. ಆದರೆ ಇಡೀ ಮೊಬಲಗನ್ನು ಮರುಪಾವತಿ ಮಾಡಲಾಗುವುದು ಹಾಗೂ ಈ ನಿಧಿಯ ವೆಚ್ಚ ಸಂಸತ್ತಿನ ನಿಯಂತ್ರಣದಲ್ಲಿಯೇ ಇದ್ದಂತಾಗುತ್ತದೆ.

ನಾನು ಈಗಾಗಲೇ ಈ ಮಸೂದೆಯ 3 ಮತ್ತು 4ನೇ ಅಂಶಗಳನ್ನು ಪ್ರಸ್ತಾಪಿಸಿದ್ದೇನೆ. 5ನೇ ಅಂಶಕ್ಕೆ ಸಂಬಂಧಿಸಿದಂತೆ (ಇದು Validation clause) ಎಲ್ಲ ಸಂದೇಹಗಳ ನಿವಾರಣೆ ದೃಷ್ಟಿಯಿಂದ ನಾನು ಹೇಳುವುದೇನೆಂದರೆ ಕೇಂದ್ರ ಅಬ್ಕಾರಿ ಮತ್ತು ಉಪ್ಪಿನ ಅಧಿನಿಯಮದ ಮೇರೆಗೆ 1947ರ ಅಧಿಸೂಚನೆಗೆ ಅನುಗುಣವಾಗಿ ವಿಧಿಸಲಾಗುತ್ತಿದ್ದ ಈ ಶುಲ್ಕವನ್ನು ಎಂದು ವಿಧಿಸಲಾಯಿತೋ ಅಂದೇ ಈ ಅಧಿನಿಯಮ ಜಾರಿಯಲ್ಲಿತ್ತು ಎಂಬಂತೆ ಈ ಅಧಿನಿಯಮದ ಅನ್ವಯ ವಿಧಿಸಲಾಗಿದೆ ಎಂದು ಭಾವಿಸತಕ್ಕದ್ದು. ಹೀಗೆ ಹಿಂದಿನಿಂದ ಅನ್ವಯವಾಗುವಂತೆ ಸಿಂಧುತ್ವಗೊಳಿಸುವ ಕ್ರಮ ಅಪರೂಪದ್ದೂ ಅಲ್ಲ, ವಿಶೇಷವೂ ಅಲ್ಲ.

ಈ ಮಸೂದೆಯ 6ನೇ ಅಂಶದ ಕೆಳಗೆ ಈ ಅಧಿನಿಯಮದ ಉದ್ದೇಶಗಳನ್ನು ಕಾರ್ಯರೂಪಕ್ಕೆ ತರುವುದಕ್ಕೆ ಸಂಬಂಧಿಸಿದ ನಿಯಮಗಳನ್ನು ರೂಪಿಸುವ ಅವಕಾಶ ಒದಗಿಸಲಾಗಿದೆ. ಇತರ ಯಾವುದೇ ಉತ್ಪನ್ನವನ್ನು ತಯಾರಿಸುವ ಕೈಗಾರಿಕೆಯಲ್ಲಿ ಬಳಸಲಾಗುವಂಥ ಉಪ್ಪಿಗೆ ತೆರಿಗೆಯಿಂದ ವಿನಾಯಿತಿ ನೀಡಬೇಕೇ ಎಂಬ ಅಂಶವನ್ನು ಸರ್ಕಾರ ಪರಿಶೀಲಿಸುತ್ತಿದೆ.

ನಾನು ಸದನದ ವೇಳೆಯನ್ನು ಇನ್ನಷ್ಟು ತೆಗೆದುಕೊಳ್ಳಲು ಇಚ್ಛಿಸುವುದಿಲ್ಲ. ಈ ಮಸೂದೆಯ ವಿಶಿಷ್ಟ ಅಂಶಗಳನ್ನು ವಿವರಿಸುವ ಪ್ರಯತ್ನ ಮಾಡಿದ್ದೇವೆ. ಈ ಕ್ರಮಕ್ಕೆ ಸದನದ ಸಮ್ಮತಿ ದೊರೆಯುವುದೆಂದು ನಿರೀಕ್ಷಿಸುತ್ತೇನೆ.

## ಉಪ್ಪಿನ ಮಸೂದೆ ಮಂಡನೆಯ ಸಂದರ್ಭ

**ಕುಮಾರಿ ಆ್ಯನಿ ಮಸ್ಕರೀನ್ (ತಿರುವನಂತಪುರ):-** ಮಾನ್ಯ ಡೆಪ್ಯುಟಿ ಸ್ಪೀಕರ್ ಅವರೇ, ಈ ಸದನದ ಮುಂದಿರುವ ಮಸೂದೆ ತುಂಬ ವಿಚಿತ್ರವಾಗಿದೆ. ನಾನು ಬರುತ್ತಿರುವುದು ಉಪ್ಪಿನಲ್ಲಿ ಊರಿಸಿದಂತಹ ಒಂದು ಕ್ಷೇತ್ರದಿಂದ (Constituency pickeled in salt) ನನ್ನನ್ನು ಇಲ್ಲಿಗೆ ಕಳುಹಿಸಿರುವ ಸಾವಿರ ಸಾವಿರ ಮತದಾರರು, ನೀವು ಶಾಸಕಾಂಗದಲ್ಲಿರುವ ಅವಧಿಯಲ್ಲಿದ್ದಾಗಲಾದರೂ ನಮಗೆ ಉಚಿತವಾಗಿ ಉಪ್ಪು ಸಿಗುವಂತೆ ನೋಡಿಕೊಳ್ಳಿ ಎಂಬ ಒಂದೇ ಒಂದು ಮನವಿಯನ್ನು ನನಗೆ ಮಾಡಿಕೊಂಡಿಕೊಂಡಿದ್ದಾರೆ.

ಒಬ್ಬ ಸದಸ್ಯರು:- ನಿಮಗೆ ಹಾಗೆ ಮಾಡುವ ಅಧಿಕಾರವಿದೆಯೆ?

**ಕುಮಾರಿ ಆ್ಯನಿ ಮಸ್ಕರೀನ್:-**ಅದು ನನ್ನ ಅಧಿಕಾರದಲ್ಲಿಲ್ಲ. ಆ ಅಧಿಕಾರ ಯಾರ ಕೈಯಲ್ಲಿದೆ ಎಂದು ನನಗೆ ಗೊತ್ತು. ಇದು ಕೇವಲ ನನ್ನ ಮತಕ್ಷೇತ್ರದ ಜನರ ಬೇಡಿಕೆಯಲ್ಲ, ತಿರುವಾಂಕೂರು-ಕೊಚ್ಚಿನ್ ರಾಜ್ಯದ ಎಲ್ಲರ ಈ ಬೇಡಿಕೆ ಈಡೇರಲಿ ಎಂದು ನಾನು ಕೋರುತ್ತೇನೆ.

**ಡೆಪ್ಯುಟಿ ಸ್ಪೀಕರ್:-** ಮಾನ್ಯ ಸದಸ್ಯರು ಮಂತ್ರಿಯೂ ಆಗಿದ್ದರು.

**ಕುಮಾರಿ ಆ್ಯನಿ ಮಸ್ಕರೀನ್:-**ಹೌದು, ಆದರೆ ಉಪ್ಪಿಗಲ್ಲ, ಆರೋಗ್ಯಕ್ಕೆ. ದೇಶೀಯವಾಗಿ ಉಪ್ಪಿನ ಕೈಗಾರಿಕೆ ಬೆಳೆಯಬೇಕು ಹಾಗೂ ದೇಶದ ಅಗತ್ಯತೆಗಳು ಪೂರೈಕೆಯಾಗಬೇಕು ಎಂದು ಈ ಮಸೂದೆಯಲ್ಲಿರುವ ತತ್ವದ ಪ್ರಾಮಾಣಿಕ ಪ್ರಯತ್ನವನ್ನು ನಾನು ಒಪ್ಪುತ್ತೇನೆ. ಇದನ್ನು ಬಹಳ ಹಿಂದೆಯೇ ಮಾಡಬೇಕಿತ್ತು. ಈ ತತ್ವವನ್ನು ಒಪ್ಪದಿರುವ ಒಬ್ಬ ಸದಸ್ಯರಾದರೂ ಈ ಸದನದಲ್ಲಿರಬಹುದು ಅಂತ ನನಗನ್ನಿಸುವುದಿಲ್ಲ. ಆದರೆ ನಾನು ಆಕ್ಷೇಪಿಸುವುದು ಈ ಮಸೂದೆಯಲ್ಲಿನ ತೆರಿಗೆ ವಿಧಿಸುವ ಅಂಶವನ್ನು, ನೀವು ಬದುಕಿನ ಒಂದು ಅಗತ್ಯತೆಯನ್ನು ತೆರಿಗೆಗೆ ಒಳಪಡಿಸುತ್ತಿದ್ದೀರಿ. ಅದಕ್ಕೆ ನನ್ನ ಆಕ್ಷೇಪಣೆ. ಹೀಗೆ ಬದುಕಿನ ಅಗತ್ಯತೆಯ ಮೇಲೆ ತೆರಿಗೆ ವಿಧಿಸುವ ಸರ್ಕಾರ ಯಾವುದೇ ಆಗಿರಲಿ ಅದನ್ನು ಖಂಡಿಸಲೇ ಬೇಕಾಗುತ್ತದೆ.

ಮಾನ್ಯರೆ, ಭಾರತದ ಪೂಜ್ಯಪಿತ ಗಾಂಧೀಜಿಯವರು ಅಷ್ಟೇ ಗೌರವಾನ್ವಿತರಾದ ತಮ್ಮ ಅನುಯಾಯಿಗಳೊಂದಿಗೆ ಸೇರಿ ಸಾಮಾನ್ಯ ಜನರ ಪರವಾಗಿ ಈ ಅನ್ಯಾಯದ ತೆರಿಗೆಯ ವಿರುದ್ಧ ಯಾವ ಸತ್ಯಾಗ್ರಹ ಚಳುವಳಿ ನಡೆಸಿದರೋ. ಸಾಮಾನ್ಯ ಉಪ್ಪಿನ ಸಾಮಾನ್ಯ ಅಗತ್ಯತೆಯನ್ನು ಪೂರೈಸುವುದಕ್ಕಾಗಿ ಯಾವ ಚಳುವಳಿ ಸಾಮ್ರಾಜ್ಯಾಧಿಪತ್ಯದ ಬೇರುಗಳನ್ನೇ ಅಲುಗಾಡಿಸಿತೋ ಮತ್ತು ಉಪ್ಪಿನ ಮೇಲೆ ಅವರು ಹೊಂದಿದ್ದ ಸ್ವಾಮ್ಯವನ್ನು ನುಚ್ಚುನೂರು ಮಾಡಿತೋ, ಮತ್ತು ಸಹಸ್ರಾರು ಜನರಿಗೆ ತಮ್ಮ ವಿಮೋಚನೆ ಮತ್ತು ಸ್ವಾತಂತ್ರ್ಯದ ಅಭೀಪ್ಸೆಯನ್ನು ಈಡೇರಿಸಿಕೊಳ್ಳುವುದಕ್ಕೆ ಅಗತ್ಯವಾದಂತಹ ಒಂದು ಛತ್ರಛಾಯೆಯನ್ನು ಒದಗಿತೋ ಅಂತಹುದರ ಮೇಲೆಯೇ ಈ ಸರ್ಕಾರ ತೆರಿಗೆ ವಿಧಿಸಿರುವುದು ತೀರಾ ಅಸಮರ್ಥನೀಯ. ಮಾನ್ಯರೆ, ಅಂತಹ ಒಂದು ಮಹೋನ್ನತ ಚಳುವಳಿಯ ನೆನಪು ಇನ್ನೂ ಹಸಿರಾಗಿರುವಾಗ ಅದರಲ್ಲಿ ಭಾಗವಹಿಸಿದ ನೀತಿವಂತರೇ ಕೇವಲ

ಒಂದೆರಡು ದಶಕಗಳೊಳಗಾಗಿ ಈ ಸದನದ ವೇದಿಕೆಯಲ್ಲಿ ಅಂತಹ ತೆರಿಗೆಯನ್ನು ಸಮರ್ಥಿಸುವ ಮಸೂದೆಯನ್ನು ಮಂಡಿಸುವುದೆಂದರೆ ಮತ್ತು ಅಂತಹ ತೆರಿಗೆಗೆ ಒಂದು ಶಾಸನಬದ್ಧ ಆಧಾರವನ್ನು ಕೊಡುವುದಾದರೆ ಅದು ವಿಧಿಯ ವಿಪರ್ಯಾಸವೇ ಸರಿ.

ಈ ಮಸೂದೆಯ ಸಮರ್ಥನೆ ಏನೇ ಇರಲಿ, 95 ಲಕ್ಷ ರೂ.ಗಳನ್ನು ಸಂಗ್ರಹಿಸುವುದಕ್ಕಾಗಿ ಇಂತಹ ಒಂದು ನಾಮಮಾತ್ರವಾದ ತೆರಿಗೆಯನ್ನು ವಿಧಿಸದೆಯೇ ಈ ದೇಶೀಯ ಕೈಗಾರಿಕೆಯನ್ನು ಅಭಿವೃದ್ಧಿಪಡಿಸಲು ಈ ಸರ್ಕಾರಕ್ಕೆ ಸಾಧ್ಯವಿದೆ ಎಂದೇ ನಾನು ದೃಢವಾಗಿ ನಂಬುತ್ತೇನೆ. ಆದ್ದರಿಂದ ನಾನು ಈ ಮಸೂದೆಯನ್ನು ಆಹಾರದ ಅವಿಭಾಜ್ಯ ವಸ್ತುವಾದ ಮತ್ತು ಮನುಷ್ಯನ ಅಸ್ತಿತ್ವಕ್ಕೆ ಗಾಳಿ ನೀರಿನಷ್ಟೇ ಅಗತ್ಯವಾದ ಬದುಕಿನ ಒಂದು ಅತ್ಯಗತ್ಯ ವಸ್ತುವಿನ ಬಗ್ಗೆ ಹೇರಲಾದ ಅತ್ಯಂತ ಕ್ರೂರ ತೆರಿಗೆ ಎಂದೇ ಭಾವಿಸುತ್ತೇನೆ.

**ಆಚಾರ್ಯ ಕೃಪಲಾನಿ:(ಭಾಗಲ್ಪುರ ಹಾಗೂ ಪೂರ್ನಿಯಾ):-** ಗಾಳಿ ನೀರಿಗೂ ತೆರಿಗೆ ಹಾಕುತ್ತಾರೆ

**ಕುಮಾರಿ ಆ್ಯನಿ ಮಸ್ಕರೀನ್:-**ಏನು ಹೇಳಿದಿರೋ ನನಗೆ ಕೇಳಿಸಲಿಲ್ಲ.

**ಬಾಬು ರಾಮನಾರಾಯಣ್ ಸಿಂಗ್(ಹಜಾರಿಬಾಗ್ ಪಶ್ಚಿಮ):-** ಅದು ಮತ್ತೆ ಕೇಳಿಸುತ್ತದೆ ಇರಿ.

**ಕುಮಾರಿ ಆ್ಯನಿ ಮಸ್ಕರೀನ್:-**ನೀವು ಸುಮ್ಮನೆ ಕುಳಿತಿರುವುದನ್ನು ನೋಡಿದರೆ ನಿಮ್ಮ ಮೇಲೆ ಪೋಲ್ ಟ್ಯಾಕ್ಸ್ ಕೂಡ ಹಾಕಬೇಕು ಅನ್ನಿಸುತ್ತೆ.

ಈ ತೆರಿಗೆಗೆ ಒಂದು ಘಟನಾಪೂರ್ವ ಇತಿಹಾಸವಿದೆ. ಈ ಸದನದಲ್ಲಿ ಇರುವ ದೇಶಭಕ್ತರು ಮತ್ತು ಮಾನವತೆಯನ್ನು ಪ್ರೀತಿಸುವವರು ಭಾವನಾತ್ಮಕವಾಗಿ ಭಾಷಣ ಮಾಡುವಂತೆ ಇದು ಪ್ರೇರೇಪಿಸಿದೆ. ಭಾರೀ ಗಾತ್ರದ ಹಾಗೂ ಗಂಭೀರವಾದ ವರದಿಗಳು ಸಮಿತಿಗಳು ಹಾಗೂ ಏಕಸ್ವಾಮ್ಯವಾದಿಗಳ ಪರಿಶೀಲನೆಗೆ ಇದು ಒಳಪಟ್ಟಿದೆ. ಇಷ್ಟೆಲ್ಲ ಆದನಂತರ ಅದು ಈಗ ಮಣ್ಣಿನ ಮಕ್ಕಳ ಪವಿತ್ರ ಕೈಗಳಿಗೆ ದಕ್ಕಿದೆ.

ಈ ಪಕ್ಕದಲ್ಲಿ ಕುಳಿತಿರುವ ನನ್ನ ಸ್ನೇಹಿತರು ಹೇಳಿದರು- ಸಾಮಾನ್ಯ ಮನುಷ್ಯ ಉಪಯೋಗಿಸುವ ಉಪ್ಪಿನ ಪ್ರಮಾಣ ಬಹಳ ಕಡಿಮೆ ಎಂದು. ಅದು ಒಂದು ಆಣೆಯ ಹನ್ನೆರಡನೇ ಒಂದು ಭಾಗದಷ್ಟು ಮಾತ್ರ ಎಂದರು. ಆದರೆ ಉಪ್ಪಿನ ಬಳಕೆ ಸಾಮಾನ್ಯ ಮನುಷ್ಯನಿಗಷ್ಟೇ ಸೀಮಿತವಾಗಿಲ್ಲ. ಕೆಲವೊಂದು ಕುಂದುಕೊರತೆಗಳಿರುವ ಭಾರತದಂತಹ ದೇಶದಲ್ಲಿ ಅದಕ್ಕೆ ಬಹಳ ಪ್ರಾಮುಖ್ಯತೆಯಿದೆ. ವಿಶಿಷ್ಟ ಮಹತ್ವವಿದೆ. ಪಿಷ್ಠ ಮತ್ತು ಅಕ್ಕಿಯನ್ನೇ ಹೆಚ್ಚಾಗಿ ಅವಲಂಬಿಸಿರುವಂತಹ ನಮ್ಮಂತಹ ಬಡದೇಶದಲ್ಲಿ ಆರೋಗ್ಯದ ದೃಷ್ಟಿಯಿಂದ ಉಪ್ಪಿನ ತಲಾ ಬಳಕೆಯ ಅಗತ್ಯತೆ ಸಮಶೀತೋಷ್ಣ ಪ್ರದೇಶಗಳಲ್ಲಿರುವುದಕ್ಕಿಂತ ಹೆಚ್ಚು.

**ಡೆಪ್ಯುಟಿ ಸ್ಪೀಕರ್:-**ಉಪ್ಪಿನ ತೆರಿಗೆ ಕುರಿತು ಈ ಸಾಮಾನ್ಯ ವಿಚಾರಗಳೆಲ್ಲ ಹೇಳಬೇಕೆ? ಎಲ್ಲರಿಗೂ ಇದು ಗೊತ್ತಿದೆ.

**ಕುಮಾರಿ ಆ್ಯನಿ ಮಸ್ಕರೀನ್:-**ಆದ್ದರಿಂದ ನಾನು ಸರ್ಕಾರಕ್ಕೆ ಈ ಅಂಶವನ್ನು ಮನವರಿಕೆ

ಮಾಡಿಕೊಡುತ್ತಿದ್ದೇನೆ. ಇಲ್ಲಿ ತೆರಿಗೆಯನ್ನು ಬಡ ಮನುಷ್ಯನ ಮೇಲೆ ಹೇರಲಾಗಿದೆ. ಬಡವನು ಸಂಪೂರ್ಣವಾಗಿ ಪಿಷ್ಠಾಹಾರವನ್ನೇ ಅವಲಂಬಿಸಿದವನು. ಆದ್ದರಿಂದ ಶ್ರೀಮಂತನಿಗಿಂತ ಅವನ ಮೇಲೇ ಈ ತೆರಿಗೆಯ ಹೊರೆ ಹೆಚ್ಚು ಬೀಳುತ್ತದೆ. ಅದರ ಲಾಭ ಶ್ರೀಮಂತನಿಗೆ ಸಿಗುತ್ತದೆ. ಉಪ್ಪು ಕೇವಲ ಆಹಾರಕ್ಕೆ ಮಾತ್ರವೇ ಅಗತ್ಯವಲ್ಲ. ಅದನ್ನು ಕೈಗಾರಿಕಾ ಉದ್ದೇಶಗಳಿಗೂ ಬಳಸಲಾಗುತ್ತದೆ. ಪ್ರಾಣಿಗಳಿಗೂ, ಜಾನುವಾರುಗಳಿಗೂ ಉಪ್ಪಿನ ಅವಶ್ಯಕತೆಯಿದೆ. ಕೈಗಾರಿಕೆಗಳು ಉಪ್ಪನ್ನು ಬಳಸುತ್ತವೆ. ಹೀಗೆ ಜಗತ್ತಿನಾದ್ಯಂತ ಬದುಕಿನಲ್ಲಿ ಹಾಗೂ ವ್ಯವಹಾರದಲ್ಲಿ ಅನೇಕ ವಿಧಗಳಲ್ಲಿ ಬಳಸಲಾಗುತ್ತದೆ. ನಮ್ಮ ದೇಶದಲ್ಲಿ ಪಶು ಸಾಕಣೆಗೆ ಉಪ್ಪು ಅಗತ್ಯವಾಗುತ್ತದೆ. ಬ್ರಿಟಿಷರ ಆಳ್ವಿಕೆಯಲ್ಲಿ ಬಂಗಾಳ ಪ್ರಾಂತದಲ್ಲಿ ಉಪ್ಪಿನ ಮೇಲೆ ಭಾರೀ ತೆರಿಗೆ ಹೇರಿದಾಗ ಆ ರಾಜ್ಯದ ಪ್ರಾಣಿಗಳ ಗಾತ್ರ ಕುಗ್ಗುವುದರ ಮೂಲಕ ಅದರ ದುಷ್ಪರಿಣಾಮ ವ್ಯಕ್ತವಾಯಿತು. ಇಂದು ನಮ್ಮ ಕೈಗಾರಿಕೆಯಲ್ಲಿರುವುದೆಲ್ಲ Applied chemistry. ಸೋಡಿಯಂ, ಹೈಡ್ರೋಕ್ಲೋರಿಕ್ ಆಸಿಡ್ ಹಾಗೂ ಕ್ಲೋರೈಡ್ ಇವೆಲ್ಲ ಮೂಲತಃ ಉಪ್ಪುಗಳೇ. ನಮ್ಮ ವಾಣಿಜ್ಯ ಹಾಗೂ ವ್ಯಾಪಾರದ ಬಹುಪಾಲು ಅಂಶ ಇವೇ ಆಗಿವೆ. ಬ್ರಿಟಿಷರ ಕಾಲದಲ್ಲಿ ಉಪ್ಪನ್ನು ಆಮದು ಮಾಡಿಕೊಳ್ಳುವ ವಿಚಾರದ ಬಗ್ಗೆ ಈ ಸದನದಲ್ಲಿ ಚರ್ಚೆಯಾಯಿತು ಮತ್ತು ದೇಶೀಯವಾಗಿ ಉಪ್ಪನ್ನು ತಯಾರಿಸುವುದು ಚರ್ಚಾಸ್ಪದ ಪ್ರಶ್ನೆಯಾಗಿತ್ತು. ನಾನು ಈ ಮಸೂದೆಯ ತತ್ವವನ್ನು ಒಪ್ಪುತ್ತೇನಾದರೂ ಇದು ಹೊರೆಯನ್ನು ಇನ್ನು ಹೊರಲಾಗದಂತೆ ಮಾಡುವ ಕ್ರಮವಾಗಿದೆ.

ತೆರಿಗೆಯ ಹೊರೆ ಪ್ರತಿನಿತ್ಯ ಏರುತ್ತಿದೆ. ಈ ಸದನದಲ್ಲಿಯೇ ನಾವು ನೋಡಿದಂತೆ ಈ ಅಧಿವೇಶನದಲ್ಲಿ ಮತ್ತು ಹಿಂದಿನ ಅಧಿವೇಶನದಲ್ಲಿ ಇದರ ಮೇಲೆ ಅದರ ಮೇಲೆ ಎಂದು ಮೇಲ್ತೆರಿಗೆಗಳನ್ನು ಹಾಕುವ ಮಸೂದೆಗಳು ಮಂಡನೆಯಾಗುತ್ತಲೇ ಇವೆ. ಇದು ಬಜೆಟ್‌ನಲ್ಲಿ ಪ್ರಸ್ತಾಪಿಸಿರುವುದಕ್ಕಿಂತ ಅಧಿಕವಾಗಿದೆ. ಆದ್ದರಿಂದ ನಾನು ಹಣಕಾಸು ಮಂತ್ರಿಗಳಿಗೆ ಹೇಳುವುದೇನೆಂದರೆ (ಇನ್ನೊಬ್ಬ ಸದಸ್ಯರು: "ಸಚಿವರು ಇಲ್ಲಿಲ್ಲ") ಹೌದು ಇಂತಹ ಪ್ರಶ್ನೆಗಳು ಬಂದಾಗ ಅವರು ಇಲ್ಲಿರುವುದಿಲ್ಲ. ಒಂದು ದೇಶೀಯ ಕೈಗಾರಿಕೆಯನ್ನು ಬೆಳೆಸುವುದಕ್ಕಾಗಿ ಸಾಮಾನ್ಯ ಮನುಷ್ಯನ ಮೇಲೆ ತೆರಿಗೆಯನ್ನು ಹೊರಿಸುವುದು ರಾಷ್ಟ್ರೀಯ ಆದಾಯವನ್ನು ಸಮಾನವಾಗಿ ಹಂಚುವ ನ್ಯಾಯವಾದ ವಿಧಾನವಲ್ಲ ಎಂದು ಅವರಿಗೆ ಹೇಳಬಯಸುತ್ತೇನೆ. ಇದು ಸಮಾಜದ ಸತ್ವವನ್ನೇ ಬಸಿದುಹಾಕುತ್ತದೆ, ಅದರ ಉಳಿಯುವಿಕೆಯನ್ನೇ ಅಸಾಧ್ಯಗೊಳಿಸುತ್ತದೆ. ಒಂದು ವೇಳೆ ಯುದ್ಧದ ಸಮಯದಲ್ಲಿ ಅಥವಾ ನೀರಾವರಿ ಕಾಲುವೆಗಳನ್ನು, ಸಂಪರ್ಕ ರೈಲ್ವೆಗಳನ್ನು ನಿರ್ಮಿಸುವ ಸಂದರ್ಭದಲ್ಲಿ ಈ ತೆರಿಗೆ ವಿಧಿಸಿದ್ದರೆ ಒಪ್ಪಬಹುದಾಗಿತ್ತು. ಆದರೆ ಇದು ಶಾಂತಿಯ ಕಾಲ, ತೆರಿಗೆಯನ್ನು ವಿಧಿಸದೆಯೇ ಈ ಕೈಗಾರಿಕೆಯನ್ನು ಬೆಳೆಸುವಂತೆ ರಾಷ್ಟ್ರದ ಆದಾಯವನ್ನು ವಿತರಿಸಬೇಕು.

ಈ ಕೈಗಾರಿಕೆಯನ್ನು ಸಂಪೂರ್ಣವಾಗಿ ರಾಷ್ಟ್ರೀಕರಿಸಬೇಕು. ತೆರಿಗೆಯ ಸ್ವಲ್ಪ ಭಾಗವನ್ನು ಖಾಸಗಿ ವಲಯಕ್ಕೆ ಕೊಡಬಾರದು ಎಂದು ಹೇಳಬಯಸುತ್ತೇನೆ. ಖಾಸಗಿ ವಲಯದಲ್ಲಿ ಹಣ ಹೂಡಿದ ಅನುಭವ ನಮಗೀಗಾಲೇ ಆಗಿದೆ. ಖಾಸಗಿಯವರು ಅದನ್ನು ಲಾಭಗಳಿಕೆಗೆ ಬಳಸುಕೊಳ್ಳುತ್ತಾರೆ, ಹಣಕಾಸು ಇಲ್ಲ ಎಂದು ದೂರುತ್ತಾರೆ. ಅಲ್ಲದೆ ಈ ದೇಶದಲ್ಲಿ ಪೋಲಾಗುತ್ತಿರುವ ಹಣದ ಬಗ್ಗೆ ಏನು ಹೇಳೋಣ? ನಮಗೆ ಏನೇನೂ ಉಪಯೋಗವಿಲ್ಲದ ಸಲಕರಣೆಗಳನ್ನು ಯು.ಕೆ. ಮತ್ತು ಯುಎಸ್‌ಎ ಗಳಿಂದ ತರಿಸಿರುವ ವಿಷಯವನ್ನು ಆ ದಿನ ಆಹಾರ ಸಚಿವರು

ಹೇಳುತ್ತಿದ್ದರು. ಅವುಗಳನ್ನು ಇನ್ನೂ ಬಳಸಿಲ್ಲ. ಈ ರೀತಿಯಾಗಿ ಬಹಳಷ್ಟು ಹಣ ವ್ಯರ್ಥವಾಗುತ್ತಿದೆ. ಜನರ ಮೇಲೆ ಹೆಚ್ಚು ಹೆಚ್ಚು ತೆರಿಗೆಗಳ ಹೊರೆಯನ್ನು ತಪ್ಪಿಸಿ, ಬಡಮನುಷ್ಯನಿಗೆ ಹೆಚ್ಚು ರಿಯಾಯಿತಿಗಳನ್ನು ಕೊಡುವುದು ಸಾಧ್ಯವಾಗುವಂತೆ ಮೇಲಿನ ಹಂತದ ಭಾರೀ ಆಡಳಿತ ವೆಚ್ಚಗಳಲ್ಲಿ ಮಿತವ್ಯಯ ಸಾಧಿಸಬೇಕು. ಈ ಹಂತದಲ್ಲಿ ಈ ಕೈಗಾರಿಕೆಯನ್ನು ರಾಷ್ಟ್ರೀಕರಿಸುವುದೇ ಅತ್ಯಂತ ಅಪೇಕ್ಷಣೀಯವಾದ ಕ್ರಮ. ಈ ಕೈಗಾರಿಕೆಯನ್ನು ಅಭಿವೃದ್ಧಿಪಡಿಸುವುದಕ್ಕಾಗಿ ಬಡಮನುಷ್ಯ ತೆರಿಗೆ ತೆರಲು ಮುಂದಾಗುತ್ತಾನೆ ಎಂಬುದೇನೋ ನಿಜ. ಆದರೆ ಈ ಕೈಗಾರಿಕೆಯ ಅಭಿವೃದ್ಧಿಯಾದ ನಂತರ ಅವನು ತೆರಿಗೆ ರಹಿತ ಉಪ್ಪನ್ನೇ ನಿರೀಕ್ಷಿಸುತ್ತಾನೆ. ಈ ಮಾತುಗಳೊಂದಿಗೆ ನಾನು ಈ ತೆರಿಗೆ ವಿಧಿಸಿರುವುದನ್ನು ವಿರೋಧಿಸುತ್ತೇನೆ.

ಡಾ. ಎನ್.ಬಿ. ಖಾರೆ:- ಮಾನ್ಯರೆ, ನಾನು ಈ ಮಸೂದೆಯನ್ನು ಬೆಂಬಲಿಸುತ್ತೇನೆ ಎಂದು ಹೇಳಿದರೆ ನಿಮಗೆ ಆಶ್ಚರ್ಯವಾಗಬಹುದು. ಉಪ್ಪಿನ ಮೇಲೆ ತೆರಿಗೆ ಯಾಕೆ ವಿಧಿಸಕೂಡದು ಎಂಬ ಬಗ್ಗೆ ತಿರುವಾಂಕೂರಿನ ಮಹಿಳಾ ಸದಸ್ಯೆ ವಿಸ್ತಾರವಾಗಿ ಹೇಳಿದ್ದಾರೆ ಇದು ಬದುಕಿನ ಅತ್ಯಾವಶ್ಯ ವಸ್ತು ಎಂದು ಅವರು ಹೇಳಿದರು. ಅವರು ನೀರು ಅತ್ಯವಶ್ಯ, ಗಾಳಿ ಅತ್ಯವಶ್ಯ ಎಂದೂ ಹೇಳಿದರು. ಅವುಗಳಿಗೆ ತೆರಿಗೆ ಹಾಕದಿರುವುದರಿಂದ ಉಪ್ಪಿಗೂ ತೆರಿಗೆ ಹಾಕಬಾರದು ಎಂದರು. ಮಾನ್ಯರೆ ನೀರಿಗೆ ತೆರಿಗೆ ಇದೆ, ಅದರ ವೆಚ್ಚವನ್ನು ನಾವು ಕೊಡುತ್ತಿದ್ದೇವೆ. ಗಾಳಿಯ ಮೇಲೂ ತೆರಿಗೆಯಿದೆ.

ಆಚಾರ್ಯ ಕೃಪಲಾನಿ:-ಹೌದು, ಡಾಕ್ಟರು ಆಕ್ಸಿಜನ್ ನೀಡಿದಾಗ.

ಡಾ. ಎನ್.ಬಿ. ಖಾರೆ:- ಹವಾನಿಯಂತ್ರಿತ ರೈಲ್ವೆ ಕಂಪಾರ್ಟ್‌ಮೆಂಟುಗಳಲ್ಲಿ ಗಾಳಿಗೆ ತೆರಿಗೆ ಇರುತ್ತದೆ. ಮೊದಲು, ತೆರಿಗೆಯನ್ನು ತೆಗೆದುಹಾಕಬೇಕು ಎಂದು ಹೋರಾಡಿದರೇ ಈಗ ಈ ತೆರಿಗೆ ಮಸೂದೆಯನ್ನು ಜಾರಿಗೆ ತರುತ್ತಿದ್ದಾರೆ ಎಂದು ಹೇಳಿ ಸರ್ಕಾರದ ವಿರೋಧಾಭಾಸದ ನಡವಳಿಕೆಯ ಬಗ್ಗೆಯೂ ಅವರು ತೀವ್ರವಾಗಿ ಟೀಕಿಸಿದರು. ಆದರೆ ಆಕೆ ಒಂದು ವಿಷಯ ಮರೆತರು. ಮೊದಲು ಅವರು ಪ್ರತಿಭಟನಾಕಾರರಾಗಿದ್ದರು, ಈಗ ಅವರು ಆಡಳಿತಗಾರರಾಗಿದ್ದಾರೆ. ಪ್ರತಿಭಟನಾಕಾರಿಗೂ ಆಡಳಿತಗಾರನಿಗೂ ಬಹಳ ವ್ಯತ್ಯಾಸವಿದೆ. ನೀವು ಮಹಾತ್ಮಾಜಿಯವರನ್ನೂ, ದೇಶದ ಪಿತನನ್ನೂ, ಅವರು ನಡೆಸಿದ ಸತ್ಯಾಗ್ರಹವನ್ನು ಮರೆತಿದ್ದೀರಿ ಎಂದು ಆಕೆ ಹೇಳಿದರು. ನಾನು ಕೂಡ ಆ ಸತ್ಯಾಗ್ರಹದಲ್ಲಿ ಭಾಗವಹಿಸಿದ್ದೆ ಮತ್ತು ಸಂದೇಹವೇ ಇಲ್ಲ, ಜೈಲಿಗೂ ಹೋದೆ. ಆದರೂ ಕೂಡ ನಾನು ಈ ಮಸೂದೆಯನ್ನು ಬೆಂಬಲಿಸುತ್ತೇನೆ. ಅದಕ್ಕೆ ಒಂದೇ ಒಂದು ಕಾರಣವಿದೆ. ಆದರ್ಶವಾದ ಹಾಗೂ ವ್ಯಾವಹಾರಿಕವಲ್ಲದ ಹಿಂದಿನ ಬದ್ಧತೆಗಳನ್ನೆಲ್ಲ ಮರೆಯುವಂಥ ಕಾಲ ಈಗ ಬಂದಿದೆ. ಈಗ ಹೀಗೆ ಮಾಡುವುದೇ ಹೆಚ್ಚು ಅನುಕೂಲಕರ. ಇದು ಗಾಂಧೀವಾದದ ತತ್ವಗಳಿಗೆ ವಿರುದ್ಧವಾಗಿರುವುದರಿಂದಲೇ ಈ ಮಸೂದೆಯನ್ನು ನಾನು ಬೆಂಬಲಿಸುತ್ತೇನೆ.

ಶ್ರೀ ಭಗವತ್ ಝಾ (ಪೂರ್ನಿಯಾ ಹಾಗೂ ಸಂತಾಲ್‌ಪರ್‌ಗಣ):-ನಯಾ ಮುಲ್ಲಾ ಪಾಂಚ್ ಬಾರ್ ನಮಾಜ್ ಪಡ್‌ತಾ ಹೈ.

ಶ್ರೀ ಕೆ.ಸಿ. ರೆಡ್ಡಿ:-ಮಾನ್ಯ ಸಭಾಧ್ಯಕ್ಷರೇ, ಈ ಮಸೂದೆಯ ಬಗ್ಗೆ ಒಟ್ಟಾರೆ ಸ್ವಾಗತ ವ್ಯಕ್ತವಾಗಿರುವುದಕ್ಕೆ ನನಗೆ ನಿಜಕ್ಕೂ ಸಂತೋಷವಾಗಿದೆ. ಡಾ. ಎನ್.ಬಿ. ಖಾರೆಯವರು ಮಾತಾನಾಡುವ ಮೊದಲು ನಾನು ತಿರುವಾಂಕೂರಿನ ಮಹಿಳಾ ಸದಸ್ಯರು ಮಾಡಿದ ಟೀಕೆಗಳಿಗೆ ಮಾತ್ರ ಉತ್ತರಿಸಬೇಕೆಂದಿದ್ದೆ.ಈ ಮಸೂದೆಯ ಬಗ್ಗೆ ತೀರ ಖಂಡನಾರ್ಹವಾದಂತಹ ಮಾತುಗಳನ್ನು ಹೇಳಿದ ಹಿರಿಮೆ ಹಾಗೂ ವಿಶಿಷ್ಟತೆಗೆ ಅವರು ಪಾತ್ರರಾಗಿದ್ದಾರೆ. ಆದರೆ ಅಷ್ಟರಲ್ಲಿ ನನ್ನ ಸ್ನೇಹಿತ ಡಾ.ಖಾರೆಯವರು ಒಂದು ರೀತಿಯಲ್ಲಿ ನನ್ನ ರಕ್ಷಣೆಗೆ ಬಂದು ಮಾನ್ಯ ಸದಸ್ಯರುಗಳ ಅಭಿಪ್ರಾಯಗಳನ್ನು ಟೀಕಿಸಿದ್ದಾರೆ.

ಶ್ರೀ ಅಲ್ಗುರಾಯ್ ಶಾಸ್ತ್ರಿ (ಅಜಮಘರ್ ಜಿಲ್ಲೆ-ಪೂರ್ವ ಹಾಗೂ ಬ್ಯಾಲಿಯಾ ಜಿಲ್ಲೆ-ಪಶ್ಚಿಮ):- ಇಲ್ಲಿ ಅವರು ಅದಕ್ಕೆ ಕೊಟ್ಟ ಕಾರಣಗಳೇ ಬೇರೆ.

ಸಭಾಧ್ಯಕ್ಷರು:- ಆ ಮಾತುಗಳನ್ನು ಹೇಗೆ ವ್ಯಾಖ್ಯಾನಿಸಬೇಕು ಎಂಬುದು ಸಚಿವರಿಗೇ ಸೇರಿದ್ದು.

ಶ್ರೀ ಕೆ.ಸಿ. ರೆಡ್ಡಿ:- ಡಾ.ಖಾರೆ ಅವರ ವಿಷಯ ಹೇಳುವುದಾದರೆ ಇದು 'Save me from my friends' ಅನ್ನುವಂತಹ ಸಂದರ್ಭವಾಯಿತು. ಅವರು ಈ ಮಸೂದೆಯನ್ನು ಬೆಂಬಲಿಸುವ ಹಾಗೂ ಮಹಿಳಾ ಸದಸ್ಯರ ವಾದವನ್ನು ಖಂಡಿಸುವ ಹೆಸರಿನಲ್ಲಿ ಸರ್ಕಾರವು ಹಳೆಯ ಬದ್ಧತೆಗಳನ್ನು ಮರೆತು ಹೊಸ ನೀತಿಗಳನ್ನು ಅನುಸರಿಸಲಿ ಎಂದು ಹೇಳಿದರು. ಆದರೆ ಬದ್ಧತೆಯ ಮತ್ತು ಪ್ರಮುಖ ವಿಷಯ ಧೋರಣೆಗಳಿಗೆ ಸಂಬಂಧಿಸಿದಂತೆ ಅವುಗಳನ್ನು ಮರೆಯುವ ಉದ್ದೇಶವಾಗಲೀ, ಹಾಗೂ ಕೂಲಂಕಷವಾಗಿ ಪರಿಶೀಲಿಸಿದಂತಹ ತತ್ವಗಳಿಂದ ದೂರ ಸರಿಯುವ ಉದ್ದೇಶವಾಗಲೀ ಈ ಸರ್ಕಾರಕ್ಕಿಲ್ಲ ಎಂಬುದನ್ನು ಮೊದಲೇ ಸ್ಪಷ್ಟಪಡಿಸುತ್ತೇನೆ. ಇದನ್ನು ಯಾಕೆ ಹೇಳುತ್ತಿದ್ದೇನೆಂದರೆ ಈ ಮಸೂದೆಯನ್ನು ಜಾರಿಗೆ ತರುವ ಮೂಲಕ ನಾವು ಹೊಸ ನೀತಿಯನ್ನು ಅನುಸರಿಸ ಹೊರಟಿದ್ದೇವೇನೋ ಎಂಬ ಅಭಿಪ್ರಾಯ ಕೆಲವು ಸದಸ್ಯರಲ್ಲಿ ಮೂಡಿದಂತಿದೆ. ನಾವು ಯಾವುದೇ ಹೊಸ ನೀತಿಯನ್ನು ಅನುಸರಿಸುತ್ತಿಲ್ಲ ಮತ್ತು ಇರುವ ನೀತಿಯನ್ನು ಯಾವುದೇ ರೀತಿಯಲ್ಲಿ ವ್ಯತ್ಯಾಸ ಮಾಡುತ್ತಿಲ್ಲ ಎಂಬ ಅಂಶವನ್ನು ಚರ್ಚೆ ನಡೆಯುತ್ತಿರುವಾಗ ನಾನು ಸ್ಪಷ್ಟಪಡಿಸಿದ್ದೇನೆ. ಈಗ ಪ್ರಸ್ತಾಪಿಸಿರುವುದು ಕೇವಲ ವಿಧಾನಾತ್ಮಕವಾದ ಬದಲಾವಣೆ ಮಾತ್ರ, ಮಾನ್ಯ ಸದಸ್ಯರು ರಾಷ್ಟ್ರ ನಾಯಕ ಮಹಾತ್ಮಜಿಯವರ ಹೆಸರನ್ನು ಹೇಳಿ ನಾವು ಅವರ ನೆನಪನ್ನು ಹಾಗೂ ನಾಯಕತ್ವವನ್ನು ಮರೆಯುವಂತಹ ಕೆಲಸ ಮಾಡುತ್ತಿದ್ದೇವೆ ಎಂಬ ಅರ್ಥದಲ್ಲಿ ಹೇಳಿದರು. ಹಿಂದೆ ಏನಾಯಿತು ಮತ್ತು ಗಾಂಧಿ ಇರ್ವಿನ್ ಒಪ್ಪಂದದ ಸರಿಯಾದ ಅಂಶಗಳೇನು ಎಂಬುದನ್ನು ನೆನಪಿಸಬಹುದೆ? ಈ ಒಪ್ಪಂದದ ಆ ಭಾಗವನ್ನು ದಯವಿಟ್ಟು ಓದಬೇಕೆಂದು ಮಾನ್ಯ ಸದಸ್ಯರಿಗೆ ತಿಳಿಸ ಬಯಸುತ್ತೇನೆ. ತಮ್ಮ ಗ್ರಾಮದ ಸುತ್ತ ಮುತ್ತಲಿನ ಪ್ರದೇಶಗಳಲ್ಲಿ ಉಪ್ಪನ್ನು ತಯಾರಿಸುವ ಹಕ್ಕನ್ನು ಈ ಒಪ್ಪಂದವು ಗ್ರಾಮ ನಿವಾಸಿಗಳಿಗೆ ನೀಡುತ್ತದೆ ಮತ್ತು ಗ್ರಾಮಸ್ಥರು ತಯಾರಿಸಿದ ಉಪ್ಪನ್ನು ತಮ್ಮ ಗೃಹ ಬಳಕೆಗೆ ಬಳಸಬೇಕೇ ಹೊರತು ಮಾರಾಟ ಮಾಡಕೂಡದು ಎಂದು ಈ ಒಪ್ಪಂದವು ನಿಗದಿಸಿದೆ.

1947 ರಲ್ಲಿ ಭಾರತ ಸರ್ಕಾರವು ಈ ಒಪ್ಪಂದಕ್ಕಿಂತ ಬಹಳ ಮುಂದೆ ಹೋಗಿ ಜನರಿಗೆ ಕೆಲವೊಂದು ರಿಯಾತಿಗಳನ್ನು ನೀಡಿತು. ಈ ರಿಯಾತಿಗಳು ಯಾವುವು? 10 ಎಕರೆ ಮತ್ತು ಅದಕ್ಕಿಂತ ಕಡಿಮೆ ಇರುವ ಪ್ರದೇಶದಲ್ಲಿ ಜನರು ಯಾವುದೇ ಲೈಸೆನ್ಸ್ ಇಲ್ಲದೆ ಉಪ್ಪನ್ನು ತಯಾರಿಸಬಹುದು ಇಂಥವರಿಗೆ ಲೈಸೆನ್ಸ್ ಇರುವ ತಯಾರಕರಿಗೆ ಅನ್ವಯಿಸುವಂತಹ ಯಾವುದೇ

ನಿರ್ಬಂಧ, ನಿಯಂತ್ರಣ ಅಥವಾ ನಿಯಮವು ಅನ್ವಯಿಸುವುದಿಲ್ಲ. ಹೀಗೆ ತಯಾರಿಸಲಾದ ಉಪ್ಪನ್ನು ತಮ್ಮ ಪ್ರದೇಶದೊಳಗೆ ತಮ್ಮ ಸ್ವಂತ ಬಳಕೆಗೆ ಬಳಸುವುದಷ್ಟೇ ಅಲ್ಲದೆ ಇತರ ಸ್ಥಳಗಳಲ್ಲಿ ಮಾರಾಟಕ್ಕೆ ಬಳಸಬಹುದು. ಇದು ಮೊದಲಿದ್ದ ಒಪ್ಪಂದಕ್ಕೂ ಈಗಿನ ನಿಯಮಕ್ಕೂ ಇರುವ ಪ್ರಮುಖ ವ್ಯತ್ಯಾಸ. ನನ್ನ ಅಭಿಪ್ರಾಯದಲ್ಲಿ ಇದು ಗಾಂಧಿ ಇರ್ವಿನ್ ಒಪ್ಪಂದದಿಂದ ಅತಿ ಎನಿಸುವಷ್ಟು ವ್ಯತ್ಯಾಸವಾಯಿತೇನೋ ಅನಿಸುತ್ತದೆ. ಆದ್ದರಿಂದ ಮಾನ್ಯ ಸದಸ್ಯರು ಹಿಂದಿನ ಚರಿತ್ರೆಯನ್ನು ಪುನರಾವಲೋಕಿಸಿದ್ದೇ ಆದರೆ ಖಂಡಿತವಾಗಿಯೂ ಅವರು ತಮ್ಮ ಅಭಿಪ್ರಾಯವನ್ನು ಬದಲಾಯಿಸಿಕೊಳ್ಳುತ್ತಾರೆ ಎಂಬ ಭರವಸೆ ನನಗಿದೆ. ಮತ್ತು ಸರ್ಕಾರವು ಗಾಂಧೀಜಿಯವರ ಪವಿತ್ರ ಸ್ಮರಣೆಗೆ ಯಾವುದೇ ಧಕ್ಕೆ ತರದೆ ಆ ಸ್ಮರಣೆಯನ್ನು ಅತ್ಯುತ್ತಮವಾದ ರೀತಿಯಲ್ಲಿ ಉಳಿಸಿಕೊಂಡು ಬರುವ ಕೆಲಸವನ್ನು ಮಾಡಿದೆ ಎಂದು ಸರ್ಕಾರವನ್ನು ಅಭಿನಂದಿಸುವ ಉದಾರತೆ ತೋರುತ್ತಾರೆ ಎಂದು ಹೇಳಬಹುದೆ?

ಆಚಾರ್ಯ ಕೃಪಲಾನಿ:–ಸರ್ಕಾರವು ಉದಾರತೆ ತೋರುವುದಿಲ್ಲವೆ?

ಶ್ರೀ ಕೆ.ಸಿ. ರೆಡ್ಡಿ :– ನಾನು ನನ್ನ ಅಭಿಪ್ರಾಯಗಳ ಪ್ರಾರಂಭದಲ್ಲಿ ಉಲ್ಲೇಖಿಸಿದಂತಹ ಭಾವನೆಗಳನ್ನು ಈ ಚರ್ಚೆ ಮೂಡಿಸಿ ಬಿಡುವ ಸಾಧ್ಯತೆ ಇದೆ ಎಂಬುದಕ್ಕಾಗಿಯೇ ನಾನು ಈ ವಿಷಯವನ್ನು ಸ್ವಲ್ಪ ದೀರ್ಘವಾಗಿಯೇ ಪ್ರಸ್ತಾಪಿಸಬೇಕಾಯಿತು. ಪ್ರಸ್ತುತ ಮಾನ್ಯ ಸದಸ್ಯೆಯವರಷ್ಟೇ ಅಲ್ಲ, ಈ ಸದನದ ಮತ್ತೊಬ್ಬ ಮಹಿಳಾ ಸದಸ್ಯೆಯವರು ಸಹ ಈ ಮಸೂದೆಯನ್ನು ಮಂಡಿಸಿದ ಕೂಡಲೇ ತುಂಬ ವಿಚಲಿತಗೊಂಡರು. ನಾವು ಗಾಂಧಿ ಇರ್ವಿನ್ ಒಪ್ಪಂದಕ್ಕೆ ಧಕ್ಕೆ ತರುವಂಥ ಕೆಲಸವನ್ನೇನಾದರೂ ಮಾಡುತ್ತಿದ್ದೇವೆಯೇ ಮತ್ತು ಈ ಹಿಂದೆ ಉಪ್ಪಿನ ಸುಂಕಕ್ಕೆ ಸಂಬಂಧಿಸಿದಂತೆ ನಾವು ಕೈಗೊಂಡಕ್ರಮ ಅಥವಾ ನಿರ್ಧರಿಸಿದ ನೀತಿಯನ್ನು ಉಲ್ಲಂಘಿಸುವಂಥದ್ದೇನಾದರೂ ಮಾಡುತ್ತಿದ್ದೇವೆಯೇ ಎಂದು ನನ್ನನ್ನು ಪ್ರಶ್ನಿಸಿದರು. ನಾವು ಅಂಥದ್ದೇನೂ ಮಾಡುತ್ತಿಲ್ಲ ಮತ್ತು ನಾನು ಅವರಾಡಿದ ಮಾತುಗಳಲ್ಲಿಯೇ ಹೇಳಿದಂತೆ ಉಪ್ಪಿನ ಸುಂಕವನ್ನು ತೆಗೆದು ಹಾಕಿದ ಸಂದರ್ಭಗಳಲ್ಲಿಯೇ ನಿರ್ಧರಿಸಲಾದಂತೆ ಅತ್ಯಂತ ಅಲ್ಪ ಪ್ರಮಾಣದ ಮೇಲ್ತೆರಿಗೆಯನ್ನು ವಸೂಲಿಮಾಡುವುದಕ್ಕೆ ಒಂದು ಶಾಸನಬದ್ಧ ಆಧಾರವನ್ನಷ್ಟೇ ಕಲ್ಪಿಸುತ್ತಿದ್ದೇವೆ ಎಂದು ಖಚಿತಪಡಿಸಿದೆ. ಆದ್ದರಿಂದ ಮಾನ್ಯರೆ, ಈ ಮಸೂದೆಯ ಸೀಮಿತ ವ್ಯಾಪ್ತಿ ಇಷ್ಟು.

ಒಂದು ರೀತಿ ನನಗೆ ಸ್ವಲ್ಪ ಅನಾನುಕೂಲವಾಗಿದೆ. ಈ ಮಸೂದೆಯ ಮೇಲಿನ ಚರ್ಚೆ ಇದರ ಕಾನೂನಾತ್ಮಕ ಅಂಶ ಹಾಗೂ ಸಂವಿಧಾನಾತ್ಮಕ ಅಂಶವೇನಾದರೂ ಇದ್ದರೆ ಅದಕ್ಕೆ ಮಾತ್ರ ಸೀಮಿತವಾಗಿರಬಹುದು ಎಂದು ಆಲೋಚಿಸಿದೆ. ಇಡೀ ಆಡಳಿತದ (ಉಪ್ಪಿನ ಆಡಳಿತ) ವಿಷಯವನ್ನು ಪ್ರಸ್ತಾಪಿಸಲಿಕ್ಕಿಲ್ಲ ಎಂದು ಅಂದುಕೊಂಡಿದ್ದೆ. ಎಂದಿನಂತೆ ಮಾನ್ಯ ಸ್ನೇಹಿತ ಡಾ. ಲಂಕಾಸುಂದರಂ ಅವರು ತಮಗೆ ಬಂದ ಪತ್ರಗಳಿಂದ ಸಂದರ್ಭಗಳನ್ನೂ ಉದ್ಧರಣಗಳನ್ನೂ ಉಲ್ಲೇಖಿಸಿದರು. ಅವರಿಗೆ ಅದು ಬಹಳ ಪ್ರಿಯವಾದ ವಿಷಯ. ಇಂತಹ ವಿಧಾನದಿಂದ ತಮ್ಮ ವಾದವನ್ನು ಬಲಪಡಿಸಬಹುದು ಎಂದು ಅವರು ಭಾವಿಸಿದ್ದಾರೆ.

ಡಾ. ಲಂಕಾ ಸುಂದರಂ:– ನಿಮಗೆ ಸಾಧ್ಯವಾದರೆ ಅದನ್ನು ದುರ್ಬಲಗೊಳಿಸಿ.

**ಕೆ.ಸಿ. ರೆಡ್ಡಿ:-** ಅವರ ಭಾಷಣದ ಬಹು ಭಾಗವು ಹಿಂದೆ ಮತ್ತು ಈಗ ನಡೆಯುತ್ತಿರುವ ಸಂಗತಿಗಳನ್ನು ಅಗೆದು ತೆಗೆಯುವುದಕ್ಕೆ ಸೀಮಿತವಾಗಿತ್ತು. ಈ ಸಂಗತಿ ಹಾಗೂ ಕೊಟೇಶನ್‌ಗಳನ್ನು ಆಧರಿಸಿ ಅವರು ಒಂದು ಸೌಧವನ್ನು ನಿರ್ಮಿಸಲು ಬಯಸಿದ್ದರು. ಲೈಸೆನ್ಸ್ ನೀಡಿಕೆಗೆ ಸಂಬಂಧಿಸಿದಂತೆ ಕಳೆದ ಕೆಲವು ವರ್ಷಗಳಲ್ಲಿ ಏನೇನಾಗಿದೆ, ಎಷ್ಟು ಮಂದಿ ಸಣ್ಣ ತಯಾರಕರಿಗೆ ಲೈಸೆನ್ಸ್‌ಗಳನ್ನು ಕೊಡಲಾಗಿದೆ. ಈ ಸಣ್ಣ ತಯಾರಿಕಾ ಕೇಂದ್ರಗಳಲ್ಲಿ ಉಪ್ಪಿನ ತಯಾರಿಕೆ ಎಷ್ಟರಮಟ್ಟಿಗೆ ಹೆಚ್ಚಿದೆ ಮುಂತಾದವುಗಳನ್ನು ತಿಳಿದುಕೊಳ್ಳುವಷ್ಟು ಶ್ರಮವಹಿಸಿದ್ದರೆ ಅವರ ತೀರ್ಮಾನಗಳು ಖಂಡಿತ ಭಿನ್ನವಾಗಿರುತ್ತಿದ್ದವು.

**ಡಾ. ಲಂಕಾ ಸುಂದರಂ:-** ನಾನು ಇನ್ನೂ ಒಟ್ಟು ತೀರ್ಮಾನಕ್ಕೆ ಬಂದಿಲ್ಲ. ನಾನು ಮಸೂದೆಯ 4(ಬಿ) (4) 6 (2) (ಇ) (2) ವಾಕ್ಯಾಂಶಗಳನ್ನು ಉಲ್ಲೇಖಿಸಿದೆ. ಇಲ್ಲಿ ಸಹಕಾರ ಚಳುವಳಿ ಎಲ್ಲಿದೆ?

**ಕೆ.ಸಿ. ರೆಡ್ಡಿ :-** ನಾನು ಆ ಅಂಶಕ್ಕೇ ಬರುತ್ತಿದ್ದೆ. ಆ ಒಂದು ನಿದರ್ಶನವನ್ನು ಉಲ್ಲೇಖಿಸುವ ಮೂಲಕ ಅವರು ಒಂದು ವಾದದ ನಿರ್ಮಾಣ ಮಾಡಲು ಹೊರಟಿದ್ದಾರೆ.

**ಡಾ. ಲಂಕಾ ಸುಂದರಂ:-** ಇಲ್ಲ, ಇಲ್ಲ.

**ಕೆ.ಸಿ. ರೆಡ್ಡಿ:-**ಉಪ್ಪಿನ ಕೈಗಾರಿಕೆಯನ್ನು ಸುಧಾರಿಸುವ ಗುರಿಗೆ, ಹಾಗೂ ಚಿಕ್ಕ ತಯಾರಕರಿಂದ ಉಪ್ಪಿನ ತಯಾರಿಕೆಯನ್ನು ಸುಧಾರಿಸುವ ವಿಷಯಕ್ಕೆ ವಿದಾಯ ಹೇಳಲಾಗಿದೆ ಎಂದು ಅವರು ನಿರೂಪಿಸ ಹೊರಟಿದ್ದರು. ಆದರೆ, ಮಾನ್ಯರೆ ನೀವು ಕಳೆದ ಕೆಲವು ವರ್ಷಗಳ ಇಡೀ ಉಪ್ಪು ಸಂಬಂಧವಾದ ಆಡಳಿತವನ್ನು ಪುನರಾವಲೋಕಿಸಿದ್ದೇ ಆದರೆ, ಈಗ ಮಸೂದೆಯಲ್ಲಿ ಯಾವ ಉದ್ದೇಶವನ್ನು ತಿಳಿಸಲಾಗಿದೆಯೋ ಅವುಗಳನ್ನು ಮುಖ್ಯವಾಗಿ ಗಮನದಲ್ಲಿಟ್ಟುಕೊಳ್ಳಲಾಗಿದೆ ಹಾಗೂ ಸ್ವಲ್ಪ ಮಟ್ಟಿಗೆ ಧ್ಯೇಯವೂ ಕೂಡ ಈಡೇರಿದೆ ಎಂಬುದನ್ನು ತಿಳಿಯಬಹುದು ಮತ್ತು ಈಗಿನ ನಮ್ಮ ನೀತಿಯೂ ಕೂಡ ಈ ಧ್ಯೇಯವನ್ನು ಹೆಚ್ಚು ಹೆಚ್ಚಾಗಿ ನೆರವೇರುವಂತೆ ಮಾಡುವುದೇ ಆಗಿದೆ.

ಅವರು ಉಲ್ಲೇಖಿಸಿದ ಆ ನಿರ್ದಿಷ್ಟ ಅಂಶಕ್ಕೆ ಸಂಬಂಧಿಸಿದಂತೆ ನಾನು ಇಷ್ಟು ಮಾತ್ರ ಹೇಳಬಯಸುತ್ತೇನೆ. ಭೂಮಿಯನ್ನು ರೈಲ್ವೆಗಾಗಿ ವಶಪಡಿಸಿಕೊಂಡ ನಂತರ ಅದರ ಮಾಲೀಕರಿಗೆ [illegible] ಪರಿಹಾರ ನೀಡಲಾಯಿತೆ ಎಂಬುದನ್ನು ಮಾನ್ಯ ಸದಸ್ಯರಿಂದ ತಿಳಿದಕೊಳ್ಳ ಬಯಸುತ್ತೇನೆ. ನಾನೇ ಅದನ್ನು ತಿಳಿದುಕೊಳ್ಳುವ ಪ್ರಯತ್ನವನ್ನೂ ಮಾಡುತ್ತೇನೆ ಒಂದು ವೇಳೆ ಅವರು ಪರಿಹಾರವನ್ನು ನೀಡಿದ್ದೇ ಆದಲ್ಲಿ ಯಾವ ಸಣ್ಣ ತಯಾರಕರಿಂದ ಆ ಭೂಮಿಯನ್ನು ವಶಪಡಿಸಿಕೊಳ್ಳಲಾಯಿತೋ ಅವರಿಗೆ ಎಷ್ಟು ಪರಿಹಾರ ನೀಡಲಾಗಿದೆ? ಅವರು ಪರಿಹಾರವನ್ನು ಸಂದಾಯ ಮಾಡಿದ್ದಲ್ಲಿ ಉಪ್ಪು ತಯಾರಿಕೆಗಾಗಿ ವಿಲೇವಾರಿ ಮಾಡುವಾಗ ಹರಾಜಿನಲ್ಲಿ ಅವರಿಗೆ ಎಷ್ಟು ಹಣ ಸಿಕ್ಕಿತು? ಖಂಡಿತವಾಗಿಯೂ ಇದು ಒಂದು ಧೋರಣೆ ಎಂಬ ದೃಷ್ಟಿಯಿಂದ ಅಷ್ಟೇನೂ ತಪ್ಪಲ್ಲ. ಅದೇ ರೀತಿ ಈ ಮಸೂದೆಗೆ ಸಂಬಂಧಿಸಿದಂತೆಯೂ ಮಾನ್ಯ ಸದಸ್ಯರು ನೆನಪಿನಲ್ಲಿಟ್ಟುಕೊಳ್ಳಬೇಕಾದ ಸಂಗತಿ ಏನೆಂದರೆ ಇದಕ್ಕೂ ಉಪ್ಪಿನ ಆಡಳಿತಕ್ಕೂ ಏನೂ ಸಂಬಂಧವಿಲ್ಲ. ಈ ಭೂಮಿಯು ರೈಲ್ವೆ ಮಂತ್ರಾಲಯದ್ದಾಗಿದ್ದು ಅದು ತಮಗೆ ಅಗತ್ಯವಿಲ್ಲ ಎಂದು ಅವರು ಭಾವಿಸಿ ಅದನ್ನು ಮಾರಲು ಅಥವಾ ಹರಾಜಿನ ಮೂಲಕ ಉಪ್ಪು ತಯಾರಿಕೆಗೆಂದು ಲೀಸ್ ಮೇಲೆ ನೀಡುವುದೋ

ಎಂದು ಇಚ್ಛಿಸಿದ್ದಲ್ಲಿ ಅವರು ಅಳವಡಿಸಿಕೊಂಡ ವಿಧಾನಗಳಲ್ಲಿ ಯಾವ ತಪ್ಪೂ ಇಲ್ಲ. ರೈಲ್ವೆ ಆಡಳಿತಕ್ಕೆ ತನ್ನದೇ ಆದ ಜವಾಬ್ದಾರಿಗಳಿರುತ್ತವೆ ಎಂಬುದನ್ನು ಮರೆಯದಿರೋಣ. ರೈಲ್ವೆ ಬಜೆಟ್ ಚರ್ಚೆಗೆ ಬಂದಾಗ, ರೈಲ್ವೆ ಆಡಳಿತದ ಲಾಭ ನಷ್ಟಗಳೇನು, ಅದು ವಾಣಿಜ್ಯ ದೃಷ್ಟಿಯಿಂದ ಲಾಭಕರವಾಗಿ ಕೆಲಸ ಮಾಡುತ್ತಿದೆಯೇ, ಆರ್ಥಿಕವಾಗಿ ಸರಿಯಾಗಿ ಕೆಲಸ ಮಾಡುತ್ತಿದೆಯೇ ಎಂದು ಮೊದಲಾದ ಪ್ರಶ್ನೆಗಳನ್ನು ಸದಸ್ಯರುಗಳು ಸಹಜವಾಗೇ ಕೇಳುತ್ತಾರೆ. ಇವು ಸಾಮಾನ್ಯವಾಗಿ ಕೇಳುವಂಥ ಪ್ರಶ್ನೆಗಳು. ರೈಲ್ವೆ ಆಡಳಿತವನ್ನು ಯಾವಾಗಲೂ ವಾಣಿಜ್ಯ ಸಂಸ್ಥೆಯಾಗಿಯೇ ನೋಡಬೇಕು ಎಂಬುದು ನನ್ನ ವಾದವಲ್ಲ, ಅದಕ್ಕೆ ಒಂದು ಸೇವಾ ಮುಖವೂ ಇದೆ. ಆದರೂ ರೈಲ್ವೆ ಬಜೆಟ್ ಬಂದಾಗಲೆಲ್ಲ ಅದರ ಬಗೆಗಿನ ಟೀಕೆ ಯಾವ ರೀತಿಯದಿರುತ್ತದೆ ಎಂಬುದು ನಮಗೆಲ್ಲ ಗೊತ್ತು. ಈ ಹಿನ್ನೆಲೆಯಲ್ಲಿ ರೈಲ್ವೆಯು ಹಣ ಮಾಡಿದ್ದರೆ ಕೊನೆಯ ಪಕ್ಷ ಆ ಆಧಾರದ ಮೇಲಾದರೂ ಮಾನ್ಯ ಸದಸ್ಯರು ಉಪ್ಪು ಆಡಳಿತವು ತನ್ನ ಬೊಕ್ಕಸ ತುಂಬಿಕೊಳ್ಳುವುದಕ್ಕಾಗಿಯೇ ನಿರ್ದಿಷ್ಟ ನೀತಿಯೊಂದನ್ನು ಅನುಸರಿಸುತ್ತಿದೆ ಮತ್ತು ಸಣ್ಣ ಪ್ರಮಾಣದ ಉಪ್ಪು ತಯಾರಕರನ್ನು ಸಂಪೂರ್ಣ ಮರೆತೇ ಬಿಟ್ಟಿದೆ ಎಂಬಂತಹ ಟೀಕೆಗಳು ಮಾಡುವುದು ಸರಿಯಲ್ಲ.

ಡಾ. ಲಂಕಾ ಸುಂದರಂ:- ಇದನ್ನು ನೀವು ಉಪ್ಪಿನ ದೃಷ್ಟಿಯಿಂದ ನೋಡಬೇಕು ಎಂದಷ್ಟೇ ನಾನು ಹೇಳಿದೆ. ರೈಲ್ವೆ ದೃಷ್ಟಿಯಿಂದಲ್ಲ.

**ಕೆ.ಸಿ. ರೆಡ್ಡಿ:-** ಏನೇ ಇರಲಿ, ಮಾನ್ಯ ಸದಸ್ಯರು ಪ್ರಸ್ತಾಪಿಸಿದ ವಿಷಯವನ್ನು ಅಲ್ಲಿಗೇ ಬಿಡುತ್ತೇನೆ. ಇತರ ವಿಷಯಗಳಿಗೆ ಈಗ ಬರುತ್ತೇನೆ. ಏಕೆಂದರೆ Preventive detention act ಕುರಿತಂತೆ ಮುಖ್ಯವಾದ ಚರ್ಚೆ ನಡೆಯಬೇಕಾಗಿದೆ. I do not want to treat hon. members to too much of salt.

**ಗೃಹ ವ್ಯವಹಾರಗಳ ರಾಜ್ಯ ಸಚಿವರು(ಡಾ.ಕಟ್ಜ):-** ನಾನು ಅವರಿಗೆ ಸಕ್ಕರೆ ಕೊಡುತ್ತೇನೆ.

**ಕೆ.ಸಿ. ರೆಡ್ಡಿ :-** ನನ್ನ ಸನ್ಮಾನ್ಯ ಸ್ನೇಹಿತರಾದ ಶ್ರೀ ರಾಮಚಂದ್ರರೆಡ್ಡಿ, ಥಾಮಸ್ ಹಾಗೂ ಇತರ ಸದಸ್ಯರು ಮಾತಾಡುತ್ತ ಉಪ್ಪಿನ ಆಡಳಿತಕ್ಕೆ ಸಂಬಂಧಿಸಿದಂತೆ ವಿವಿಧ ವಿಷಯಗಳನ್ನು ಪ್ರಸ್ತಾಪಿಸಿದರು. ಅವೆಲ್ಲವನ್ನೂ ನಾನು ಉತ್ತರಿಸುವುದಿರಲಿ ಅದರಲ್ಲಿ ಕೆಲವು ವಿಷಯಗಳನ್ನು ಪ್ರಸ್ತಾಪಿಸುವುದಕ್ಕಾದರೂ ಸಾಧ್ಯವಾಗುತ್ತದೋ ಇಲ್ಲವೋ ಹೇಳಲಾರೆ. ಮುಖ್ಯವಾಗಿ, ಸ್ನೇಹಿತರಾದಂತಹ ರಾಮಚಂದ್ರರೆಡ್ಡಿಯವರು ಇದಕ್ಕೆ ಸಂಬಂಧಿಸಿದ ಎಲ್ಲ ಮುಖ್ಯ ಅಂಶಗಳನ್ನೂ ಪ್ರಸ್ತಾಪಿಸಿದರು. ಅವುಗಳ ಬಗ್ಗೆ ಈಗ ಸಮಾಧಾನಕರವಾಗಿ ಪ್ರಸ್ತಾಪಿಸಲು ಸಾಧ್ಯವಾಗುವುದಿಲ್ಲವಾದ್ದರಿಂದ ಮುಂದೆ ಸೂಕ್ತವಾದ ಸಮಯದಲ್ಲಿ ಅವುಗಳ ಬಗ್ಗೆ ನೋಡೋಣ.

**ಕೆ.ಸಿ. ರೆಡ್ಡಿ:-** ಖಾಸಗಿ ಕಾರ್ಖಾನೆಗಳಲ್ಲಿ ತಯಾರಾದ ಉಪ್ಪಿನ ಮೇಲಿನ ಮೇಲುತೆರಿಗೆಗೂ ಹಾಗೂ ಸರ್ಕಾರಿ ಕಾರ್ಖಾನೆಗಳಲ್ಲಿ ತಯಾರಾದ ಉಪ್ಪಿನ ಮೇಲಿನ ಮೇಲು ತೆರಿಗೆಗೂ ಯಾಕೆ ವ್ಯತ್ಯಾಸ ಮಾಡಲಾಗಿದೆ ಎಂಬ ಪ್ರಶ್ನೆಯನ್ನು ಕೇಳಲಾಯಿತು. ಇದು ತುಂಬ ಪ್ರಸ್ತುತವಾದ ಪ್ರಶ್ನೆ. ಇದಕ್ಕೆ ನಾನು ಉತ್ತರ ಕೊಡಬೇಕಿದೆ. ಇದು ಸರ್ಕಾರ ಸ್ವತಃ ತನಗೆ ಹೆಚ್ಚು ತೆರಿಗ ಹಾಕಿಕೊಳ್ಳುವ ಪ್ರಯತ್ನವಾಗಿದ್ದರೂ ಈ ವ್ಯತ್ಯಾಸ ಹುಟ್ಟಿಕೊಂಡಿರುವುದು ಹೀಗೆ-ಸರ್ಕಾರದ ಉಪ್ಪು ಕಾರ್ಯಾಗಾರಗಳಿಗೆ ಸಂಬಂಧಿಸಿದಂತೆ, ಅವು "ಟ್ರೀಟಿ ರೈಟ್ಸ್" ಎಂಬುದರ ಪ್ರಕಾರ, ಪೂರ್ವ

ಭಾರತದಲ್ಲಿದ್ದ ರಾಜ್ಯಗಳಿಗೆ ಒಂದಿಷ್ಟು ಮೊಬಲಗನ್ನು ನೀಡಬೇಕಾಗಿರುತ್ತದೆ. ಉದಾಹರಣೆಗೆ ರಾಜಸ್ಥಾನದಂತಹ ರಾಜ್ಯದಲ್ಲಿ ಸಾಂಬಾರ್ ಉಪ್ಪನ್ನು ತಯಾರಿಸಲಾಗುತ್ತದೆ. ಅಲ್ಲಿ treaty rights ಅನ್ವಯಿಸುತ್ತದೆ. ಇವುಗಳ ಪ್ರಕಾರ ರಾಜ್ಯ ಸರ್ಕಾರಕ್ಕೆ royalty ಸಂದಾಯಗಳನ್ನು ಮಾಡಬೇಕಾಗುತ್ತದೆ. ಈ ಹೊಣೆಯನ್ನು ನಾವು ಲೆಕ್ಕಕ್ಕೆ ತೆಗೆದುಕೊಳ್ಳಬೇಕಾಗುತ್ತದೆ. ಇದನ್ನು ಹೇಗಾದರೂ ಸರಿದೂಗಿಸುವುದು ಅಗತ್ಯ. ಉದಾಹರಣೆಗೆ ಖಾಸಗಿ ಕಾರ್ಯಾಗಾರಗಳು ಹೆಚ್ಚಿನ ಮೇಲ್ತೆರಿಗೆ ವಿಧಿಸುವ ಮೂಲಕ ಮಾಡಬಹುದು. ಸರ್ಕಾರದ ಉಪ್ಪು ಕಾರ್ಯಾಗಾರಗಳಲ್ಲಿ ತಯಾರಿಸುವ ಉಪ್ಪಿನ ವಿಷಯದಲ್ಲಿ ಖಾಸಗಿ ಕಾರ್ಯಾಗಾರಗಳಿಗಿಂತ ಉತ್ಪಾದನೆಯ ವೆಚ್ಚ ಕಡಿಮೆ ಎಂದು ಹೇಳಿದರೆ, ಸರ್ಕಾರದ ಉದ್ದಿಮೆಗಳಲ್ಲಿ ಖರ್ಚುಗಳು ಬಹಳ ಎಂದು ಯಾವಾಗಲೂ ಟೀಕಿಸುವಂತಹ ನನ್ನ ಕೆಲವು ಸನ್ಮಾನ್ಯ ಮಿತ್ರರಿಗೆ ವಿಚಿತ್ರವಾಗಿ ಕಾಣಿಸಬಹುದು. ತುಂಬ ಆಶ್ಚರ್ಯವೂ ಆಗಬಹುದು. ಹೀಗಾಗಿ ಇಲ್ಲಿ ಖಾಸಗಿ ಕಾರ್ಯಾಗಾರಗಳಿಗೆ ವಿಧಿಸುವುದಕ್ಕಿಂತ ಹೆಚ್ಚಿನ ತೆರಿಗೆ ಹಾಕಿದರೂ ತಡೆದುಕೊಳ್ಳಬಹುದು. ಸರ್ಕಾರವು ಅಧಿಕ ಮೇಲ್ತೆರಿಗೆಯನ್ನು ವಿಧಿಸುವಾಗ ಒಂದು ಸ್ಟಾಂಡರ್ಡ್ ದಿಬ್ಬಕ್ಕೆ 3-1/2 ಆಣೆ ಯಂತೆ, ಇದಕ್ಕೆ ಪ್ರತಿಯಾಗಿ ಖಾಸಗಿ ಕಾರ್ಯಾಗಾರಗಳಲ್ಲಿ ತಯಾರಾದ ಉಪ್ಪಿಗೆ 2 ಆಣೆಯಂತೆ ಈ ಎರಡೂ ಅಂಶಗಳನ್ನು ಗಮನದಲ್ಲಿಟ್ಟುಕೊಂಡಿತು.

ಈ ಮೇಲ್ತೆರಿಗೆ ಯಾಕೆ ಒಂದೇ ರೀತಿ ಇರಬಾರದು ಎಂದು ನಾನು ಒಂದು ಹಂತದಲ್ಲಿ ಚಿಂತಿಸಿದ್ದುಂಟು. ವಾಸ್ತವವಾಗಿ ನಾನು ಇನ್ನೂ ಈ ರೀತಿ ಯೋಚಿಸುತ್ತಿದ್ದೇನೆ. ಯಾವ ನಿರ್ಧಾರಕ್ಕೆ ಬರಬಹುದು ಅಂತ ನನಗೆ ಗೊತ್ತಿಲ್ಲ. ಈ ವಿಷಯ ನಮ್ಮ ಗಮನದಲ್ಲಿದೆ ಎಂದಷ್ಟೇ ನಾನು ಹೇಳ ಬಯಸುತ್ತೇನೆ. Treaty Rights ನ್ನು ಅವು ಈಗಿರುವಂತೆಯೇ ನಾವು ಮಾನ್ಯ ಮಾಡಿಕೊಂಡು ಹೋಗಬೇಕೇ ಅಥವಾ ಅವುಗಳನ್ನು ಮಾರ್ಪಾಡಿಸಬಹುದೇ ಎಂಬ ಅಂಶದ ಬಗ್ಗೆ ನಾವು ಈಗ ಕಾನೂನಾತ್ಮಕ ಹಾಗೂ ಸಂವಿಧಾನಾತ್ಮಕ ದೃಷ್ಟಿಯಿಂದ ಪರಿಶೀಲಿಸಬೇಕಾಗಿದೆ. ಇದು ಸ್ಪಷ್ಟವಾದನಂತರ, ಈ ಸರ್ಕಾರೀ ತಯಾರಿಕೆಯ ಉಪ್ಪು ಹಾಗೂ ಖಾಸಗಿ ತಯಾರಿಕೆಯ ಉಪ್ಪಿನ ಮೇಲಿನ ಮೇಲ್ತೆರಿಗೆಯ ವ್ಯತ್ಯಾಸ ಹಾಗೇ ಮುಂದುವರೆಯಬೇಕೆ ಎಂಬ ಬಗ್ಗೆ ಪರಿಶೀಲಿಸುವುದು ಸಾಧ್ಯವಾಗುತ್ತದೆ. ಆದರೆ ಸಧ್ಯಕ್ಕಂತೂ ಅದನ್ನು ಹಾಗೇ ಮುಂದುವರೆಸುವುದೆಂದು ನಾವು ಉದ್ದೇಶಿಸಿದ್ದೇವೆ. ಇದರಿಂದಾಗಿಯೇ ಅದಕ್ಕೆ ಈ ಮಸೂದೆಯಲ್ಲಿ ಒಂದು ಸ್ಥಾನವಿದೆ.

ಇನ್ನೂ ಒಂದು ವಿಷಯವನ್ನು ಪ್ರಸ್ತಾಪಿಸಲಾಯಿತು. ಸದಸ್ಯರುಗಳಿಗೆ ಈಗಾಗಲೇ ತಾಳ್ಮೆ ಮೀರುತ್ತಿದೆ ಅವರು ಕಲಾಪದ ಮುಂದಿನ ವಿಷಯಕ್ಕೆ ಹೋಗಲು ಕಾಯುತ್ತಿದ್ದಾರೆ. ಆದ್ದರಿಂದ ಸಂಕ್ಷಿಪ್ತವಾಗಿ ಹೇಳುತ್ತೇನೆ. ಅವರು ಪ್ರಸ್ತಾಪಿಸಿದ್ದೇನೆಂದರೆ ಉಪ್ಪನ್ನು ಆಧರಿಸಿದಂತಹ ಬೇರೆ ಬೇರೆ ಕೈಗಾರಿಕೆಗಳನ್ನು ಬೆಳೆಸಬಹುದು ಎಂಬುದು. ಈ ವಿಷಯವನ್ನು ನಾವೂ ಕೂಡ ಗಮನದಲ್ಲಿಟ್ಟುಕೊಂಡಿದ್ದೇವೆ. ಅಷ್ಟೇ ಅಲ್ಲ ನಾವು ಭಾವನಗರದಲ್ಲಿ ಒಂದು ಉಪ್ಪು ಸಂಶೋಧನಾ ಕೇಂದ್ರವನ್ನೂ ಕೂಡ ಆರಂಭಿಸಿದ್ದೇವೆ. ಈ ಕೇಂದ್ರದ ಸ್ಥಾಪನೆಗೆ ಒಂದು ಪ್ರಮುಖ ಉದ್ದೇಶವೇನೆಂದರೆ, ಉಪ್ಪನ್ನು ಆಧರಿಸಿ ಹೇಗೆ ಮತ್ತು ಯಾವ ರೀತಿಯಲ್ಲಿ ಇತರ ಕೈಗಾರಿಕೆಗಳನ್ನು ಆರಂಭಿಸಬಹುದು ಎಂಬುದನ್ನು ಅದು ನಮಗೆ ಸೂಚಿಸಬೇಕು. ಯೋಜನಾ ಆಯೋಗವು ಈ ವಿಷಯವನ್ನು ಪರಿಶೀಲಿಸಿದೆ. ಉಪ್ಪನ್ನು ಆಧರಿಸಿ ನಿರ್ಮಿಸಬಹುದಾದ ರಾಸಾಯನಿಕ ಕೈಗಾರಿಕೆಯ ಬೆಳವಣಿಗೆಯನ್ನು ನಮ್ಮ ದೇಶದಲ್ಲಿ ಜಾರಿಗೆ ತರಬೇಕು ಎಂಬುದು ನಮ್ಮ ಮನಸ್ಸಿನಲ್ಲಿದೆ. ಆದರೆ ಇದೇ ಸಂದರ್ಭದಲ್ಲಿ,

ಮಾನ್ಯ ಸದಸ್ಯರುಗಳು ಹೇಳಿದ ಕಾಸ್ಟಿಕ್ ಸೋಡಾ ಕೈಗಾರಿಕೆಯನ್ನು ಆರಂಭಿಸುವುದಕ್ಕೆ ಬಹಳ ದುಡ್ಡು ಬೇಕಾಗುತ್ತದೆ. ಖಾಸಗಿ ವಲಯದವರು ಈ ಕೈಗಾರಿಕೆಯನ್ನು ಸ್ಥಾಪಿಸಲು ಮುಂದೆ ಬರುತ್ತಾರೋ ಎಂದು ನೋಡಬೇಕಾಗಿದೆ. ಅವರು ಮುಂದೆ ಬರದಿದ್ದಲ್ಲಿ, ಸರ್ಕಾರವೇ ಕೈ ಹಾಕಬೇಕಾಗುತ್ತದೆ. ಈ ವಿಷಯಗಳಿಗೆಲ್ಲ ಸ್ವಲ್ಪ ಕಲಾವಕಾಶಬೇಕು ಮತ್ತು ನಾವು ಮುಂದಿನ ಹೆಜ್ಜೆ ಹಾಕುವ ಮೊದಲು ಸ್ವಲ್ಪ ಯೋಚಿಸಬೇಕು. ಮಾನ್ಯರೇ ಇನ್ನೂ ಒಂದು ಅಂಶವನ್ನು ಸದಸ್ಯರು ಪ್ರಸ್ತಾಪಿಸಿದ್ದಾರೆ ಇದನ್ನು ಉತ್ತರಿಸದಿದ್ದರೆ ಸದಸ್ಯರಿಗೂ ತೃಪ್ತಿಯಾಗುವುದಿಲ್ಲ. ಇದು ಈ ನಿಧಿಯನ್ನು ಬಳಸಿಕೊಳ್ಳುವುದಕ್ಕೆ ಸಂಬಂಧಿಸಿದ್ದು. ಈ ನಿಧಿಯ ಗಣನೀಯ ಪಾಲನ್ನು ಕಾರ್ಮಿಕರ ಕ್ಷೇಮ ಕಲ್ಯಾಣಕ್ಕೆ ಮೀಸಲಾಗಿಡಬೇಕು ಎಂದು ಒತ್ತಿ ಹೇಳಲಾಯಿತು. ಸಮಸ್ಯೆಯನ್ನು ಈ ರೀತಿ ನೋಡುವ ವಿಧಾನ ನಿಜಕ್ಕೂ ನನಗೆ ಮೆಚ್ಚುಗೆಯಾಯಿತು. ಕಾರ್ಮಿಕರ ಸ್ಥಿತಿಗತಿಗಳನ್ನು ಸುಧಾರಿಸುವುದಕ್ಕಾಗಿ ಏನೆಲ್ಲ ಸಾಧ್ಯವಿದೆಯೋ ಅದನ್ನು ಮಾಡುವುದು ಅತ್ಯಂತ ಅಗತ್ಯ. ಈ ದೃಷ್ಟಿಗೆ ನನ್ನ ಸಂಪೂರ್ಣ ಬೆಂಬಲವಿದೆ. ಈ ರೀತಿಯ ಕೆಲವೊಂದು ನಿಧಿಗಳನ್ನು ಪೂರ್ಣವಾಗಿ ಬಳಸಿಕೊಂಡಿಲ್ಲ ಎಂದು ತಿಳಿಸಲಾಯಿತು. ಇದೇಕೆ ಹೀಗೆ ಎಂಬುದು ನನಗೆ ಅರ್ಥವಾಗುತ್ತಿಲ್ಲ. ಈ ಮೊತ್ತವನ್ನು ಪೂರ್ಣವಾಗಿ ಬಳಸಿಕೊಳ್ಳಬೇಕು ಮತ್ತು ಕಾರ್ಮಿಕರಿಗೆ ಗರಿಷ್ಠ ಅನುಕೂಲಗಳನ್ನು ಮಾಡಿಕೊಡಬೇಕು ಎಂಬ ಸದಸ್ಯರ ಒತ್ತಾಯಕ್ಕೆ ನಾನು ದನಿಗೂಡಿಸುತ್ತೇನೆ. ಈ ಮಸೂದೆಯ ಮಟ್ಟಿಗೆ ಹೇಳುವುದಾದರೆ ಕಾರ್ಮಿಕರ ಕಲ್ಯಾಣಕ್ಕಾಗಿ ಸಾಧ್ಯವಾದಷ್ಟು ಹಣವನ್ನು ಮೀಸಲಾಗಿಡಲಾಗುವುದು.

ಈ ಸಂಬಂಧವಾಗಿ ಇನ್ನೂ ಕೆಲವು ಅಂಶಗಳನ್ನು ಉಲ್ಲೇಖಿಸಲಾಯಿತು. ನಾನು ಅದರ ವಿವರಗಳಿಗೆ ಹೋಗಲಾರೆ. ಆದರೆ ಈ ಕಾಯಿದೆಯ 6 ನೇ ಪರಿಚ್ಛೇದದ ಕೆಳಗೆ ನಿಯಮಗಳನ್ನು ರೂಪಿಸಿದಾಗ ಕಾರ್ಮಿಕ ಕಲ್ಯಾಣಕ್ಕಾಗಿ ಸಾಕಷ್ಟು ಹಣವನ್ನು ಮೀಸಲಿಡುವ ಬಗ್ಗೆ ಹಾಗೂ ಅದನ್ನು ಹೇಗೆ ಖರ್ಚು ಮಾಡಬೇಕು ಎಂಬ ಬಗ್ಗೆ ನಾವು ಸಾಕಷ್ಟು ಗಮನ ವಹಿಸುತ್ತೇವೆ.

ಶ್ರೀ ಕೆ.ಕೆ. ಬಸು:- ಅದನ್ನು ಬಳಸಿಕೊಳ್ಳಲೇಬೇಕು.

ಕೆ.ಸಿ. ರೆಡ್ಡಿ :- ಪರೀಕ್ಷಣ ಪ್ರಯೋಗಾಲಯಗಳಿಗೆ ಸಂಬಂಧಿಸಿದಂತೆಯೂ ಹೇಳಲಾಯಿತು. ಎಷ್ಟು ಸಾಧ್ಯವೋ ಅಷ್ಟು ಪ್ರಯೋಗಾಲಯಗಳನ್ನು ಸ್ಥಾಪಿಸುವುದು ಅಗತ್ಯ ಎಂಬುದನ್ನು ನಾನೂ ಒಪ್ಪುತ್ತೇನೆ. ಆದರೆ ಪ್ರತಿಯೊಂದು ಉಪ್ಪಿನ ಕಾರ್ಖಾನೆಗೂ ಒಂದು ಪರೀಕ್ಷಾ ಪ್ರಯೋಗಾಲಯವನ್ನು ಸ್ಥಾಪಿಸಲು ಸಾಧ್ಯವಾಗುವುದೋ ಎಂಬುದು ನನಗೆ ಗೊತ್ತಿಲ್ಲ. ಈ ಸಂಬಂಧವಾಗಿ ಪ್ರತಿಯೊಂದು ಕಾರ್ಖಾನೆಯಲ್ಲಿಯೂ ಒಂದೊಂದು ಪರೀಕ್ಷಾ ಪ್ರಯೋಗಾಲಯವನ್ನು ಸ್ಥಾಪಿಸುವಂತೆ ಹೇಳಿ, ಸರ್ಕಾರ ಅದಕ್ಕೆ ಹಣವನ್ನು ಮುಂಗಡವಾಗಿ ಕೊಟ್ಟು ಅನಂತರ ಸಂಬಂಧಪಟ್ಟ ಕಾರ್ಖಾನೆಗಳಿಗೆ ಅದನ್ನು ಮರುಪಾವತಿಸುವಂತೆ ತಿಳಿಸಬಹುದು ಎಂದು ಸದಸ್ಯರೊಬ್ಬರು ವ್ಯಕ್ತಪಡಿಸಿದ ನಿರ್ಣಯವನ್ನು ನಾನು ಸ್ವಾಗತಿಸುತ್ತೇನೆ.

## 6. ಹೊಸ ಉಕ್ಕು ಸ್ಥಾವರಕ್ಕೆ ನಿವೇಶನ

### ಫೆಬ್ರವರಿ 16, 1954

ಉತ್ಪಾದನಾ ಸಚಿವರು(ಶ್ರೀ ಕೆ.ಸಿ ರೆಡ್ಡಿ):- 1953ರ ಆಗಸ್ಟ್ 24 ರಂದು ಹೊಸ ಉಕ್ಕು ಸ್ಥಾವರದ ಯೋಜನೆ ಕುರಿತು ಸದನಕ್ಕೆ ನೀಡಿದ ಹೇಳಿಕೆಯಲ್ಲಿ, ನಾವು ಒಪ್ಪಂದದ ಸಲುವಾಗಿ ವ್ಯವಹಾರ ಮಾಡಿದ ಕ್ರುಪ್ ಮತ್ತು ಡಿಮ್ಯಾಗ್‌ಗಳ ಜರ್ಮನ್ ಉದ್ದಿಮೆಯವರನ್ನು ಉಕ್ಕು ಸ್ಥಾವರ ಎಲ್ಲಿರಬೇಕು ಹಾಗೂ ಅದರ ವಿನ್ಯಾಸ, ಸ್ಥಾಪನೆ ಮತ್ತು ಕಾರ್ಯಾಚರಣೆಯ ಬಗ್ಗೆ ಅವರ ಸಲಹೆ ಕೇಳಲಾಗಿತ್ತು ಎಂಬ ವಿಷಯ ತಿಳಿಸಿದ್ದೆ. ಇದರಂತೆ ಜರ್ಮನ್ ಉದ್ದಿಮೆಗಳ ತಾಂತ್ರಿಕ ತಜ್ಞರು ಬಿಹಾರ್, ಪಶ್ಚಿಮ ಬಂಗಾಳ, ಮಧ್ಯಪ್ರದೇಶ ಹಾಗೂ ಒರಿಸ್ಸಾಗಳಿಗೆ ಭೇಟಿ ನೀಡಿ ಆಯಾ ಸರ್ಕಾರಗಳವರು ನೀಡಿದ ತಾಂತ್ರಿಕ ವರದಿಗಳನ್ನೂ ಹಾಗೂ ಮೆಮೊರ್‍ಯಾಂಡಾಗಳನ್ನು ಅಧ್ಯಯನ ಮಾಡಿದರು. ಅವರು ಇನ್ನಷ್ಟು ಮಾಹಿತಿ ಕಲೆ ಹಾಕಿದರು. ಪ್ರಸ್ತಾಪಿಸಿದ ನಿವೇಶನಗಳಿಗೆ ಭೇಟಿ ನೀಡಿದರು, ಪರಿವೀಕ್ಷಣೆ ನಡೆಸಿದರು ಹಾಗೂ ಆಯಾ ಸರ್ಕಾರದೊಂದಿಗೆ ಮತ್ತು ಕೇಂದ್ರ ಸರ್ಕಾರದ ಸಂಬಂಧಪಟ್ಟ ಪ್ರಾಧಿಕಾರಗಳೊಂದಿಗೆ ಮಾತುಕತೆ ನಡೆಸಿದರು. ಹೀಗೆ ಸಂಗ್ರಹಿಸಿದ ಸಾಮಗ್ರಿಯನ್ನು ಇಲ್ಲಿಯೂ ಹಾಗೂ ಜರ್ಮನಿಯಲ್ಲಿರುವ ತಮ್ಮ ಉನ್ನತ ತಾಂತ್ರಿಕ ತಜ್ಞರೊಂದಿಗೂ ಅಧ್ಯಯನಿಸಿ ಮೌಲ್ಯಮಾಪನ ನಡೆಸಿದ ನಂತರ ಅವರು ಉಕ್ಕು ಪರಿಯೋಜನೆಯನ್ನು ಒರಿಸ್ಸಾದ ರೂರ್‌ಕೆಲಾದಲ್ಲಿ ಸ್ಥಾಪಿಸಬಹುದೆಂದು ಶಿಫಾರಸ್ಸು ಮಾಡಿದ್ದಾರೆ.

ಭಾರತ ಸರ್ಕಾರವು ಈ ಶಿಫಾರಸ್ಸನ್ನು ಬಹಳ ಎಚ್ಚರಿಕೆಯಿಂದ ಪರಿಶೀಲಿಸಿದೆ. ಸಮಾಲೋಚಕರು ನೀಡಿದ ವರದಿಯ ಬಗ್ಗೆ ಮಧ್ಯಪ್ರದೇಶ, ಪಶ್ಚಿಮ ಬಂಗಾಳ ಹಾಗೂ ಒರಿಸ್ಸಾ ಸರ್ಕಾರಗಳ ಅಭಿಪ್ರಾಯಗಳನ್ನೂ ಗಮನಕ್ಕೆ ತೆಗೆದುಕೊಳ್ಳಲಾಗಿದೆ. ಮಧ್ಯಪ್ರದೇಶ ಹಾಗೂ ಪಶ್ಚಿಮ ಬಂಗಾಳದ ಮುಖ್ಯಮಂತ್ರಿಗಳು ಹಾಗೂ ಒರಿಸ್ಸಾದ ಇಬ್ಬರು ಮಂತ್ರಿಗಳೊಂದಿಗೂ ಸಮಾಲೋಚಿಸಲಾಗಿದೆ. ಎಲ್ಲ ಸಂಗತಿಗಳನ್ನೂ ಹಾಗೂ ಲಭ್ಯವಿರುವ ದತ್ತಾಂಶಗಳನ್ನೂ ಗಮನದಲ್ಲಿಟ್ಟುಕೊಂಡು ರೂರ್ಕೆಲಾದಲ್ಲಿ ಈ ಸ್ಥಾವರವನ್ನು ಸ್ಥಾಪಿಸುವ ಬಗ್ಗೆ ತಮ್ಮ ಸಮಾಲೋಚಕರು ಮಾಡಿರುವ ಶಿಫಾರಸನ್ನು ಅಂಗೀಕರಿಸಬೇಕೆಂದು ನಿರ್ಣಯಿಸಲಾಗಿದೆ.

ಮಧ್ಯಪ್ರದೇಶದಲ್ಲಿ ಲಭ್ಯವಿರುವ ಕಬ್ಬಿಣದ ಅದಿರು ಹಾಗೂ ಕಲ್ಲಿದ್ದಲನ್ನು ಮುಖ್ಯವಾಗಿ ಗಮನದಲ್ಲಿಟ್ಟುಕೊಂಡು ಅಲ್ಲಿರುವ ಎಲ್ಲ ಖನಿಜ ಸಂಪನ್ಮೂಲಗಳ ಸಮೀಕ್ಷೆ, ಪರೀಕ್ಷೆ ಹಾಗೂ ವಿಶ್ಲೇಷಣೆಯನ್ನು ತಕ್ಷಣವೇ ಕೈಗೊಳ್ಳಬೇಕೆಂದೂ ಸಹ ಮಧ್ಯಪ್ರದೇಶದ ಸರ್ಕಾರ ನಿರ್ಧರಿಸಿದೆ. ಈ ಸಂಪನ್ಮೂಲಗಳ ಆರ್ಥಿಕ ಹಾಗೂ ಕೈಗಾರಿಕಾ ಬೆಳವಣಿಗೆಯಾಗುವಂತೆ ಮಾಡುವುದೇ ಇದರ ಉದ್ದೇಶ.

ಈ ಸಮಾಲೋಚಕರು ನೀಡಿರುವ ತಿಳುವಳಿಕೆ ಪತ್ರದ ಪ್ರತಿಯನ್ನು (Memorandum) ಸದನದ ಮುಂದೆ ಮಂಡಿಸುತ್ತಿದ್ದೇನೆ.

## ಟೆಲಿಫೋನ್ ಕೇಬಲ್ ಕಾರ್ಖಾನೆ ಸ್ಥಾಪನೆ ಬಗ್ಗೆ

### ಮಾರ್ಚ್ 4, 1954

ಶ್ರೀ ಕೆ.ಪಿ. ಸಿನ್ಹಾ :- ಉತ್ಪಾದನಾ ಸಚಿವರು ಕೆಳಕಂಡ ಮಾಹಿತಿ ನೀಡಬೇಕು:

ಎ) ಟೆಲಿಫೋನ್ ಕೇಬಲ್ ಕಾರ್ಖಾನೆಯು ಉತ್ಪಾದನಾ ಹಂತಕ್ಕೆ ಬಂದಿದೆಯೆ? ಮತ್ತು

ಬಿ) ಈ ಕಾರ್ಖಾನೆಯನ್ನು ಸ್ಥಾಪಿಸುವುದಕ್ಕೆ ಎಷ್ಟು ಖರ್ಚಾಗುತ್ತದೆ?

ಉತ್ಪಾದನಾ ಸಚಿವರು (ಶ್ರೀ ಕೆ.ಸಿ. ರೆಡ್ಡಿ):- ಎ) ಅನೇಕ ಕಾರ್ಯಾಗಾರಗಳು ಈಗಾಗಲೇ ಉತ್ಪಾದನೆಗೆ ಕಾರ್ಯಾರಂಭ ಮಾಡಿವೆ. ಈ ತಿಂಗಳ ಕೊನೆಯ ವೇಳೆಗೆ ಕವಚವಿಲ್ಲದ ಕೇಬಲ್‌ಗಳ ಉತ್ಪಾದನೆ ಆರಂಭವಾಗುವುದೆಂದು ನಿರೀಕ್ಷಿಸಲಾಗಿದೆ. ಕವಚಸಹಿತ ಕೇಬಲ್‌ಗಳ ಉತ್ಪಾದನೆಯು ಮೇ ಅಥವಾ ಜೂನ್ ತಿಂಗಳಲ್ಲಿ ಆರಂಭವಾಗುವ ಸಾಧ್ಯತೆ ಇದೆ.

ಬಿ) 1950ರ ಕೊನೆಯಲ್ಲಿ ಅಂದಾಜು ಮಾಡಿದಂತೆ ಸುಮಾರು 5 ಲಕ್ಷ ರೂ. ಪರಿಷ್ಕೃತ ಅಂದಾಜು ಸಿದ್ಧತೆಯಲ್ಲಿದೆ.

ಶ್ರೀ ಕೆ.ಪಿ. ಸಿನ್ಹಾ :- ಈ ಕಾರ್ಖಾನೆ ಈ ವರ್ಷದ ಫೆಬ್ರವರಿಯಲ್ಲೆ ಉತ್ಪಾದನೆ ಆರಂಭಿಸಬೇಕಾಗಿತ್ತು ಎಂಬ ಸಂಗತಿ ನಿಜವೆ? ಹಾಗಿದ್ದಲ್ಲಿ ಇಷ್ಟು ವಿಳಂಬಕ್ಕೆ ಕಾರಣವೇನು?

ಶ್ರೀ ಕೆ.ಸಿ. ರೆಡ್ಡಿ:- ಇಲ್ಲಿ ಹೆಚ್ಚಿನ ವಿಳಂಬವೇನೂ ಆಗಿಲ್ಲ. ನಾವು ಹೆಚ್ಚು ಕಡಿಮೆ ಕಲಾನುಸೂಚಿಗನುಗುಣವಾಗಿಯೇ ಕೆಲಸ ಮಾಡಿದ್ದೇವೆ. ಒಂದು ಹಂತದಲ್ಲಿ, ಕಳೆದ ಡಿಸೆಂಬರ್ ತಿಂಗಳಿನಲ್ಲಿಯೇ ಕಾರ್ಖಾನೆ ಉತ್ಪಾದನೆಯನ್ನು ಆರಂಭಿಸಲು ಸಾಧ್ಯವಾಗಬಹುದೇ ಎಂದು ಪ್ರಯತ್ನಸಿದೆವು. ಆದರೆ ಇದಕ್ಕೆ ಅಗತ್ಯವಾದ ಸ್ಥಾವರ ಮತ್ತು ಯಂತ್ರ ಸಾಮಗ್ರಿಗಳು ನಾವು ನಿರೀಕ್ಷಿಸಿದ ಸಮಯಕ್ಕೆ ಬರಲಿಲ್ಲ. ಇದರಿಂದಾಗಿ ಅನುಸೂಚಿಗಿಂತ ಎರಡು ತಿಂಗಳು ಮುಂದೆ ಹೋಗಬೇಕಾಯಿತು.

ಶ್ರೀ ಕೆ.ಪಿ. ಸಿನ್ಹಾ :- ಈ ಕಾರ್ಖಾನೆಯಲ್ಲಿ ಯಾರಾದರೂ ವಿದೇಶೀಯರು ಆಸಕ್ತಿ ಹೊಂದಿದ್ದಾರೆಯೆ?

ಶ್ರೀ ಕೆ.ಸಿ. ರೆಡ್ಡಿ :- ಇಲ್ಲ. ಮಾನ್ಯ ಸದಸ್ಯರು ಯಾವ ಅರ್ಥದಲ್ಲಿ ಕೇಳುತ್ತಿದ್ದಾರೆಯೋ ಬಹುಶಃ ಆ ಅರ್ಥದಲ್ಲಿ ವಿದೇಶೀಯರು ಇದರಲ್ಲಿ ಆಸಕ್ತಿ ಹೊಂದಿಲ್ಲ. ಆದರೆ ನಾವು "ಸ್ಟಾಂಡರ್ಡ್ ಟೆಲಿಫೋನ್ ಅಂಡ್ ಕೇಬಲ್ ಕಂಪನಿ ಎಂಬ ಹೆಸರಿನ ವಿದೇಶೀ ಉದ್ದಿಮೆಯೊಂದಿಗೆ ಸಹಯೋಗ ಮಾಡಿಕೊಂಡಿದ್ದೇವೆ. ಅವರು ನಮಗೆ ತಂತ್ರಜ್ಞಾನವನ್ನು ಒದಗಿಸಿದ್ದಾರೆ ಮತ್ತು ಈ ಕಾರ್ಖಾನೆಯನ್ನು ಸ್ಥಾಪಿಸುವುದಕ್ಕಾಗಿ ನಮ್ಮೊಂದಿಗೆ ಕೆಲಸ ಮಾಡುತ್ತಿದ್ದಾರೆ.

**ಶ್ರೀ ಸಾರಂಗಧರದಾಸ್**:- ಅಂಚೆ ಮತ್ತು ತಂತಿ ವಿಭಾಗಕ್ಕೆ ಅಗತ್ಯವಿರುವ ಎಲ್ಲ ಕೇಬಲ್ಲುಗಳನ್ನೂ ಈ ಕಾರ್ಖಾನೆ ಸರಬರಾಜು ಮಾಡುವುದೆ?

**ಶ್ರೀ ಕೆ.ಸಿ ರೆಡ್ಡಿ** :- ಈ ಕಾರ್ಖಾನೆ ಕೇವಲ ಒಂದು ವಿಧದ ಕೇಬಲ್ಲನ್ನು ಮಾತ್ರ ತಯಾರಿಸಬಲ್ಲದು. ಈ ಮಾದರಿಗೆ ಸಂಬಂಧಿಸಿದಂತೆ ಪರಿಯೋಜನಾ ವರದಿ ನೀಡಿಕೆಯ ಸಂದರ್ಭದಲ್ಲಿ ಎಲ್ಲ ಅಗತ್ಯತೆಗಳನ್ನೂ ಸರಬರಾಜು ಮಾಡಲಾಗುವುದು ಎಂದು ತಿಳಿಸಲಾಗಿತ್ತು. ಈಗ ಅಂಚೆ ಮತ್ತು ತಂತಿ ವಿಭಾಗದ ಬೇಡಿಕೆಗಳು ಹೆಚ್ಚಾಗಿವೆ. ಆದ್ದರಿಂದ ಇದನ್ನು ಎಷ್ಟರ ಮಟ್ಟಿಗೆ ಪೂರೈಸಲು ಸಾಧ್ಯ ಎಂಬ ಬಗ್ಗೆ ನಾವು ಪ್ರಯತ್ನಿಸುತ್ತಿದ್ದೇವೆ.

## ಅಖಿಲ ಭಾರತ ಕರಕುಶಲ ಮಂಡಳಿ

### ಕಲಾಪ - ಏಪ್ರಿಲ್ 20, 1956

**ಶ್ರೀ ಕೃಷ್ಣಮಾಚಾರ್ಯ ಜೋಷಿ:-** ಉತ್ಪಾದನಾ ಸಚಿವರು ದಯವಿಟ್ಟು ಕೆಳಕಂಡ ಅಂಶವನ್ನು ತಿಳಿಸಬೇಕು:

ಎ) 1955ರಲ್ಲಿ ಅಖಿಲ ಭಾರತ ಕರಕುಶಲ ಮಂಡಳಿಯ ಮುಖ್ಯ ಚಟುವಟಿಕೆಗಳು ಯಾವುವು?

ಬಿ) ಈ ಅವಧಿಯಲ್ಲಿ ಕುಂಬಾರಿಕೆ, ಬೊಂಬೆ ತಯಾರಿಕೆ, ಚಾಪೆ ನೇಯ್ಗೆ ಹಾಗೂ ಪ್ರಿಂಟ್ ಕೈಗಾರಿಕೆಯಲ್ಲಿ ಎಷ್ಟು ಪ್ರಗತಿಯಾಗಿದೆ?

**ಉತ್ಪಾದನಾ ಸಚಿವರು (ಶ್ರೀ ಕೆ.ಸಿ.ರೆಡ್ಡಿ):-**

ಎ) 1955-56ನೇಸಾಲಿನಲ್ಲಿ ಅಖಿಲ ಭಾರತ ಕರಕುಶಲ ಮಂಡಳಿಯ ಮುಖ್ಯ ಕಾರ್ಯಚಟುವಟಿಕೆಗಳು ಹೀಗಿವೆ:

1. ರಾಜ್ಯ ಸರ್ಕಾರಗಳು ಹಾಗೂ ಸಂಸ್ಥೆಗಳು ಸಿದ್ಧಪಡಿಸಿದ ಕರಕುಶಲ ಉದ್ಯಮದ ಅಭಿವೃದ್ಧಿ ಯೋಜನೆಗಳನ್ನು ಪರಿಶೀಲಿಸುವುದು ಮತ್ತು ಅಂತಹ ಯೋಜನೆಗಳಿಗೆ ಸೂಕ್ತ ಹಣಕಾಸು ನೆರವನ್ನು ಶಿಫಾರಸು ಮಾಡುವುದು.

2. ಆಯ್ದ ಕೆಲವು ಕರಕುಶಲ ಕೈಗಾರಿಕೆಗಳ ಪುನರುಜ್ಜೀವನಕ್ಕಾಗಿ ಮುಂಚೂಣಿ ಕೇಂದ್ರಗಳನ್ನು ಸ್ಥಾಪಿಸುವುದು ಹಾಗೂ ಸಿಬ್ಬಂದಿಗೆ ತರಬೇತಿ ನೀಡುವುದು.
3. ವಿನ್ಯಾಸ ಕೇಂದ್ರಗಳು ಹಾಗೂ ಕರಕುಶಲ ವಸ್ತುಗಳ ಸಂಗ್ರಹಾಲಯವನ್ನು ಸ್ಥಾಪಿಸುವುದು.
4. ಭಾರತ ಮತ್ತು ವಿದೇಶಗಳಲ್ಲಿ ವಸ್ತುಪ್ರದರ್ಶನಗಳನ್ನು ಏರ್ಪಡಿಸುವ ಹಾಗೂ ಅದರಲ್ಲಿ ಭಾಗವಹಿಸುವ ಮೂಲಕ ಪ್ರಚಾರ ಯೋಜನೆಗಳು ಹಾಗೂ ಮಳಿಗೆಗಳಿಗೆ ನೆರವು ಮುಂತಾದ ಮೂಲಕ ಕರಕುಶಲ ವಸ್ತುಗಳ ಮಾರಾಟದ ಪ್ರವರ್ಧನೆ.
5. ಕರಕುಶಲ ಉದ್ಯಮಗಳ ಸಮಸ್ಯೆಗಳನ್ನು ಕುರಿತ ಸಂಶೋಧನೆ.

ಬಿ) ಕರಕುಶಲ ಉದ್ಯಮಗಳ ಅಭಿವೃದ್ಧಿಯು ರಾಜ್ಯ ಸರ್ಕಾರಗಳ ಜವಾಬ್ದಾರಿಯ ವಿಷಯ. ಆದರೂ ಈ ಕೈಗಾರಿಕೆಗಳನ್ನು ಅಭಿವೃದ್ಧಿಪಡಿಸುವುದಕ್ಕೆ ಅವರು ಮಾಡುವ ಪ್ರಯತ್ನಗಳಿಗೆ ಪೂರಕವಾಗಿ ಅನೇಕ ರಾಜ್ಯ ಸರ್ಕಾರಗಳಿಗೆ ಅವರಿಂದ ಬಂದ ನಿರ್ದಿಷ್ಟ ಯೋಜನೆಗಳನ್ನು ಆಧರಿಸಿ ಹಣಕಾಸು ನೆರವನ್ನು ನೀಡಲಾಗಿದೆ. ಇಲ್ಲಿ ತೃಪ್ತಿಕರ ಪ್ರಗತಿಯಾಗುತ್ತಿದೆ ಎಂದು ತಿಳಿದುಬಂದಿದೆ. ತರಬೇತಿ ನೀಡುವುದಕ್ಕಾಗಿ ಕೆಳಕಂಡ ಮುಂಚೂಣಿ ಕೇಂದ್ರಗಳನ್ನು ಕರಕುಶಲ ಮಂಡಳಿಯು ಆರಂಭಿಸಿದೆ:

1) ದೆಹಲಿಯಲ್ಲಿ Blue pottery ಕೈಗಾರಿಕೆ
2) ಗೊಂಬೆಗಳು ಹಾಗೂ ಆಟಿಕೆಗಳ ತಯಾರಿಕೆ
3) ಆಟಿಕೆಗಳ ತಯಾರಿಕೆ.(ಆಂಧ್ರ)

## 9. ಗಾಂಧೀ ಸಮಾಧಿ ನಿರ್ಮಾಣ ಕುರಿತು

## 28 ಆಗಸ್ಟ್ 1957

ಶ್ರೀ ಭಕ್ತದರ್ಶನ್:- ದೆಹಲಿಯಲ್ಲಿ ಗಾಂಧಿ ಸಮಾಧಿ ನಿರ್ಮಾಣ ಕುರಿತಂತೆ ಇತ್ತೀಚೆಗೆ ಯಾವ ಪ್ರಗತಿಯಾಗಿದೆ?

**ಕೆ.ಸಿ. ರೆಡ್ಡಿ (ಕಾಮಗಾರಿ, ಗೃಹ ನಿರ್ಮಾಣ ಹಾಗೂ ಸರಬರಾಯಿ ಸಚಿವರು):**-ನಿರ್ಧಾರಕ ಮಂಡಳಿಯು ವಿನ್ಯಾಸಗಳನ್ನು ಪರಿಶೀಲಿಸಿದೆ ಮತ್ತು ಅವುಗಳ ಉತ್ತಮಿಕೆಗೆ ಅನುಗುಣವಾಗಿ ಬಹುಮಾನ ನೀಡುವ ದೃಷ್ಟಿಯಿಂದ ಎಲ್ಲಕ್ಕಿಂತ ಅತ್ಯುತ್ತಮವಾದ ನಾಲ್ಕು ವಿನ್ಯಾಸಗಳನ್ನು ಆಯ್ಕೆ ಮಾಡಿದೆ. ಅಂತಿಮ ನಿರ್ಣಯವನ್ನು ಕೈಗೊಳ್ಳುವ ದೃಷ್ಟಿಯಿಂದ, ಯಾವುದು ಅತ್ಯುತ್ತಮವೆಂದು ಆಯ್ಕೆ ಮಾಡಲಾಗುತ್ತದೋ ಆ ವಿನ್ಯಾಸವನ್ನು ಆಧರಿಸಿ ಮಾದರಿ ಆಕೃತಿಯನ್ನು ಮಾಡಿಸುವ ಬಗ್ಗೆ ಉದ್ದೇಶಿಸಲಾಗಿದೆ.

ಶ್ರೀ ಭಕ್ತದರ್ಶನ್:- ಈಗ ವಿನ್ಯಾಸದ ಆಯ್ಕೆಯಾಯಿತು ಎಂದುಕೊಳ್ಳೋಣ. ಈ ವಿಷಯ ಸುಮಾರು ಏಳು ವರ್ಷಗಳಿಂದಲೂ ನೆನೆಗುದಿಗೆ ಬಿದ್ದಿದೆ. ಈ ಕೆಲಸವನ್ನು ತ್ವರಿತಗೊಳಿಸುವುದಕ್ಕಾಗಿ ಏನು ಕ್ರಮ ಕೈಗೊಳ್ಳಲಾಗಿದೆ.

**ಕೆ.ಸಿ. ರೆಡ್ಡಿ :-** ಇದು ಬಹಳ ಮುಖ್ಯವಾದ ವಿಚಾರ. ಈಗಾಗಲೇ ಇರುವ ವಿನ್ಯಾಸವನ್ನು ಪುನರ್ರೂಪಿಸುವಾಗ ಅಥವಾ ಬದಲಿಸುವಾಗ ನಾವು ಅನೇಕ ಅಂಶಗಳನ್ನು ಗಮನಕ್ಕೆ ತೆಗೆದುಕೊಳ್ಳಬೇಕಾಗುತ್ತದೆ. ಈ ವಿಷಯದಲ್ಲಿ ಹೇಗೆ ಮುಂದುವರೆದರೆ ಅತ್ಯಂತ ಸೂಕ್ತವಾಗಬಹುದು ಎಂಬ ಬಗ್ಗೆ ವಿವಿಧ ಸಂದರ್ಭಗಳಲ್ಲಿ ನಾವು ಕ್ರಮಗಳನ್ನು ಕೈಗೊಂಡಿದ್ದೇವೆ. ಸಮಿತಿಯ ಸ್ಥಾಪನೆಯಾಗಿದೆ. ವಿವಿಧ ಜನರಿಂದ ವಿನ್ಯಾಸಗಳನ್ನು ಆಹ್ವಾನಿಸಿದ್ದೇವೆ. ಅವರು ಇನ್ನಷ್ಟು ಕಾಲಾವಕಾಶ ಬೇಕೆಂದು ಕೇಳುತ್ತಿದ್ದಾರೆ. ನಾವು ನೀಡಿದ ಪ್ರಕಟಣೆಗೆ ಪ್ರತಿಯಾಗಿ ಸುಮಾರು ಒಂದು ನೂರು ವಿನ್ಯಾಸಗಳು ಬಂದಿವೆ. ಇವುಗಳ ಪರಿಶೀಲನೆಯಾಗಬೇಕು. ಇಲ್ಲಿ ಅನೇಕ ತಾಂತ್ರಿಕ ಅಡಚಣೆಗಳು ಇದ್ದವು. ಒಂದು ಹಂತದಲ್ಲಿ, ವಾಸ್ತುಶಿಲ್ಪಗಳ ಸಂಘದವರು ಆಕ್ಷೇಪಣೆ ಎತ್ತಿದರು. ಹೀಗೇ ಇಂಥ ಏನೇನೋ ಅಡಚಣೆಗಳು. ಸರಿಯಾದ್ದನ್ನೇ ಮಾಡಬೇಕು ಎಂಬುದು ನಮ್ಮ ಇಚ್ಛೆ. ಸರಿಯಾದ್ದನ್ನೇ ಮಾಡಬೇಕು, ಅವಸರದಲ್ಲಿ ಏನೋನೋ ಮಾಡಿಬಿಡಬಾರದು ಎಂಬ ಕಾಳಜಿಯಿಂದಾಗಿ ನಾವು ಈ ಬಗ್ಗೆ ಸ್ವಲ್ಪ ಯೋಚಿಸಿಯೇ ಕೆಲಸ ಮಾಡಬೇಕಿದೆ. ಈ ಸಂಬಂಧವಾದ ಎಲ್ಲ ಮುನ್ನೆಚ್ಚರಿಕೆಗಳನ್ನೂ ವಹಿಸಿ ಈಗ ಒಂದು ಅಂತಿಮ ಹಂತಕ್ಕೆ ಬಂದಿದ್ದೇವೆ ವಿನ್ಯಾಸ ಸರಳವಾಗಿರಬೇಕು ಎಂಬುದು ಬಹಳ ಮುಖ್ಯ. ಮತ್ತು ಇಂಥ ಅನೇಕ ಅಂಶಗಳನ್ನು ಗಮನದಲ್ಲಿಟ್ಟುಕೊಂಡಿರಬೇಕಾಗುತ್ತದೆ. ಈಗ, ನಾನು ಮೊದಲೇ ಹೇಳಿದಂತೆ ಅತ್ಯುತ್ತಮ ವಿನ್ಯಾಸವನ್ನು ಆಯ್ಕೆ ಮಾಡಲಾಗಿದೆ. ಇದರ ಒಂದು ದೊಡ್ಡ ಪ್ರತಿಕೃತಿಯನ್ನು ಮಾಡಿಸಬೇಕು. ಇದಾದ ನಂತರ ಇದಕ್ಕೆ ಸಂಬಂಧಿಸಿದ ಹಣಕಾಸು ವಿಚಾರಗಳನ್ನು ಪರಿಶೀಲಿಸಬೇಕು. ಆ ಬಗ್ಗೆಯೂ ಈಗ ಪರಿಶೀಲಿಸುತ್ತಿದ್ದೇವೆ. ಇನ್ನು ಒಂದು ತಿಂಗಳೊಳಗಾಗಿ ಒಂದು ಅಂತಿಮ ನಿರ್ಣಯ ಸಾಧ್ಯವಾಗಬಹುದು ಎಂದು ಆಶಿಸುತ್ತೇನೆ.

## ಕ್ಯಾಸಂಬಳ್ಳಿ ಚೆಂಗಲರಾಯರೆಡ್ಡಿ - ಜೀವನದ ಹೆಜ್ಜೆ ಗುರುತುಗಳು

ಜನನ: ಮೇ 4, 1902

ವಿದ್ಯಾಭ್ಯಾಸ: ಬಿ.ಎ., ಬಿ.ಎಲ್., ಮದ್ರಾಸಿನ ಪಚ್ಚೆಯಪ್ಪ ಕಾಲೇಜು ಹಾಗೂ ಕಾನೂನು ಕಾಲೇಜು

ಬೌರಿಂಗ್ ಪೇಟೆ ತಾಲೂಕಿನಿಂದ ಪ್ರಜಾಪ್ರತಿನಿಧಿ ಸಭೆಗೆ ಆಯ್ಕೆ-1930

ಮೊದಲ ಅಧಿವೇಶನದಲ್ಲಿಯೇ ಉತ್ತಮ ವಾಗ್ಮಿತೆಯಿಂದ ಎಲ್ಲರ ಗಮನ ಸೆಳೆದು ನ್ಯಾಯ ವಿಧಾಯಕ ಸಭೆಗೆ ಆಯ್ಕೆ.

ಕೋಲಾರ ಜಿಲ್ಲಾ ಬೋರ್ಡ್ ಅಧ್ಯಕ್ಷರಾಗಿ-1933-37.

1930ರಲ್ಲಿ ಸ್ಥಾಪಿತವಾದ ಪ್ರಜಾಪಕ್ಷದ ಪ್ರಧಾನ ಕಾರ್ಯದರ್ಶಿ.

1935ರಲ್ಲಿ ಹಾಸನದಲ್ಲಿ ಕೆ.ಸಿ. ರೆಡ್ಡಿಯವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿ ಪ್ರಜಾಮಿತ್ರ ಮಂಡಳಿ ಮತ್ತು ಪ್ರಜಾಪಕ್ಷಗಳ ಒಗ್ಗೂಡಿಕೆ ಮತ್ತು ಪ್ರಜಾಸಂಯುಕ್ತ ಪಕ್ಷದ ರಚನೆ. ಇದರಲ್ಲಿ ಪ್ರಧಾನ ಪಾತ್ರ ವಹಿಸಿದ ರೆಡ್ಡಿಯವರು 1935 ರಿಂದ 1937 ರವರೆಗೆ ಪ್ರಜಾಸಂಯುಕ್ತ ಪಕ್ಷದ ಅಧ್ಯಕ್ಷರು.

1937ರಲ್ಲಿ ಸ್ವಲ್ಪ ಕಾಲದವರೆಗೆ 'ಜನವಾಣಿ'ಪತ್ರಿಕೆಯ ಸಂಪಾದಕರು.

1937ರ ಅಕ್ಟೋಬರ್ 16ರಂದು ಕಾಂಗ್ರೆಸ್ ಪಕ್ಷದೊಂದಿಗೆ ಪ್ರಜಾಸಂಯುಕ್ತ ಪಕ್ಷವನ್ನು ವಿಲೀನಗೊಳಿಸುವಲ್ಲಿ ಮುಖ್ಯ ಪಾತ್ರ.

ಮೈಸೂರು ಕಾಂಗ್ರೆಸ್ ಕಾರ್ಯಕಾರಿ ಸಮಿತಿಯ ಸದಸ್ಯರು-1937-52.

ಮೈಸೂರು ಕಾಂಗ್ರೆಸ್ಸಿನ ಹಂಗಾಮಿ ಅಧ್ಯಕ್ಷರು-1937

ನ್ಯಾಯವಿಧಾಯಕ ಸಭೆಯ ನಾಯಕರು-1937-52

1938ರ ಫೆಬ್ರವರಿಯಲ್ಲಿ ಹರಿಪುರದಲ್ಲಿ ನಡೆದ ಅಖಿಲ ಭಾರತ ರಾಷ್ಟ್ರೀಯ ಕಾಂಗ್ರೆಸ್ ಸಮಾವೇಶದಲ್ಲಿ ಭಾಗವಹಿಸಿ ಮೈಸೂರಿನಲ್ಲಿ ಜವಾಬ್ದಾರಿ ಸರ್ಕಾರಕ್ಕಾಗಿ ನಡೆಯುತ್ತಿರುವ ಚಳುವಳಿಗೆ ರಾಷ್ಟ್ರೀಯ ಕಾಂಗ್ರೆಸ್ ಅನುಮತಿ ನೀಡಬೇಕೆಂದು ಒತ್ತಾಯ.

1938ರಲ್ಲಿ ರಾಜಕೀಯ ಸುಧಾರಣಾ ಸಮಿತಿಗೆ ನೇಮಕ

1938ರ ಏಪ್ರಿಲ್ 11 ಮತ್ತು 12 ರಂದು ನಡೆದ ಶಿವಪುರ ಧ್ವಜ ಸತ್ಯಾಗ್ರಹದಲ್ಲಿ ಭಾಗವಹಿಸಿ ಬಂಧನಕ್ಕೊಳಗಾಗಿದ್ದು.

ವಿದುರಾಶ್ವತ್ಥ ದುರಂತ ಘಟನೆಯ ಪ್ರತಿಭಟನಾರ್ಥ 1938ರಲ್ಲಿ ಜಿಲ್ಲಾ ಬೋರ್ಡ್ ಅಧ್ಯಕ್ಷತೆ ಮತ್ತು ನ್ಯಾಯವಿಧಾಯಕ ಸಭೆಯ ಸದಸ್ಯತ್ವಕ್ಕೆ ರಾಜೀನಾಮೆ.

14-8-39ರಲ್ಲಿ ನಡೆದ ರಾಬರ್ಟ್‌ಸನ್‌ಪೇಟೆ ಸತ್ಯಾಗ್ರದಲ್ಲಿ ಬಂಧನ. 17-11-39ರಂದು ಬಿಡುಗಡೆ.

ನಾಲ್ಕು ತಿಂಗಳ ಕಾಲ ವಾರ್ಧಾ ಆಶ್ರಮದಲ್ಲಿದ್ದು ಗಾಂಧೀಜಿಯವರಿಗೆ ಮೈಸೂರಿನ ವಿದ್ಯಮಾನಗಳನ್ನು ತಿಳಿಸುವುದಕ್ಕಾಗಿ ಮೈಸೂರು ಕಾಂಗ್ರೆಸ್ ಕಾರ್ಯಕಾರಿ ಸಮಿತಿಯಿಂದ ಪ್ರತಿನಿಧಿಯಾಗಿ ನೇಮಕ.

ಅಖಿಲ ಭಾರತ ದೇಶೀಯ ಸಂಸ್ಥಾನಗಳ ಪ್ರಜಾಪರಿಷತ್ತಿನ ಕಾರ್ಯಕಾರಿ ಮಂಡಳಿಯ ಸದಸ್ಯರಾಗಿ ಚುನಾಯಿತರಾಗಿದ್ದು -1944-45ರಲ್ಲಿ

1956ರಲ್ಲಿ ಬೆಂಗಳೂರಿನಲ್ಲಿ ನಡೆದ ಮೈಸೂರು ಕಾಂಗ್ರೆಸ್ ಅಧಿವೇಶನದ ಅಧ್ಯಕ್ಷತೆ ಬ್ರಿಟನ್ನಿಗೆ ತೆರಳಿದ ನಿಯೋಗದಲ್ಲಿ ಪ್ರತಿನಿಧಿ 45-46

ಮೈಸೂರಿನ ಕಾಂಗ್ರೆಸ್‌ನ ಅಧ್ಯಕ್ಷರಾಗಿ ಆಯ್ಕೆ 1946-47

ಭಾರತದ ರಾಜ್ಯಾಂಗ ರಚನಾ ಸಭೆಯ ಸದಸ್ಯರಾಗಿ ಆಯ್ಕೆ 1947-50

ಮೈಸೂರು ಚಲೋ ಸತ್ಯಾಗ್ರಹದ ನೇತಾರ-1947

1947 ಅಕ್ಟೋಬರ್ 24-ಮೈಸೂರು ರಾಜ್ಯದ ಮುಖ್ಯಮಂತ್ರಿಯಾಗಿ ಅಧಿಕಾರ ಸ್ವೀಕಾರ

1952-57-ರಾಜ್ಯಸಭಾ ಸದಸ್ಯರು

1957-64- ಲೋಕಸಭಾ ಸದಸ್ಯರು

ಕೇಂದ್ರದಲ್ಲಿ ಉತ್ಪಾದನಾ ಸಚಿವರು-1952-57

ಕಾಮಗಾರಿ, ಗೃಹನಿರ್ಮಾಣ ಮತ್ತು ನಾಗರಿಕ ಸರಬರಾಯಿ ಸಚಿವರು-1957-61

ವಾಣಿಜ್ಯ ಮತ್ತು ಕೈಗಾರಿಕಾ ಖಾತೆಯ ಸಚಿವರು-1961-63

ಲೋಕಸಭೆಯ ಕಾಂಗ್ರೆಸ್ ಪಕ್ಷದ ಉಪನಾಯಕರು-1963-64

ಮಧ್ಯಪ್ರದೇಶದ ರಾಜ್ಯಪಾಲರು-1965-71

ದೆಹಲಿ ಅರ್ಥಶಾಸ್ತ್ರ ಶಾಲೆಯ (Delhi school of Economics) ಸ್ಥಾಪಕ ಸದಸ್ಯರು

ನಿಧನ- 27-2-1976 (ಬೆಂಗಳೂರಿನಲ್ಲಿ)

## ಪರಿಶೀಲಿಸಿದ ಕೆಲವು ಗ್ರಂಥಗಳು


1. ಬದುಕು ಮೆಲುಕು : ಶ್ರೀ ಎಚ್.ಕೆ. ವೀರಣ್ಣಗೌಡ, ಪ್ರಬುದ್ಧ ಪ್ರಕಾಶನ ಮೈಸೂರು-2. 1974
2. ಮೈಸೂರು ಆಗ ಮತ್ತು ಈಗ : ಜೆ. ಮಹಮದ್ ಇಮಾಂ, ಪ್ರಕಾಶಕರು-ದಿವಂಗತ ಇಮಾಂ ಅವರ ಮಕ್ಕಳು. ದಾವಣಗೆರೆ. 1966:1977
3. ನನಗೆ ನಾನೇ ಮಾದರಿ (ಆತ್ಮಕಥನ): ಬಿ.ಡಿ. ಜತ್ತಿ , ಲೋಕಶಿಕ್ಷಣ ಟ್ರಸ್ಟ್ ಗ್ರಂಥಮಾಲೆ, ಹುಬ್ಬಳ್ಳಿ ಹಾಗೂ ಬೆಂಗಳೂರು-1989
4. ರಾಜಕೀಯದ ಚಕ್ರವ್ಯೂಹದಲ್ಲಿ : ನೆನಪಿನ ಒರತೆ ಭಾಗ-2. ಪಾಟೀಲ ಕಲ್ಲನಗೌಡ, ನಂದನ ಪ್ರಕಾಶನ 309:12, 4ನೇ ವಿಭಾಗ, ರಾಜಾಜಿನಗರ ಬೆಂಗಳೂರು,1986
5. ಕರ್ನಾಟಕ:ಏಕೀಕರಣದ ಹಾದಿಯಲ್ಲಿ: ನೆನಪಿನ ಒರತೆ (ಭಾಗ-3)- ಪಾಟೀಲ ಕಲ್ಲನಗೌಡ, ವಿವೇಕ ಪ್ರಕಾಶನ, ಹುಬ್ಬಳ್ಳಿ-1986
6. ಶಿವಪುರ ಧ್ವಜ ಸತ್ಯಾಗ್ರಹ (ಚರಿತ್ರೆ) : ಡಿ. ಲಿಂಗಯ್ಯ (ಮೊದಲ ಮುದ್ರಣ 1979, ಪರಿಷ್ಕೃತ ಮುದ್ರಣ-1995) ವೈಶಾಖ ಪ್ರಕಾಶನ, ಹನುಮಂತನಗರ, ಬೆಂಗಳೂರು
7. ಸತ್ಯಾಗ್ರಹಿಗಳ ಸಂದರ್ಶನ : ಶ್ರೀ ಡಿ. ಲಿಂಗಯ್ಯ, ದಿನಕರ ಪ್ರಕಾಶನ, ಬೆಂಗಳೂರು-85, 1998
8. ನವಮೈಸೂರು ಶಿಲ್ಪಿ : (ಕೆಂಗಲ್ ಹನುಮಂತಯ್ಯ ಆತ್ಮಚರಿತ್ರೆ) ಕೊಣಂಮೂರು ವೆಂಕಟಪ್ಪಗೌಡ, ಯಶಸ್ವಿ ಪ್ರಕಾಶನ, ಹನುಮಂತನಗರ, ಬೆಂಗಳೂರು-1985
9. ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು : (ಭಾಗ 2 ಮತ್ತು ಭಾಗ 3) ಡಾ॥ ಸೂರ್ಯನಾಥ ಕಾಮತ್. ಪ್ರಕಾಶಕರು: ಗೀತಾಬುಕ್‌ಹೌಸ್, ಮೈಸೂರು - 570001, 1980
10. ಡಿ ವಿ ಜಿ ಕೃತಿ ಶ್ರೇಣಿ : ಸಂ. 6. ನೆನಪಿನ ಚಿತ್ರಗಳು, ಸಂ. ಹಾ.ಮಾ. ನಾಯಕ್. ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ ಬೆಂಗಳೂರು
11. ಸ್ವಾತಂತ್ರ್ಯ ಸೇನಾನಿ ತಾಳಕೆರೆ ಸುಬ್ರಮಣ್ಯ (ಜೀವನ ಮತ್ತು ಸಾಧನೆಗಳು) : ಟಿ.ಎಸ್. ವಿಶ್ವೇಶ್ವರಯ್ಯ, 1977
12. ಸ್ವಾತಂತ್ರ್ಯ ಸೇನಾನಿ ಟಿ. ಸಿದ್ದಲಿಂಗಯ್ಯ : ಶ್ರೀ ಎ.ಆರ್ ಬಸವರಾಜ-1996
13. ಬಾಪೂದರ್ಶನ (ಭಾಷಣ, ಕವನ, ನಾಟಕಗಳ ಸಂಗ್ರಹ) ಆಕಾಶವಾಣಿ ಪ್ರಕಟಣೆ, 1949.

# ವಿಧಾನ ಮಂಡಲದ ಗ್ರಂಥಾಲಯ ಉಪ ಸಮಿತಿ

## (1998-1999)

ಶ್ರೀಯುತರುಗಳಾದ

| | | |
|---|---|---|
| 1. | ಬಿ.ಬಿ. ಶಿವಪ್ಪ,<br>ವಿಧಾನಸಭಾ ಸದಸ್ಯರು | ಅಧ್ಯಕ್ಷರು |
| 2. | ಶ್ರೀರಂಗದೇವರಾಯಲು<br>ವಿಧಾನಸಭಾ ಸದಸ್ಯರು | ಸದಸ್ಯರು |
| 3. | ವಸಂತ ಕಮಲಾಕರ ಅಸ್ನೋಟಿಕರ<br>ವಿಧಾನಸಭಾ ಸದಸ್ಯರು | ಸದಸ್ಯರು |
| 4. | ಶಶಿಲ್ .ಜಿ. ನಮೋಶಿ<br>ವಿಧಾನ ಪರಿಷತ್ ಸದಸ್ಯರು | ಸದಸ್ಯರು |
| 5. | ಡಾ।। ಮಹಾದೇವ ಬಣಕಾರ<br>ವಿಧಾನ ಪರಿಷತ್ ಸದಸ್ಯರು | ಸದಸ್ಯರು |
| 6. | ಕೆ.ಸಿ. ಪುಟ್ಟಸಿದ್ಧಶೆಟ್ಟಿ<br>ವಿಧಾನ ಪರಿಷತ್ ಸದಸ್ಯರು | ಸದಸ್ಯರು |

## (1999-2000)

ಶ್ರೀಯುತರುಗಳಾದ

| | | |
|---|---|---|
| 1. | ಬಿ.ಬಿ. ಶಿವಪ್ಪ<br>ವಿಧಾನಸಭಾ ಸದಸ್ಯರು | ಅಧ್ಯಕ್ಷರು |
| 2. | ಕಾಕಾಸಾಹೇಬ .ಪಾಂ. ಪಾಟೀಲ<br>ವಿಧಾನಸಭಾ ಸದಸ್ಯರು | ಸದಸ್ಯರು |
| 3. | ಸಿರಾಜ್ ಶೇಖ್<br>ವಿಧಾನಸಭಾ ಸದಸ್ಯರು | ಸದಸ್ಯರು |
| 4. | ಪಿ.ಎಂ. ರಂಗನಾಥ್<br>ವಿಧಾನಸಭಾ ಸದಸ್ಯರು | ಸದಸ್ಯರು |
| 5. | ಎಸ್. ಸಂಪಂಗಿ<br>ವಿಧಾನಸಭಾ ಸದಸ್ಯರು | ಸದಸ್ಯರು |
| 6. | ಡಾ।। ವಿ.ಎಸ್. ಆಚಾರ್ಯ<br>ವಿಧಾನ ಪರಿಷತ್ ಸದಸ್ಯರು | ಸದಸ್ಯರು |
| 7. | ಡಾ।। ಎಚ್.ಎಲ್. ನಾಗೇಗೌಡ<br>ವಿಧಾನ ಪರಿಷತ್ ಸದಸ್ಯರು | ಸದಸ್ಯರು |
| 8. | ಕೆ.ಸಿ. ಪುಟ್ಟಸಿದ್ಧಶೆಟ್ಟಿ<br>ವಿಧಾನ ಪರಿಷತ್ ಸದಸ್ಯರು | ಸದಸ್ಯರು |

